# ಉತ್ತರ ಕರ್ನಾಟಕದ ಜೈನ ವಾಡೆಗಳು

(ಕನ್ನಡ ವಿಶ್ವವಿದ್ಯಾಲಯಕ್ಕೆ ಪಿಎಚ್.ಡಿ. ಪದವಿಗಾಗಿ ಸಾದರಪಡಿಸಿದ ಮಹಾಪ್ರಬಂಧ)


ಸಂಶೋಧಕರು :

**ನಾಗರಾಜ. ಕೆ. ನವಲಗುಂದ**

ಮಾರ್ಗದರ್ಶಕರು :

**ಡಾ. ಮಂಜುನಾಥ ಬೇವಿನಕಟ್ಟಿ**

ಡೀನ್, ಸಮಾಜ ವಿಜ್ಞಾನ ನಿಕಾಯ

ಪ್ರಾಧ್ಯಾಪಕರು





ಜಾನಪದ ಅಧ್ಯಯನ ವಿಭಾಗ

ಕನ್ನಡ ವಿಶ್ವವಿದ್ಯಾಲಯ, ಹಂಪಿ

ವಿದ್ಯಾರಣ್ಯ–೫೮೩ ೨೭೬




೨೦೧೬

# ಉತ್ತರ ಕರ್ನಾಟಕದ ಜೈನ ವಾಡೆಗಳು

(ಕನ್ನಡ ವಿಶ್ವವಿದ್ಯಾಲಯಕ್ಕೆ ಪಿಎಚ್.ಡಿ. ಪದವಿಗಾಗಿ ಸಾದರಪಡಿಸಿದ ಮಹಾಪ್ರಬಂಧ)



ಸಂಶೋಧಕರು

**ನಾಗರಾಜ .ಕೆ. ನವಲಗುಂದ**

ಮಾರ್ಗದರ್ಶಕರು

**ಡಾ. ಮಂಜುನಾಥ ಬೇವಿನಕಟ್ಟಿ**

ಡೀನ್, ಸಮಾಜ ವಿಜ್ಞಾನ ನಿಕಾಯ

ಪ್ರಾಧ್ಯಾಪಕರು



**ಜಾನಪದ ಅಧ್ಯಯನ ವಿಭಾಗ**

**ಕನ್ನಡ ವಿಶ್ವವಿದ್ಯಾಲಯ, ಹಂಪಿ**

**ವಿದ್ಯಾರಣ್ಯ-೫೮೩೨೭೬**

**೨೦೧೬.**

## ದೃಢೀಕರಣ ಪತ್ರ

### ಮಾರ್ಗದರ್ಶಕರ ಪ್ರಮಾಣ ಪತ್ರ

ನಾಗರಾಜ .ಕೆ. ನವಲಗುಂದ ಅವರು **"ಉತ್ತರ ಕರ್ನಾಟಕದ ಜೈನ ವಾಡೆಗಳು"** ಎಂಬ ಈ ಮಹಾಪ್ರಬಂಧವನ್ನು ಕನ್ನಡ ವಿಶ್ವವಿದ್ಯಾಲಯ, ಹಂಪಿಗೆ ಪಿಎಚ್.ಡಿ. ಪದವಿಗಾಗಿ ನನ್ನ ಮಾರ್ಗದರ್ಶನದಲ್ಲಿ ಸಿದ್ಧಪಡಿಸಿ ಜಾನಪದ ವಿಭಾಗಕ್ಕೆ ಸಲ್ಲಿಸುತ್ತಿದ್ದಾರೆ.

ಪ್ರಸ್ತುತ ಪ್ರಬಂಧವು ಅವರ ಸ್ವಂತ ಪರಿಶ್ರಮದ ಫಲವಾಗಿದ್ದು, ಈ ಮೊದಲು ಇದನ್ನು ಇನ್ನಾವುದೇ ಪದವಿಗಾಗಿ ಸಲ್ಲಿಸಿರುವುದಿಲ್ಲವೆಂದು ಘೋಷಿಸುತ್ತೇನೆ.

ಮಾರ್ಗದರ್ಶಕರು
**ಡಾ. ಮಂಜುನಾಥ ಬೇವಿನಕಟ್ಟಿ**
ಡೀನ್, ಸಮಾಜ ವಿಜ್ಞಾನ ನಿಕಾಯ
ಪ್ರಾಧ್ಯಾಪಕರು
ಜಾನಪದ ಅಧ್ಯಯನ ವಿಭಾಗ
ಕನ್ನಡ ವಿಶ್ವವಿದ್ಯಾಲಯ, ಹಂಪಿ
ವಿದ್ಯಾರಣ್ಯ-೫೮೩೨೭೬
೨೦೧೬.

**ಸ್ಥಳ:- ವಿದ್ಯಾರಣ್ಯ**
**ದಿನಾಂಕ:-**

## ದೃಢೀಕರಣ ಪತ್ರ

### ಸಂಶೋಧಕರ ಪ್ರಮಾಣ ಪತ್ರ

ನಾಗರಾಜ .ಕೆ. **ನವಲಗುಂದ** ಎಂಬ ನಾನು **"ಉತ್ತರ ಕರ್ನಾಟಕದ ಜೈನ ವಾಡೆಗಳು"** ಎಂಬ ಮಹಾಪ್ರಬಂಧವನ್ನು ಪಿಎಚ್.ಡಿ. ಪದವಿಗಾಗಿ ಕನ್ನಡ ವಿಶ್ವವಿದ್ಯಾಲಯ, ಹಂಪಿಗೆ ಸಲ್ಲಿಸಲು ಡಾ. ಮಂಜುನಾಥ **ಬೇವಿನಕಟ್ಟಿ**, ಪ್ರಾಧ್ಯಾಪಕರು ಜಾನಪದ ಅಧ್ಯಯನ ವಿಭಾಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ ಇವರ ಮಾರ್ಗದರ್ಶನದಲ್ಲಿ ಸಿದ್ಧಪಡಿಸಿರುತ್ತೇನೆ.

ಈ ಮಹಾ ಪ್ರಬಂಧದ ವಿಷಯ ಅಥವಾ ಇದರ ಯಾವುದೇ ಭಾಗವನ್ನು ಈ ಮೊದಲು ಯಾವುದೇ ಪದವಿಗಾಗಲಿ ಬಳಸಿಕೊಂಡಿಲ್ಲವೆಂದು ದೃಢೀಕರಿಸುತ್ತೇನೆ.

ಸಂಶೋಧನಾ ವಿದ್ಯಾರ್ಥಿಯ ಸಹಿ,

ನಾಗರಾಜ .ಕೆ. ನವಲಗುಂದ.

ಸ್ಥಳ:- ವಿದ್ಯಾರಣ್ಯ
ದಿನಾಂಕ:-

# ಘೋಷಣಾ ಪತ್ರ

"ಉತ್ತರ ಕರ್ನಾಟಕದ ಜೈನ ವಾಡೆಗಳು" ಎಂಬ ಈ ಮಹಾಪ್ರಬಂಧವನ್ನು ಪಿಎಚ್.ಡಿ. ಪದವಿಗಾಗಿ ಕನ್ನಡ ವಿಶ್ವವಿದ್ಯಾನಿಲಯ, ಹಂಪಿಗೆ ಸಲ್ಲಿಸಲು ಡಾ. ಮಂಜುನಾಥ ಬೇವಿನಕಟ್ಟಿ, ಪ್ರಾಧ್ಯಾಪಕರು ಜಾನಪದ ಅಧ್ಯಯನ ವಿಭಾಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ ಇವರ ಮಾರ್ಗದರ್ಶನದಲ್ಲಿ ಸಿದ್ಧಪಡಿಸಿರುತ್ತೇನೆ.

ಈ ಮಹಾ ಪ್ರಬಂಧದ ವಿಷಯ ಅಥವಾ ಇದರ ಯಾವುದೇ ಭಾಗವನ್ನು ಈ ಮೊದಲು ಯಾವುದೇ ಪದವಿಗಾಗಲಿ, ಉದ್ದೇಶಕ್ಕಾಗಲಿ ಬಳಸಿಕೊಂಡಿಲ್ಲವೆಂದು ಘೋಷಿಸುತ್ತೇನೆ.

ಸಂಶೋಧನಾ ವಿದ್ಯಾರ್ಥಿ,

ನಾಗರಾಜ .ಕೆ. ನವಲಗುಂದ.

ಸ್ಥಳ:- ವಿದ್ಯಾರಣ್ಯ
ದಿನಾಂಕ:-

# ಪರಿವಿಡಿ

ಅಧ್ಯಾಯ–ಒಂದು

# ಅಧ್ಯಯನದ ಉದ್ದೇಶ ಮತ್ತು ವ್ಯಾಪ್ತಿ

೧.೧ ಅಧ್ಯಯನದ ಉದ್ದೇಶ.

೧.೨ ಅಧ್ಯಯನದ ವ್ಯಾಪ್ತಿ.

೧.೩ ಅಧ್ಯಯನದ ಸ್ವರೂಪ.

೧.೪ ಜೈನವಾಡೆಗಳ ಬಗ್ಗೆ ಇದುವರೆಗೆ ನಡೆದ ಅಧ್ಯಯನಗಳು

## ಅಧ್ಯಾಯ–ಒಂದು

# ಅಧ್ಯಯನದ ಉದ್ದೇಶ ಮತ್ತು ವ್ಯಾಪ್ತಿ

### ೧.೧ ಅಧ್ಯಯನದ ಉದ್ದೇಶ.

ಜಾಗತೀಕರಣ ಎಂಬ ಮಾಂತ್ರಿಕ ಶಕ್ತಿ ಆಧುನಿಕ ಸಮಾಜದ ಅವಿಭಾಜ್ಯ ಅಂಗವಾಗುತ್ತಿರುವುದು ಸರಿಯಷ್ಟೆ. ಇದರ ಪ್ರಭಾವ ಜನಸಮುದಾಯದಲ್ಲಿ ಗಣನೀಯ ಬದಲಾವಣೆ ತಂದಿದೆ. ಮನುಷ್ಯನ ಆಹಾರ, ಉಡುಪು, ಭಾಷೆ, ಜೀವನಶೈಲಿ ಹೀಗೆ ಬಹುತೇಕ ವಲಯಗಳಲ್ಲಿ ಜಾಗತೀಕರಣದ ಛಾಪು ಒಡಮೂಡುತ್ತಿದೆ. ಇದು ವಿಪರ್ಯಾಸವಲ್ಲ. ಬದಲಾದ ಜಗತ್ತಿಗೆ; ಬದಲಾಗುವ ವಾತಾವರಣ. ಇದು ಜಗದ ನಿಯಮವೂ ಆಗಿದೆ.

ಜಾಗತೀಕರಣದ ಪ್ರಭಾವ ಮಾನವ ಜೀವನದ ಎಲ್ಲಾ ರಂಗಗಳಲ್ಲೂ ಮೂಗು ತೂರಿಸುತ್ತಿರುವುದು ಗೊತ್ತಿದ್ದ ಸಂಗತಿ. ಈ ಪ್ರಭಾವಕ್ಕೆ ಮಾನವನ 'ವಸತಿನೆಲೆ'ಯೂ ಹೊರತಾಗಿಲ್ಲ. ಮಣ್ಣಿನಿಂದ ನಿರ್ಮಿತ ವಸತಿಗಳು 'ದೇಸಿ' ಸಂಸ್ಕೃತಿಯ ಪ್ರತೀಕವಾದರೆ; 'ಸಿಮೆಂಟ್' ನಿರ್ಮಿತ ವಸತಿನೆಲೆಗಳು ಜಾಗತೀಕರಣದ ಕೂಸುಗಳು. ಕಲ್ಲು, ಗಚ್ಚು, ಗಾರೆಯಂಥಹ ಗಟ್ಟಿ ಸರಂಜಾಮು ನಮ್ಮಲ್ಲಿದ್ದರೂ ಸುಲಭ, ಚಂದತೆಯ ದೃಷ್ಟಿಯಿಂದ ಸಿಮೆಂಟ್ ಬಳಕೆಯಾಗುತ್ತಿದೆ. ಇದು ವಿಪರ್ಯಾಸ ಅನ್ನಿಸಿದರೂ ಅನಿವಾರ್ಯತೆ ಎಂಬಂತಾಗಿದೆ. ಈ ಅನಿವಾರ್ಯತೆಯೇ ಇಂದು ಮಣ್ಣು, ಕಲ್ಲಿನ ವಸತಿಯ ಬದಲಾಗಿ ಸಿಮೆಂಟ್ ಮನೆಗಳು ರಾರಾಜಿಸುತ್ತಿವೆ. ಮಣ್ಣು, ಕಲ್ಲು ಗೋಡೆ ನಿರ್ಮಿತ ಉಪ್ಪರಿಗೆಯ ಮನೆಯ ಬದಲಾಗಿ ಬಹುಮಹಡಿ ಗಗನಚುಂಬಿ ಸಿಮೆಂಟ್ ಕಟ್ಟಡಗಳು ತಲೆ ಎತ್ತಿ ನಿಂತಿವೆ. ನಗರ ಪ್ರದೇಶದಲ್ಲಿ ಸಿಮೆಂಟ್ ನಿರ್ಮಿತ ಒಂಟಿಮನೆ, ಒಳಮಹಡಿ ಮನೆ (ಡೂಪ್ಲೆಕ್ಸ್) ಬಹುಮಹಡಿ ಮನೆಗಳು ಕಂಡುಬಂದರೆ, ಹಳ್ಳಿ ಪ್ರದೇಶದಲ್ಲಿ ಮಣ್ಣಿನ ಮನೆ, ಹೆಂಚಿನ ಹೊದಿಕೆಯ ಮನೆ (ಕರಿ ಮತ್ತು ಕೆಂಪು ಹೆಂಚು) ಉಪ್ಪರಿಗೆಯ ಮನೆ ಕಂಡುಬರುವುದು ಸರ್ವೇಸಾಮಾನ್ಯ. ಇತ್ತೀಚಿಗೆ ಗ್ರಾಮೀಣ ಪರಿಸರದಲ್ಲೂ ಸಿಮೆಂಟ್ ಮನೆಗಳು ತಲೆಎತ್ತಿ ನಿಂತಿವೆ.

ವಸತಿ ಎಂಬುದು ಮನುಷ್ಯ ಜೀವನದ ಪ್ರಗತಿಯ ಸಂಕೇತ. ಕಾಡುಮನುಷ್ಯ ನಾಗರೀಕತೆಯತ್ತ ದಾಪುಗಾಲು ಹಾಕಿದ್ದು ವಸತಿಯನ್ನು ಕಂಡುಕೊಂಡ ಮೇಲೆಯೇ. ಅಲೆಮಾರಿಗೆ ನೆಲೆ ದೊರೆತ ಮೇಲೆ ಅವನ ಬೌದ್ಧಿಕ ವಿಕಾಸದ ಹಂತಗಳು ಬದಲಾಗತೊಡಗಿದವು. ಅಂತೆಯೇ ಅವನ ವಸತಿಯಲ್ಲೂ ಕಾಲಕ್ರಮೇಣ ಮಾರ್ಪಾಡುಗಳು ಆಗತೊಡಗಿದವು. ಮರದ ಪೊಟರೆಯಿಂದ ಹಿಡಿದು ಗುಡಿಸಲು, ತಪ್ಪಲಿನ ಹೊದಿಕೆಯ ಮನೆ, ತಟ್ಟಿ ಮನೆ, ಸೋಗೆಮನೆ, ಕಟ್ಟಿಗೆಯ ಮನೆ, ಗಚ್ಚಿನ ಮನೆ, ಹೆಂಚಿನ ಮನೆ, ಕಲ್ಲಿನ ಮನೆ, ಸಿಮೆಂಟ್ ಮನೆಗಳವರೆಗೂ ವಸತಿಯ ಇತಿಹಾಸ ಬೆಳೆದು ಬಂದಿದ್ದನ್ನು ಮನಗಾಣಬಹುದು.

ವಸತಿ ಕೇವಲ ನೆಲೆಯಾಗಿದುದು ಒಂದು ಹಂತವಾಗಿದ್ದರೆ ಪ್ರತಿಷ್ಠೆಯ ಸಂಕೇತವಾದದ್ದು ಇನ್ನೊಂದು ಹಂತ. ಶ್ರೀಮಂತರ ಮನೆಗಳು ಇದಕ್ಕೆ ಉದಾಹರಣೆ. ಒಂದು ಹಳ್ಳಿಯಲ್ಲಿ ಶ್ರೀಮಂತನು ಭದ್ರವಾದ ಕಲ್ಲಿನಿಂದ ನಿರ್ಮಿತ ಅಥವಾ ಮಣ್ಣುಕಲ್ಲುಗಳಿಂದ ನಿರ್ಮಿತವಾದ, ಒಳ ಅಲಂಕರಣಕ್ಕೆ ಕಟ್ಟಿಗೆ ಬಳಸಿದ ವಿಶಾಲ ಮನೆಯಲ್ಲಿದ್ದರೆ, ಮಧ್ಯಮ ವರ್ಗದವರು ಮಣ್ಣಿನ ಮನೆಗಳನ್ನು ಹೊಂದಿರುತ್ತಿದ್ದರು. ಬಡವರು ಕಟ್ಟಿಗೆಯ ತುಂಡುಗಳು ಅಥವಾ ಬಿದಿರಿನ ಬೊಂಬುಗಳ ತಟ್ಟಿಗೆ ಮಣ್ಣು ಮೆತ್ತಿ ಸೂರನ್ನೊಂದು ಕಂಡುಕೊಂಡಿದ್ದರು. ಮನುಷ್ಯನ ನೆಲೆಯಾದ ವಸತಿಯಲ್ಲಿ ಧರ್ಮ ಜಾತಿಗಳು ಪ್ರವೇಶ ಮಾಡಿದ್ದು ವಿಪರ್ಯಾಸ. ಒಂದು ಹಳ್ಳಿಯ ವಸತಿ ಸಮುಚ್ಚಯವನ್ನು ಗಮನಿಸಿದರೆ ಈ ಚಿತ್ರಣ ಸ್ಪಷ್ಟವಾಗುತ್ತದೆ. ಬ್ರಾಹ್ಮಣ, ಶೈವ, ಜೈನ ಇತ್ಯಾದಿ ವರ್ಗಗಳು ಪ್ರತ್ಯೇಕ ವಸತಿ ಸಮುಚ್ಚಯವನ್ನು ಹೊಂದಿ ಇತರ ವರ್ಗಗಳಿಗಿಂತ ತಾವು ಭಿನ್ನರು ಎಂದು ತೋರಿಸಿಕೊಳ್ಳುತ್ತವೆ. ಈಗಲೂ ಬ್ರಾಹ್ಮಣರ ವಸತಿ ಸಮುಚ್ಚಯಗಳಿಗೆ 'ಅಗ್ರಹಾರ' ಎನ್ನುವ ರೂಢಿ ಇದೆ. ಸದ್ಯದ ಪರಿಸ್ಥಿತಿಯಲ್ಲೂ ಮೇಲ್ವರ್ಗ ಎಂದು ಹೇಳಿಕೊಳ್ಳುವವರ ವಸತಿಗಳು ಕೆಳವರ್ಗ ಎಂದು ರೂಢಿಯಲ್ಲಿರುವವರ ವಸತಿಗಳಿಂದ ಪ್ರತ್ಯೇಕವಾಗಿವೆ. ಇವರ ನಂತರ ಒಕ್ಕಲಿಗರ ಓಣಿ, ಕುರುಬರ ಓಣಿ, ತಳವಾರರ ಓಣಿ, ಕಮ್ಮಾರ, ಕುಂಬಾರ, ಬಡಿಗೆರ ಇತ್ಯಾದಿ ಕುಲಕಸುಬು ಮಾಡುವವರ ವಸತಿ ನೆಲೆಗಳು ಕಂಡುಬರುತ್ತವೆ. ಈ ಎಲ್ಲ ವಸತಿಗಳಿಗಿಂತ ಹರಿಜನರ ವಸತಿಗಳು ಊರಿಂದ ಹೊರಗಿರುತ್ತಿದ್ದವು. ಪ್ರಾಚೀನ ಧಾರ್ಮಿಕ ವ್ಯವಸ್ಥೆಯ ಸಂಪ್ರದಾಯವೇ ಇದಕ್ಕೆ ಕಾರಣ. ಹರಿಜನರ ಕೇರಿಯಲ್ಲೂ ಮತ್ತೆ ಎಡಗೈ-ಬಲಗೈ ವಸತಿ ನೆಲೆಗಳು ಪ್ರತ್ಯೇಕವಾಗಿ ಇರುವುದನ್ನು ಹಳ್ಳಿಯ ಚಿತ್ರಣದಲ್ಲಿ ಕಾಣಬಹುದು.

ವಸತಿ ಕೇವಲ ನೆಲೆ ಮಾತ್ರದ ಎಲ್ಲೆಯನ್ನು ಮೀರಿ ಬೆಳೆದು ಬಹುಮುಖಿ ಆಯಾಮವನ್ನು ಪಡೆದುಕೊಂಡಿದ್ದು ರಾಜಸತ್ತೆಯ ಕಾಲದಲ್ಲಿ ಅರಮನೆ ಎಂಬ ಅರಸೊತ್ತಿಗೆಯ ವಸತಿ ಈ ಸಂದರ್ಭದಲ್ಲಿ ಇಡೀ ರಾಜ್ಯದ, ರಾಜ್ಯಾಡಳಿತದ ಕೇಂದ್ರ ಸ್ಥಾನವಾಯಿತು. ರಾಜ್ಯದ ಆಗುಹೋಗುಗಳ ಚರ್ಚೆ, ಆಜ್ಞೆ, ಸುಗ್ರೀವಾಜ್ಞೆ, ಯುದ್ಧದ ಮುನ್ನೋಟ, ಶತ್ರುಗಳನ್ನು ಎದುರಿಸುವ ತಂತ್ರಗಾರಿಕೆ, ಪಟ್ಟುಗಳು, ತಯಾರಿ, ತರಬೇತಿ ಅರಮನೆ ಮತ್ತು ಅದರ ಸುತ್ತಮುತ್ತಲ ಪ್ರದೇಶದಲ್ಲಿ ನಡೆಯತೊಡಗಿದವು. ರಾಜ ಸಮುದಾಯದ ಸೇವಕ-ಸೇವಕಿಯರ ವಸತಿಗಳು, ಸೈನಿಕರ ವಸತಿಗಳು, ಮಂತ್ರಿ ಮಹೋದಯ-ದಂಡನಾಯಕರ ಮನೆಗಳು, ಸಂಗೀತ, ಸಾಹಿತ್ಯ, ನಾಟ್ಯಗಾರರ ವಸತಿಗಳು ಅರಮನೆಯ ಸುತ್ತಲೂ ಹರಡಿಕೊಂಡವು. ಈ ಎಲ್ಲಾ ಅರಮನೆ ಕೇಂದ್ರಿತ ವಸತಿ ಸಮುಚ್ಚಯಕ್ಕೆ ಕೋಟೆಯೊಂದನ್ನು ಕಟ್ಟಲಾಗುತ್ತಿತ್ತು. ಇಂಥದ್ದೇ ವೈಭವದ ಅನಾವರಣ ಅರಸನ ಅಧಿಕಾರಿಗಳು ಪ್ರಾಂತಾಧಿಕಾರಿಗಳ ವಸತಿಯಲ್ಲಿಯೂ ಕಾಣಬಹುದಿತ್ತು. ಅದಕ್ಕೆ ಸ್ಪಷ್ಟ ಉದಾಹರಣೆಯೆಂದರೆ ಉತ್ತರ ಕರ್ನಾಟಕದಲ್ಲಿ ಈಗಲೂ ಕಂಡು ಬರುವ ವಾಡೆಗಳು.

ವಾಡೆ ಎಂಬುದು ಆದಿಲ್‌ಷಾಹಿಗಳ ಆಡಳಿತದಲ್ಲಿ ಕಟ್ಟಲ್ಪಟ್ಟ ದೇಸಾಯಿಯ ಮನೆ. ದೇಸಾಯಿ ಒಂದು ಪರಗಣದ (ಜಿಲ್ಲಾ) ಮುಖ್ಯಸ್ಥನಾಗಿರುತ್ತಿದ್ದ. ದೇಶಮುಖ, ದೇಶಪಾಂಡೆ, ನಾಡಗೌಡ, ನಾಯಕ ಇವೆಲ್ಲವೂ ದೇಸಾಯಿ ಎಂಬ ವೃತ್ತಿ ಸೂಚಕ ಇತರೆ ನಾಮಗಳು. ದೇಸಾಯಿ ಪರಗಣದ ಅಧಿಕಾರಿಯಾದ್ದರಿಂದ ಸಾಕಷ್ಟು ಆದಾಯ ಇರುತ್ತಿದ್ದಿತು. ಅಂತೆಯೇ ಅವನು ವಿಶಾಲವಾದ ವಸತಿಯೊಂದನ್ನು ಹೊಂದಿರುತ್ತಿದ್ದ. ಇದರಲ್ಲಿ ಸಾಕಷ್ಟು ಕೋಣೆಗಳು, ಸದರ, ರಾಜಾಂಗಣ, ಕಂದಾಯ ವಸೂಲಿ ಚೌಕಿ, ದನದ ಮನೆಗಳು, ಕುದುರೆ ಮನೆಗಳು, ಕೆಲಸಗಾರರ ಮನೆಗಳು, ಕಾಳು ತುಂಬಲು ಹಗೆ, ಬಾವಿಗಳನ್ನು ಒಳಗೊಂಡಿರುತ್ತಿತ್ತು. ರಕ್ಷಣೆಗೆ ಬೃಹತ್ತಾದ ರಕ್ಷಣಾ ಗೋಡೆ ಅದರ ಮೇಲೆ ರಕ್ಷಣಾ ಚೌಕಿ ಇರುತ್ತಿದ್ದವು. ಈ ಎಲ್ಲಾ ಸೌಕರ್ಯವನ್ನು ಹೊಂದಿದ ವ್ಯವಸ್ಥೆಯೇ ವಾಡೆ. ಇದು ಒಂದು ಪ್ರಾಂತ್ಯದ ಅರಮನೆ. ರಾಜನ ಅರಮನೆಯ ಬಹುತೇಕ ವ್ಯವಸ್ಥೆ ಇಲ್ಲಿತ್ತು. ಐದುನೂರು ವರ್ಷದಿಂದ ಹಿಡಿದು ಮೂರು ನೂರು ವರ್ಷದ ಹಳೆಯ ವಾಡೆಗಳು ಇನ್ನೂ ನಮ್ಮೊಂದಿಗಿವೆ. ಉತ್ತರ ಕರ್ನಾಟಕದಲ್ಲಿ ಮಾತ್ರ ಕಂಡುಬರುವ ವಾಡೆ ಎಂಬ ವಸತಿಯ ಅಧ್ಯಯನವೇ ಪ್ರಸ್ತುತ ಮಹಾಪ್ರಬಂಧದ ಉದ್ದೇಶವಾಗಿದೆ.

ಪ್ರಸ್ತುತ ಅಧ್ಯಯನದ ತಲೆಬರೆಹ "ಉತ್ತರ ಕರ್ನಾಟಕದ ಜೈನ ವಾಡೆಗಳು". ಇದುವರೆಗೂ ವೀರಶೈವ ವಾಡೆಗಳ ಬಗ್ಗೆ ಹೆಚ್ಚು ಅಧ್ಯಯನಗಳಾಗಿವೆ. ಇದನ್ನು ಹೊರತುಪಡಿಸಿ ಬೇರೆ ಧರ್ಮದ ವಾಡೆಗಳ ಬಗ್ಗೆ ಅಧ್ಯಯನ ಮಾಡಬೇಕೆಂದಾಗ ಹೊಳದದ್ದೆ ಜೈನ ವಾಡೆಗಳು. ಕನ್ನಡದ ಇತಿಹಾಸ, ಸಾಹಿತ್ಯವನ್ನು, ಜಾನಪದ ಸಾಹಿತ್ಯ ಕಟ್ಟಿ ಬೆಳೆಸಿದವರಲ್ಲಿ ಜೈನರು ಮಹತ್ತರವಾದ ಪಾತ್ರವಹಿಸಿದ್ದಾರೆ. ರಾಜರಾಗಿ, ಸಾಮಂತ ಅರಸರಾಗಿ ಮಂತ್ರಿಮಹೋದಯರಾಗಿ, ದಂಡನಾಯಕರಾಗಿ, ಪ್ರಾಂತ್ಯಾಧಿಕಾರಿಯಾಗಿ, ವೀರಸೇನಾನಿಗಳಾಗಿ ಹೀಗೆ ಹಲವು ಆಯಾಮಗಳ ರಾಜ್ಯಾಡಳಿತದಲ್ಲಿ ಸಕ್ರೀಯರಾಗಿ ಜೈನರು ಪಾಲ್ಗೊಂಡಿದ್ದರು. ಈ ವಿಚಾರಕ್ಕೆ ಈಗಲೂ ನಮ್ಮ ಮುಂದೆ ಜೈನ ಪ್ರಾಂತ್ಯಾಧಿಕಾರಿಗಳು (ದೇಸಾಯಿಗಳು) ಆಳಿಹೋದ ವಾಡೆಗಳು ಸಾಕ್ಷಿಯಾಗಿ ನಿಲ್ಲುತ್ತವೆ. ಪುರಾತನ ಗತವೈಭವದ ಸಂಸ್ಕೃತಿಯನ್ನು ಸಾರುವ ಉತ್ತರ ಕರ್ನಾಟಕದ ಜೈನ ವಾಡೆಗಳ ವಿಸ್ತೃತ ಅಧ್ಯಯನ ಮಹಾಪ್ರಬಂಧದ ಉದ್ದೇಶವಾಗಿದೆ.

ಉತ್ತರ ಕರ್ನಾಟಕದ ಎಲ್ಲ ಧರ್ಮದ ವಾಡೆಗಳ ಕಾರ್ಯಕ್ಷಮತೆಯಲ್ಲಿ ಅಷ್ಟೇನು ವ್ಯತ್ಯಾಸ ಕಂಡುಬರುವುದಿಲ್ಲ. ಆದರೆ ವಾಡೆಯ ಅಧಿಕಾರಿಗಳ ರೀತಿ–ರಿವಾಜುಗಳು, ಸಂಪ್ರದಾಯಗಳು, ಪರಿಸರ, ತತ್ವ–ಸಿದ್ಧಾಂತಗಳು ಭಿನ್ನವಾಗಿರುವುದು ಕಂಡುಬರುತ್ತವೆ. ಈ ದೃಷ್ಟಿಯಿಂದ ಹಿಂದೂ ಸಂಪ್ರದಾಯದಿಂದ ಭಿನ್ನವೇ ಎನಿಸಿದ ಜೈನರ ವಾಡೆಗಳ ಸಂಸ್ಕೃತಿಯ ಅನಾವರಣ ಮಹಾಪ್ರಬಂಧದ ಮುಖ್ಯ ಅಧ್ಯಯನಗಳಲ್ಲೊಂದಾಗಿದೆ. ಇಲ್ಲಿ ಜೈನ ದೇಸಾಯಿಗಳ ಪ್ರಜಾಪ್ರೀತಿ, ಧರ್ಮನಿಷ್ಠೆ, ಪರಧರ್ಮಸಹಿಷ್ಣುತೆ, ರಾಜನಿಷ್ಠೆ, ಚುರುಕಾದ ಆಡಳಿತ ನಿರ್ವಹಣೆಯ ಅಧ್ಯಯನವಿದೆ. ಜೊತೆಗೆ ನೂರಾರು ವರ್ಷಗಳಾದರೂ ಸುಭದ್ರವಾಗಿ ಮೂಲಸೊಬಗನ್ನು ಉಳಿಸಿಕೊಂಡು ಜಾಗತೀಕರಣದ

ಸಿಮೆಂಟ್ ಕಟ್ಟಡಗಳಿಗೆ ಸವಾಲೆಸೆಯುವ ವಾಡೆಗಳ ಸಂಸ್ಕೃತಿಯ ಅನಾವರಣವಿದೆ. ಹೀಗೆ ವಾಡೆ ಅದರ ಆಡಳಿತ, ಸುತ್ತಲಿನ ಪರಿಸರ, ದೇಸಾಯಿ, ಅಭಿವೃದ್ಧಿ, ಅವನತಿ ಬಹುಮುಖಿ ಆಯಾಮಗಳ ಉದ್ದೇಶ ಪ್ರಸ್ತುತ ಮಹಾಪ್ರಬಂಧದ್ದಾಗಿದೆ.

## ೧.೨ ಅಧ್ಯಯನದ ವ್ಯಾಪ್ತಿ.

ಮಹಾಪ್ರಬಂಧದ ಹೆಸರೇ ಹೇಳುವಂತೆ ಜೈನ ವಾಡೆಗಳು ಉತ್ತರ ಕರ್ನಾಟಕ ಭಾಗದ ವ್ಯಾಪ್ತಿಗೆ ಸಂಬಂಧಿಸಿದ್ದಾಗಿವೆ. ಇಡೀ ಉತ್ತರ ಕರ್ನಾಟಕದಲ್ಲಿ ೨೩೦ಕ್ಕೂ ಹೆಚ್ಚು ವಾಡೆಗಳಿವೆ. ಇವುಗಳಲ್ಲಿ ೧೯ ಜೈನವಾಡೆಗಳಿದ್ದು, ಉತ್ತರ ಕನ್ನಡ, ಗದಗ, ಧಾರವಾಡ, ಬಾಗಲಕೋಟೆ, ಬೀದರ್, ಬೆಳಗಾವಿ, ವಿಜಯಪುರ ಎಂಬ ಏಳು ಜಿಲ್ಲೆಗಳ ವ್ಯಾಪ್ತಿಯಲ್ಲಿ ಹರಡಿಕೊಂಡಿವೆ. ಅವುಗಳಲ್ಲಿ ಉತ್ತರ ಕನ್ನಡ, ಬೀದರ್ ಮತ್ತು ವಿಜಯಪುರ ಜಿಲ್ಲೆಗಳಲ್ಲಿರುವ ಜೈನ ವಾಡೆಗಳು ನಾಶವಾಗಿದ್ದರಿಂದ ಆ ಜಿಲ್ಲೆಗಳ ಜೈನ ವಾಡೆಗಳನ್ನು ಅಧ್ಯಯನಕ್ಕೆ ಹೊರತುಪಡಿಸಲಾಗಿದ್ದು ಉಳಿದ ಜಿಲ್ಲೆಗಳ ಜೈನ ವಾಡೆಗಳನ್ನು ಅಧ್ಯಯನಕ್ಕೆ ಬಳಸಿಕೊಳ್ಳಲಾಗಿದೆ.

ಕ್ಷೇತ್ರಕಾರ್ಯದಲ್ಲಿ ೧೯ ಜೈನ ವಾಡೆಗಳು ಉತ್ತರ ಕರ್ನಾಟಕದಲ್ಲಿ ಆಳಿಹೋದ ದಾಖಲೆಗಳು ಲಭ್ಯವಿವೆ. ಇವುಗಳಲ್ಲಿ ೧೪ ವಾಡೆಗಳು ನಾಶವಾಗಿ ಹೋಗಿವೆ. ಕೆಲವೊಂದು ಮೂಲ ಮಾಹಿತಿಯೂ ಅಲಭ್ಯ (ಹುಕ್ಕೇರಿ, ಐನಾಪುರ, ಆನಗೋಳ, ಉಗಾರ ಬದ್ರುಕ, ಸಿಂದಿ ಕುರುಬೆಟ್ಟ, ಅಮ್ಮಿನಭಾವಿ, ಹೊಸೂರು, ಹಳಿಯಾಳ, ಬಾಬಾನಗರ, ಶಾಲಿಬಿದರಿ ವಾಡೆಗಳು). ಉಳಿದ ಐದು ವಾಡೆಗಳು ಸದ್ಯದ ಅಧ್ಯಯನಕ್ಕೆ ಒಳಪಟ್ಟಿವೆ. ಇವು ಈಗಲೂ ಸುಸ್ಥಿತಿಯಲ್ಲಿದ್ದು ಮೂಲ ಹೊಳಪನ್ನು ಹಾಗೆಯೇ ಉಳಿಸಿಕೊಂಡು ಬಂದಿವೆ. ಮಧ್ಯಕಾಲಿನ ಕರ್ನಾಟಕದ ಪ್ರಾದೇಶಿಕ ಆಡಳಿತದ ಹೆಗ್ಗುರುತಾಗಿರುವ ಬಾಗಲಕೋಟೆ ಜಿಲ್ಲೆಯ ತೇರದಾಳ ನಾಡಗೌಡರ ವಾಡೆ, ಹನಗಂಡಿಯ ದೇಸಾಯಿ ವಾಡೆ, ಬೆಳಗಾವಿ ಜಿಲ್ಲೆಯ ದರೂರು ನಾಯಕರ ವಾಡೆ, ಧಾರವಾಡ ಜಿಲ್ಲೆಯ ಅಣ್ಣಿಗೇರಿ ದೇಶಪಾಂಡೆ ವಾಡೆ, ಗದಗ ಜಿಲ್ಲೆಯ ಮುಳುಗುಂದ ದೇಶಪಾಂಡೆ ವಾಡೆಗಳ ಸಂಸ್ಕೃತಿ ಅನಾವರಣದ ವ್ಯಾಪ್ತಿ ಅಧ್ಯಯನದಾಗಿದೆ.

ನಾಲ್ಕು ಜಿಲ್ಲೆಯಲ್ಲಿ ಹಂಚಿಕೆಯಾಗಿರುವ ಐದು ವಾಡೆಗಳು ಮೂಲದಲ್ಲಿ ಎರಡೇ ವಾಡೆಯಾಗಿದ್ದವು. ಹನಗಂಡಿ ಮತ್ತು ದರೂರು ತೇರದಾಳ ವಾಡೆಯ ಕವಲುಗಳು, ಇವಷ್ಟೇ ಅಲ್ಲದೇ ಇನ್ನೂ ನಾಲ್ಕು ವಾಡೆಗಳೂ ತೇರದಾಳ ವಂಶವಾಹಿನಿಗೆ ಸಂಬಂಧಿಸಿದವು. ನಾಲ್ಕು ವಾಡೆಗಳಲ್ಲಿ ಹಳ್ಳಿಂಗಳಿ (ಬಾಗಲಕೋಟೆ ಜಿಲ್ಲೆ) ವಾಡೆ ಮೂಲ ಸ್ವರೂಪವನ್ನು ಕಳೆದುಕೊಂಡಿದೆ. ಉಳಿದ ಮೂರು ವಾಡೆಗಳಾದ ಸಪ್ತಸಾಗರ ವಾಡೆ, ಸಸಾಲಟ್ಟಿ ವಾಡೆ, ತೀರ್ಥ ವಾಡೆ (ಬೆಳಗಾವಿ ಜಿಲ್ಲೆ)ಗಳು ಕೃಷ್ಣಾ ನದಿಯ ಪ್ರವಾಹಕ್ಕೆ ಸಿಲುಕಿ ನಾಶವಾಗಿವೆ. ಇನ್ನು ಅಣ್ಣಿಗೇರಿಯ ದೇಶಪಾಂಡೆ ವಾಡೆಯ ಕವಲು ಮುಳುಗುಂದ ದೇಶಪಾಂಡೆ ವಾಡೆ. ಒಟ್ಟಿನಲ್ಲಿ ತೇರದಾಳದ ನಾಡಗೌಡರ ವಾಡೆ ಮತ್ತು ಅಣ್ಣಿಗೇರಿ

ದೇಶಪಾಂಡೆ ವಾಡೆಗಳು ಸದ್ಯ ಚರ್ಚಿಸಿದ ಏಳು ವಾಡೆಗಳ ಮೂಲವಾಗಿದ್ದವು ಎಂಬುದನ್ನು ಮನಗಾಣಬಹುದು.

ರಾಜಕೀಯ ಮತ್ತು ಧಾರ್ಮಿಕ ಸ್ಥಿತ್ಯಂತರದ ಪ್ರಭಾವಕ್ಕೆ ಒಳಪಟ್ಟು ಅನ್ಯಧರ್ಮಕ್ಕೆ ಮತಾಂತರವಾದ ಜೈನವಾಡೆಗಳನ್ನು ಅಧ್ಯಯನದ ವ್ಯಾಪ್ತಿಗೆ ತರಲಾಗಿದೆ. ಮೂಲದಲ್ಲಿ ಜೈನಧರ್ಮ ಸಂಬಂಧಿಸಿ ಕಾಲಾನಂತರ ವೀರಶೈವ ಧರ್ಮಕ್ಕೆ ಮತಾಂತರಗೊಂಡ ಒಟ್ಟು ಮೂರು ವಾಡೆಗಳು ಉತ್ತರ ಕರ್ನಾಟಕದಲ್ಲಿ ಲಭ್ಯವಿವೆ. ಅವುಗಳು ೧ ಕಾಕತಿ ವಾಡೆ (ಕಿತ್ತೂರು ತಾಲ್ಲೂಕು, ಬೆಳಗಾವಿ ಜಿಲ್ಲೆ), ೨ ಚಚಡಿ ದೇಸಾಯಿ ವಾಡೆ (ಸವದತ್ತಿ ತಾಲ್ಲೂಕು, ಬೆಳಗಾವಿ ಜಿಲ್ಲೆ), ೩ ಸಿಕ್ಕೇದೇಸಾಯಿ ವಾಡೆ ಅಣ್ಣಿಗೇರೆ (ನವಲಗುಂದ ತಾಲ್ಲೂಕು, ಧಾರವಾಡ ಜಿಲ್ಲೆ).

ಧಾರವಾಡ, ಗದಗ, ಬೆಳಗಾವಿ, ಬಾಗಲಕೋಟೆ ಜಿಲ್ಲೆಗಳ ವ್ಯಾಪ್ತಿಯಲ್ಲಿ ಹಂಚಿ ಹೋದ ಜೈನವಾಡೆಗಳನ್ನು ನಾಲ್ಕು ಜಿಲ್ಲೆಯನ್ನು ಹೆಸರಿಸದೆ ಒಟ್ಟಾರೆಯಾಗಿ ಉತ್ತರ ಕರ್ನಾಟಕದ ಸಂಸ್ಕೃತಿಯ ವ್ಯಾಪ್ತಿಯ ಹಿನ್ನೆಲೆಯಲ್ಲಿ ಅಧ್ಯಯನ ಮಾಡಲಾಗಿದೆ.

### ೧.೩ ಅಧ್ಯಯನದ ಸ್ವರೂಪ.

ಅಧ್ಯಯನಕ್ಕೆ ಒಳಪಡಿಸಿದ "ಉತ್ತರ ಕರ್ನಾಟಕದ ಜೈನ ವಾಡೆಗಳು" ಮಹಾ ಪ್ರಬಂಧದಲ್ಲಿ ಎಂಟು ಅಧ್ಯಾಯಗಳನ್ನು ಅಳವಡಿಸಿಕೊಳ್ಳಲಾಗಿದೆ. ಮೊದಲ ಅಧ್ಯಾಯವು ಅಧ್ಯಯನ ಉದ್ದೇಶ, ವ್ಯಾಪ್ತಿ, ಸ್ವರೂಪ ಮತ್ತು ಇದುವರೆಗೂ ನಡೆದ ಅಧ್ಯಯನಗಳನ್ನು ವಿವರಿಸುವುದಾಗಿದೆ. ವಾಡೆಯ ಹುಟ್ಟು, ವಿಕಾಸ ಮತ್ತು ಅರ್ಥ ಎರಡನೆಯ ಅಧ್ಯಾಯದಲ್ಲಿದೆ. ಇದರಲ್ಲಿ ವಾಡೆಯ ವಿಕಸನದ ಹಂತಗಳನ್ನು ಮಾನವನ ಬೌದ್ಧಿಕ ವಿಕಾಸಕ್ಕೆ ಅನುಗುಣವಾಗಿ, ವಾಡೆಯ ಹುಟ್ಟನ್ನು ರಾಜಕೀಯ ನೆಲೆಗಟ್ಟಿನಲ್ಲಿ ಮತ್ತು ವಾಡೆ ಪದದ ನಿಷ್ಪತ್ತಿಯನ್ನು ಶಾಬ್ದಿಕ, ವೃತ್ತಿವಾಚಕ, ರಕ್ಷಣಾವಾಚಕ ನೆಲೆಗಟ್ಟಿನಲ್ಲಿ ಚರ್ಚಿಸಲಾಗಿದೆ.

ಕರ್ನಾಟಕದ ಆಡಳಿತದಲ್ಲಿ ಜೈನರ ಪ್ರಭಾವವನ್ನು ಮೂರನೆಯ ಅಧ್ಯಾಯದಲ್ಲಿ ವಿಶ್ಲೇಷಿಸಲಾಗಿದೆ. ಪ್ರಾಚೀನ ಜೈನರ ರಾಜ್ಯಾಡಳಿತದ ಪ್ರಭಾವ ಜೈನರು ವಾಡೆಯ ಒಡೆಯರಾಗುವುದಕ್ಕೆ ಹೇಗೆ ಸಹಾಯವಾಯಿತು ಎಂಬ ವಿವರಣೆ ಇಲ್ಲಿದೆ. ನಾಲ್ಕನೆಯ ಅಧ್ಯಾಯ ಜೈನ ವಾಡೆಗಳ ಪರಿಸರ ಮತ್ತು ಇತಿಹಾಸದ ನೆಲೆಗಟ್ಟಿನಲ್ಲಿ ರಚಿತವಾಗಿದೆ. ವಾಡೆ ಸುತ್ತಲೂ ಇರುವ ಜೈನ ಪರಿಸರ, ಜೈನ ಪ್ರಾಚೀನ ನೆಲಗಳು ಇತ್ಯಾದಿಗಳ ಅನಾವರಣದ ಜೊತೆಗೆ ಐದೂ ಜೈನ ವಾಡೆಗಳ ಮನೆತನದ ಇತಿಹಾಸವಿದೆ.

ವಾಡೆಯ ಸಂಸ್ಕೃತಿಗೆ ಸಂಬಂಧಿಸಿದ್ದು ಐದನೆಯ ಅಧ್ಯಾಯ. ವಾಡೆಯ ರಾಜಕೀಯ, ಸಾಮಾಜಿಕ, ಆರ್ಥಿಕ, ಸಾಂಸ್ಕೃತಿಕ ವಿವರಗಳು ಇಲ್ಲಿವೆ. ಪರಗಣ, ಕಸಬಾ, ವಾಡೆಯ ಮುಖ್ಯಸ್ಥನ

ಕರ್ತವ್ಯ, ಬಿರುದುಗಳು, ಶಿಕ್ಷಣ, ನ್ಯಾಯಪದ್ಧತಿ, ಕಂದಾಯ ವಸೂಲಾತಿ ನಮೂನೆಗಳು, ಭೂಮಾಪನ, ಕಂದಾಯ ವಿನಾಯಿತಿ, ಕಂದಾಯ ವಿಧಾನ, ದಾನ, ಹಬ್ಬ ಹರಿದಿನ, ಇತರೆ ಆಚರಣೆಗಳ ವಿಸ್ತೃತ ಅಧ್ಯಯನ ಈ ಅಧ್ಯಾಯದಲ್ಲಿದೆ. ವಾಡೆ ಕೇವಲ ಕಟ್ಟಡವಾಗದೆ ಒಂದು ಸಂಸ್ಕೃತಿಯ ಚಟುವಟಿಕೆ ತಾಣವಾಗಿತ್ತು ಎಂಬುದು ಈ ಅಧ್ಯಾಯದಲ್ಲಿ ನಿರೂಪಿತವಾಗಿದೆ.

ಆರನೆಯ ಅಧ್ಯಾಯ ಮಹಾಪ್ರಬಂಧದ ಮುಖ್ಯ ಘಟ್ಟ. 'ವಾಡೆಯ ನಿರ್ಮಾಣ' ಎಂಬ ಶೀರ್ಷಿಕೆಯ ಈ ಅಧ್ಯಾಯದಲ್ಲಿ ಒಂದು ವಾಡೆಯ ನಿರ್ಮಾಣ ಹಂತದ ಪ್ರಕ್ರಿಯೆ ಇದೆ. ವಾಡೆಯನ್ನು ಕಟ್ಟುವಾಗ ಸ್ಥಳದ ಆಯ್ಕೆ, ವಾಸ್ತು ನೋಡುವುದು, ಕಟ್ಟಡದ ಸಲಕರಣೆಗಳ ಸಂಗ್ರಹ, ಕಟ್ಟಿಗೆ, ಕಲ್ಲು, ಮಣ್ಣು, ಗಾರೆ, ಕಬ್ಬಿಣ, ಕೆಲಸಗಾರರು, ಕಲಾವಿದರು ಇತ್ಯಾದಿ. ವಾಡೆಯ ಒಳ ರೂಪದ ಸೌಲಭ್ಯಗಳು, ವಾಡೆಯಲ್ಲಿನ ಕಟ್ಟಿಗೆಯ ಅಲಂಕರಣ ಇತ್ಯಾದಿಗಳ ಅಪೂರ್ವ ಮಾಹಿತಿ ಈ ಅಧ್ಯಾಯದಲ್ಲಿದೆ.

ಮತಾಂತರವಾದ ಜೈನವಾಡೆಗಳ ಕುರಿತಾದ ಅಧ್ಯಯನ ಅಧ್ಯಾಯ ಏಳರಲ್ಲಿದೆ. ಕರ್ನಾಟಕದ ೧೨ನೆಯ ಶತಮಾನದಲ್ಲಾದ ಧಾರ್ಮಿಕ ಕಲಹಗಳು, ಕಲಹದ ನೇತೃತ್ವ ವಹಿಸಿದ ವ್ಯಕ್ತಿಗಳು, ಜೈನಧರ್ಮಕ್ಕೆ ಆದ ಆಘಾತ. ಇತರೆ ಧರ್ಮದ ಪ್ರಭಾವ, ಜೈನಧರ್ಮದ ಅಸ್ಮಿತೆ. ಮತಾಂತರ ಪ್ರಕ್ರಿಯೆಗೆ ಒಳಗಾದ ಜೈನವಾಡೆಗಳ ಅಧ್ಯಯನ ಈ ಅಧ್ಯಾಯದಲ್ಲಿದೆ. ಅಧ್ಯಾಯ ಎಂಟು ಸಮಾರೋಪ. ಒಂದು ಕಾಲದಲ್ಲಿ ಪ್ರಾಂತೀಯ ಸರ್ಕಾರಗಳಂತಿದ್ದ ವಾಡೆಗಳು ಬ್ರಿಟೀಷ್ ಆಡಳಿತದಿಂದ ಭಾರತದ ಸ್ವಾತಂತ್ರ್ಯ ಸಂಗ್ರಾಮ, ಜಮೀನ್ದಾರಿ ಪದ್ಧತಿಯ ಅಂತ್ಯದಿಂದ ತಮ್ಮ ಮೂಲ ಅಧಿಕಾರ ಕಳೆದುಕೊಂಡವು. ಆದರೆ ಅಧಿಕಾರ ಹೋದರು ವಾಡೆಗಳ ಇರುವಿಕೆ ಸಮಾರೋಪದಲ್ಲಿ ಚರ್ಚಿಸಲಾಗಿದೆ. ಅಲ್ಲದೇ ಇಡೀ ಅಧ್ಯಯನದ ಫಲಿತಗಳನ್ನು ಇಲ್ಲಿಯೇ ಚರ್ಚಿಸಲಾಗಿದೆ. ಪ್ರಬಂಧದ ಕೊನೆಯಲ್ಲಿ ಅನುಬಂಧಗಳನ್ನು ಕೊಡಲಾಗಿದೆ. ಇಲ್ಲಿ ವಾಡೆಗಳಿಗೆ ಸಂಬಂಧಿಸಿದ ನಕ್ಷೆ, ವಂಶಾವಳಿ, ಪದಗಳ ಅರ್ಥಕೋಶ, ಕ್ಷೇತ್ರ ಕಾರ್ಯದ ಸ್ಥಳಗಳು, ವಿಷಯ ಕುರಿತಾದ ಚರ್ಚಿಸಿದ ವಿದ್ವಾಂಸರುಗಳ ಮಾಹಿತಿ, ಮಾಹಿತಿ ನೀಡಿದ ಜನಪದರು, ಸನದುಗಳು, ಪರಾಮರ್ಶನ ಗ್ರಂಥಗಳು, ಛಾಯಾಚಿತ್ರಗಳನ್ನು ಕೊಡಲಾಗಿದೆ.

**೧.೪ ಜೈನ ವಾಡೆಗಳ ಬಗ್ಗೆ ಇದುವರೆಗೂ ನಡೆದ ಅಧ್ಯಯನಗಳು.**

ವಾಡೆ ಒಂದು ಸ್ವಾತಂತ್ರ್ಯ ಘಟಕವಾಗಿದ್ದರೂ ಅದು ದೇಸಗತಿಯ ಒಂದು ಭಾಗ. ದೇಸಗತಿ ಎಂದರೆ ಆದಿಲ್‌ಷಾಹಿಗಳು ಮತ್ತು ರಾಜಮಹಾರಾಜರಿಂದ ಉಂಬಳಿ ಪಡೆದುಕೊಂಡು ಸ್ಥಳೀಯ ಆಡಳಿತ ನಡೆಸುವ ಭಾಗ. ಈ ಭಾಗ ಭಾಗಶ: ಸ್ವತಂತ್ರವಾಗಿದ್ದರೂ ರಾಜರ ಅಧೀನದಲ್ಲಿರುತ್ತಿತ್ತು. ಇಂಥ ದೇಸಗತಿ ಎಂಬ ಆಡಳಿತ ಪ್ರದೇಶದ ಮುಖ್ಯ ಘಟಕವೇ ವಾಡೆ. ದೇಸಗತಿ ಮತ್ತು ವಾಡೆ

ಒಂದನ್ನು ಹೊರತುಪಡಿಸಿ ಇನ್ನೊಂದಿಲ್ಲ. ಇವೆರಡೂ ಒಂದೇ ಆಡಳಿತಕ್ಕೆ ಸಂಬಂಧಪಟ್ಟ ಭಾಗಗಳಾದರೂ ಸ್ವರೂಪ ಬೇರೆ ಬೇರೆ. ಒಂದು ಭೌದ್ಧಿಕ; ಇನ್ನೊಂದು ಭೌತಿಕ. ದೇಸಗತಿ ಗೊತ್ತುಮಾಡಿದ ಪ್ರದೇಶಗಳಲ್ಲಿ ಹರಡಿಕೊಂಡಿದ್ದರೆ, ವಾಡೆ ದೇಸಗತಿ ಒಂದು ನಿರ್ಧಿಷ್ಟ ಪ್ರದೇಶದಲ್ಲಿ ಕಟ್ಟಿದ ಕಟ್ಟಡ. ದೇಸಗತಿಯ ಎಲ್ಲ ಕಾರ್ಯಚಟುವಟಿಕೆಗಳು 'ವಾಡೆ'ಯಿಂದಲೇ ಚಲಾವಣೆಗೊಳ್ಳುತ್ತಿದ್ದವು. ಇಲ್ಲಿಯವರೆಗೂ ನಡೆದ ಅಧ್ಯಯನಗಳು ದೇಸಗತಿಯನ್ನು ಕೇಂದ್ರವಾಗಿಸಿಕೊಂಡೆ ನಡೆದಿವೆಯೇ ಹೊರತು ವಾಡೆಯನ್ನು ಕೇಂದ್ರವಾಗಿರಿಸಿಕೊಂಡು ಅಲ್ಲ. ಆದ್ದರಿಂದಲೇ ವಾಡೆಯನ್ನು ಕೇಂದ್ರವಾಗಿರಿಸಿಕೊಂಡು ಪ್ರಸ್ತುತ ಅಧ್ಯಯನ ರೂಪಿತವಾಗಿದೆ.

ಇದುವರೆಗೂ ವಾಡೆಯ ಅಧ್ಯಯನ ನಡದೇ ಇಲ್ಲ ಎಂದು ಹೇಳುವುದು ಅಸಾಧ್ಯ. ಆದರೆ ಜೈನ ವಾಡೆಗಳ ಬಗ್ಗೆ ಇದುವರೆಗೂ ಪಿಎಚ್.ಡಿ. ಅಧ್ಯಯನ ನಡೆದಿಲ್ಲ. "ಬೆಳಗಾವಿ ಜಿಲ್ಲೆಯ ಲಿಂಗಾಯಿತ ವಾಡೆಗಳು" ಎಂಬುದು ವಾಡೆಗಳ ಬಗ್ಗೆ ಬಂದ ಮೊದಲ ಕೃತಿ. ಇದು ಡಾ. ಸಂತೋಷ ಹಾನಗಲ್ಲ ಅವರ ಪಿಎಚ್.ಡಿ ಮಹಾಪ್ರಬಂಧವೂ ಹೌದು. ಕ್ರಿ.ಶ. ೨೦೦೯ರಲ್ಲಿ ಶರಣ ಸಾಹಿತ್ಯ ಅಕಾಡೆಮಿ ರಾಜಗುರು ಸಂಸ್ಥಾನ ಕಲ್ಮಠ, ಚನ್ನಮ್ಮನ ಕಿತ್ತೂರುನಿಂದ ಈ ಕೃತಿ ಪ್ರಕಟವಾಗಿದೆ. ಕಿತ್ತೂರು, ಚಚಡಿ, ತಲ್ಲೂರು, ರುದ್ರಾಪುರ, ತುರುಮುರಿ, ನೇಗಿನಹಾಳ, ಎಲಿಮುನವಳ್ಳಿ, ಸಿರಸಂಗಿ, ಕಾಕತಿ, ಕೊಟಕನೂರು ಎಂಬ ಹತ್ತು ವಾಡೆಗಳ ಸಂಸ್ಕೃತಿ ಮತ್ತು ಸ್ವರೂಪದ ಅಧ್ಯಯನ ಈ ಕೃತಿಯಲ್ಲಿದೆ. ವಾಡೆಯ ಪದದ ಅರ್ಥ ಮತ್ತು ಅರ್ಥವಿಸ್ತಾರ, ಬೆಳಗಾವಿ ಜಿಲ್ಲೆಯ ಲಿಂಗಾಯತ ವಾಡೆಗಳು, ವಾಡೆಗಳ ಶಿಲ್ಪ ಮತ್ತು ವಾಸ್ತು, ವಾಡೆಗಳ ಆಡಳಿತ ಸ್ವರೂಪ ವಾಡೆಗಳ ಸಂದೇಶ ಎಂಬ ಐದು ಅಧ್ಯಾಯಗಳು ಈ ಕೃತಿಯಲ್ಲಿವೆ.

'ಮಾಡ' ಎಂಬ ಕನ್ನಡ ಪದದಿಂದ ವಾಡೆ > ವಾಡಾ ಪದಗಳು ಹುಟ್ಟಿಕೊಂಡಿವೆ ಎಂಬ ಅಭಿಪ್ರಾಯವನ್ನು ಡಾ. ಸಂತೋಷ ಹಾನಗಲ್ಲ ಅವರು ಈ ಕೃತಿಯಲ್ಲಿ ವ್ಯಕ್ತಪಡಿಸಿದ್ದಾರೆ. ಮಾಡ ಎಂದರೆ ಉಪ್ಪರಿಗೆಯ ಮನೆ, ಗ್ರಾಮದ ಜಮೀನ್ದಾರರ ಐಶಾರಾಮಿ ಮನೆಗಳೇ ವಾಡೆಗಳಾಗಿ ಪರಿವರ್ತನೆಯಾದ ಅಭಿಪ್ರಾಯ ಇಲ್ಲಿದೆ. ಮರಾಠರು ಹಾಗೂ ಪೇಶ್ವೆಗಳ ಆಡಳಿತದ ಕಾಲಾವಧಿಯಲ್ಲಿ 'ವಾಡೆ', 'ವಾಡಾ' ಪದಗಳ ಬಳಕೆ ಹೆಚ್ಚು ಪ್ರಚುರಕ್ಕೆ ಬಂದುದಾಗಿ ಡಾ. ಸಂತೋಷ ಹಾನಗಲ್ಲ ಅವರ ಅಧ್ಯಯನ ತಿಳಿಸುತ್ತದೆ.

ಬೆಳಗಾವಿ ಜಿಲ್ಲೆಯ ಲಿಂಗಾಯತ ವಾಡೆಗಳು ಕೃತಿಯಲ್ಲಿ ಹತ್ತು ವಾಡೆಗಳ ಅಧ್ಯಯನವಿದೆ. ವಾಡೆಗಳ ವಿನ್ಯಾಸ, ತಲನಕ್ಷೆ, ಒಳರಚನೆ, ಕಟ್ಟಡ ಸುಭದ್ರತೆಗೆ ಬಳಸಿದ ಕಲ್ಲು, ಮಣ್ಣು, ಗಾರೆ, ಸುಂದರತೆಗೆ ಭಳಸಿದಿ ಕಟ್ಟಿಗೆ, ಕಟ್ಟಿಗೆಯ ವಿಧಗಳು ಕಟ್ಟಿಗೆಯಿಂದ ಸೃಷ್ಟಿಯಾದ ಕಲೆಗಳು, ವಾಡೆಯ ರಕ್ಷಣೆಗೆ ಬಳಸುತ್ತಿದ್ದ ಆಯುಧಗಳು, ವಾಡೆಯ ತಳವಿನ್ಯಾಸ, ವಾಸ್ತು, ವಾಡೆಯಲ್ಲಿ ನಡೆಯುವ ಕಾರ್ಯಕಲಾಪಗಳು, ನೌಕರ ವರ್ಗ, ವಾಡೆಯ ಇತಿಹಾಸ, ಒಟ್ಟಾರೆಯಾಗಿ ಹತ್ತೂ ವಾಡೆಗಳ

ಸಂಸ್ಕೃತಿ ಚಿತ್ರಣವನ್ನು ಡಾ. ಸಂತೋಷ ಹಾನಗಲ್ಲ ಅವರು ಸೊಗಸಾಗಿ ಕಟ್ಟಿಕೊಟ್ಟಿದ್ದಾರೆ. ವಾಡೆಗಳ ಅಧ್ಯಯನದ ಪ್ರವೇಶಿಕೆಗೆ ಇದೊಂದು ಅತ್ಯುತ್ತಮ ಕೃತಿ.

'ಬೆಳಗಾವಿ ಜಿಲ್ಲೆಯ ಲಿಂಗಾಯತ ವಾಡೆಗಳು' ಕೃತಿಯನ್ನು ಹೊರತುಪಡಿಸಿ ವಾಡೆಗಳ ಬಗ್ಗೆ ಇನ್ನೂ ಕೆಲವೊಂದು ಅಧ್ಯಯನಗಳು ನಡೆದಿವೆ. ೨೦೦೯ರಲ್ಲಿ ಹೊರಬಂದ "ಬಾಗಲಕೋಟೆ ಜಿಲ್ಲೆಯ ದೇಸಗತಿಗಳು' ಎಂಬ ಶೀರ್ಷಿಕೆಯ ಡಾ.ಸಂಗಪ್ಪ ಚ ಕಲ್ಯಾಣಿಯವರ ಪಿಎಚ್.ಡಿ ಮಹಾಪ್ರಬಂಧದಲ್ಲಿ ವಾಡೆಯ ಸ್ವರೂಪದ ಬಗ್ಗೆ ಅಭ್ಯಸಿಸಲಾಗಿದೆ. ದೇಸಗತಿಯನ್ನು ಅಭ್ಯಸಿಸುವ ಈ ಮಹಾಪ್ರಬಂಧದಲ್ಲಿ ದೇಸಗತಿಗಳ ಭಾಗವಾಗಿ ವಾಡೆಯನ್ನು ಚರ್ಚಿಸಲಾಗಿದೆ. ವಾಡೆಗಳ ಸ್ವರೂಪ, ಕಟ್ಟಿಗೆಯ ವಿನ್ಯಾಸ, ವಾಡೆಯಲ್ಲಿರುವ ಭಾಗಗಳು, ಕಲ್ಲುಗಳ ಮಾಹಿತಿ, ಕಲಾವಿದರ ಜೊತೆಗಿನ ಒಪ್ಪಂದ, ಬಲಿ ಸಂಪ್ರದಾಯ, ಕಟ್ಟಡದ ವಾಸ್ತು ಇತ್ಯಾದಿ ವಿಷಯಗಳನ್ನು ಚರ್ಚಿಸಲಾಗಿದೆ. ವಾಡೆಗಳ ಬಗ್ಗೆ ಡಾ.ಸಂಗಪ್ಪ ಚ ಕಲ್ಯಾಣಿಯವರು ಕಲೆಹಾಕಿದ ಮಾಹಿತಿ 'ಕನ್ನಡಿಯಲ್ಲಿ ಕರಿ ಹಿಡಿದಂತೆ' ವ್ಯಕ್ತವಾಗಿದೆ.

ವಾಡೆಯ ದೇಸಗತಿಯ ಒಂದು ಭಾಗವಾಗಿದ್ದರಿಂದ ಹಾಗಾಗಿ ದೇಸಗತಿಗಳ ಅಧ್ಯಯನಗಳು ವಿಪುಲವಾಗಿವೆ. ದೇಸಗತಿ ಎಂಬ ಪದವನ್ನು ಮೊದಲು ಬಳಸಿದವರು ಡಾ. ಎಂ.ಎಂ. ಕಲಬುರ್ಗಿಯವರು. "೧೯೮೫ರಲ್ಲಿ ಬಿಜಾಪುರದ ಸಿದ್ದೇಶ್ವರ ಸಂಸ್ಥೆಯಿಂದ ನಡೆದ ಉಪನ್ಯಾಸ ಕಾರ್ಯಕ್ರಮದಲ್ಲಿ ಈ ಪದವನ್ನು ಚಾಲನೆಗೊಳಿದರು. ಮರುವರ್ಷವೇ ೧೯೮೬ರಲ್ಲಿ ಬೆಳಗಾವಿ ಜಿಲ್ಲೆ ದೇಸಗತಿಗಳ ವಿಚಾರ ಸಂಕಿರಣ ಕೂಡ ನಡೆಯಿತು. ಹಾಗೆ ಅದು ಗದುಗಿನ ವೀರಶೈವ ಅಧ್ಯಯನ ಸಂಸ್ಥೆಯಿಂದ ಪ್ರಕಟಣೆ ಕೂಡಾ ಆಯಿತು"[೧] ಇದುವರೆಗೂ ದೇಸಗತಿಯ ಬಗ್ಗೆ ನಡೆದ ಅಧ್ಯಯನಗಳಲ್ಲಿ ಪ್ರಮುಖವಾದವು ಡಾ.ಬಾಳಣ್ಣ ಸೀಗಿಹಳ್ಳಿಯವರ 'ಬೆಳಗಾವಿ ಜಿಲ್ಲೆಯ ವೀರಶೈವ ದೇಸಗತಿಗಳು', ಡಾ.ವಿರೂಪಾಕ್ಷ ಬಡಿಗೇರ ಅವರ 'ಸಿರಸಂಗಿ ಸಂಸ್ಥಾನ; ಒಂದು ಅಧ್ಯಯನ'. ಡಾ.ಸಂಗಪ್ಪ ಚ ಕಲ್ಯಾಣಿಯವರ 'ಬಾಗಲಕೋಟೆ ಜಿಲ್ಲೆಯ ದೇಸಗತಿಗಳು', ಡಾ. ಎ.ಸಿ. ನಾಗಭೂಷಣ ಮೂರ್ತಿಯವರ 'ಧಾರವಾಡ ಜಿಲ್ಲೆಯ ದೇಸಗತಿಗಳು' ಅಲ್ಲದೇ ಎಸ್.ಎಸ್. ಒಡೆಯರ್, ಅಶೋಕ ಶೆಟ್ಟರ, ಡಾ.ಎಂ.ಬಿ. ನೇಗಿನಹಾಳ, ಡಾ.ಸಂಗಪ್ಪ ಚ ಕಲ್ಯಾಣಿಯವರ ಲೇಖನಗಳು ದೇಸಗತಿ ಕುರಿತಾಗಿ ಒಡಮೂಡಿವೆ. ಇವಿಷ್ಟೂ ಬಹುತೇಕ ವೀರಶೈವ ದೇಸಗತಿ ಮತ್ತು ವಾಡೆಗಳ ಅಧ್ಯಯನಗಳಾಗಿವೆ.

ಜೈನವಾಡೆಗಳ ಸಂಬಂಧವಾಗಿ ಇದುವರೆಗೂ ಒಂದು ಕೃತಿಯೂ ಹೊರಬಂದಿಲ್ಲ. ಲೇಖನವೂ ರಚಿತವಾಗಿಲ್ಲ. ಈ ಅಂಶವನ್ನು ಮನಗಂಡು ಪ್ರಸ್ತುತ ಮಹಾಪ್ರಬಂಧ ಜೈನ ವಾಡೆಗಳ ಕುರಿತಾದ ಅಧ್ಯಾಯನದ ಹಿನ್ನಲೆಯಲ್ಲಿ ರಚಿತವಾಗಿದೆ. ಜೈನ ದೇಸಗತಿ ಸಂಬಂಧವಾಗಿ ಅಲಗೌಡ ಸಿ ಪಾಟೀಲ ಅವರ "ಹನಗಂಡಿ ದೇಸಗತಿ" ಎಂ.ಫಿಲ್ ಸಂಪ್ರಬಂಧ ಪ್ರಮುಖವಾದುದು.

ಹನಗಂಡಿ ದೇಸಗತಿಗೆ ಸಂಬಂಧಿಸಿದಂತೆ ಪ್ರಾಥಮಿಕ ಮಾಹಿತಿಯನ್ನು ಕೊಡುವಲ್ಲಿ ಅಲಗೌಡ ಸಿ ಪಾಟೀಲ ಅವರ ಸಂಪ್ರಬಂಧ ಯಶಸ್ವಿಯಾಗಿದೆ. ಆಡಳಿತ ವ್ಯವಸ್ಥೆ, ಸಾಮಾಜಿಕ ಜೀವನ, ಆರ್ಥಿಕ ಚಿತ್ರಣ, ಶೈಕ್ಷಣಿಕ ಸಾಧನೆ, ಧಾರ್ಮಿಕ ಆಚರಣೆ, ಕಲೆ ಮತ್ತು ವಾಸ್ತುಶಿಲ್ಪದ ಅನಾವರಣ ಇಲ್ಲಿದೆ. ಈ ಅಧ್ಯಯನದಲ್ಲಿ ವಾಡೆಯ ಬಗ್ಗೆ ಚರ್ಚಿಸಲಾಗಿಲ್ಲ. ಸಂಪ್ರಬಂಧವನ್ನು ಹೊರತುಪಡಿಸಿ ಜೈನದೇಸಗತಿಗಳ ಬಗ್ಗೆ ಲೇಖನಗಳು ಮತ್ತು ಜೈನ ದೇಸಗತಿಯ ಬಗ್ಗೆ ಪ್ರಸ್ತಾಪ ಬಂದಿವೆ.

ಡಾ.ಎಂ.ಎಂ. ಕಲಬುರ್ಗಿಯವರು 'ಪಂಪನ ವಂಶಜರು; ಇಂದು ಜೈನರು-ಲಿಂಗಾಯಿತರು,'[೨] ಎಂಬ ಲೇಖನದಲ್ಲಿ ಅಣ್ಣಿಗೇರಿ ದೇಶಪಾಂಡೆ ವಂಶದ ಬಗ್ಗೆ ಚರ್ಚಿಸಿದ್ದಾರೆ. ಈ ಚರ್ಚೆ ದೇಸಗತಿ ಹಿನ್ನೆಲೆಯಲ್ಲಿ ಬರದೇ ವಂಶದ ಪೂರ್ವಿಕರ ಶೋಧದ ಬಗ್ಗೆ ಒಡಮೂಡಿದೆ. ಅಣ್ಣಿಗೇರಿ ದೇಶಪಾಂಡೆ ಪಂಪನ ವಂಶಜರು ಎಂದು ಅವರು ಅಭಿಪ್ರಾಯ ಪಟ್ಟಿದ್ದಾರೆ. ಈ ಶೋಧಕ್ಕೆ ಪಂಪನ ತಂದೆ ಭೀಮಪ್ಪಯ್ಯನ ಹೆಸರು ದೇಶಪಾಂಡೆ ವಾಡೆಯ ವಂಶಾವಳಿಯಲ್ಲಿ ಪುನರಾವರ್ತನೆಯಾದ ಅಂಶ ಪ್ರಮಾಣವಾಗಿ ನಿಲ್ಲುತ್ತದೆ. ಈ ಅಂಶವನ್ನು ಜಿ ಬ್ರಹ್ಮಪ್ಪ, ನಾಡೋಜ ಹಂಪನಾ, ಡಾ.ಎಂ ಚಿದಾನಂದಮೂರ್ತಿಯವರು ಅನುಮೋದಿಸುತ್ತಾರೆ.

ಇದೇ ಮನೆತನಕ್ಕೆ ಸಂಬಂಧಿಸಿದಂತೆ ಡಾ.ಅಪ್ಪಣ್ಣ ಹಂಜೆಯವರು "ಅಣ್ಣಿಗೇರಿಯ ಜೈನ ದೇಸಗತಿ ಮನೆತನ"[೩] ಎಂಬ ಲೇಖನವೊಂದನ್ನು ಬರೆದಿದ್ದಾರೆ. ಇವರೂ ಸಹ ಡಾ.ಎಂ.ಎಂ. ಕಲಬುರ್ಗಿ ಅವರ ಹೇಳಿಕೆಯನ್ನು ಅನುಮೋದಿಸುತ್ತಾ ಪಂಪನ ತಮ್ಮ ಜಿನವಲ್ಲಭನು ಅಣ್ಣಿಗೇರಿಗೆ ಬಂದಿದ್ದ ಎಂಬ ಅಭಿಪ್ರಾಯ ವ್ಯಕ್ತಪಡಿಸುತ್ತಾರೆ. ಅಣ್ಣಿಗೇರಿಯ ಪರಿಸರ, ದೇಸಗತಿಯ ಮನೆತನದ ವಂಶಾವಳಿ ಪ್ರಮುಖ ವ್ಯಕ್ತಿಗಳ ವಿವರಣೆ, ದೇಸಗತಿಯ ಕೊಡುಗೆಗಳು ಸದ್ಯ ದೇಶಪಾಂಡೆ ವಂಶದ ವಾಸ್ತವ್ಯದ ವಿವರಗಳನ್ನು ಈ ಲೇಖನದಲ್ಲಿ ದಾಖಲಿಸಿದ್ದಾರೆ.

ಡಾ.ಎಂ.ಬಿ. ನೇಗಿನಹಾಳ 'ಕಾಗತಿ ದೇಸಗತಿ'[೪] ಎಂಬ ಲೇಖನದಲ್ಲಿ ಕಾಗತಿ ದೇಸಗತಿ ವಂಶಾವಳಿಯು ಮೂಲದಲ್ಲಿ ಜೈನ ಧರ್ಮಕ್ಕೆ ಸೇರಿತ್ತು ಎಂಬ ಅಂಶವನ್ನು ಶೋಧಿಸಿದ್ದಾರೆ. ಈ ದೇಸಗತಿಯ ಕೆಲವು ವಂಶಗಳು ಜೈನರಾಗಿ ಕೆಲವು ವಂಶಗಳು ವೀರಶೈವರಾಗಿ ಮುಂದುವರೆದವು. ರಾಣಿ ಚೆನ್ನಮ್ಮ ಇದೇ ದೇಸಗತಿಗೆ ಸಂಬಂಧಿಸಿದವಳು. ಇವಳ ತಂದೆ ಧೂಳಪ್ಪಗೌಡ ತಾಯಿ ಪದ್ಮಾವತಿದೇವಿ ಮೂಲದಲ್ಲಿ ಜೈನರಾಗಿದ್ದು ಮೂರನೆಯ ಖಾನಗೌಡನ ಆಡಳಿತಾವಧಿಯಲ್ಲಿ ವೀರಶೈವ ಧರ್ಮಕ್ಕೆ ಮತಾಂತರವಾದರು ಎಂಬ ಅಭಿಪ್ರಾಯವನ್ನು ಡಾ. ಎಂ.ಬಿ. ನೇಗಿನಹಾಳರವರು ವ್ಯಕ್ತಪಡಿಸಿದ್ದಾರೆ.

ಇದುವರೆಗೂ ಜೈನ ದೇಸಗತಿಗಳು, ಅವರ ವಂಶಾವಳಿಯ ಬಗ್ಗೆ ವಿಪುಲವಾದ ಚರ್ಚೆಯಾಗಿದೆ. ಆದರೆ ಜೈನ ವಾಡೆಗಳ ಬಗ್ಗೆ ಅಧ್ಯಯನ ನಡೆದಿಲ್ಲ. ಆದ್ದರಿಂದ ಇಡೀ ಉತ್ತರ ಕರ್ನಾಟಕದ ಜೈನವಾಡೆಗಳ ಸ್ಥಳ ಚಿತ್ರಣದ ಅವಶ್ಯಕತೆಯನ್ನು ಮನಗಂಡು "ಉತ್ತರ ಕರ್ನಾಟಕದ ಜೈನ ವಾಡೆಗಳ" ಅಧ್ಯಯನವನ್ನು ನಾನಿಲ್ಲಿ ಕೈಗೊಂಡಿದ್ದೇನೆ.

**ಅಡಿ ಟಿಪ್ಪಣಿಗಳು**

೧ ಡಾ.ಸಂಗಪ್ಪ ಚ ಕಲ್ಯಾಣಿ – ಬಾಗಲಕೋಟೆ ಜಿಲ್ಲೆಯ ದೇಸಗತಿಗಳು. ೨೦೦೬, ಪುಟ–೧೧.

೨ ಡಾ.ಎಂ.ಎಂ. ಕಲಬುರ್ಗಿ – ಮಾರ್ಗ ಸಂ–೦೩ (ಪರಿಷ್ಕೃತ ಮುದ್ರಣ). ೨೦೧೦. ಪುಟ–೩೯೭.

೩ ಡಾ.ಅಪ್ಪಣ್ಣ ಹಂಜೆ – ಅಣ್ಣಿಗೇರಿಯ ಜೈನ ದೇಸಗತಿ ಮನೆತನ (ಆದಿಕವಿ ಪಂಪನ ವಂಶಸ್ಥರು) ಶೋಧ – ಸಂಪುಟ ೦೨ ಸಂಚಿಕೆ ೦೧, ಜುಲೈ ೨೦೧೩ ಪುಟ ೩೨–೫೧.

೪ ಡಾ.ಎಂ.ಬಿ. ನೇಗಿನಹಾಳ – ನೇಗಿನಹಾಳ ಪ್ರಬಂಧಗಳು ೧೯೯೯, ಪುಟ–೨೯೯–೩೦೧.

ಅಧ್ಯಾಯ–ಎರಡು

# ವಾಡೆಯ ಹುಟ್ಟು ವಿಕಾಸ ಮತ್ತು ಅರ್ಥ

## ಅಧ್ಯಾಯ–ಎರಡು

# ವಾಡೆಯ ಹುಟ್ಟು ವಿಕಾಸ ಮತ್ತು ಅರ್ಥ

ಆದಿಮಾನವ ಬೌದ್ಧಿಕವಾಗಿ ವಿಕಾಸಹೊಂದಿ ಮನುಷ್ಯನಾದುದು ಒಂದು ಹಂತ. ಮನುಷ್ಯ ತನ್ನ ಅಸ್ತಿತ್ವ, ಪ್ರತಿಷ್ಠೆ, ವೈಯ್ಯುಕ್ತಿಕ ಛಾಪುಮೂಡಿಸಲು ನಿಯಮಗಳನ್ನು ರೂಪಿಸಿಕೊಂಡಿದ್ದು ನಂತರದ ಹಂತ. ಪ್ರಾರಂಭಿಕ ಹಂತದಲ್ಲಿ ತಾನು, ತನ್ನ ಗುಂಪು ಕಾಪಾಡಿಕೊಳ್ಳಲು ಮಾತ್ರ ನಿಯಮಗಳು ಅಥವಾ ಕಟ್ಟುಪಾಡುಗಳು ರಚನೆಯಾದವು. ಈ ಹಂತದಲ್ಲಿ ವರ್ಗ ಮತ್ತು ವರ್ಣ ವ್ಯವಸ್ಥೆ ಇರಲಿಲ್ಲ. ಕಾಲಾನಂತರ ಮನುಷ್ಯನ ಬುದ್ಧಿ ವಿಸ್ತಾರವಾಗುತ್ತ ಸಂಕುಚಿತತೆ ಹೊಂದತೊಡಗಿತು. ಆ ಕಾರಣದಿಂದಲೇ ಸಂಘ ಜೀವನ, ಪರಸ್ಪರ ನಂಬಿಕೆ, ಮಧುರ ಬಾಂಧವ್ಯ, ಒಗ್ಗಟ್ಟು, ಕಟ್ಟುಪಾಡುಗಳು ಸಡಿಲಗೊಂಡು ಅಧಿಕಾರ ಸ್ವಪ್ರತಿಷ್ಠೆ, ಪ್ರತ್ಯೇಕ ಗುಂಪುಗಳ ಅಸ್ಥಿತ್ವ ಆ ಗುಂಪುಗಳಿಗೆ ಗುರುತು ಹೀಗೆ ನಿಯಮಗಳು ಜಟಿಲಗೊಳ್ಳುತ್ತಾ ಹೋದವು.

ಮನುಷ್ಯ ಸಂಘ ಜೀವಿ ಎಂಬ ಉಕ್ತಿ ಎಷ್ಟು ಸತ್ಯವೋ, ಒಬ್ಬ ಚತುರಮತಿ ವ್ಯಕ್ತಿ ಆ ಸಂಘವನ್ನು ಒಂದು ಹಂತದಲ್ಲಿ ತನ್ನ ಹಿಡಿತಕ್ಕೆ ತೆಗೆದುಕೊಂಡದ್ದು ಅಷ್ಟೇ ಸತ್ಯ. ಹೌದು, ಯಾವಾಗ ಮನುಷ್ಯ ಗುಂಪುಗಾರಿಕೆಯಿಂದ ಬದುಕತೊಡಗಿದನೊ ಅಂದಿನಿಂದಲೇ ಗುಂಪಿನ ನಾಯಕನ ಅಸ್ಥಿತ್ವವೂ ಬಂದಿತು. ಬಹುಶ: ಈ ಹಂತದಿಂದಲೇ ಅಧಿಕಾರ, ಅಧಿಕಾರಿ ಎಂಬ ವ್ಯಾಮೋಹ ಶುರುವಾಗಿದ್ದಿರಬೇಕು.

ದಿನಗಳು ಕಳೆದಂತೆ ಇಂಥ ಮನುಷ್ಯರ ಗುಂಪುಗಳು ಸಾಕಷ್ಟು ಹುಟ್ಟಿಕೊಂಡವು. ಕೆಲವೊಮ್ಮೆ ಗುಂಪುಗುಂಪುಗಳ ನಡುವೆ ಪರಸ್ಪರ ಘರ್ಷಣೆಗಳೂ ಆದವು. ಹೀಗೆ ನಡೆದ ಘರ್ಷಣೆಗಳು ಮಾನವರ ಗುಂಪುಗಳನ್ನು ವಿಚಾರಕ್ಕೆ ಒಳಪಡಿಸದೆ ಇದ್ದಿರಲಾರವು ತತ್ಪರಿಣಾಮವಾಗಿ ಗುಂಪುಗಾರಿಕೆಯ ಬಲಸಂವರ್ಧನೆಗೆ ಆಯುಧಗಳ ಸೃಷ್ಟಿ, ಎದುರಾಳಿಗಳನ್ನು ಸಮರ್ಥವಾಗಿ ಎದುರಿಸಲು ಬಲಶಾಲಿಯಾದ ಜನರು (ಸೈನಿಕರ ಕಲ್ಪನೆ) ತಂತ್ರಗಾರಿಕೆ, ಗುಂಪುಗಳನ್ನು ಕಾಯಲು ರಕ್ಷಕರು ಮುಂತಾದ ವ್ಯವಸ್ಥೆ ಹುಟ್ಟಿಕೊಂಡವು. ಪ್ರಾರಂಭಿಕ ಹಂತದಲ್ಲಿ ಸಾಮಾಜಿಕವಾಗಿ ಅಷ್ಟಾಗಿ ಪ್ರಬಲವಲ್ಲದ ಗುಂಪಿನ ಮುಖಂಡನಿಗೆ ಈ ಸಂದರ್ಭದಲ್ಲಿಯೇ ಪ್ರಾಮುಖ್ಯತೆ ಬಂದಿರಬೇಕು. ಪರಗುಂಪಿನ ಮೇಲೆ ಜಯಶಾಲಿಯಾದಾಗ ಮುಖಂಡನಿಗೆ ಇನ್ನೂ ಹೆಚ್ಚಿನ ಪ್ರಾಮುಖ್ಯತೆ ಸಲ್ಲುತ್ತಾ ಹೋದದ್ದು ಸಹಜವೇ. ಇಂಥ ಘರ್ಷಣೆಗಳಲ್ಲಿ ಯಶಸ್ವಿಯಾಗುತ್ತಾ ಹೋದಂತೆ ಮುಖಂಡ ವಿಶೇಷವೆನ್ನಿಸತೊಡಗಿದ. ಅವನು ಮೊದಮೊದಲು ಗುಂಪಿಗೆ ಸಲಹೆ ಕೊಡುತ್ತಿದ್ದ. ಈಗ ಆಜ್ಞೆ ಮಾಡುವ ಪದ್ಧತಿ ಬೆಳೆಸಿಕೊಂಡು ತಾನು ಎಲ್ಲರಿಗಿಂತಲೂ ಭಿನ್ನ, ವಿಶೇಷ ಎಂಬಂತಹ ನಡಾವಳಿಕೆಗಳನ್ನು ಅವನು ರೂಢಿಸಿಕೊಂಡ. ಗೆದ್ದಾಗ ತನ್ನ ಜನರು ಅವನಿಗೆ ಮಾನ–ಸಮ್ಮಾನಗಳನ್ನು

ಮಾಡಿರಲಿಕ್ಕೆ ಸಾಧ್ಯವಿದೆ. ಜನರು ತಮ್ಮ ಮಿತಿಯೊಳಗೆ ಅಥವಾ ಪರಿಸರದಲ್ಲಿ ದೊರೆತ ಹಣ್ಣುಹಂಪಲು, ಜೇನು, ಪ್ರಾಣಿಗಳ ಮಾಂಸ ಮುಂತಾದ ಉಡುಗೊರೆಗಳನ್ನು ಮುಖಂಡನಿಗೆ ಸಲ್ಲಿಸಿರಬೇಕು.

ಇಷ್ಟೆಲ್ಲಾ ಗೌರವಗಳು ಕುಳಿತಲ್ಲಿಯೇ ದಕ್ಕುವಾಗ ತಾನೇಕೆ ದುಡಿಯಬೇಕು? ಅನ್ನುವ ಮನಸ್ಥಿತಿ ಮುಖಂಡನಿಗೆ ಬಂದಿತು. ಸಿಕ್ಕ ಸದವಕಾಶವನ್ನು ಬಳಸಿಕೊಂಡು ಅವನು ವಿಶೇಷವಾಗತೊಡಗಿದ ಅವನ ವೇಷಭೂಷಣಗಳು, ನಡಾವಳಿಕೆಗಳು ಗತ್ತುಗಾರಿಕೆ ಬದಲಾದವು. ಅಂತೆಯೇ ವಾಸದ ಗುಡಿಸಲೂ (ಹಟ್ಟಿ) ಕೂಡಾ. ಈ ಹಂತದಲ್ಲಿಯೇ ವಾಡೆಯ ಮೊದಲ ರೂಪ ಕಂಡು ಬರುತ್ತದೆ.

### ೨.೧ ವಾಡೆಯ ವಿಕಸನ

ಪ್ರಾಚೀನ ಕರ್ನಾಟಕದ ರಾಜ್ಯಾಡಳಿತದಲ್ಲಿ ರೈತರಿಂದ ಭೂಕಂದಾಯ ಅಥವಾ ಬೆಳೆ ಕಂದಾಯವನ್ನು ವಸೂಲಿ ಮಾಡುವ ಪರಿಪಾಠವಿತ್ತು. ಈ ಕಂದಾಯಗಳನ್ನು ಸಾಮಾನ್ಯವಾಗಿ ರೈತರು ದವಸ-ಧಾನ್ಯಗಳನ್ನು ಕೊಟ್ಟು ತೀರಿಸುತ್ತಿದ್ದರು. ಆರಂಭದಲ್ಲಿ ರೈತರಿಂದ ಬಂದ ದವಸದ ಹಾಗೂ ಹಣದ ರೀತಿಯ ತೆರಿಗೆಯನ್ನು ಊರ ಗೌಡ (ಗಾವುಂಡ) ನೌಡಗೌಡ (ನಾಳ್ಗಾವುಂಡ) ವಸೂಲಿ ಮಾಡುತ್ತಿದ್ದರು. ಗೌಡ ಸ್ಥಳೀಯ ಅಧಿಕಾರಿಯೂ ಹೌದು. ಪ್ರಭಾವಿ ವ್ಯಕ್ತಿಯಾದ್ದರಿಂದ ಅವನಿಗೆ ಗ್ರಾಮಸ್ಥರಿಂದ ತಕ್ಕ ಮರ್ಯಾದೆಯೂ ಸಿಗುತ್ತಿತ್ತು. ಗೌಡ ನಾಡಗೌಡ ಪದಗಳು ಕನ್ನಡದ ಅನೇಕ ಶಾಸನಗಳಲ್ಲಿ ದಾಖಲಿತವಾಗಿವೆ. ಕ್ರಿ.ಶ ೧೦೬೬ರಲ್ಲಿ ಬೆಣ್ಣೆಯೂರು (ಮೋಟೆಬೆನ್ನೂರು, ಬ್ಯಾಡಗಿ ತಾಲ್ಲೂಕು, ಹಾವೇರಿ ಜಿಲ್ಲೆ) ಎಂಬಲ್ಲಿ ಆಯ್ಚಿಮಯ್ಯರಸ ಎಂಬ ವ್ಯಕ್ತಿಯು ಶಾಂತಿನಾಥ ಬಸದಿಯನ್ನು ನಿರ್ಮಿಸಿದ. ಈ ಶಾಸನದಲ್ಲಿ 'ಗಾವುಂಡ' (ಗಾವುಂಡ > ಗೌಂಡ > ಗೌಡ. ಸಂಬಿಂದು ನಿರ್ಭಿಂದು ಆಗಿವೆ) ಮತ್ತು ನಾಳ್ಗಾವುಂಡ ಪದಗಳು ಬಳಕೆಯಾಗಿವೆ.

ಶ್ರೀಮದ್ಗೋಯಿಮ್ಮರಸಂ ಸತ್ತಳಿಗೆಯೆಳ್ಪತ್ತರ್ಕ್ಕೆ
ನಾರ್ಗ್ಗಾವುಂಣ್ದುಗೆಯ್ಯೆ (ನಾಳ್ಗಾವುಂಡ)
ತತ್ಪಾದಪದ್ಮೋಪಜೀವಿಗಳ್। ಸಲ್ಲಿಯ ರಾಲಗಾವುಣ್ಡಂ
ಮುಕ್ಕಟ ರೇಕಗಾವುಣ್ಡಂ ತೆನೆಯರ ಕುನ್ದಗಾವುಣ್ಡಂ
ಬಾದಿಗ ದೇವಗಾವುಣ್ಡಂ ಸೋವಗಾವುಣ್ಡಂ ಕೊಣ್ಡಸ
ಬರ್ಮಗಾವುಣ್ಡ ಅಲುಗರ ಬರ್ಮ್ಮಗಾವುಣ್ಡಂ
ಕಲಿಯಮಗಾವುಣ್ಡಂ ನಟ್ಟಿಯ ಬರ್ಮ್ಮಗಾವುಣ್ಡ
ಆಲುಗರ ಬರ್ಮ್ಮಗಾವುಣ್ಡಂ ಸಲ್ಲಿಯರಜ್ಜಗಾವುಣ್ಡಂ
ಪೆಳೆಯರ ಚಾವಗಾವುಣ್ಡಂ ನಟ್ಟಿಯ ಬರ್ಮ್ಮಗಾವುಣ್ಡ[1]

ಉಲ್ಲೇಖಿತ ಶಾಸನದಲ್ಲಿ ಗಾವುಂಡ ಮತ್ತು ನಾಳ್ಗಾವುಂಡ ಎರಡು ಪದಗಳು ದಾಖಲೆಯಾಗಿವೆ. ಸತ್ತಳಿಗೆ (ಈಗಿನ ಸಾತೇನಹಳ್ಳಿ. ಹಿರೇಕೆರೂರು ತಾ॥, ಹಾವೇರಿ ಜಿ॥) ಎಪ್ಪತ್ತು ಬನವಾಸಿ ೧೨೦೦೦ದ ಒಂದು ಕಂಪಣ. ಈ ಕಂಪಣವು ೭೦ ಗ್ರಾಮಗಳ ವ್ಯಾಪ್ತಿಯ ಆಡಳಿತವನ್ನು ನಡೆಸುತ್ತಿತ್ತು. ಇದರ ಅಧಿಕಾರಿ ಗೋಯಿಮ್ಮರಸ. ಇವನ ಪಾದಪದ್ಮೋಪಜೀವಿಗಳು ೭೦ ಗ್ರಾಮಗಳ ಗಾವುಂಡರಾಗಿದ್ದರು. ಇಲ್ಲಿ ಕಂಪಣದ ಅಧಿಕಾರಿಗೆ ನಾಳ್ಗಾವುಂಡ ಎಂತಲೂ ಕರೆಯುತ್ತಿದ್ದರು.

ರೈತರಿಂದ ವಸೂಲಿ ಮಾಡಿದ ಕಂದಾಯವನ್ನು ಗೌಡನು ನಾಳ್ಗಾಂವುಂಡಗೆ ಸಲ್ಲಿಸುತ್ತಿದ್ದ. ನಾಳ್ಗಾಂವುಂಡ ರಾಜನಿಗೆ ಅಥವಾ ಸಾಮಂತರಾಜನಿಗೆ ತಲುಪಿಸುತ್ತಿದ್ದ. ವಸೂಲಿ ಮಾಡಿದ ಕಂದಾಯದಲ್ಲಿ ಒಂದಿಷ್ಟು ಭಾಗವನ್ನು ತನ್ನಲ್ಲಿಯೇ ಉಳಿಸಿಕೊಳ್ಳುತ್ತಿದ್ದಂತೆ ಎಂದು ತೋರುತ್ತದೆ. ಯಾಕೆಂದರೆ ಗೌಡನೊಬ್ಬನು ಒಂದು ದೇವಾಲಯ, ಬಸದಿಗಳನ್ನು ಕಟ್ಟಬೇಕೆಂದರೆ ಸಂಪತ್ತಿನ ಮೂಲ ಅತ್ಯಗತ್ಯವಾಗಿ ಬೇಕು. ಹಾಗಾದರೆ ಅವನಿಗೆ ಸಂಪತ್ತಿನ ಮೂಲ ಯಾವುದು? ನಿಸ್ಸಂಶಯವಾಗಿ ಅದು ರೈತರಿಂದ ಬರುವ ಕಂದಾಯದ ಒಂದು ಭಾಗವೆ. ಕಂದಾಯ ವಸೂಲಿ ಮಾಡುವ ಪದ್ಧತಿ ಅಶೋಕನ ಕಾಲದಿಂದಲೇ ಜಾರಿಯಲ್ಲಿದೆ. ಕ್ರಿ.ಪೂ ೨೪೯ರಲ್ಲಿ ಸಾಮ್ರಾಟ ಅಶೋಕ ಚಕ್ರವರ್ತಿಯು ಬುದ್ಧನ ಜನ್ಮಸ್ಥಳವಾದ ಲುಂಬಿನಿಗೆ ಭೇಟಿ ಕೊಟ್ಟಾಗ ಪಾಲಿ ಭಾಷೆಯಲ್ಲಿ ಒಂದು ಶಾಸನ ಹೊರಡಿಸಿದ. ಅದರ ಕನ್ನಡ ಅನುವಾದ ಹೀಗಿದೆ.

> "ದೇವನಾಂಪ್ರಿಯನಾದ ಚಕ್ರವರ್ತಿ ಅಶೋಕನು ತನ್ನ ಆಳ್ವಿಕೆಯ ೨೦ನೆಯ ವರ್ಷದಲ್ಲಿ
> ಸ್ವತ:ಶಾಕ್ಯಮುನಿ ಬುದ್ಧನು ಜನಿಸಿದ ಈ ಸ್ಥಳಕ್ಕೆ ಭೇಟಿಯಿತ್ತುದರ ಗುರುತಾಗಿ,
> ಇಲ್ಲಿ ಒಂದು ಕಲ್ಲಿನ ಕಂಭವು ಸ್ಥಾಪಿಸಲ್ಪಟ್ಟಿತು. ಮಹಾಮುನಿಯಾದ ಬುದ್ಧನು
> ಈ ಲುಂಬಿನಿ ಗ್ರಾಮದಲ್ಲಿ ಜನಿಸಿದ್ದ ಕಾರಣಕ್ಕಾಗಿ ಈ ಗ್ರಾಮದ ಕರವು
> ಅದರ ೧/೮ನೆಯ ಭಾಗಕ್ಕೆ ಕಮ್ಮಿ ಮಾಡಲ್ಪಟ್ಟಿತು"[೨]

ಕಂದಾಯ ಒಂದು ರಾಜ್ಯದ ಆರ್ಥಿಕ ಪರಿಸ್ಥಿತಿಯನ್ನು ಗಟ್ಟಿಗೊಳಿಸುತ್ತದೆ. ಎಂಬುದು ನಿರ್ವಿವಾದವಾದ ಸಂಗತಿ. ಆದ್ದರಿಂದಲೇ ರಾಜರು ಕಂದಾಯ ವಸೂಲಿ ಮಾಡಲು ನಾಳ್ಗಾವುಂಡ ಗಾವುಂಡರನ್ನು ನಿಯಮಿಸಿ ಕಂದಾಯದಿಂದ ಬರುವ ಆದಾಯದ ಒಂದಿಷ್ಟು ಭಾಗವನ್ನು ಗೌರವವಾಗಿ ಕೊಡುತ್ತಿದ್ದರು. ಹೀಗೆ ರಾಜನಿಂದ ಅಥವಾ ಸಾಮಂತರಾಜನಿಂದ ಸಂದ ಅಥವಾ ತಾವೇ ಉಳಿಸಿಕೊಂಡ ಸಂಪತ್ತಿನಿಂದ ನಾಳ್ಗಾವುಂಡ, ಗೌಡ ಸ್ಥಳೀಯ ರಾಜನಂತೆಯೇ ಭಾಸವಾಗಡೊಡಗಿದರು. ಗೌಡ ಕೇವಲ ಕಂದಾಯ ವಸೂಲಿಗಾರನಾಗದೆ ಜನರನ್ನು ವಿಶ್ವಾಸಕ್ಕೆ ತೆಗೆದುಕೊಳ್ಳಲು ದೇವಾಲಯ, ಬಸದಿಗಳನ್ನು ಕಟ್ಟಿಸುವುದು ಮತ್ತು ದಾನಧರ್ಮಗಳನ್ನು ಮಾಡುವುದು, ಸ್ಥಳೀಯ ವ್ಯಾಜ್ಯಗಳನ್ನು ಬಗೆಹರಿಸುವುದು. ಸಾಂಸ್ಕೃತಿಕ ಚಟುವಟಿಕೆಗಳನ್ನು

ಏರ್ಪಡಿಸುವುದು ಮಾಡುತ್ತಿದ್ದ. ಇಂತಹ ಕಾರ್ಯಗಳಲ್ಲಿ ತೊಡಗಿಕೊಂಡು ಶ್ರೇಷ್ಠತೆಯನ್ನು ಸ್ವಾಮಿನಿಷ್ಠತೆಯನ್ನು ತೋರಿದ ಗೌಡರಿಗೆ ರಾಜನಿಂದಲೇ ಸನ್ಮಾನವಾದದ್ದು ಉಂಟು. ಹಾವೇರಿ ಜಿಲ್ಲೆ ಮತ್ತು ತಾಲ್ಲೂಕಿನ ನೇರಲಗಿ ಗ್ರಾಮದ ದಡಿಗ ಗಾವುಂಡನಿಗೆ ೧೨ನೇ ಶತಮಾನದಲ್ಲಿ ಚಾಳುಕ್ಯ ಚಕ್ರವರ್ತಿ ಅಹವಮಲ್ಲತ್ರೈಲೋಕ್ಯಮಲ್ಲ ಒಂದನೆಯ ಸೋಮೇಶ್ವರನು ಸನ್ಮಾನ ಮಾಡಿದನು.

ಬಲ್ಲಹನೆನೆ ನೆಗರ್ದ್ದಾಹವಮಲ್ಲಂ ಕೊಡೆಯಡಪ ಮಂದಳಂ
ಸೀಗಿರಿಯೆಂಬೆಲ್ಲಾ ಚಿಹ್ನಮನದಟರ ಮಲ್ಲಂ ದಡಿಗಂಗೆ ಕೊಟ್ಟನನ್ನಾದರದಿಂ[೩]

"ಮಹಾಪ್ರಭು ದಡಿಗನಿಗೆ ಅಹವಮಲ್ಲ ತ್ರೈಲೋಕ್ಯಮಲ್ಲ ಚಕ್ರಿಯಿತ್ತ ರಾಜ ಮರ್ಯಾದೆಯ ರಾಜವಿಶ್ವಾಸದ ವಸ್ತುಗಳು ಕೊಡೆ, ಅಡಪ, ಮಂದಳ, ಸೀಗುರಿ ಗಾಳಿ ಮಳೆ ಬಿಸಿಲುಗಳಿಗೆ ಮರೆಯಾಗಿ ಹಿಡಿಯುವ ಸಾಧನ ಮಾತ್ರವಾಗದೆ ಕೊಡೆ ಮರ್ಯಾದೆಯನ್ನು ತೋರುವ ವಸ್ತುವೂ ಹೌದು."[೪] ದಡಿಗಗಾವುಂಡ ಸ್ವಾಮಿ ನಿಷ್ಠೆಗೆ ಕಾರಣನಾಗಿ ರಾಜನಿಂದ ಸನ್ಮಾನ ಪಡೆದುಕೊಂಡಂತೆ ನಾಡಿನ ಸಾಕಷ್ಟು ಗಾವುಂಡರು ಇಂಥ ಸನ್ಮಾನಕ್ಕೆ ಪಾತ್ರರಾಗಿರಬಹುದು.

ರಾಜನಿಂದ ಬಂದ ಮರ್ಯಾದೆಯ ಸಂಪತ್ತು. ಕಂದಾಯದ ಒಂದು ಭಾಗವಾಗಿ ಬರುವ ಆದಾಯದ ಸಂಪತ್ತು, ಗೌಡನಲ್ಲಿಯೇ ಕ್ರೋಢೀಕೃತವಾಗಿ ಅವನು ಶ್ರೀಮಂತನಾದ. ಇದೇ ಶ್ರೀಮಂತಿಕೆಯಿಂದ ಅವನು ಬಸದಿ, ದೇಗುಲಗಳ ನಿರ್ಮಾಣ, ಕೆರೆಕಟ್ಟೆಗಳ ನಿರ್ಮಾಣ, ದಾನದತ್ತಿಗಳ ಕೊಡುಗೆಯಂಥ ಕಾರ್ಯಗಳನ್ನು ಮಾಡತೊಡಗಿದ. ಇಷ್ಟೆಲ್ಲಾ ಸಾಮಾಜಿಕ ಕಾರ್ಯಗಳಲ್ಲಿ ತೊಡಗಿದ ಗೌಡನು ತನಗೇನಾದರೂ ಮಾಡಿಕೊಳ್ಳದೇ ಇರುತ್ತಾನೆಯೇ? ಹೌದು ಅವನು ಐಶಾರಾಮಿ ಜೀವನ ನಡೆಸಿದ. ಭವ್ಯವಾದ ಮನೆಯನ್ನೂ ಕಟ್ಟಿಕೊಂಡ. ಈ ಮನೆಗಳೂ ಊರ ಮನೆಗಳಿಗಿಂತ ಸುವ್ಯವಸ್ಥಿತವಾಗಿ ಇರುತ್ತಿದ್ದವು. ದೇವರ ಮನೆ, ಪಡಸಾಲೆ, ಮನೆ ಮುಂದೆ ಹಾಸುಗಟ್ಟೆ, ಮಲಗುವ ಕೋಣೆಗಳು, ಬಾಣಂತಿ ಕೋಣೆ, ದನದ ಕೊಟ್ಟಿಗೆ ಮುಂತಾದ ವ್ಯವಸ್ಥೆ ಈ ಮನೆಯಲ್ಲಿ ಇರುತ್ತಿತ್ತು. ಬೆಲೆಬಾಳುವ ಸಾಗವಾನಿ, ಗಂಧ, ಹೊನ್ನೆಮರದ ಕಟ್ಟಿಗೆಗಳನ್ನು ಮನೆ ನಿರ್ಮಾಣಕ್ಕೆ ಬಳಸುತ್ತಿದ್ದರು. ಕಟ್ಟಿಗೆಗಳಲ್ಲಿ ಕಲಾತ್ಮಕ ಕೆತ್ತನೆಗಳೂ ಇದ್ದಿರಬಹುದು. ಈಗಲೂ ಕಂಡುಬರುವ ಹಳ್ಳಿಯ ಊರ ಗೌಡರ ಮನೆಗಳು ಈ ಅಂಶಕ್ಕೆ ಸ್ಪಷ್ಟವಾದ ಆಧಾರವಾಗಿ ನಿಲ್ಲುತ್ತವೆ. ವಾಡೆ ಕಲ್ಪನೆಯ ಎರಡನೇ ಹಂತ ಇದು.

## ೨.೨ ಆಧುನಿಕ ವಾಡೆಯ ಹುಟ್ಟು

ಪ್ರಾಚೀನ ಕಾಲದಿಂದಲೂ ಭಾರತ ಸಮೃದ್ಧ ದೇಶ. ಖನಿಜಾಂಶಗಳು (ಮುಖ್ಯವಾಗಿ ಬಂಗಾರ) ನಿತ್ಯಹರಿದ್ವರ್ಣ ಕಾಡುಗಳು, ಸಾಂಬಾರು ಪದಾರ್ಥಗಳು, ಕರಕುಶಲ ವಸ್ತುಗಳು ಆಯುರ್ವೇದ ವೈದ್ಯ ಪದ್ಧತಿ ಹೀಗೆ ವಿವಿಧ ರೀತಿ ಸಂಪತ್ತು ಭಾರತದಲ್ಲಿತ್ತು. ಇವುಗಳ ಆಕರ್ಷಣೆಯಿಂದ ಅನೇಕ ವಿದೇಶಿಗರು ಇಲ್ಲಿಗೆ ವ್ಯಾಪಾರಕ್ಕೆ ಬಂದು ಹೋಗಿದ್ದಾರೆ. ಹಾಗೆ ಬಂದವರು ನ್ಯಾಯಯುತವಾಗಿ ವ್ಯಾಪಾರ ನಡೆಸದೆ, ಸ್ಥಳೀಯ ರಾಜರ ಮಧ್ಯೆ ವೈಶಮ್ಯದ ಬೀಜ ಬಿತ್ತಿ, ಕಲಹವನ್ನು ಉಂಟುಮಾಡಿ, ನಮ್ಮಲ್ಲಿನ ಅಪಾರ ಸಂಪತ್ತನ್ನು ದೋಚಿ ತಮ್ಮ ದೇಶಕ್ಕೆ ಕೊಂಡ್ಯೊಯ್ದರು. ಇವರಲ್ಲಿ ಪ್ರಮುಖರು ಇಂಗ್ಲೀಷರು ಮತ್ತು ಫ್ರೆಂಚರು, ಡಚ್ಚರು, ಪೋರ್ಚುಗೀಸರು. ಮುಸ್ಲಿಂರು ಈ ವಿಚಾರಕ್ಕೇನೂ ಭಿನ್ನರಲ್ಲ. ಐರೋಪ್ಯ ರಾಷ್ಟ್ರಗಳು ಇಲ್ಲಿಗೆ ವ್ಯಾಪಾರಕ್ಕೆ ಬರುವ ಮೊದಲು ಅಂದರೆ ಕ್ರಿ.ಶ ೧೧ನೇ ಶತಮಾನದ ವೇಳೆಗೆ ಮೊಹಮ್ಮದ್ ಘಜ್ನಿ (೯೯೭–೧೦೩೦) ಇವನ ನಂತರ ಮಹ್ಮದ್ ಘೋರಿ (೧೨೦೦), ಚಂಗೇಶ್ ಖಾನ್, ನಾದಿರ್ ಶಾ ಹೀಗೆ ಅನೇಕ ಮುಸ್ಲಿಂ ದೊರೆಗಳು ಭಾರತದ ಮೇಲೆ ದಾಳಿ ಮಾಡಿ ಇಲ್ಲಿನ ಅಪಾರ ಸಂಪತ್ತನ್ನು ಲೂಟಿ ಮಾಡಿದರು.

### ಕರ್ನಾಟಕಕ್ಕೆ ಮುಸ್ಲಿಂಮರ ಆಗಮನ

ಮಹಮ್ಮದ್ ಘೋರಿಯ ಮರಣದ (ಕ್ರಿ.ಶ ೧೨೦೬) ನಂತರ ಇವನ ಗುಲಾಮ ಕುತುಬ್–ಉದ್–ದೀನ್ ಐಬಕ್ (ಕ್ರಿ.ಶ ೧೨೦೬–೧೨೧೦) ಭಾರತದಲ್ಲಿ ಮುಸ್ಲಿಂ ಆಳ್ವಿಕೆಗೆ ಭದ್ರ ಬುನಾದಿಯನ್ನು ಹಾಕಿದನು. ಇವನ ಸಂತತಿಯನ್ನು ಗುಲಾಮಿ ಸಂತತಿ (ಕ್ರಿ.ಶ. ೧೨೦೬–೧೨೯೦) ಎಂದು ಕರೆಯುವರು. ಈ ವಂಶದ ರಾಜಧಾನಿ ದೆಹಲಿಯಾಗಿತ್ತು. ಇವರ ನಂತರ ಖಿಲ್ಜೀ ಸಂತತಿ (ಕ್ರಿ.ಶ. ೧೨೯೦–೧೩೨೦), ತುಘಲಕ್ ಸಂತತಿ (ಕ್ರಿ.ಶ ೧೩೨೦–೧೪೧೪), ಸಯ್ಯದ್ ಸಂತತಿ (ಕ್ರಿ.ಶ ೧೪೧೪–೧೪೫೧), ಲೂದಿ ಸಂತತಿ (ಕ್ರಿ.ಶ ೧೪೫೧–೧೫೨೬)ಗಳು ದೆಹಲಿಯನ್ನು ಬಹುತೇಕ ರಾಜಧಾನಿಯನ್ನಾಗಿ ಮಾಡಿಕೊಂಡು ಉತ್ತರ ಭಾರತವನ್ನು ಆಳುತ್ತವೆ.

ತುಘಲಕ್ ಸಂತತಿಯ ಮಹಮ್ಮದ್ ಬಿನ್ ತುಘಲಕ್ (ಕ್ರಿ.ಶ ೧೩೨೫–೧೩೫೧) ಆಡಳಿತಾವಧಿಯಲ್ಲಿ ದೇವಗಿರಿ ಅಥವಾ ದೌಲತಾಬಾದ್‌ಗೆ ಹಸನ್ ಗಂಗೂ ಎಂಬುವನು ಪ್ರಾಂತ್ಯಾಧಿಕಾರಿಯಾಗಿದ್ದ. ಇವನು ಮಹಮ್ಮದ್ ಬಿನ್ ತುಘಲಕ್‌ನ ಮರಣದ ನಂತರ ತಾನು ಸ್ವತಂತ್ರನೆಂದು ಘೋಷಿಸಿಕೊಂಡು ಗುಲ್ಬರ್ಗ ಅಥವಾ ಕಲ್ಬುರ್ಗಿಯನ್ನು ರಾಜಧಾನಿಯನ್ನಾಗಿ ಮಾಡಿಕೊಂಡು ಕರ್ನಾಟಕಕ್ಕೆ ಮುಸ್ಲಿಂ ಧರ್ಮವನ್ನು ತಂದು ಆಳ್ವಿಕೆ ಮಾಡಿದ. ಅಲ್ಲಾವುದ್ದೀನ್ ಹಸನ್ ಬಹಮನ್ ಷಾ (೧೩೪೭–೧೩೫೮) ಎಂಬ ನಾಮದಿಂದ ಹಸನ್ ಗಂಗು ಬಹಮನಿ ಸಾಮ್ರಾಜ್ಯದ ಸ್ಥಾಪಕನಾದನು.

ಕಲಿಮುಲ್ಲ (೧೫೨೬-೧೫೨೮) ಬಹುಮನಿ ಸಾಮ್ರಾಜ್ಯದ ಕೊನೆಯ ದೊರೆ ಇವನ ಮರಣಾನಂತರ ಬಹುಮನಿ ರಾಜ್ಯ ಪತನದ ಫಲವಾಗಿ ಐದು ರಾಜ್ಯಗಳು ಹುಟ್ಟಿಕೊಂಡವು ಅವು

೧. ಆದಿಲ್ ಷಾಹಿ ವಂಶದ ಆಶ್ರಯದಲ್ಲಿ ಬಿಜಾಪುರ (ಕರ್ನಾಟಕ)

೨. ನೈಜಾಮ್ ಷಾಹಿ ವಂಶದ ಆಶ್ರಯದಲ್ಲಿ ಅಹಮದ್‌ನಗರ (ಆಂಧ್ರ)

೩. ಕುತುಬಾ ಷಾಹಿ ವಂಶದ ಆಶ್ರಯದಲ್ಲಿ ಗೋಲ್ಕಂಡ (ಆಂಧ್ರ)

೪. ಬರೀದ್ ಷಾಹಿ ವಂಶದ ಆಶ್ರಯದಲ್ಲಿ ಬೀದರ್ (ಕರ್ನಾಟಕ)

೫. ಇಮದ್ ಷಾಹಿ ವಂಶದ ಆಶ್ರಯದಲ್ಲಿ ಬಿರಾರ್ (ಆಂಧ್ರ).[೫]

## ವಾಡೆ ಅಥವಾ ದೇಸಗತಿಯ ಹುಟ್ಟು

ಕರ್ನಾಟಕದ ವೈಭವಯುತವಾದ ಸಾಮ್ರಾಜ್ಯ ವಿಜಯನಗರ. ಇದರ ಸ್ವತಂತ್ರ ಸಾಮ್ರಾಜ್ಯದ ಕೊನೆಯ ದೊರೆ ಅಳಿಯ ರಾಮರಾಯ (೧೫೫೧-೧೫೬೫) ಇವನು ಚತುರ, ರಾಜತಾಂತ್ರಿಕ ನಿಪುಣ, ಶೂರ ಸೇನಾನಿ, ಸಮರ್ಥ ಆಡಳಿತಗಾರ ಹಾಗೂ ಉದಾರ ಪ್ರವೃತ್ತಿಯುಳ್ಳವನಾಗಿದ್ದನು. ಇವನು ಬಹಮನಿ ಸುಲ್ತಾನರ ಮಧ್ಯ ಒಳಜಗಳಗಳನ್ನು ಸೃಷ್ಟಿಸಿ ತಾನು ರಾಜಕೀಯ ಲಾಭ ಪಡೆಯತೊಡಗಿದ. ಇದನ್ನರಿತ ಬಹುಮನಿ ಸಾಮ್ರಾಜ್ಯದ ಎಲ್ಲಾ ಮುಸ್ಲಿಂ ರಾಜಮನೆತನಗಳು ಅಳಿಯ ರಾಮರಾಯನ ವಿರುದ್ಧ ಸಿಡಿದೆದ್ದು ಒಟ್ಟಾಗಿ ಕ್ರಿ.ಶ.೧೫೬೫ ಜನೇವರಿ ೨೩ನೇ ಮಂಗಳವಾರದಂದು ತಾಳಿಕೋಟೆ ಅಥವಾ ರಕ್ಕಸತಂಗಡಿಯಲ್ಲಿ ಘನಘೋರ ಯುದ್ಧಮಾಡಿ ಅಳಿಯರಾಮರಾಯನನ್ನು ಸೋಲಿಸಿ ಅವನ ತಲೆಯನ್ನು ಕಡಿದು ಹಾಕಿದವು. ಇದರಿಂದ ವಿಜಯನಗರ ಸಾಮ್ರಾಜ್ಯದ ಮಹಾಪತನವೂ ಆಯಿತು.

ವಿಜಯನಗರ ಪತನದ ನಂತರ ಈ ರಾಜ್ಯದ ಬಹುತೇಕ ಭಾಗವು ಬಿಜಾಪುರದ ಆದಿಲ್ ಷಾಹಿಗೆ ಒಲಿದು ಬಂತು. ಹಿಂದುಗಳಿಂದಲೇ ತುಂಬಿ ತುಳುಕುತಿದ್ದ ವಿಜಯನಗರದ ಭಾಗಗಳ ಆಳ್ವಿಕೆ ಆದಿಲ್ ಷಾಹಿಗಳಿಗೆ ಒಂದು ದೊಡ್ಡ ಸವಾಲಾಗಿತ್ತು. ಈ ಭಾಗದ ಆಡಳಿತದ ಸುಭದ್ರತೆಗೋಸ್ಕರ ಷಾಹಿಗಳು ಕಂಡುಕೊಂಡ ದೊಡ್ಡ ಮಾರ್ಗವೆಂದರೆ ಸ್ಥಳೀಯ ಪ್ರಭಾವೀ ವ್ಯಕ್ತಿಗಳು ಮತ್ತು ಆಪ್ತ ಮುಸ್ಲಿಂಮೇತರ ವ್ಯಕ್ತಿಗಳಿಂದ ಆಡಳಿತ ನಡೆಸುವುದು.

ಉತ್ತರ ಕರ್ನಾಟಕದ ಬಹುಭಾಗ ಬಿಜಾಪುರದ ಆದಿಲ್ ಷಾಹಿಗಳ ಪಾಲಿಗೆ ಬಂದನಂತರ ಆಡಳಿತದಲ್ಲಿ ಹೊಸ ರೀತಿರಿವಾಜುಗಳನ್ನು ತಂದರು. ತಮ್ಮ ಇಡೀ ಸಾಮ್ರಾಜ್ಯವನ್ನು ೧೨ ಪ್ರಾಂತಗಳನ್ನಾಗಿ ಮಾಡಿದರು (ಬಿಜಾಪುರ, ಸೋಲ್ಲಾಪುರ, ಬೆಳಗಾವಿ, ಬೀದರ್, ಗುಲ್ಬರ್ಗಾ, ರಾಯಚೂರು, ಮೀರಜ್, ಬೆಂಗಳೂರು, ತಂಜಾವೂರು, ಮಧುರೈ, ನೆಲ್ಲೂರು ಮತ್ತು ಬಳ್ಳಾರಿ) ಇವುಗಳನ್ನು 'ಸುಭಾ'ಗಳೆಂದು ಕರೆಯಲಾಗುತ್ತಿತ್ತು. ಆಡಳಿತ ಇನ್ನೂ ಸುಲಭವಾಗಲು 'ಸುಭಾ'

ಅಥವಾ 'ಪ್ರಾಂತ'ಗಳನ್ನು ಮತ್ತೇ ವಿಭಾಗಿಸಿ, ಆ ವಿಭಾಗಗಳಿಗೆ 'ಸರ್ಕಾರ' ಎಂದು ಅಥವಾ ಜಿಲ್ಲಾಗಳೆಂದು ಕರೆಯುತ್ತಿದ್ದರು. ಸರ್ಕಾರ ಅಥವಾ ಜಿಲ್ಲಾಗಳ ಆಡಳಿತವನ್ನು ಗೌಡ, ನಾಡಗೌಡರು, ದೇಸಾಯಿಗಳು ಹಾಗೂ ಸರ್ದೇಸಾಯಿಗಳು ನೋಡಿಕೊಳ್ಳುವಂತೆ ಮಾಡಿದರು. ಇವರೆಲ್ಲಾ ಮುಸ್ಲಿಂಮೇತರರು ಇವರಿಗೆ ಅಧಿಕಾರ ಕೊಡಲು ಬಹುಮುಖ್ಯ ಕಾರಣ ಮುಸ್ಲಿಂಮೇತರ ಜನರನ್ನು ಆಡಳಿತದ ದೃಷ್ಠಿಯಿಂದ ವಿಶ್ವಾಸಕ್ಕೆ ತೆಗೆದುಕೊಂಡು ಕಂದಾಯ ವಸೂಲಿ ಮಾಡುವುದೇ ಆಗಿತ್ತು.

ಈ ರೀತಿ ಆಡಳಿತದ ಕಲ್ಪನೆಯ ಸ್ಪಷ್ಟತೆ ಎರಡನೇ ಇಬ್ರಾಹಿಂ ಆದಿಲ್ ಷಾ (೧೫೮೦-೧೬೨೭) ಕಾಲಾವಧಿಯಲ್ಲಿ ಕಂಡುಬರುತ್ತದೆ. ಇವನು ರಾಜ್ಯದ ಕಾರಬಾರವನ್ನು ಪ್ರಾರಂಭಿಸಿದ ನಂತರ "ಪ್ರತಿನಿತ್ಯ ದರಬಾರದಲ್ಲಿ ಬಂದು ಸಿಂಹಾಸನದ ಮೇಲೆ ಕುಳಿತು ಸಾರ್ವಜನಿಕರಿಗೆಲ್ಲ ಬರುಲು-ಹೋಗಲು ಮಾರ್ಗ ಮುಕ್ತ ಮಾಡಿದನು. ಆಗ ಸರಕಾರದ ಎಲ್ಲಾ ಕಾರಭಾರಿಗಳು, ಕಾಮದಾರರು, ಸವಾರ-ಸಿಬ್ಬಂಧಿಗಳು, ಖಾಸಗೀ ವ್ಯಕ್ತಿಗಳು, ರೈತಾಪಿ ಜನರು ರಾಜನ ಸಮಸ್ಯೆಗಳನ್ನು ಪ್ರಭುಗಳ ಸನ್ನಿಧಿಯಲ್ಲಿ ವಿನಂತಿ ಮಾಡಿಕೊಳ್ಳುತ್ತಿದ್ದರು. ಬಾದಶಹನು ಅವರ ಸಮಸ್ಯೆಗಳನ್ನು ಆಲಿಸಿ ಸೂಕ್ತ ವ್ಯವಸ್ಥೆಯನ್ನು ಮಾಡುತ್ತಿದ್ದನು. ಪದಾಧಿಕಾರಿಗಳನ್ನು ಮರುವಿತರಣೆ ಮಾಡಿದನು. ರೂಮೀಖಾನನಿಗೆ ಪೇಶವಾಯಿ ಪದವಿಯನ್ನು ಎಂದರೆ ಮುಖ್ಯ ಕಾರಭಾರಿಯ ಅಧಿಕಾರವನ್ನು ಕೊಟ್ಟನು. ಅದರಂತೆ ಸರನೋಬತಿ ಅಧಿಕಾರವನ್ನು ಎಲ್ಲ ಹಳೆಯ ಸೈನಿಕರನ್ನೆಲ್ಲ ಕರೆದು ಅವರವರ ಯೋಗ್ಯತಾನುಸಾರ ಪ್ರತಿಯೊಬ್ಬರಿಗೂ ಪದಾಧಿಕಾರವನ್ನು ಕೊಟ್ಟು ಮರುನೇಮಕ ಮಾಡಿದನು. ರಾಜಧಾನಿಯ ಹೊರಗಿನ ಹಳ್ಳಿ-ಗ್ರಾಮ ಕೋಟೆಗಳಿಗೆ ವ್ಯವಸ್ಥೆಯ ಕೆಲಸಕ್ಕಾಗಿ ಸರಕಾರದಿಂದ ಜಾಣ ವ್ಯಕ್ತಿಗಳನ್ನು ಹುಡುಕಿ ನೇಮಕ ಮಾಡಿ ಕಳುಹಿಸಿದನು.[೬] ಆ ಜಾಣವ್ಯಕ್ತಿಗಳೇ ನಾಡಗೌಡ, ದೇಸಾಯಿಗಳು ಮತ್ತು ಆದಿಲ್ ಷಾಹಿಯ ನಂಬುಗೆಯ ಆಪ್ತವಲಯದ ವ್ಯಕ್ತಿಗಳು, ಯುದ್ಧದಲ್ಲಿ ಶೂರತ್ವ ಮೆರೆದ ವ್ಯಕ್ತಿಗಳು.

**ದೇಸಾಯಿ – ನಾಡಗೌಡ.**

ಆದಿಲ್ ಷಾಹಿಗಳ ಆಡಳಿತದಲ್ಲಿ ಸ್ಥಳೀಯ ಆಡಳಿತಗಾರರು ದೇಸಾಯಿ ಮತ್ತು ನಾಡಗೌಡರು ನಿರ್ವಹಿಸುತ್ತಿದ್ದರು. ಇವರು ಪ್ರಾಂತ ಅಥವಾ ಜಿಲ್ಲಾಗಳನ್ನು ಆಳುತ್ತಿದ್ದರು. ಇವುಗಳಿಗೆ 'ಪರಗಣ' ಎಂತಲೂ ಕರೆಯುತ್ತಾರೆ. ದೇಸಾಯಿ ನಾಡಗೌಡ ಪದಗಳು ಪ್ರಾಂತದಿಂದ ಪ್ರಾಂತಕ್ಕೆ ಬೇರೆ ಬೇರೆ ಹೆಸರಿನಿಂದ ಕರೆಯಲ್ಪಡುತ್ತಿದ್ದವು. ದೇಶಮುಖ (ಮಹಾರಾಷ್ಟ್ರ, ಮರಾಠರು) ಒಡೆಯ (ಮೈಸೂರು), ನಾಯಕ (ಚಿತ್ರದುರ್ಗ), ಚೌಧರಿ ಪಟೇಲ (ಮಹಾರಾಷ್ಟ್ರ)[೭] ನಾಮಾಗಳಿಗಳು ಈ ಮೊದಲೇ ಇವರಿಗಿದ್ದುವು. ಇವರಿಗೆ ಅಧಿಕಾರ ಪ್ರಾಪ್ತವಾದ ಮೇಲೆ ಈ ಮನೆತನದ ಹೆಸರುಗಳು ಅಧಿಕಾರದ ನಾಮಾವಳಿಯಾಗಿ ಬಂದಿತು. ಉತ್ತರ ಕರ್ನಾಟಕದ ಬಹುತೇಕ ಪ್ರಾಂತ ಅಧಿಕಾರಿಗಳಿಗೆ 'ದೇಸಾಯಿ' ಪದವೇ ಹೆಚ್ಚಾಗಿ ಬಳಕೆಯಾಗುತ್ತಿತ್ತು.

## ದೇಸಾಯಿ

ಕನ್ನಡ ಸಾಹಿತ್ಯ ಪರಿಷತ್ತಿನ ನಿಘಂಟಿನಲ್ಲಿ ದೇಸಾಯಿ ಎಂಬ ಪದಕ್ಕೆ ಮರಾಠ ಆಳ್ವಿಕೆಯಲ್ಲಿ ಪ್ರಾಂತಾಧಿಕಾರಿ, ಕುಲಕ್ರಮವಾಗಿ ಬಂದ ದೇಶಭಾಗದ ಆಡಳಿತಗಾರ ಎಂಬಂರ್ಥಗಳಿವೆ.[೮] 'ದೇಶ' ಮತ್ತು 'ಸಾಯಿ' ಈ ಎರಡು ಪದಗಳ ಜೋಡಣೆಯಿಂದ ದೇಸಾಯಿ ಪದ ರೂಪಗೊಂಡಿದೆ. ದೇಸ್, ದೇಶ್, ಅಂದರೆ ಸ್ಥಾನಿಕ, ಸ್ಥಳೀಯ ಎಂದರ್ಥ. ಇನ್ನು 'ಸಾಯಿ' ಎಂದರೆ ನಾಯಕ ಎಂದರ್ಥ. ಸಾಯಿ = ಒಡೆಯ, ಪ್ರಮುಖ, ನಾಯಕ (Leader) ಸ್ವಾಮಿ ಎಂಬುದು ಗೌರವಾರ್ಥವಾಗಿ ಸೇರಿಸುವ ಶಬ್ದ. ಸಾಯಿ ಎಂಬುದು ಮರಾಠಿ ಪದವಾಗಿದೆ. ಹಾಗಾಗಿ ದೇಸ್+ಸಾಯಿ ಈ ಎರಡು ಪದ ಸಂಯುಕ್ತವಾಗಿ ದೇಸಾಯಿ ಎಂಬುದಾಗಿದೆ"[೯] ಎಂದು ಡಾ.ಸಂಗಪ್ಪ ಚ ಕಲ್ಯಾಣಿಯವರು ಹೇಳುತ್ತಾರೆ. ಇವರ ಚರ್ಚೆಯ ದೇಸಾಯಿ ಪದದ ಒಟ್ಟಾರೆ ಅರ್ಥ ಸ್ಥಳೀಯ ಸ್ವಾಮಿ ಆಡಳಿತಗಾರ ಎಂದಿಟ್ಟುಕೊಳ್ಳಬಹುದು. ಒಂದು ಆಡಳಿತ ಸೂಚಿ ಪದದ ಉಗಮ ಒಂದು ಕಾರ್ಯದ ನಿಮಿತ್ತ ಉದಯವಾಗುತ್ತದೆ. ಇಲ್ಲಿ ದೇಸಾಯಿ ಪದ ವ್ಯಕ್ತಿ ಸೂಚಿತವಾಗಿ ಮಾತ್ರ ಬಳಕೆಯಾಗುತ್ತದೆ ಎಂಬಂತೆ ಡಾ.ಸಂಗಪ್ಪ ಚ ಕಲ್ಯಾಣಿಯವರು ಅರ್ಥೈಸಿದ್ದಾರೆ. ದೇಸಾಯಿ ಪದದ ವೃತ್ತಿ ಸೂಚಕತೆಯನ್ನು ಪದಶ: ವಿಭಾಗವನ್ನು ಇವರು ಹೇಳಿಲ್ಲ. ವೃತ್ತಿ ಸೂಚಕತೆಯನ್ನು ಹೇಳಿದ್ದರು ಪದಶ: ಅರ್ಥದಲ್ಲಿ ಅದು ಬರುವಂತೆ ಚರ್ಚಿಸಿಲ್ಲ.

ದೇಸಾಯಿ ಎಂಬುದು ವೃತ್ತಿ ಸೂಚಕ ಪದ. ನಂತರ ವ್ಯಕ್ತಿಸೂಚಕ ರೂಪವನ್ನು ಈ ಪದ ಪಡೆದುಕೊಂಡಿತು. ದೇಸಾಯಿ ಪದದಲ್ಲಿಯೇ ವೃತ್ತಿ ಅಡಗಿದೆ. ಈ ಪದ 'ದೇಶ' ಎಂಬ ನಾಮಪದ ಮತ್ತು 'ಆಯಿ' ಎಂಬ ಕ್ರಿಯಾಪದದಿಂದ ನಿಷ್ಪನ್ನವಾಗಿದೆ. ದೇಶ ಎಂದರೆ ಸ್ಥಳ, ಜಾಗ, ಪ್ರದೇಶ, ನಾಡು, ಸೀಮೆ, ಜನಪದ ಎಂಬರ್ಥಗಳನ್ನು ನಿಘಂಟುವಿನಲ್ಲಿ ಕೊಡಲಾಗಿದೆ.[೧೦] 'ಆಯಿ' ಎಂಬ ಪದ ಆರಿಸು; ಸಂಗ್ರಹಿಸು ಎಂಬ ಅರ್ಥವನ್ನು ಸ್ಫುರಿಸುತ್ತದೆ.[೧೧] ಎರಡು ಪದಗಳ ಸಮಾಗಮದ ಒಟ್ಟಾರೆ ಅರ್ಥ ನಿರ್ಧಿಷ್ಟವಾದ, ಗೊತ್ತುಮಾಡಿದ ಪ್ರದೇಶದ್ದು ಆಯಿವವನು, ಸಂಗ್ರಹಿಸುವವನು ಎಂದಾಗುತ್ತದೆ. ಏನನ್ನು ಆಯಿವವನು ಎಂಬುದದನ್ನು ಪರಿಶೀಲಿಸಿದಾಗ ಅದು ಆ ಪ್ರದೇಶದ 'ಆಯ'ವೇ ಆಗಿದೆ. ಆಯ ಪದ ಆಯಿ ಎಂದಾಗಿ ದೇಸಾಯಿಯಾಗಿದೆ. ದೇಸಾಯರು, ದೇಸಾಯಿಗಳು, ದೇಸಾಯ, ದೇಸಾಯಿ ಪದಗಳಲ್ಲಿ ಆಯ, ಆಯಿ ಎಂಬ ನಾಮಪದ ಮತ್ತು ಕ್ರಿಯಾಪದಗಳ ಬಳಕೆಯನ್ನು ಕಾಣಬಹುದು. ಆಯ ಎಂದರೆ ಆದಾಯ, ವರಮಾನ, ಹುಟ್ಟುವಳಿ, ಕಂದಾಯ ಮುಂತಾದ ಅರ್ಥಗಳನ್ನು ನಿಘಂಟಿನಲ್ಲಿ ಕೊಡಲಾಗಿದೆ.[೧೨] ಈ ಎಲ್ಲ ಚರ್ಚೆಯ ಮುಖ್ಯ ಗ್ರಹಿತೆ ಒಂದು ನಿರ್ಧಿಷ್ಟ ಅಥವಾ ಗೊತ್ತುಮಾಡಿದ ಪ್ರದೇಶದ ವರಮಾನವನ್ನು ಆಯವನ್ನು ಆಯಿವವನೇ, ಸಂಗ್ರಹಿಸುವವನೆ ದೇಸಾಯಿ > ದೇಸಾಯಿಯಾಗಿದ್ದಾನೆ. ದೇಶದ ಆಯವನ್ನು ಆಯಿವವನೇ ದೇಸಾಯಿ ಎಂದರೂ ಸರಿ. ಈ ಪದ ಹೆಚ್ಚಾಗಿ ಮರಾಠರ ಆಡಳಿತ ಕಾಲಾವಧಿಯಲ್ಲಿ ಬಳಕೆಯಾಗಿದೆ. ಆದರೆ ಮರಾಠಿ

ಪದವಲ್ಲ. ಮೂಲ ಇದು ಸಂಸ್ಕೃತದ್ದು. ಉತ್ತರ ಕರ್ನಾಟಕದಲ್ಲಿ ಇದರ ಬಳಕೆ ಹೆಚ್ಚಾಗಿದ್ದು, ಕನ್ನಡದ್ದೇ ಎಂಬಂತಾಗಿದೆ. ಯಾಕೆಂದರೆ ದೇಸಾಯಿ ದೇಸಾಯ ಪದವು ಉತ್ತರ ಕರ್ನಾಟಕದ ವಾಡೆಗಳ ಮುಖ್ಯಸ್ಥರಿಗೆ ಇರುವ ನಾಮ. ಪ್ರಮುಖವಾಗಿ ಬ್ರಾಹ್ಮಣ, ಶೈವ, ವೀರಶೈವ ಮತ್ತು ಜೈನರಿಗೆ ಮಾತ್ರ ಈ ಆಡಳಿತ ಪದ ಬಳಕೆಯಾಗಿದೆ. ಮುಂದೆ ಇದೆ ಪದ ಕುಲಕ್ರಮವಾಗಿ ಬಂದು ಅವರ ಮನೆತನದ ಹೆಸರು ಆಗಿ ನಿಂತಿತು.

### ನಾಡಗೌಡ

ಈಗಾಗಲೇ ಗೌಡ ನಾಳ್ಗಾವುಂಡ ಪದಗಳ ಪ್ರಾಚೀನ ಉಲ್ಲೇಖ ಕೊಟ್ಟಿದ್ದಾಗಿದೆ. ಗೌಡ ಎಂಬ ಪದ ಗೌಳ ಎಂಬ ನಿಷ್ಪನ್ನದಿಂದ ಬಂದಿದೆ ಎಂಬುದು ಶಂಬಾ ಜೋಷಿಯವರ ವಾದ. ಗೌಳ ಎಂದರೆ ದನಗಾಹಿಗಳು. ಇವರೇ ಮುಂದೆ ಗೌಡರಾದರು. ಗೌಡರು ಗ್ರಾಮಾಧಿಕಾರಿಗಳಾಗಿಯೂ ಇರುತ್ತಿದ್ದರು. ದನಗಾಹಿಗಳು ಇರುತ್ತಿದ್ದರು. ಇಬ್ಬರೂ ಗೌಡರೇ. ಈ ಇಬ್ಬರೂ ಸ್ಥಾನಗಳನ್ನು ಬೇರ್ಪಡಿಸಿ ಹೇಳಲು ಗಾಮುಂಡ, ಗಾವುಂಡ, ಗವುಡ ಪದಗಳು ಹುಟ್ಟಿದವು. ಈಗ ಮತ್ತೆ ಮೂಲ ಗೌಡ (ಗೌಳ) ಪದವೂ ಹಾಗೇ ನಿಂತಿದೆ[೧೩]

ಈ ಹಿಂದೆ ಗೌಡನಿಗೆ 'ಗ್ರಾಮ ಕೂಟ' ಗ್ರಾಮಾಕೂಟಾಧ್ಯಕ್ಷ' 'ಗ್ರಾಮವೃದ್ಧ' 'ಗ್ರಾಮಿಕ' 'ಗ್ರಾಮಣಾ' 'ಗ್ರಾಮಸ್ವಾಮಿ' ಎಂದು ಕರೆಯುತ್ತಿದ್ದರು.[೧೪] ಗಾಮುಣ್ಡರ ಬಗೆಗಿನ ಪ್ರಥಮ ಕನ್ನಡ ಶಾಸನ ಉಲ್ಲೇಖ ಕ್ರಿಶ ೫೦೦ರ ಚಿತ್ರದುರ್ಗ ತಾಲ್ಲೂಕು ಗಂಜಿಗಟ್ಟಿ ಶಾಸನದಲ್ಲಿದೆ. ಈ ಶಾಸನ ಗಂಗರ ಕಾಲಕ್ಕೆ ಸಂಬಂಧಿಸಿದ್ದು.[೧೫]

"ರಾಷ್ಟ್ರಕೂಟರ ಆಡಳಿತದಲ್ಲಿ ಮಹಾರಾಷ್ಟ್ರದಲ್ಲಿ ಗ್ರಾಮಿಣಿ ಎನ್ನುವ ಅಧಿಕಾರಿ ಇರುತ್ತಿದ್ದನು. ಅವು ಹಳ್ಳಿಗಳ ಸಮೂಹದ ಅಧಿಕಾರವನ್ನು ನೋಡಿಕೊಳ್ಳುತ್ತಿದ್ದನು. ಇಂಥ ಹಳ್ಳಿಯ ಅಧಿಕಾರವನ್ನು 'ಗ್ರಾಮಕೂಟ' ಎಂದೇ ಕರೆಯುತ್ತಿದ್ದರು. ಅದೇ ರೀತಿ 'ದಶಗ್ರಾಮಕೂಟ' ಎನ್ನುವವನು ಹಳ್ಳಿಯ ಮುಖ್ಯಸ್ಥನಾಗಿದ್ದು ಅವನ ಅಧಿಕಾರ ವಂಶಪಾರಂಪರಿಕವಾಗಿರುತ್ತಿತ್ತು. ೧೦ ರಿಂದ ೪೦ ಹಳ್ಳಿಗಳ ಗುಂಪಿಗೆ ಹೋಬಳಿ ಎಂದು ಕರೆಯುತ್ತಿದ್ದರು. ಇದು 'ತರಾಫ್' ಎನ್ನುವ ಪದಕ್ಕೆ ಸಮಾನವಾಗಿದೆ. ಈ ಹೋಬಳಿ ಅಧಿಕಾರವನ್ನು ನಾಡಿಗ ಅಥವಾ ನಾಡಗೌಡ ಎನ್ನುವ ಪದನಾಮದಿಂದ ಕರೆಯುತ್ತಿದ್ದರೆಂದು ತಿಳಿದು ಬರುತ್ತವೆ".[೧೬] ನಾಳ್ಗಾವುಂಡ ಪದದ ಮುಂದುವರೆದ ರೂಪವೇ ನಾಡಗೌಡ. ನಾಳ್ಗಾವುಂಡ ಪದ ಬಳಕೆ ಈ ಹಿಂದೆಯೆ ಉಲ್ಲೇಖ ಕೊಡಲಾಗಿದೆ. ನಾಡಗೌಡ, ನಾಡಗೌಡಿಕೆ ಪದ ಆದಿಲ್ ಷಾಹಿಗಳ ಕಾಲದಲ್ಲೂ ಮುಂದುವರೆದುಕೊಂಡು ಬಂದು ಹಾಗೆ ನಿಂತಿತು. ನಾಡಗೌಡ, ದೇಸಾಯಿ, ದೇಶಮುಖ ಪದಗಳು ಬೇರೆ ಬೇರೆಯಾದರು ಅವರು ನಿರ್ವಹಿಸುವ ಕೆಲಸ ಒಂದೇ ಆಗಿತ್ತು. ದೇಸಾಯಿ ಪದ ಮಾತ್ರ 'ದೇಶಗತಿ' ಎಂಬ ಆಡಳಿತ ಪ್ರದೇಶವನ್ನು ಹುಟ್ಟುಹಾಕಿತು. ನಾಡಗೌಡ, ದೇಶಮುಖ, ದೇಸಾಯಿಗಳು ಆಡಳಿತ ನಡೆಸುವ ಭಾಗವೇ ದೇಶಗತಿ.

ನಮ್ಮ ರಾಜ್ಯದಲ್ಲಿ (ದೇಶದಲ್ಲಿಯೂ ಕೂಡ) ಅಧಿಕಾರ, ಗೌರವ, ಸಮ್ಮಾನಗಳು ಮೇಲ್ವರ್ಗದವರಿಗೆ ಒಲಿದು ಬಂದದ್ದು ಹೆಚ್ಚು. ಇದು ಒಂದು ವ್ಯವಸ್ಥಿತವಾದ ತಂತ್ರವೂ ಹೌದು. ಮುಸ್ಲಿಂ ಸಾಮ್ರಾಜ್ಯ ಷಾಹಿಗಳು ಈ ವ್ಯವಸ್ಥೆಯನ್ನು ಬೆಂಬಲಿಸಿದವರೇ ಆಗಿದ್ದಾರೆ. ಏಕೆಂದರೆ ರಾಜ್ಯದ ಬೊಕ್ಕಸಕ್ಕೆ ಕಾಲಕಾಲಕ್ಕೆ ಕಂದಾಯ ಸಂದಾಯವಾಗಬೇಕಿದ್ದರೆ ಶ್ರೇಣಿಕೃತ ವ್ಯವಸ್ಥೆಯನ್ನು ಅವರು ಒಪ್ಪಿಕೊಳ್ಳಲೇಬೇಕಾಗಿತ್ತೆಂದು ತೋರುತ್ತದೆ. ಅಂತೆಯೇ ಆದಿಲ್ ಷಾಹಿ ಬ್ರಾಹ್ಮಣರಿಗೆ, ಕ್ಷತ್ರೀಯ, ವೀರಶೈವರಿಗೆ, ಜೈನರಿಗೆ ಸರ್ಕಾರ್ (ಜಿಲ್ಲಾ, ದೇಸಗತಿ) ಆಡಳಿತ ವ್ಯವಸ್ಥೆಯ ಜವಬ್ದಾರಿಯನ್ನು ವಹಿಸಿದ ನಿದರ್ಶನಕ್ಕೆ ಇನ್ನೂ ಇರುವ (ಅಧಿಕಾರ ರಹಿತ) ದೇಶಗತಿಗಳೇ ಸಾಕ್ಷಿ.

**ಬ್ರಾಹ್ಮಣ ದೇಸಗತಿಗಳು.**

೧. ಮನ್ನಿಕೇರಿ ದೇಸಗತಿ – ಬಾಗಲಕೋಟೆ, ಬಾಗಲಕೋಟೆ ಜಿಲ್ಲೆ.
೨. ನಾಡಿಗೇರ್ ವಾಡೆ – ಕುಂದಗೋಳ, ಧಾರವಾಡ ಜಿಲ್ಲೆ.
೩. ಮಮದಾಪುರ ವಾಡಾ – ಗೋಕಾಕ್, ಬೆಳಗಾವಿ ಜಿಲ್ಲೆ.
೪. ಅಭಾವಾಡಾ – ಚಿಕ್ಕೋಡಿ, ಬೆಳಗಾವಿ ಜಿಲ್ಲೆ.

**ಕ್ಷತ್ರಿಯ ದೇಸಗತಿಗಳು**

೧. ನೀರಬೂದಿಹಾಳ ದೇಸಗತಿ – ನೀರಬೂದಿಹಾಳ, ಬಾಗಲಕೋಟೆ ಜಿಲ್ಲೆ.
೨. ಲೋಕಾಪುರ ದೇಸಗತಿ – ಲೋಕಾಪುರ, ಬಾಗಲಕೋಟೆ ಜಿಲ್ಲೆ.
೩. ಕೋಟೆ ತಲ್ಲೂರು ದೇಸಗತಿ – ಕೋಟೆ ತಲ್ಲೂರು, ಬಾಗಲಕೋಟೆ ಜಿಲ್ಲೆ.
೪. ಐಹೊಳೆ ದೇಸಗತಿ – ಐಹೊಳೆ, ಬಾಗಲಕೋಟೆ ಜಿಲ್ಲೆ.
೫. ಪಟ್ಟದ ಕಲ್ಲು ದೇಸಗತಿ – ಪಟ್ಟದ ಕಲ್ಲು, ಬಾಗಲಕೋಟೆ ಜಿಲ್ಲೆ.

**ವೀರಶೈವ ದೇಸಗತಿಗಳು**

೧. ಹಂದಿಗನೂರು ದೇಸಗತಿ – ಹಂದಿಗನೂರು, ಹಾವೇರಿ ಜಿಲ್ಲೆ.
೨. ಕಾಕತಿ ದೇಸಗತಿ – ಕಿತ್ತೂರು, ಬೆಳಗಾವಿ ಜಿಲ್ಲೆ.
೩. ಸಿಕ್ಕಿದೇಸಗತಿ – ಅಣ್ಣಿಗೆರೆ, ಧಾರವಾಡ ಜಿಲ್ಲೆ.

## ಜೈನ ದೇಸಗತಿಗಳು

೧. ಹನಗಂಡಿ ದೇಸಗತಿ – ಹನಗಂಡಿ ಜಿ॥ ಬಾಗಲಕೋಟೆ

೨. ತೇರದಾಳ ದೇಸಗತಿ – ತೇರದಾಳ ಜಿ॥ ಬಾಗಲಕೋಟೆ

೩. ಅಣ್ಣಿಗೇರಿ ದೇಸಗತಿ – ಅಣ್ಣಿಗೇರಿ ಜಿ॥ ಧಾರವಾಡ

೪. ದರೂರು ದೇಸಗತಿ – ದರೂರು ಜಿ॥ ಬೆಳಗಾವಿ

೫. ಮುಳಗುಂದ ದೇಸಗತಿ – ಮುಳಗುಂದ ಜಿ॥ ಗದಗ ಇನ್ನೂ ಮುಂತಾದವು

ಈ ಎಲ್ಲ ದೇಸಗತಿಗಳು ಮೇಲ್ವರ್ಗದವುಗಳೇ ಹೀಗೆ ಆದಿಲ್‌ಷಾಹಿಗಳಿಂದ ಜಿಲ್ಲಾದ ಅಧಿಕಾರವನ್ನು ಮೇಲೆ ಹೇಳಿದ ಧರ್ಮದ ಪ್ರಭಾವಿ ವ್ಯಕ್ತಿಗಳು ಪಡೆದುಕೊಂಡರು. ಇವರ ಮೇಲೆ ತರಫದಾರ (ಮುಸ್ಲಿಂ ಅಧಿಕಾರಿ) ಇರುತ್ತಿದ್ದ. ದೇಸಗತಿಯ ಒಳವ್ಯವಹಾರಗಳನ್ನು ತಿಳಿಯಲು, ದೇಸಾಯಿಗಳನ್ನು ಹಿಡಿತದಲ್ಲಿಡಲು ತರಫ್‌ದಾರ ಮುಸ್ಲಿಂ ವ್ಯಕ್ತಿಗಳನ್ನು ವಾಡೆಯ ಕೆಲಸಗಾರರನ್ನಾಗಿ ನೇಮಿಸಿದ್ದಿರಬೇಕು. ಈಗಲೂ ವಾಡೆಯಲ್ಲಿ ಪರಂಪರಾತವಾಗಿ ಕೆಲಸ ಮಾಡಿಕೊಂಡು ಬಂದ ಮುಸ್ಲಿಂರು ಇದ್ದಾರೆ. 'ಪಕಾಲಿ' ಎಂಬ ಸೇವಕ ಮುಸ್ಲಿಂ ಜನಾಂಗ ಇಂದಿಗೂ ಹನಗಂಡಿ ವಾಡೆ (ಬಾಗಲಕೋಟೆ ಜಿಲ್ಲೆ)ಯಲ್ಲಿ ಕೂಲಿ ಕೆಲಸ ಮಾಡಿಕೊಂಡು ಇದ್ದಾರೆ. ಈಗ ಆದಿಲ್‌ಷಾಹಿಯ ರಾಜ್ಯ ಇಲ್ಲ. ಜೊತೆಗೆ ಬೇಹುಗಾರಿಕೆಯೂ ಇಲ್ಲ. ನಿತ್ಯ ಹೊಟ್ಟೆಹೊರೆಯಲು ಪಕಾಲಿ ಜನಾಂಗದವರು ಕೂಲಿ ಕೆಲಸದವರಾಗಿ ಮಾತ್ರ ಉಳಿದಿದ್ದಾರೆ.

ಆದಿಲ್‌ಷಾಯಿಗಳು ಈ ರೀತಿಯ ಸ್ಥಳೀಯ ಆಡಳಿತಕ್ಕೆ ಹೊಸವ್ಯವಸ್ಥೆ ಅಸ್ಥಿತ್ವ ಹಾಕಿ "ದೇಸಾಯಿಗಳನ್ನು ಗುರುತಿಸಿ ಉಂಬಳಿಯಾಗಿ ಜಮೀನು ಕೊಟ್ಟರು. ದೇಸಾಯಿಗೆ ಪರಗಣ ಅಧಿಕಾರ ನೀಡಿ ಸರಕಾರವೆಂದು ಸನದು (ದಾನಪತ್ರ) ಕೊಟ್ಟಿದ್ದು ಕಂಡುಬರುತ್ತದೆ. ಈ ಉಂಬಳಿಯನ್ನು ಕೊಡಲು ಕಾರಣವೇನೆಂದರೆ, ದೇಸಗತಿಗಳವರ ಸಾಹಸ ಸಹಾಯಕ್ಕೆ ಮೆಚ್ಚಿ ನೀಡಿದ ಸನದು ಆಗಿರುತ್ತವೆ".[೧೭]

ತೇರದಾಳದ ಮೂಲಪುರುಷ ಕೃಷ್ಣಪ್ಪನ[೧೮] ಶೂರತ್ವವನ್ನು ಮೆಚ್ಚಿ ಆದಿಲ್ ಷಾಹಿ ಅಪಾರ ಪ್ರಮಾಣದ ಭೂಮಿಯನ್ನು 'ಇನಾಂ' (ಕಾಣಿಕೆ, ಭಕ್ಷಿಸು) ಆಗಿ ಕೊಟ್ಟ. "ಐಹೊಳೆಯ ದೇಸಗತಿಯ ಭೀಮನಾಯಕ ಆದಿಲ್ ಷಾಹಿಯ ಸೈನ್ಯದೊಡನೆ ಅಂದು ಮುದಗಲ್ಲ ಕೋಟೆಗೆ ಬಂದಿಳಿದಾಗ ಗುರು ಸೈಯದರ ಆಜ್ಞೆಯಂತೆ ಮುದಗಲ್ಲವರೆಗೆ ಭೀಮಾನಾಯಕ ಇನಾಂ ಪಡೆದ.[೧೯] ಹಂದಿಗನೂರು ದೇಸಗತಿಯ ಮೂಲ ಪುರುಷ ವಿಠಲನಾಥ ಬುಳ್ಳೇಸರಶೆಟ್ಟಿಯ (ಕ್ರಿ.ಶ. ೧೫೭೭)ಸಾಹಸಕ್ಕೆ ಮೆಚ್ಚಿ ಆದಿಲ್ ಷಾಹಿಯೂ ೧೬,೦೦೦ ಎಕರೆ ಭೂಮಿಯನ್ನು ಇನಾಂ ಆಗಿ ಕೊಟ್ಟಿದ್ದನಂತೆ, ಹೀಗೆ ದೇಸಗತಿಯವರ ಸಾಹಸ, ಶೌರ್ಯ, ಆಡಳಿತಕ್ಕೆ ಮೆಚ್ಚಿ ಬಿಜಾಪುರ ಆದಿಲ್ ಷಾಹಿ ಇನಾಂ ಕೊಡುತ್ತ ಬಂದಿದ್ದಾರೆ. ಈ ರೀತಿಯಾಗಿ ಬಂದ 'ಇನಾಂ' ಭೂಮಿಯ ಸಂಪೂರ್ಣ ಅನುಭೋಗ–ಉಪಭೋಗ

ದೇಸಗತಿಯವರಿಗೆ ಸಲ್ಲುತ್ತಿತ್ತು. ಈ ಭೂಮಿಗೆ ಕಂದಾಯ ಇರಲಿಲ್ಲ. ಹೀಗೆ ರೈತರಿಂದ ಬರುವ ತೆರಿಗೆಯ ಒಂದು ಭಾಗ, ಇನಾಂ ಭೂಮಿಯಿಂದ ಬರುವ ಲಾಭದ ಫಲಾನುಭವಿಗಳು ದೇಸಗತಿಯವರೆ ಆದರು. ದೇಸಾಯಿಗಳ ಸಂಪತ್ತು ದಿನೇ ದಿನೇ ವೃದ್ಧಿಯಾಗತೊಡಗಿತು. ಅಂತೆಯೇ ಅವರ ಜೀವನದ ರೀತಿ-ರಿವಾಜುಗಳೂ ಬದಲಾದವು. ಜನ ಸಾಮಾನ್ಯರಿಂದ ಪ್ರತ್ಯೇಕತೆಯನ್ನು ಗುರುತಿಸಿಕೊಳ್ಳಲು ದೇಸಾಯಿಯ ಸ್ಥಳೀಯ ರಾಜನಂತೆಯೇ ವರ್ತಿಸತೊಡಗಿದ. ಈ ರೀತಿಯ ವರ್ತನೆಗಳನ್ನು ಅವನು ರಾಜನನ್ನು (ಆದಿಲ್ ಷಾಯಿಗಳು) ನೋಡಿ ಕಲಿತಿರಬಹುದು. ಅಂತೆಯೇ ವ್ಯಕ್ತಿತ್ವದಲ್ಲಿ ಗಾಂಭೀರ್ಯತೆ, ವಿಶಿಷ್ಟ ಉಡುಗೆ ತೊಡುಗೆಗಳು, ಸಂಪ್ರದಾಯ ವಿಧಿ-ವಿಧಾನಗಳು ರೂಢಿಯಾದವು. ಊರಿನ ಪ್ರತಿಯೊಂದು ವಿಷಯ ಗಮನಕ್ಕೆ ಬರುವಂತೆಯೇ ನೋಡಿಕೊಳ್ಳುವುದು ದೇಸಾಯಿಯ ಕರ್ತವ್ಯವು ಆಯಿತು.

ರಾಜನನ್ನು ನೋಡಿ ದೇಸಾಯಿಯೂ ಅವನಂತೆಯೇ ಸ್ಥಳೀಯ ರಾಜನಾದ. ಅವನ ಅರಮನೆಯಂಥ ಮನೆಯನ್ನೂ ಕಟ್ಟಿಕೊಂಡು ವೈಭೋಗದ ಜೀವನವನ್ನೂ ನಡೆಸತೊಡಗಿದ. ಈ ತರಹದ ದೇಸಾಯಿಯ ಮನೆಯೇ 'ವಾಡೆ'. ಸ್ವತಃ ಎರಡನೆಯ ಇಬ್ರಾಹಿಂ ಆದಿಲ್ ಷಾಯಿಯೇ 'ವಾಡೆ'ಗಳನ್ನು ಕಟ್ಟಿಕೊಳ್ಳಲು ಪ್ರೋತ್ಸಾಹ ನೀಡುತ್ತಿದ್ದ. ಇವನು ತನ್ನ "ಸರಕಾರದಿಂದ ಸಚಿವರ ಜನರ ಮಂಡಳಿ, ರಾಜನ ಕಡೆಯ ಕಾಮದಾರರು ಮತ್ತು ಎಲ್ಲ ನೌಕರ ಜನರಿಗೆ ಆಜ್ಞೆ ಮಾಡಿ, ಪ್ರತಿಯೊಬ್ಬರೂ ತಮತಮಗೆ ಇರಲು ವಾಡೆಗಳನ್ನು, ಸಾಯಬಾನಿ ಮಂಟಪಗಳನ್ನು, ಖಿಡಕಿಗಳನ್ನು ತೋಟಗಳನ್ನು ತಂತಮ್ಮ ಯೋಗ್ಯತಾನುಸಾರ ಕಟ್ಟಿಕೊಳ್ಳಬೇಕೆಂದು ಆಜ್ಞೆ ಮಾಡಿದನು".[೨೦] ಅಲ್ಲದೇ ಇವುಗಳನ್ನು ಕಟ್ಟಿಕೊಳ್ಳಲು ಸರಕಾರದ ಖಜಾನೆಯಿಂದ ಹಣವನ್ನೂ ಕೊಡಲಾಯಿತು.[೨೧] ರಾಜನ ಆಜ್ಞೆ, ಧನ ಸಹಾಯ, ಇನಾಂ ಭೂಮಿಯ ಮತ್ತು ರೈತರಿಂದ ಬರುವ ಕಂದಾಯದ ಒಂದು ಭಾಗ ಹೀಗೆ ಬಂದ ಎಲ್ಲ ಧನ ಸಂಪತ್ತಿನಿಂದ ದೇಸಗತಿಯವರು ಐಶಾರಾಮಿಯಾದ ವಾಡೆಯನ್ನು ಕಟ್ಟಿದರು.

ವಾಡೆಗಳ ವಿನ್ಯಾಸದ ಮೂಲ ಪ್ರೇರಣೆ 'ನವರಸ ಪುರ' ನಗರ. ಈ ನಗರವನ್ನು ಎರಡನೆಯ ಇಬ್ರಾಹಿಂ ಆದಿಲ್ ಷಾಹಿ ಕಟ್ಟಿದನು. "ಹಿಜರಿ ಸನ್ ೧೦೦೮ (ಕ್ರಿ.ಶ.೧೫೯೯ ರಿಂದ ೧೬೦೦)ರಲ್ಲಿ ವಿಜಾಪುರ (ಬಿಜಾಪುರ) ದಿಂದ ಎರಡು-ಎರಡುವರೆ ಕೋಸು ಅಂತರದಲ್ಲಿ ಕೋಟೆಯ ಹತ್ತಿರ ನಗರವನ್ನು ಕಟ್ಟಲು ಪ್ರಾರಂಭಿಸಿದನು.[೨೨] ಈ ನಗರ ತುಂಬಾ ಸುಂದರವಾಗಿತ್ತು. ಎಲ್ಲಿ ನೋಡಿದಲ್ಲಿ ವಾಡೆಗಳು, ಬಾದಶಾಹ ಇಬ್ರಾಹಿಂನ ವಾಡೆಯಂತು ನಯನ ಮನೋಹರವಾಗಿತ್ತು. ಇವರ "ವಾಡೆಗೆ ಬಹಳ ಖಿಡಕಿಗಳನ್ನು ಬಿಟ್ಟು ಸುಂದರವಾದ ಗೋಡೆ ಮತ್ತು ಮಂಟಪಗಳುಳ್ಳ ಬಾಗಿಲುಗಳಿದ್ದವು. ಆ ಗೋಡೆಗೆ ಆಕಾಶ ಬಣ್ಣದ ಸೋನೇರಿ ಕೆಲಸವನ್ನು ಮಾಡಿ ಅದರ ಮೇಲೆ ಚಿತ್ರಗಾರರು ಚಿತ್ರಗಳನ್ನು ಬಿಡಿಸಿದ್ದರು. ಅವುಗಳನ್ನು ಕಂಡರೆ ಜಾದುಗಾರರು ಆಶ್ಚರ್ಯಪಡಿಸುವ ಜಾದೂಗಿರಿಯ ಕುಂಚದಿಂದಲೇ ಬಿಡಿಸದಂತೆ ಭಾಸವಾಗುತ್ತಿತ್ತು. ತುಂಬ ಸುಂದರವಾದ ಚಿತ್ರಗಳನ್ನು ತೆಗೆದಿದ್ದರು. ಆ

ವಾಡೆಯ ಒಳಗೆ ಹೊರಗೆ ತೆಗೆದು ನಕ್ಷೆಗಳು, ಆ ಮೊದಲಿನ ಮಾನೀ ಹಾಗೂ ಅರಜಂಗ ಎಂಬ ದೊಡ್ಡ ಚಿತ್ರಗಾರರು ತೆಗೆದ ಚಿತ್ರಗಳು ಕೂಡ ಈ ಚಿತ್ರಗಳ ಮುಂದೆ ತೇಜವನ್ನು ಕಳೆದುಕೊಂಡವು. ಆ ವಾಡೆಯ ಸುತ್ತಲೂ ನಾಲ್ಕೂ ಕಡೆಗೂ ಹೂದೋಟ, ಕೈ ತೋಟಗಳನ್ನು ಚಮತ್ಕಾರಿತವಾಗಿ ಮಾಡಿದ್ದರು. ಆ ತೋಟಗಳು ನೋಡುವವರ ಕಣ್ಣುಗಳಿಗೆ ತೇಜ ಬಂದು ಮನಸ್ಸಿಗೆ ಸಮಾಧಾನವಾಗುತ್ತಿತ್ತು. ಆ ತೋಟಗಳಿಂದ ವಿಧ ವಿಧವಾದ ಪುಷ್ಪಗಳು ಮತ್ತು ಫಲಗಳು ದೊರೆಯುತ್ತಿದ್ದವು".[೨೩]

ಬಾದಶಾಹ ಆದಿಲ್‌ಷಾಹಿಯ ವಾಡೆಯನ್ನು ನವರಸಪುರದ ಇತರ ಸರಕಾರದ ಜನರು ಕಟ್ಟಿಸಿದ ವಾಡೆಗಳನ್ನು ದೇಸಗತಿಯವರು ನೋಡಿ ಅವುಗಳಂತೆಯೆ ತಮಗೂ ಒಂದು ಅದೇ ಮಾದರಿಯ ವಾಡೆಯನ್ನು ಕಟ್ಟಿಕೊಂಡರು. ಈಗಲೂ ಸದೃಢವಾದ ಸುಂದರವಾದ ವಾಡೆಗಳನ್ನು ಉತ್ತರ ಕರ್ನಾಟಕದಲ್ಲಿ ನೋಡಬಹುದು. ಇವುಗಳನ್ನು ನೋಡಿದರೆ ದೇಸಾಯಿಯವರುಗಳು ಸ್ಥಳೀಯ ರಾಜನಾಗಿದ್ದರು ಎಂಬುದು ಖಚಿತವಾಗಿ ಹೇಳಬಹುದು. ಒಂದೊಮ್ಮೆ ಅವಕಾಶ ಸಿಕ್ಕರೆ ಸ್ವತಂತ್ರ ರಾಜನಾಗುವ ಸಂಪತ್ತು ದೇಸಾಯಿಯ ಹತ್ತಿರ ಇತ್ತು. ಕಿತ್ತೂರು ದೇಸಗತಿಯ ಈ ಕಾರ್ಯವನ್ನು ಸಾಧಿಸಿ ಸಂಸ್ಥಾನವಾಗಿ ಬೆಳೆಯಿತು. ಈಗಲೂ ಹಾಳಾದ ಕಿತ್ತೂರು ವಾಡೆ ಇದೆ. ಹನಗಂಡಿ, ಕೆರಕಲಮಟ್ಟಿ ವಾಡೆಗಳನ್ನು ಗಮನಿಸಿದಾಗ ಇವು ಮೈಸೂರು ಅರಸರ ಹಳೆಯ ಅರಮನೆಗೆ ಪೈಪೋಟಿ ನೀಡುತ್ತವೆ. ಹೌದು ವಾಡೆಗಳು ರಾಜನ ಅರಮನೆಯಂತೆಯೇ ಇದ್ದವು. ಸಾಮಾನ್ಯವಾಗಿ ವಾಡೆಗಳಲ್ಲಿ ಬೃಹತ್ತಾದ ರಕ್ಷಣಾ ಗೋಡೆ, ಗೋಡೆ ಮೇಲೆ ಹುಡೆಗಳು (ಕಾವಲು ಸ್ಥಳ) ಒಳಗೆ ವಿಶಾಲವಾದ ಪ್ರಾಂಗಣ. ದರ್ಬಾರು (ಸದರ ಕಟ್ಟಿ) ದೇಸಾಯಿ ಕೋಣೆ, ಅತಿಥಿ ಗೃಹ, ಖಜಾನೆ, ದಾಖಲು ಪತ್ರಗಳ ಕೋಣೆ, ದವಸ ಧಾನ್ಯಗಳ ಸಂಗ್ರಹದ ಉಗ್ರಾಣ (ಹಗೆ) ಅಡುಗೆಮನೆ, ದೇವರಮನೆ, ವಿಶಾಲ ದನದ ಕೊಟ್ಟಿಗೆಗಳು, ವಿಶಾಲ ಪಡಸಾಲೆ, ಸಾಕಷ್ಟು ಮಲಗುವ ಕೋಣೆಗಳು, ಕಾರಾಗೃಹಗಳು, ಹಿತ್ತಲು ಕಂಡು ಬರುತ್ತವೆ. ಇಷ್ಟೆಲ್ಲಾ ಸೇರಿ ಒಂದು ವಾಡೆಯಾಗಿರುತ್ತದೆ. ಹನಗಂಡಿ ೭ ಎಕರೆ, ಅಣ್ಣೀಗೆರಿ ೫ ಎಕರೆ, ಹಂದಿಗನೂರು ೪ ಎಕರೆ, ಭೂಮಿಯಲ್ಲಿ ನಿರ್ಮಾಣವಾಗಿವೆ. ಒಟ್ಟಿನಲ್ಲಿ ವಾಡೆಗಳು ಐಶಾರಾಮಿ ಸಂಕೇತಗಳು ಆಗಿದ್ದವು ಎಂದು ನಿಸ್ಸಂಶಯವಾಗಿ ಹೇಳಬಹುದು.

### ೨.೩ ವಾಡೆಯ ಪದದ ನಿಷ್ಪತ್ತಿ

ಕನ್ನಡ ಸಾಹಿತ್ಯ ಪರಿಷತ್ತಿನ ನಿಘಂಟಿನಲ್ಲಿ 'ವಾಡೆ' ಪದಕ್ಕೆ ದವಸಧಾನ್ಯಗಳನ್ನು ಸಂಗ್ರಹಿಸಿಡುವ ಸ್ಥಳ, ಮನೆ, ನಿವಾಸ, ಭವ್ಯವಾದ ಗೃಹ, ಭವನ ಎಂಬರ್ಥಗಳಿವೆ.[೨೪] ಮಧ್ಯಕಾಲೀನ ಕರ್ನಾಟಕದ ರಾಜ್ಯಾಡಳಿತದಲ್ಲಿ ರೈತರು ತಾವು ಬೆಳೆದ ಧಾನ್ಯಗಳನ್ನು ಕಂದಾಯ ರೂಪದಲ್ಲಿ ನಿಗದಿಪಡಿಸಿದ ರಾಜನಿಗೆ ಕೊಡುವ ಪರಿಪಾಠವಿತ್ತು. ಹೀಗೆ ಕಂದಾಯ ರೂಪದಲ್ಲಿ ಬಂದ ದವಸಧಾನ್ಯಗಳನ್ನು

ಪ್ರಾಂತ್ಯಾಧಿಕಾರಿ ಸಂಗ್ರಹಿಸುತ್ತಿದ್ದ. ಧಾನ್ಯಗಳನ್ನು ಪ್ರಾರಂಭದಲ್ಲಿ ದೊಡ್ಡ ಕೋಣೆ ಅಥವಾ ಉಗ್ರಾಣದಲ್ಲಿ ಸಂಗ್ರಹಿಸಲಾಗುತ್ತಿತ್ತು ಎಂದು ಕಾಣುತ್ತದೆ. ಕ್ರಮೇಣ ಪ್ರಾಂತ್ಯಾಧಿಕಾರಿ ವಿಶೇಷ ಸ್ಥಾನಮಾನ ಪಡೆದದ್ದು ಆದಿಲ್ ಷಾಹಿ ಕಾಲದಲ್ಲಿ. ಈ ಅಧಿಕಾರಿಗೆ 'ದೇಸಾಯಿ' 'ಸಾಹೇಬ' 'ನಾಡಗೌಡ' ಎಂಬ ಪಟ್ಟಕಟ್ಟಿ ಇಂತಿಷ್ಟು ಗ್ರಾಮಗಳು ಎಂದು ನಿಗದಿಪಡಿಸಿ ಅವನು ಕೆಲವೊಂದು ನಿರ್ಧಾರ ತೆಗೆದುಕೊಳ್ಳುವ ವಿಶೇಷ ಅಧಿಕಾರವನ್ನು ಕೊಡಲಾಯಿತು. ಈ ದೇಸಾಯಿ ರೈತರಿಂದ ಸಂಗ್ರಹಿಸಿದ ಧಾನ್ಯ ಸಂಪತ್ತನ್ನು ಜತನದಿಂದ ರಕ್ಷಿಸಿ ರಾಜನಿಗೆ ಹಸ್ತಾಂತರಿಸುತ್ತಿದ್ದ. ಈ ಕೆಲಸಕ್ಕೆ ರಾಜನಿಂದ ಇನಾಮು ಇವನಿಗೆ ದೊರೆಯುತ್ತಿತ್ತು. ಇವನು ಸ್ಥಳೀಯ ಪ್ರಭಾವಿ ವ್ಯಕ್ತಿಯೂ ಹೌದು. ಕಾಲಾನಂತರ ದೇಸಾಯಿ ತನ್ನ ಮನೆಯನ್ನು ವಿಸ್ತರಿಸಿ ಭವ್ಯವಾದ, ಸುಸಜ್ಜಿತ ಗೋಡೆಗಳಿಂದ ನಿರ್ಮಿಸತೊಡಗಿದ. ಇದರಲ್ಲಿ ಕಂದಾಯ ರೂಪದಲ್ಲಿ ಬರುವ ಧಾನ್ಯಗಳ ಸಂಗ್ರಹಣೆಗೆ ಉಗ್ರಾಣ, ಕೋಣೆ, ಹಗೆಯಂಥ ಚೌಕ ಗುಂಡಿಗಳನ್ನೂ ನಿರ್ಮಿಸಿದ.[೨೫] ಇಂಥ ಭವ್ಯವಾದ ಮನೆಯ ಯಜಮಾನನಿಗೆ ಸ್ಥಳೀಯರು ಒಡೆಯ ಎಂದು ಕರೆಯುವ ಪ್ರವೃತ್ತಿ ಬಂದು, ಮುಂದೆ ರೂಢಿಯಾಗಿ ಒಡೆಯ ಪದ ಹಾಗೆ ನಿಂತಿತು. ಅವನು ವಾಸಿಸುವ ಮನೆ 'ವಾಡೆ' ಆಯಿತು.

ಮೇಲೆ ಹೇಳಿದ ಆಧಾರಕ್ಕೆ ಶಂಬಾ ಜೋಶಿಯವರ ಸಂಶೋಧನ ಬರಹಗಳು ಪ್ರಮುಖವಾಗಿ ನಿಲ್ಲುತ್ತವೆ. ಇವರ ಪ್ರಕಾರ ವಾಡಿ, ವಾಡೆ ಎಂಬ ಪದಗಳ ಮೂಲ ನಿಷ್ಪನ್ನ ಪದ 'ಪಟ್ಟಿ'. ಪಟ್ಟಿ ಮುಂದೆ ಹಟ್ಟಿಯಾಯಿತು. ಹಟ್ಟಿಯಲ್ಲಿರುವವರು ಹಟ್ಟಿಕಾರರು. ಈ ಹಟ್ಟಿಕಾರರೇ ಕನ್ನಡಿಗರು.

ಪಟ್ಟಿ – ಪಾಡು – ಪಾಡಿ
ಪಾಡು – ಬಾಡು – ಬಾಡ
ಪಾಡು – ವಾಡು, ವಾಡ, ವಾಡಾ, ವಾಡೆ
ಪಟ್ಟಿ – ಹಟ್ಟಿ
ಪಟ್ಟಿ – ಪಾಡಿ – ಪಳ್ಳಿ, ಪಾಳಿ(ಮರ್ಾಟಿ).. ಪಾಳ್ಯ.[೨೬]

ಇದರಿಂದ ವಾಡೆಯ ಮೂಲ ಕನ್ನಡದ್ದೇ ಎಂಬುದು ಸ್ಪಷ್ಟವಾಗುತ್ತದೆ. ಗಂಗರ ಆಳ್ವಿಕೆ ಪ್ರದೇಶಕ್ಕೆ 'ಗಂಗವಾಡಿ' ಎಂದೇ ಹೆಸರಿತ್ತು. ಇಲ್ಲಿನ ವಾಡಿ ಸಂಕುಚಿತ 'ವಾಸ' ಎಂಬ ಅರ್ಥ ಬರದೇ ಸಾಮ್ರಾಜ್ಯ, ಆಡಳಿತ ಪ್ರದೇಶ ಎಂಬ ವಿಶಾಲಾರ್ಥದಲ್ಲಿ ಪ್ರಯೋಗವಾಗಿದೆ. ಶಂಬಾರವರು, ಪಟೇಲ, ಗೌಡ ಪದಗಳ ನಿಷ್ಪತ್ತಿಯ ಚರ್ಚೆ ಕುತೂಹಲವನ್ನು ಹುಟ್ಟಿಸುತ್ತದೆ. 'ಪಟ್ಟಿ' ಪದಕ್ಕೆ 'ಇಲ' ಪ್ರತ್ಯಯ ಸೇರಿ 'ಪಟ್ಟಿಲ' ಆದ. ಪಟ್ಟಿಯಲ್ಲಿ ಇರುವವನೇ ಪಟ್ಟಿಲ > ಪಾಟಿಲ. ಇದರಂತೆ ಗೋವನ್ನು ಕಾಯುವವ ಗೋವಳ > ಗವುಳ > ಗೌವುಡ > ಗೌಡ ನಾದ ಕಾಲಾನಂತರ ಈ ಎರಡು ವರ್ಗದವರು ಗ್ರಾಮಾಧಿಕಾರಿಗಳಾಗಿ ಈ ಪದಗಳ ಅರ್ಥವನ್ನು ಅಧಿಕಾರಿ ಎಂಬ ಅರ್ಥಬರುವಂತೆ

ಮಾಡಿದರು. ಆದರೆ ಪಾಟಿಲ ಗೌಡ ಶಬ್ದಗಳ ಮೂಲಾರ್ಥ ಜನವಾಚಗಳೇ ಆಗಿದ್ದವು. ಈಗಲೂ ಅಧಿಕಾರವಿಲ್ಲದ ಅದೆಷ್ಟು ಗೌಡ, ಪಾಟಿಲರಿದ್ದಾರೆ ಎಂಬುದನ್ನು ಉತ್ತರ ಕರ್ನಾಟಕದುದ್ದಕ್ಕೂ ಕಾಣಬಹುದು. ಹಿಂದೆಯೂ ಕಾಣಬಹುದಿತ್ತು. ಇಲ್ಲಿ ಬಹುಮುಖ್ಯವಾಗಿ ಪಟ್ಟಿಲ ಪದ. ಪಟ್ಟಿಲ > ಪಾಟಿಲ ಆಗಿದ್ದು. ಪಟ್ಟಿಯಲ್ಲಿ ವಾಸಿಸುವನೆ ಪಟ್ಟಿಲ ಎಂಬಂತೆ ವಾಡೆಯನ್ನು ಕಾಯುವವ ಅಥವಾ ಮುಖ್ಯಸ್ಥ ಒಡೆಯ ಅಥವಾ ವಡೆಯ. ಈ ವಡೆಯ ವಾಸಿಸುವ ಮನೆ ವಾಡೆಯಾಯಿತು. ವಾಡೆ ಮೊದಲು ವಸತಿ ಸೂಚಕವಾಗಿಯು ಮುಂದೆ ಅಧಿಕಾರ ಸೂಚಕವಾಗಿಯೂ ವಿಶಾಲಾರ್ಥ ಪಡೆಯುತ್ತಾ ಹೋಯಿತು.

ವಾಡಿ–ವಾಡ, ಬಾಡ–ಬಾಡಿ ಸಾದೃಶ್ಯ ಮೂಲದಲ್ಲಿ ಒಂದೇ ತೆರನಾದವು. ಇವುಗಳ ಮೂಲ 'ಪಟ್ಟಿ' ಎಂಬುದನ್ನು ಶಂ.ಬಾ. ಜೋಷಿಯವರು ಸಾಧಿಸಿ ತೋರಿಸಿದ್ದಾರೆ. ಈ ಪದಗಳು ಜನವಸತಿ ಸೂಚಕವಾಗಿದ್ದು ಕ್ರಮೇಣ ತಮ್ಮ ಅರ್ಥ ವಿಶಾಲತೆಯನ್ನು ವಿಸ್ತಾರಗೊಳಿಸುತ್ತಾ ಹೋಗುತ್ತವೆ. ವಸತಿ ಪ್ರದೇಶಗಳಾಗಿ ಕೆಲವು ಊರುಗಳು ಹೆಸರಲ್ಲಿ ಇವು ಉಳಿದುಕೊಂಡು ಬಂದಿವೆ.

ಬಸ್ತವಾಡ : ಬೆಳಗಾವಿ ಜಿಲ್ಲೆ
ಶೆರವಾಡ : ಹುಬ್ಬಳ್ಳಿ ತಾಲ್ಲೂಕು, ಧಾರವಾಡ ಜಿಲ್ಲೆ
ಧಾರವಾಡ : ಧಾರವಾಡ ತಾಲ್ಲೂಕು, ಧಾರವಾಡ ಜಿಲ್ಲೆ
ಅಲಗಿಲವಾಡ : ಹರಪ್ಪನಹಳ್ಳಿ ತಾಲ್ಲೂಕು, ದಾವಣಗೆರೆ ಜಿಲ್ಲೆ
ಕುಂದವಾಡ : ದಾವಣಗೆರೆ ತಾಲ್ಲೂಕು, ದಾವಣಗೆರೆ ಜಿಲ್ಲೆ
ಕೋಳಿವಾಡ : ಹುಬ್ಬಳ್ಳಿ ತಾಲ್ಲೂಕು, ಧಾರವಾಡ ಜಿಲ್ಲೆ
ಕನಕವಾಡ : ಕೊಲ್ಲಾಪುರ
ದುಮ್ಮವಾಡ : ಕಲಘಟಗಿ ತಾಲ್ಲೂಕು, ಧಾರವಾಡ ಜಿಲ್ಲೆ
ಕನ್ಹೇರವಾಡಿ : ಖಾನದೇಶ
ಕನ್ಹವಾಡಿ : ಸಾತಾರ ಜಿಲ್ಲೆ
ಸಟವಾಡಿ : ಬೀದರ್ ಜಿಲ್ಲೆ
ಮುರಕವಾಡ : ಕಲಘಟಗಿ ತಾಲ್ಲೂಕು, ಧಾರವಾಡ ಜಿಲ್ಲೆ
ಕಾಲವಾಡ : ನವಲಗುಂದ ತಾಲ್ಲೂಕು, ಧಾರವಾಡ ಜಿಲ್ಲೆ
ಬರ್ದವಾಡ : ನವಲಗುಂದ ತಾಲ್ಲೂಕು, ಧಾರವಾಡ ಜಿಲ್ಲೆ
ಕರಕಲವಾಡ : ನವಲಗುಂದ ತಾಲ್ಲೂಕು, ಧಾರವಾಡ ಜಿಲ್ಲೆ
ಕನಕವಾಡ : ಕಲಘಟಗಿ ತಾಲ್ಲೂಕು, ಧಾರವಾಡ ಜಿಲ್ಲೆ
ಅಳಗವಾಡಿ : ನವಲಗುಂದ ತಾಲ್ಲೂಕು, ಧಾರವಾಡ ಜಿಲ್ಲೆ

ಶೆಲವಡಿ : ನವಲಗುಂದ ತಾಲ್ಲೂಕು, ಧಾರವಾಡ ಜಿಲ್ಲೆ

ಬಾಗೇವಾಡಿ : ಗದಗ ತಾಲ್ಲೂಕು, ಗದಗ ಜಿಲ್ಲೆ

ಬಸವನ ಬಾಗೇವಾಡಿ : ಬಿಜಾಪುರ ಜಿಲ್ಲೆ

ಬಾಡ ಎಂಬುದಕ್ಕೆ

ಬಾಡ : ಶಿಗ್ಗಾವಿ ತಾಲ್ಲೂಕು, ಹಾವೇರಿ ಜಿಲ್ಲೆ

ಕನ್ನಂಬಾಡಿ : ಮೈಸೂರು ಜಿಲ್ಲೆ

ಗಂಗವಾಡಿ – ೯೬೦೦೦ (ಗಂಗರ ರಾಜ್ಯ) ರಟ್ಟಪಳ್ಳಿ, ನೂರುಂಬಾಡ (ಈಗಿನ ರಟ್ಟಿಹಳ್ಳಿ, ಹಿರೇಕೆರೂರು ತಾಲ್ಲೂಕು, ಹಾವೇರಿ ಜಿಲ್ಲೆ) ನೂರುಂಬಾಡ, ಕನ್ನಂಬಾಡಿ, ಎಂಬ ನಿಷ್ಪನ್ನಗಳು ಸಾಮ್ರಾಜ್ಯ ಮತ್ತು ಆಡಳಿತ ಸೂಚಕವಾಗಿಯೂ, ರಕ್ಷಣಾ ಸೂಚಕವಾಗಿಯೂ ಕಂಡು ಬರುತ್ತವೆ. ವಾಡ, ವಾಡಿ, ಬಾಡ, ಬಾಡಿ ಎಂದರೆ ಸ್ಪಷ್ಟವಾಗಿ ಹಳ್ಳಿ, ಜನವಸತಿ ಚಿಕ್ಕ ಪ್ರದೇಶಗಳೆಂದೆ ಅರ್ಥ.

ಇಲ್ಲಿನ ಕನ್ನಂಬಾಡಿ ಎಂಬ ಪದ ಇನ್ನೂ ಒಂದು ಹೆಜ್ಜೆ ಮುಂದೆ ಹೋಗಿ ರಕ್ಷಣಾ ಸೂಚಕವಾಗಿ ಬಳಕೆಯಾಗುತ್ತಿದೆ. ಇಲ್ಲಿನ ಬಾಡಿ ನೀರನ್ನು ಸಂರಕ್ಷಿಸುವ, ತಡೆ ಹಿಡಿಯುವ ಎಂಬರ್ಥದಲ್ಲಿಯೂ, ಬೃಹತ್ ಬಲಿಷ್ಠ ಗೋಡೆ, ಅಣೆಕಟ್ಟು ಎಂಬರ್ಥದಲ್ಲಿ ಬಳಕೆಯಾದದ್ದು ಸೋಜಿಗ. ಇದೇ ದಿಕ್ಕಿನಲ್ಲಿ ಆಲೋಚಿಸಿದಾಗ ಇಂಗ್ಲೀಷಿನ ವಾಲ್ (ತಡೆಗೋಡೆ) ಪದವನ್ನು ವಾಡೆಯ ದೃಷ್ಟಿಯಿಂದ ನೋಡಿದಾಗ ರಕ್ಷಣೆಯೇ ಆಗುತ್ತದೆ. ವಸತಿ ಆಡಳಿತ ಸೂಚಕವಾಗಿದ್ದ ವಾಡ – ವಾಡಿ, ಬಾಡ – ಬಾಡಿ, ಪದಗಳು ಮುಂದೊಮ್ಮೆ ರಕ್ಷಣೆಯ ಸೂಚಕವಾಗಿಯೂ ಬಳಕೆಯಾಗುತ್ತವೆ. ಇದಕ್ಕೆ ನಿದರ್ಶನವೆಂಬಂತೆ ಇನ್ನೂ ನಮ್ಮೊಡನೆ ಇರುವ ವಾಡೆಗಳು ಮತ್ತು ಇವುಗಳ ರಕ್ಷಣೆಗೆಂದೇ ಇರುವ ಬೃಹತ್ ಗೋಡೆ (ವಾಲ್ ಅಥವಾ ಕೋಟೆ)ಗಳು. ಒಟ್ಟಾರೆ ಚರ್ಚೆಯ ಮುಕ್ಯಗ್ರಹಿತೆ ವಾಡೆ ಎಂಬುದು ವಸತಿಗಾಗಿ, ಆಡಳಿತ ಕೇಂದ್ರವಾಗಿ, ರಕ್ಷಣೆಗಾಗಿ ಒಡೆಯನ ದರ್ಬಾರಿಗಾಗಿ ಇರುವ ಒಂದು ವ್ಯವಸ್ಥೆ ಎಂಬುದನ್ನು ಸ್ಪಷ್ಟವಾಗಿ ಹೇಳಬಹುದು.

**ಅಡಿ ಟಿಪ್ಪಣಿಗಳು**

೧. ಸೌತ್ ಇಂಡಿಯನ್ ಇನ್‌ಸ್ಕ್ರಿಶ್ಯನ್ ಸಂ-೧೮, ಮೋಟೆಬೆನ್ನೂರು, ಬ್ಯಾಡಗಿ ತಾಲ್ಲೂಕು, ಹಾವೇರಿ ಜಿಲ್ಲೆ. ಪುಟ-೬೬.

೨. ನಾಗತೀಹಳ್ಳಿ ಚಂದ್ರಶೇಖರ, ಬುದ್ಧ ಬಿಸಿಲೂರಿನವನು, ಸಾಹಿತ್ಯ ಸಂಚಲನ-೨೦೧೩, ಪುಟ-೧೨೧.

೩. ಸೌತ್ ಇಂಡಿಯನ್ ಇನ್‌ಸ್ಕ್ರಿಶ್ಯನ್ ಸಂ-೧೮, ೧೫೧. ಕ್ರಿ.ಶ. ೧೧೪೮. ನೀರಲಗಿ, ಹಾವೇರಿ ತಾಲ್ಲೂಕು, ಧಾರವಾಡ ಜಿಲ್ಲೆ, ಪುಟ-೨೦೦.

೪. ಹಂಪ ನಾಗರಾಜಯ್ಯ, ಚಂದ್ರಕೊಡೆ, ೧೯೯೭, ನೇರಲಗಿಯ ಶಾಸನ, ಪುಟ-೨೬೯.

೫. ಸದಾಶಿವ .ಕೆ. ಮಧ್ಯಯುಗೀನ ಭಾರತದ ಇತಿಹಾಸ-೨೦೧೨. ಪುಟ-೫೧೬.

೬. ಮಹಮ್ಮದ್ ಇಬ್ರಾಹಿಂ ಜುಬೇರಿ - ಬುಸಾತಿನೆ ಸಲಾತೀನ ವಿಜಾಪುರ ಆದಿಲ್‌ಷಾಹಿಗಳ ಚರಿತ್ರೆ, ಕನ್ನಡಕ್ಕೆ ಡಾ॥ ಕೃಷ್ಣ ಕೊಲ್ಹಾರ ಕುಲಕರ್ಣಿ, ೧೯೯೯, ಪುಟ-೧೮೬.

೭. ಸಂಗಪ್ಪ ಚ ಕಲ್ಯಾಣಿ, ಬಾಗಲಕೋಟೆ ಜಿಲ್ಲೆಯ ದೇಶಗತಿಗಳು (ಅಪ್ರಕಟಿತ ಪಿಎಚ್.ಡಿ ಮಹಾಪ್ರಬಂಧ) ೨೦೦೯. ಪುಟ-೩೦.

೮. ಸಂಕ್ಷಿಪ್ತ ಕನ್ನಡ ನಿಘಂಟು- ಕನ್ನಡ ಸಾಹಿತ್ಯ ಪರಿಷತ್ತು. ೨೦೦೧. ಪುಟ-೬೧೨.

೯. ಸಂಗಪ್ಪ ಚ ಕಲ್ಯಾಣಿ ಪೂರ್ವೋಕ್ತ, ಪುಟ-೩೧.

೧೦. ಸಂಕ್ಷಿಪ್ತ ಕನ್ನಡ ನಿಘಂಟು, ಪೂರ್ವೋಕ್ತ. ಪುಟ-೬೧೨.

೧೧. ಅದೇ ಪುಟ-೧೦೬.

೧೨. ಅದೇ ಪುಟ-೧೦೫.

೧೩. ಶಂಬಾ ಜೋಶಿ. ಎಡೆಗಳು ಹೇಳು ಕಂನಾಡ ಕಥೆ. ೨೦೧೧. ಪುಟ-೩೭.

೧೪. ಸೂರ್ಯನಾಥ ಕಾಮತ್, ಇತಿಹಾಸ ದರ್ಶನ, ಸಂ-೧೫, ೨೦೦೦ 'ಗೌಡ' ಶಬ್ದದ ಮೂಲ. ಪುಟ-೧೮೦-೧೮೨.

೧೫. ಅದೇ ಪುಟ-೧೮೦-೧೮೨.

೧೬. ಸಂಗಪ್ಪ ಚ ಕಲ್ಯಾಣಿ, ಪೂರ್ವೋಕ್ತ ಪುಟ-೩೨.

೧೭. ಅದೇ ಪುಟ-೦೪.

೧೮. ತೇರದಾಳ ನಾಡಗೌಡರ ಮೂಲ ಪುರುಷ ಕೃಷ್ಣಪ್ಪ ಒಬ್ಬನೇ ಅಲ್ಲ. ಇವನ ಸಹೋದರ ಕಾರಿ ಬಸವನಗೌಡನ ಹೌದು. ಕೃಷ್ಣಪ್ಪ - ಕಾರಿ ಬಸವಗೌಡ ಸಹೋದರರು ತಮ್ಮ ಪರಾಕ್ರಮದಿಂದ ಆದಿಲ್‌ಷಾಹಿಯಿಂದ ವತನ ಸಂಪಾದಿಸಿದರು. ಈ ಕುರಿತಾಗಿ ಅಧ್ಯಾಯ ನಾಲ್ಕರ ತೇರದಾಳ ನಾಡಗೌಡರ ವಾಡೆಯ ಪರಿಸರ ಮತ್ತು ಇತಿಹಾಸದಲ್ಲಿ ಚರ್ಚಿಸಲಾಗಿದೆ.

೧೯. ಸಂಗಪ್ಪ ಚ ಕಲ್ಯಾಣಿ ಪೂರ್ವೋಕ್ತ ಪುಟ-೫೩.

೨೦. ಮಹಮ್ಮದ್ ಇಬ್ರಾಹಿಂ ಜುಬೇರಿ, ಬುಸಾತಿನೆ ಸಲಾತೀನ, ಪೂರ್ವೋಕ್ತ ೧೯೯೯. ಪುಟ–೫೩.

೨೧. ಅದೇ ಪುಟ–೨೦೭.

೨೨. ಅದೇ ಪುಟ–೨೦೬.

೨೩. ಅದೇ ಪುಟ–೨೦೭.

೨೪. ಸಂಕ್ಷಿಪ್ತ ಕನ್ನಡ ನಿಘಂಟು – ಪೂರ್ವೋಕ್ತ ೨೦೦೧. ಪುಟ–೧೧೪೧.

೨೫. ಕ್ಷೇತ್ರಕಾರ್ಯಕ್ಕೆ ಹೋದಾಗ ಹಂದಿಗನೂರು, ಹಳ್ಳಿಂಗಳ್ಳಿ, ತೇರದಾಳ, ಅಣ್ಣೀಗೇರಿ ವಾಡೆಗಳಲ್ಲಿ ಈ ರೀತಿ ಮಾದರಿಗಳನ್ನು ಕಂಡಿದ್ದೇನೆ.

೨೬. ಶಂಬಾ ಜೋಶಿ – ಪೂರ್ವೋಕ್ತ, ಪುಟ–೩೨, ೨೦೧೧. ಪುಟ–೩೨.

## ಅಧ್ಯಾಯ–ಮೂರು

# ಕರ್ನಾಟಕ ಆಡಳಿತದಲ್ಲಿ ಜೈನರು

೩.೧ ಕರ್ನಾಟಕದಲ್ಲಿ ಜೈನಧರ್ಮ ಮತ್ತು ಜೈನ ಆಡಳಿತಗಾರರು

೩.೨ ಜೈನ ಸಾಮಂತ ಆಡಳಿತಗಾರರು

೩.೩ ದಂಡನಾಯಕತ್ವದಲ್ಲಿ ಜೈನರು

೩.೪ ವಾಡೆಯ ಅಧಿಕಾರಿಗಳಾಗಿ ಜೈನರು

೩.೫ ಹನಗಂಡಿ ವಾಡೆಯ ಅಧಿಕಾರಿಗಳಾಗಿ ಜೈನರು

## ಅಧ್ಯಾಯ–ಮೂರು

# ಕರ್ನಾಟಕ ಆಡಳಿತದಲ್ಲಿ ಜೈನರು

ರಾಜ್ಯಾಧಿಕಾರ ಎಂಬುದು ಜೈನರಿಗೆ ಹೊಸದಲ್ಲ. ಅದು ಜೈನ ಧರ್ಮದ ಹುಟ್ಟಿನೊಂದಿಗೆ ಬಂದದ್ದು. ಆಧಾರವಾಗಿ ಜೈನ ಧರ್ಮದ ಪ್ರಥಮ ತೀರ್ಥಂಕರ ಆದಿನಾಥ (ವೃಷಭನಾಥ) ಅಯೋಧ್ಯೆಯ ಅರಸನಾಗಿದ್ದ. ಅಷ್ಟೇ ಅಲ್ಲ ಉಳಿದ ೨೩ ತೀರ್ಥಂಕರರು ಅರಸುಕುಮಾರರೆ. ಸಾಂದರ್ಭಿಕ ಕಾರಣಗಳಿಂದ ೨೪ ಅರಸರು ಸನ್ಯಾಸದತ್ತ ಮುಖಮಾಡಿ ಶ್ರಾವಕರಿಗೆ ಸನ್ಮಾರ್ಗಪಥವನ್ನು ಬೋಧಿಸುತ್ತ ಮೋಕ್ಷದ ಸಾಧನೆಗೈದು ತೀರ್ಥಂಕರರಾದರು. ಇವರ ಹಿಂದೆಯೇ ಜೈನಧರ್ಮ ಇತ್ತು ಎಂಬುದು ಜನಪದರ ನಂಬಿಕೆ. ವೃಷಭಾದಿಯಾಗಿ ಮಹಾವೀರ ೨೪ ತೀರ್ಥಂಕರುಗಳು[1] ಅಲ್ಲದೆ ಇವರ ಹಿಂದೆಯೇ ಭೂತಕಾಲದ ೨೪ ತೀರ್ಥಂಕರುಗಳು ಇದ್ದರು[2]. ಇವರೂ ಕೂಡಾ ಅರಸು ಮನೆತನಕ್ಕೆ ಸೇರಿದವರು.

ಜೈನ ಧರ್ಮದ ಪ್ರಥಮ ಪ್ರವರ್ತಕ ಋಷಭದೇವ. ಜೈನ ಆಗಮಗಳು ಈ ವಿಚಾರವನ್ನು ಪುಷ್ಟೀಕರಿಸುತ್ತವೆ. ಶ್ರೀಮದ್ಭಾಗವತದ ಐದನೆಯ ಸ್ಕಂದದ ಎರಡು ಮತ್ತು ಆರನೆಯ ಅಧ್ಯಾಯಗಳಲ್ಲಿ ಋಷಭಾವತಾರದ ಬಗ್ಗೆ ಮತ್ತು ಋಷಭದೇವನು ಜೈನಧರ್ಮದ ಉಪದೇಶ ಮಾಡಿದ ಬಗ್ಗೆ ಉಲ್ಲೇಖಗಳಿವೆ. ಇಲ್ಲಿ ಋಷಭದೇವನ ಹುಟ್ಟು, ಸಂಸಾರ, ಭರತನ ಉಲ್ಲೇಖ, ಋಷಭನಾಥನ ಸನ್ಯಾಸ, ಶರೀರ 'ಅಸತ್' ಎಂಬ ಭಾವನೆ. ಏಕವ್ಯಕ್ತಿಯಾಗಿ ವಿಹಾರ, ದೇಹತ್ಯಾಗದ ವಿಷಯಗಳು ಬಂದಿವೆ. ಮುಂದೆ ಭಾಗವತನು ಹೀಗೆ ಹೇಳುತ್ತಾನೆ. "ಈ ಋಷಭದೇವನ ಚರಿತ್ರೆಯನ್ನು ಕೇಳಿ ಕೊಂಕ ವೆಂಕ ಕುಟಕ ದೇಶದ ರಾಜನಾದ 'ಅರ್ಹನ್'ನು ಅವನ ಉಪದೇಶವನ್ನೇ ಸ್ವೀಕರಿಸಿ ಕಲಿಯುಗದಲ್ಲಿ ಯಾವಾಗ ಅಧರ್ಮವು ಹೆಚ್ಚಾಗುವುದೋ ಆಗ ಸ್ವಧರ್ಮವನ್ನು ಬಿಟ್ಟು, ಕುಪಥ ಪಾಖಂಡ (ಜೈನಧರ್ಮ)ವನ್ನು ಪ್ರವರ್ತಿಸುವನು. ಕೀಳುಮನುಷ್ಯರು ಮಾಯೆಗೆ ಮೋಹಿಸಿ, ಶೌಚಾಚಾರವನ್ನು ತ್ಯಜಿಸಿ, ಈಶ್ವರನನ್ನು ಅಪಮಾನಗೊಳಿಸುವ ವ್ರತಗಳನ್ನು ಧಾರಣ ಮಾಡುವರು. ಇವರು ಸ್ನಾನ ಆಚಮನಗಳನ್ನು ಬಿಡುವರು; ಬ್ರಹ್ಮ, ಬ್ರಾಹ್ಮಣ, ಯಜ್ಞಗಳ ನಿಂದಕರಾಗುವರು. ವೇದ ವಿರುದ್ಧ ಆಚರಣವಿಟ್ಟುಕೊಂಡು ನರಕದಲ್ಲಿ ಬೀಳುವರು. ಈ ಋಷಭಾವತಾರವು ರಜೋಗುಣದಿಂದ ವ್ಯಾಪಿಸಿದ ಮನುಷ್ಯರಿಗೆ ಮೋಕ್ಷ ಮಾರ್ಗದ ಶಿಕ್ಷಣ ಕೊಡುವುದಕ್ಕಾಗಿ ಆಗಿದೆ"[3]. ಈ ವಿಚಾರ ಧಾರ್ಮಿಕ ವಿರೋದವಾಗಿದ್ದು ಆ ಕಾಲಕ್ಕೆ ಜೈನ ಧರ್ಮದ ಪ್ರಭಾವದ ವ್ಯಾಪಕತೆಗೆ ಅಡ್ಡಿಪಡಿಸುವ ಅಂಶಗಳು ಇಲ್ಲಿ ಎದ್ದು ಕಾಣುತ್ತವೆ. ಇಲ್ಲಿ ಬರುವ 'ಅರ್ಹತ್' ಎಂಬುದು ಜೈನಧರ್ಮ ಅಥವಾ ಜಿನಧರ್ಮದ ಮೊದಲ ರೂಪ. ಅರಹಂತ, ಅರ್ಹತ್, ಜಿನ ಎಂಬ ಪದಗಳು ತೀರ್ಥಂಕರರು ಕೇವಲ ಜ್ಞಾನವನ್ನು ಮಾಡಿಕೊಂಡ ಮೇಲೆ ಬರುವಂತಹವು. ತೀರ್ಥಂಕರ ಕೇವಲ ಜ್ಞಾನ ಪಡೆದುಕೊಂಡ ನಂತರ 'ಜಿನ'ನಾಗುತ್ತಾನೆ. ಅವನು ಬೋಧಿಸಿದ ಧರ್ಮಕ್ಕೆ 'ಜಿನಧರ್ಮ', 'ಅರ್ಹತ್ ಧರ್ಮ' ಎಂಬುದು ಬಂದಿರಲಿಕ್ಕೆ ಸಾಧ್ಯತೆ ಇದೆ. ಇಲ್ಲಿ ಒಂದಂತೂ ಸ್ಪಷ್ಟ

ಶ್ರೀಮದ್ಭಗವದ್ಗೀತೆ ಹುಟ್ಟುವ ಮೊದಲೆ ಋಷಭಮತ (ಜಿನಮತ) ಇತ್ತೆಂಬುದು. ಋಷಭ ಎಂದರೆ ಎತ್ತು, ಇದು ಆದಿನಾಥನ ಲಾಂಛನ[೪]. ಆದ್ದರಿಂದ ಆದಿನಾಥನಿಗೆ ಋಷಭನಾಥ ಎಂಬ ಪರ್ಯಾಯ ನಾಮವೂ ಇದೆ.

ಜೈನ ಧರ್ಮದ ಪ್ರವರ್ತಕನಾದ ಆದಿನಾಥನಿಂದಲೇ ಜೈನರು ಆಡಳಿತ ಮಹಾಮಾರ್ಗವನ್ನು ಕಂಡುಕೊಂಡರು. ಇದು ಉಳಿದ ೨೩ ತೀರ್ಥಂಕರರಿಗೂ ಪ್ರವಹಿಸಿತು. ಆದರೆ ಇವರೆಲ್ಲರೂ 'ಆನೆ ನಡುದುದೆ ಮಾರ್ಗ' ಎಂಬಂತೆ ಋಷಭನಾಥನ ಪಥವನ್ನೆ ಹಿಡಿದು ರಾಜ್ಯಭಾರವನ್ನು ತ್ಯಜಿಸಿ, ಆಡಳಿತದಿಂದ ವಿಮುಖರಾಗಿ, ಧರ್ಮೋತ್ಥಾನದ ಮಾರ್ಗ ಹಿಡಿದು ಕೇವಲ ಜ್ಞಾನವನ್ನು ಕಂಡುಕೊಂಡರು. ತದನಂತರ ಬಂದ ಜೈನ ರಾಜ, ಮಹಾರಾಜರು, ಸಾಮಂತ ದಂಡಾಧಿಪತಿಗಳು, ನಾಳ್ಗಾವುಂಡ–ಗಾವುಂಡರುಗಳಲ್ಲಿ ಕೆಲವರು ತಮಗೆ ಬಂದ ಅಧಿಕಾರವನ್ನು ನಿಷ್ಕಾಮದಿಂದ ನಿರ್ವಹಿಸಿ, ಕೊನೆಗೆ ಸಲ್ಲೇಖನದಂತಹ ಮಹಾನ್ ವ್ರತವನ್ನು ಕೈಗೊಂಡು ಮೋಕ್ಷದತ್ತ ಮುಖಮಾಡುತ್ತಾರೆ.

ಪ್ರಾರಂಭದಿಂದಲೂ ಕ್ಷಾತ್ರತ್ವದ ತೇಜಸ್ಸು ಇರುವ ಜೈನರು ಆಡಳಿತದಲ್ಲಿ ನೈಪುಣ್ಯರು. ಕರ್ನಾಟಕದ ಆಡಳಿತದಲ್ಲಿ ಇವರ ಪಾತ್ರ ಗಣನೀಯವಾದದ್ದು. ಪ್ರಸ್ತುತ ಅಧ್ಯಾಯವೂ ಕರ್ನಾಟಕದ ಆಡಳಿತದಲ್ಲಿ ಜೈನರ ಪಾತ್ರವನ್ನು ಕುರಿತದ್ದಾಗಿದೆ. ಪ್ರಾಚೀನ ಕರ್ನಾಟಕದಿಂದ, ವಿಜಯನಗರ ಸಾಮ್ರಾಜ್ಯದವರೆಗೆ ಜೈನ ಆಡಳಿತದ, ಮತ್ತು ಧರ್ಮದ ಏಳಿಗೆಗಳನ್ನು ಇಲ್ಲಿ ಅಭ್ಯಸಿಸಲಾಗಿದೆ.

### ೨.೧ ಕರ್ನಾಟಕದಲ್ಲಿ ಜೈನಧರ್ಮ ಮತ್ತು ಜೈನ ಆಡಳಿತಗಾರರು

ಕ್ರಿ.ಪೂ ೩ನೇ ಶತಮಾನದಲ್ಲಿ ಶ್ರುತವಲಿ, ಭದ್ರಬಾಹು ಮುನಿಗಳು ಉತ್ತರ ಭಾರತದಲ್ಲಿ ೧೨ ವರ್ಷಗಳ ಕಾಲ ಭೀಕರ ಬರಗಾಲ (ಕ್ಷಾಮ) ಆವರಿಸುತ್ತದೆ. ಎಂಬ ವಿಷಯವನ್ನು ತಮ್ಮ ದಿವ್ಯಜ್ಞಾನದಿಂದ ತಿಳಿದರು. ಜೈನಧರ್ಮದ ಪ್ರಚಾರ ಮತ್ತು ಉಳಿಯುವಿಕೆಗಾಗಿ ಭದ್ರಬಾಹು ಮುನಿಗಳು ಅಪಾರ ಪ್ರಮಾಣದ ಮುನಿಗಳನ್ನು ದಕ್ಷಿಣದತ್ತ ಕರೆತಂದರು. ಇವರ ಜೊತೆಗೆ ಮೌರ್ಯ ಸಾಮ್ರಾಟ ಚಂದ್ರಗುಪ್ತ ಮೌರ್ಯನು ಬಂದನು. ಇವನು ಚಂದ್ರಗುಪ್ತ ಅಲ್ಲ ಅವನ ಮೊಮ್ಮಗ ಸಂಪ್ರತಿ ಚಂದ್ರಗುಪ್ತ ಎಂಬ ವಾದಗಳಿವೆ.[೫] ಹೀಗೆ ಬಂದ ಚಂದ್ರಗುಪ್ತ ಮತ್ತು ಭದ್ರಬಾಹು ಮುನಿಗಳು ಕರ್ನಾಟಕವನ್ನು 'ಕಳ್ವಪ್ಪು' [ಕಟವಪ್ರ (ಈಗಿನ ಚಂದ್ರಗಿರಿ)] ಎಂಬ ಬೆಟ್ಟದಲ್ಲಿ ನೆಲೆನಿಂತು ಅಲ್ಲಿಯೇ ಸಲ್ಲೇಖನ ತೆಗೆದುಕೊಂಡು ಮೋಕ್ಷವನ್ನು ಹೊಂದಿದರು ಎಂಬುದು ಜನಪದರ ನಂಬಿಕೆ. ಈ ವಿಷಯ ಸಂಬಂಧಿ ಶಾಸನ ಆಧಾರಗಳೂ ಲಭ್ಯವಾಗುತ್ತವೆ.[೬] ಈಗಲೂ ಭದ್ರಬಾಹು ಗುಹೆ ಶ್ರವಣಬೆಳಗೊಳದ ಚಂದ್ರಗಿರಿಯಲ್ಲಿದೆ.

ಭದ್ರಬಾಹು ಮುನಿಯು ಅಪಾರ ಪ್ರಮಾಣದ ಮುನಿಸಂಘವನ್ನು ದಕ್ಷಿಣ ಭಾರತದತ್ತ ಕರೆದುಕೊಂಡು ಬರುವ ಮೊದಲೇ ಇಲ್ಲಿ ಜೈನಧರ್ಮ ನೆಲೆನಿಂತಿತ್ತು.[೭] ಪ್ರಾಯಶಃ ವಿಸ್ತಾರ

ಕಡಿಮೆಯಾಗಿದ್ದಿರಬಹುದು. ಭದ್ರಬಾಹು ಮುನಿಯು ಬಂದಮೇಲೆ ಜೈನಧರ್ಮದ ರೆಂಬೆಕೊಂಬೆಗಳು ವಿಸ್ತಾರವಾಗಿ ಹರಡಿಕೊಂಡಂತೆ ತೋರುತ್ತವೆ. ಭದ್ರಬಾಹು ಮುನಿಗಳಿಂದಲೇ ಮಾತ್ರ ಜೈನಧರ್ಮ ಕರ್ನಾಟಕದ ಉದ್ದಕ್ಕೂ ಬೆಳೆಯಿತು ಎಂಬುದು ಅತಿಶಯವಾದಿತು. ಅದು ಪ್ರಾರಂಭವಷ್ಟೆ. ನಿಜವಾಗಲು ಜೈನಧರ್ಮ ತನ್ನ ವಿಸ್ತಾರವನ್ನು ಹೆಚ್ಚಿಸಿಕೊಂಡಿದ್ದು ಕರ್ನಾಟಕ ಅರಸು ಮನೆತನಗಳು, ಮತ್ತು ಜೈನ ಆಡಳಿತಗಾರರಿಂದ. ಇದಕ್ಕೆ ಅನೇಕ ಮುನಿಸಂಘಗಳ ಗಣ, ಗಚ್ಛ, ಅನ್ವಯ, ಬಳಿಗಳ[೮] ಶ್ರಮವೂ ಇದೆ. ಇವುಗಳಲ್ಲಿ ಅರಸು ಮನೆತನಗಳ ಪಾತ್ರದೊಡ್ಡದು. ಈ ಸಂಬಂಧಿಯಾಗಿ ಅರಸೊತ್ತಿಗೆಯಲ್ಲಿ ಜೈನಧರ್ಮ ಮತ್ತು ಆಡಳಿತಗಾರರು ಸಂಕ್ಷಿಪ್ತ ಅಧ್ಯಯನ ಅತಿ ಅವಶ್ಯ.

**ಕದಂಬರು (ಕ್ರಿಶ ೩ನೇ ಶತಮಾನದಿಂದ ೧೧ನೇ ಶತಮಾನದವರೆಗೆ)**

ಕರ್ನಾಟಕದ ಮೊದಲ ಅರಸು ಮನೆತನ ಕದಂಬರದ್ದು. ಇವರು ಬನವಾಸಿಯನ್ನು ರಾಜಧಾನಿಯನ್ನಾಗಿ ಮಾಡಿಕೊಂಡು ರಾಜ್ಯಭಾರ ನಡೆಸಿದರು. ಕದಂಬರು ಜೈನೇತರರಾದರೂ ಜೈನಧರ್ಮಕ್ಕೆ ಕೊಟ್ಟ ಕೊಡುಗೆ ಅಪಾರ. ಅಂತೆಯೇ ಬಸದಿಗಳ ನಿರ್ಮಾಣ ದಾನ-ದತ್ತಿಗಳು ಸಾಕ್ಷಿಯಾಗಿ ನಿಲ್ಲುತ್ತವೆ. ರಾಜ್ಯಾಡಳಿತದಲ್ಲಿ ಜೈನರಿಗೆ ಪ್ರಾಶಸ್ತ್ಯ ಕೊಟ್ಟ ಕೀರ್ತಿಯೂ ಕದಂಬರಿಗೆ ಸಲ್ಲುತ್ತದೆ. 'ಶೃತಕೀರ್ತಿ' ಎಂಬುವನನ್ನು ಕಾಕುಸ್ಥವರ್ಮ (ಕ್ರಿ.ಶ.೪೩೫-೪೫೫) ತನ್ನ ಸೇನಾಪತಿಯನ್ನಾಗಿ ಮಾಡಿದ್ದ. ಶೃತಕೀರ್ತಿ ಕರ್ನಾಟಕದ ಮೊಟ್ಟ ಮೊದಲ ಜೈನ ಆಡಳಿತಗಾರ. ದಕ್ಷ, ವೀರ ಸೇನಾನಿ ಶೃತಕೀರ್ತಿ. "ಯಾವುದೋ ಒಂದು ಭಯಂಕರವಾದ ಯುದ್ಧದಲ್ಲಿ ಕಾಕುಸ್ಥವರ್ಮನನ್ನು ಶೃತಕೀರ್ತಿ ಎಂಬ ಜೈನ ಸೇನಾಪತಿಯು ಕಾಪಾಡಿದ ಸಲುವಾಗಿ ಅವನಿಗೆ ಹಲಸಿಯ ಖೇಟ ಗ್ರಾಮವನ್ನು ದಾನವಾಗಿ ಕಾಕುಸ್ಥವರ್ಮ ನೀಡಿದ."[೯] ಇವನು ನಿಷ್ಪಕ್ಷಪಾತವಾಗಿ ರಾಜ್ಯಭಾರ ನಡೆಸಿದನೆಂದು ಹಿಂದುಗಳ ಮತ್ತು ಜೈನರ ಸಾಹಿತ್ಯಗಳಿಗೂ ಮತಗಳಿಗೂ ಸರ್ವಸಮನಾಗಿ ಆಶ್ರಯ ನೀಡಿದನೆಂದು ಕೀರ್ತಿ ಪಡೆದಿದ್ದಾನೆ.

ಮೃಗೇಶವರ್ಮ (ಕ್ರಿ.ಶ.೪೭೦-೪೮೦) ತನ್ನ ತಂದೆಯಾದ ಶಾಂತಿವರ್ಮ (ಕ್ರಿ.ಶ.೪೫೫-೪೭೦)ನ ನೆನಪಿಗಾಗಿ ಹಲಸಿಯಲ್ಲಿ ಒಂದು ಜಿನಾಲಯವನ್ನು ಕಟ್ಟಿಸಿದ. ಮೃಗೇಶವರ್ಮನ ಮಗ ರವಿವರ್ಮ (ಕ್ರಿ.ಶ.೪೮೦-೫೧೯), ಇವನ ತಮ್ಮ ಭಾನುವರ್ಮ ಇವರೆಲ್ಲ ಹಲಸಿಗೆಯಲ್ಲಿ ಜಿನಾಲಯಗಳನ್ನು ಕಟ್ಟಿಸಿದ ಬಗ್ಗೆ, ಇವುಗಳ ಪೂಜೆಯ ಸಲುವಾಗಿ ಹಲವಾರು ದತ್ತಿಗಳನ್ನು ಬಿಟ್ಟ ಬಗ್ಗೆ ತಾಮ್ರ ಶಾಸನದ ಉಲ್ಲೇಖ ಸಿಗುತ್ತವೆ.[೧೦] ಈ ಕಾರಣದಿಂದಲೇ ಇಂದಿಗೂ ಈ ಭಾಗದಲ್ಲಿ ಜೈನಧರ್ಮಿಯರು ಉಳಿದುಕೊಂಡು ಬಂದಿದ್ದಾರೆ. ಹಲಸಿಗೆಯ ಬಸದಿಗೆ ಇಷ್ಟೊಂದು ಪ್ರಮಾಣದ ದಾನ-ದತ್ತಿಗಳು ಕದಂಬರಿಂದ ಬಂದವೆಂದರೆ ಇವರು ಜೈನರೇ ಎಂಬ ಅನುಮಾನ ಬರದೇ ಇರದು. ಬಹುಶ: ಕಾಕುಸ್ಥವರ್ಮನ ಜೀವರಕ್ಷಣೆ ಮಾಡಿದ ಫಲವಾಗಿ ಶೃತಿಕೀರ್ತಿಗೆ ಸಂದ ಗೌರವ ಇದಾಗಿರಬಹುದು. ಈ ಕಾರಣಕ್ಕಾಗಿಯೇ ಕದಂಬರಿಗೆ ಜೈನಧರ್ಮದ ಮೇಲೆ ಗೌರವ ಹೆಚ್ಚಾಗಿರಬಹುದು. ಅಂತೆಯೇ ಮೃಗೇಶವರ್ಮನ

ಮಗ ರವಿವರ್ಮ 'ಗುಡ್ಡತಟಾಕ' (ಗುಡ್ನಾಪುರ) ಎಂಬಲ್ಲಿ 'ಕಾಮಜಿನಾಲಯ'ವೊಂದನ್ನು ನಿರ್ಮಿಸಿದ ಜೈನರಲ್ಲಿ ಕಾಮನ ಸ್ಥಾನ ಬಾಹುಬಲಿಗಿದೆ. ಬಾಹುಬಲಿಗೆ ಜಿನಾಲಯವೊಂದನ್ನು ಕಟ್ಟಿಸಿದ ಕೀರ್ತಿ ರವಿವರ್ಮನಿಗೆ ಬಂತು. ಕರ್ನಾಟಕದ ಮೊಟ್ಟಮೊದಲ ಬಾಹುಬಲಿ ಬಸದಿ ಇದು.[೧೧]

ಕದಂಬರು ಜೈನಧರ್ಮಕ್ಕೆ ಪ್ರೋತ್ಸಾಹ, ದಾನ-ದತ್ತಿಗಳನ್ನು ಕೊಟ್ಟು ಬಸದಿಗಳನ್ನು ನಿರ್ಮಿಸುವುದರ ಜೊತೆಗೆ ಜೈನರನ್ನು ವಿಶ್ವಾಸಕ್ಕೆ ತೆಗೆದುಕೊಂಡು ಆಡಳಿತದಲ್ಲಿ ಅವರನ್ನು ತೊಡಗಿಸಿಕೊಂಡರು. ಅದಕ್ಕೆ ಉದಾಹರಣೆ ಶೃತಕೀರ್ತಿ ಎಂಬ ಕದಂಬ ದಂಡನಾಯಕ. ಇವನು ಕರ್ನಾಟಕದಲ್ಲಿ ಜೈನ ಮೊದಲ ಆಡಳಿತಗಾರ.

## ಗಂಗರು (ಕ್ರಿ.ಶ. ೩೫೦ ರಿಂದ ೯೯೯ರವರೆಗೆ)

ಕರ್ನಾಟಕದ ಉತ್ತರದಲ್ಲಿ ಕದಂಬರು ಆಳ್ವಿಕೆ ನಡೆಸುತ್ತಾ ಪ್ರಾಬಲ್ಯಕ್ಕೆ ಬಂದರು. ಇವರ ಸಮಕಾಲೀನದಲ್ಲಿಯೇ ದಕ್ಷಿಣದಲ್ಲಿ ಗಂಗರು ತಲೆ ಎತ್ತಿದರು. ಐತಿಹ್ಯಗಳು ಮತ್ತು ಶಾಸನಗಳ ಹೇಳಿಕೆಯಂತೆ 'ದಡಿಗ' ಮತ್ತು 'ಮಾಧವ'ರೆಂಬ ಸೋದರರಿಬ್ಬರು ಜೈನಗುರು ಸಿಂಹನಂದಿಯಿಂದ ದೈವದತ್ತವಾದ ಖಡ್ಗವೊಂದನ್ನು ಪಡೆದರು. ಮಾಧವನು ಆ ಖಡ್ಗದಿಂದ ಕಲ್ಲಕಂಬವೊಂದನ್ನು ಕತ್ತರಿಸಲು[೧೨] ಜೈನಮುನಿಯು ಆತನನ್ನು ಒಬ್ಬ ರಾಜನೆಂದು ಪಟ್ಟ ಕಟ್ಟಿದನು. ಮಾಧವನಿಗೆ ಕೊಂಗಣಿ ಅರಸ ಎಂದೂ ಹೆಸರಿತ್ತು. ಈ ಕತೆಯಿಂದ ಗಂಗರು ಜೈನರೇ ಎಂಬುದು ನಿರ್ವಿವಾದ. ಜನರ ಬಾಯಲ್ಲಿ ಹರಿದಾಡುವ ಐತಿಹ್ಯವೇ ಒಂದು ಕಾಲಕ್ಕೆ ಅಕ್ಷರ ರೂಪದಲ್ಲಿ ದಾಖಲಿತವಾಗಿರುತ್ತದೆ. ರಾಮಾಯಣ, ಮಹಾಭಾರತಗಳು ಇದಕ್ಕೆ ಹೊರತಾಗಿಲ್ಲ. ಮೇಲಿನ ಐತಿಹ್ಯ ಆಧಾರಿತ, ಶಾಸನ ಆಧಾರಿತ ಕತೆ ಗಂಗರು ಜೈನರೆಂದು ಸಾರುತ್ತದೆ. ಡಾ॥ ಸೂರ್ಯನಾಥ ಕಾಮತ್‌ರವರು ಗಂಗರು ಮೂಲತಃ ಜೈನರಲ್ಲ ವೈದಿಕರಾಗಿದ್ದು ಕಾಲಕ್ರಮದಲ್ಲಿ ಜೈನರಾದರು ಎಂದಿದ್ದಾರೆ.[೧೩] ಇಲ್ಲಿ ಗಮನಿಸಬೇಕಾದ ವಿಚಾರ ಗಂಗರು ಮೂಲದಲ್ಲಿ ಏನೇ ಇರಲಿ ಜೈನರಾಗಿದ್ದಂತೂ ದಿಟ ಎಂಬುದು. ಜೈನಧರ್ಮದ ತಳಹದಿಯಲ್ಲಿ ರಾಜ್ಯಕಟ್ಟಿದ ಗಂಗರು ಕ್ರಿ.ಶ. ೩೫೦ ರಿಂದ ಕ್ರಿ.ಶ. ೯೯೯ರವರೆಗೆ ೬೫೦ ವರ್ಷಗಳ ಕಾಲ ಸುದೀರ್ಘ ಆಡಳಿತ ನಡೆಸಿದರು. ಇವರ ರಾಜ್ಯ ಗಂಗವಾಡಿ ೯೬೦೦೦ ಎಂದೇ ಪ್ರಸಿದ್ಧಿಯನ್ನು ಪಡೆದಿತ್ತು.

ಕೊಂಗಣಿವರ್ಮ, ಮಾಧವ, ಹರಿವರ್ಮ, ಅವನೀತ, ದುರ್ವಿನೀತ, ಮುಷ್ಕರ, ಎರಡನೇ ಮಾರಸಿಂಹ, ನೀತಿಮಾರ್ಗ ಪೆರ್ಮಾನಡಿ ಈ ಮನೆತನದ ಪ್ರಮುಖ ಜೈನ ಅರಸರು. ಇವರಲ್ಲಿ ಎರಡನೆಯ ಮಾರಸಿಂಹ ಜೈನ ಸಿದ್ಧಾಂತದ ಪ್ರಕಾರ ಕ್ರಿ.ಶ. ೯೭೫ರಲ್ಲಿ ಬಂಕಾಪುರದಲ್ಲಿದ್ದ ಅಜೀತಸೇನಾಚಾರ್ಯರಿಂದ ಸಲ್ಲೇಖನ ದೀಕ್ಷೆ ತೆಗೆದುಕೊಂಡು ಸಮಾಧಿ ಮರಣ ಹೊಂದಿದ. ಈ ವಿಚಾರವನ್ನು ಶ್ರವಣಬೆಳಗೊಳದ ಶಾಸನವೊಂದು ದಾಖಲಿಸುತ್ತದೆ.[೧೪] ಚಿಕ್ಕಬೆಟ್ಟ, ಚಂದ್ರಗಿರಿ ಬೆಟ್ಟ ಎಂದು ಕರೆಯಲ್ಪಡುವ ಶ್ರವಣಬೆಳಗೊಳದ 'ಕಳ್ವಪ್ಪು'ವಿನ ಮೇಲಿನ ಪ್ರವೇಶದ್ವಾರದ ತುಸು ಪಕ್ಕಕ್ಕೆ

ಮಾರಸಿಂಹನ ಕಂಭ ನಿಸಿಧಿಯನ್ನು ನಿಲ್ಲಿಸಲಾಗಿದೆ. ಇದಕ್ಕೆ ಕೂಗೆಬ್ರಹ್ಮದೇವರ ಕಂಭ ಎಂದು ಕರೆಯಲಾಗುತ್ತದೆ. ಮಾರಸಿಂಹ ಜೈನ ಮಹಾಧರ್ಮಿಯಾಗಿದ್ದನು ಎಂಬುದಕ್ಕೆ ತಾನು ತೆಗೆದುಕೊಂಡ ಸಲ್ಲೇಖನವೇ ಸಾಕ್ಷಿಯಾಗಿ ನಿಲ್ಲುತ್ತದೆ.

ಗಂಗರ ಕಾಲದಲ್ಲಿ ವಿಜಯಕೀರ್ತಿ, ಪೂಜ್ಯಪಾದ, ವಕ್ರಗ್ರೀವ, ಪುಷ್ಪದಂತ, ಅಜೀತಸೇನ ಮುಂತಾದ ಪ್ರಸಿದ್ಧ ಜೈನಮುನಿಗಳಿದ್ದರು. ಮಣ್ಣೆ, ಶ್ರವಣಬೆಳಗೊಳ, ಕಂಬದಹಳ್ಳಿ, ಪುಲಿಗೆರೆ (ಮೊಕ್ಕರ ಬಸದಿ) ಮುಂತಾದ ಕಡೆಗಳಲ್ಲಿ ಬಸದಿ ಮತ್ತು ಸ್ಮಾರಕಗಳನ್ನು ಗಂಗರು ನಿರ್ಮಿಸಿದರು. ಇತ್ತೀಚಿಗೆ ತಲಕಾಡಿನಲ್ಲಿ ಇವರ ಬಸದಿಯೊಂದು ದೊರೆತಿದೆ.[೧೫]

ಹಿಂದಿನ ರಾಜಸತ್ತೆಗಳು ಬೌದ್ಧಧರ್ಮಕ್ಕೆ ನೀಡಿದ್ದ ಪ್ರಾಶಸ್ತ್ಯವನ್ನು ಗಂಗರ ಕಾಲದಲ್ಲಿ ಜೈನಧರ್ಮಕ್ಕೂ ನೀಡಲಾಗಿತ್ತು. ಅಲ್ಲದೇ ಎಲ್ಲ ಧರ್ಮಗಳ ಸಮನ್ವಯತೆ, ವಾಸ್ತು ಶಿಲ್ಪಗಳಿಗೆ ಪ್ರೋತ್ಸಾಹ ಕನ್ನಡಿಗರನ್ನು ನಿಖರವಾಗಿ, ಶಾಶ್ವತವಾಗಿ ಗುರುತಿಸುವಂತೆ ಮಾಡಿತು. ಅದರಲ್ಲೂ ಶ್ರವಣಬೆಳಗೊಳದ ಗೋಮಟೇಶ್ವರನ ಏಕಶಿಲಾಮೂರ್ತಿ ಕೇವಲ ಜೈನ ಕೇಂದ್ರವಾಗಿಯಷ್ಟೇ ಅಲ್ಲದೇ ನಾಡನ್ನು, ಕನ್ನಡಿಗರನ್ನು ವಿಶ್ವವಿಖ್ಯಾತಿಗೆ ಪಾತ್ರರಾಗುವಂತೆ ಮಾಡಿದ್ದು ಗಮನಾರ್ಹ.[೧೬] ಈ ಸಾಧನೆಯ ಯಶಸ್ಸು ತಂದು ಕೊಟ್ಟವನು ಗಂಗರ ವೀರಸೇನಾನಿ, ಜಿನಧರ್ಮ ಪ್ರತಿಪಾಲಕ ಚಾವುಂಡರಾಯ.

ಗಂಗರು ಎಂಬ ಸ್ವತಂತ್ರ ಜೈನ ರಾಜಮನೆತನವೊಂದು ಅಸ್ಥಿತ್ವಕ್ಕೆ ಬರುವುದರ ಮೂಲಕ ಜೈನರಿಗೆ, ಜಿನಮುನಿಗಳಿಗೆ, ಕವಿಗಳಿಗೆ, ಶ್ರಾವಕರಿಗೆ ಹೆಚ್ಚಿನ ಪ್ರಾಶಸ್ತ್ಯ ಬಂತು. ಜೊತೆಗೆ ಜೈನರಿಗೆ ಆಡಳಿತದಲ್ಲಿ, ಸಾಹಿತ್ಯ, ಸಾಂಸ್ಕೃತಿಕ ಚಟುವಟಿಕೆಗಳಲ್ಲಿ ಹೊಸಮಾರ್ಗಗಳು, ವಿಪುಲವಾದ ಅವಕಾಶಗಳು ತೆರೆದುಕೊಂಡದ್ದಂತು ಸತ್ಯ.

## ಬಾದಾಮಿಯ ಚಾಲುಕ್ಯರು (ಕ್ರಿ.ಶ. ೫೦೦ ರಿಂದ ೭೫೭ ರವರೆಗೆ)

ಪ್ರಾರಂಭದಲ್ಲಿ ವೈದಿಕ, ಒಂದನೇ ವಿಕ್ರಮಾದಿತ್ಯನ ಕಾಲದಲ್ಲಿ ಶೈವ ಮತಾವಲಂಬಿಗಳಾದ ಬಾದಾಮಿ ಚಾಲುಕ್ಯರು ಜೈನ ಧರ್ಮಕ್ಕೆ ಪ್ರೋತ್ಸಾಹವಿತ್ತರು. ಇವರ ಕಾಲದ ಜೈನ ಸೇನಾನಿ 'ರವಿಕೀರ್ತಿ'. ಇವನು ಪುಲಿಕೇಶಿಯ ಆಸ್ಥಾನದ ಕವಿಯೂ ಆಗಿದ್ದ. ಶಾಸನಕವಿಯಾದ ರವಿಕೀರ್ತಿಯೂ ಐಹೊಳೆಯ ಮೇಲ್ಗುಡಿ (ಮೇಗುತಿ) ಜಿನಾಲಯವನ್ನು ಕಟ್ಟಿಸಿದ. ಇಡೀ ಐಹೊಳೆಯಲ್ಲಿಯೇ ಇದು ದೊಡ್ಡ ದೇವಾಲಯ. 'ಚಾಳುಕ್ಯ ರಾಜಕುಮಾರಿ ಕುಂಕುಮದೇವಿ ಜೈನಳಾಗಿದ್ದಳು'.[೧೭] ಇದೇ ಮನೆತನದ ಆರನೇ ವಿಕ್ರಮಾದಿತ್ಯನ ರಾಣಿ ಮತ್ತು ಕದಂಬ ಅರಸುಮನೆತನದ ಹೆಣ್ಣು ಚಾಕಲದೇವಿಯು ಅನೇಕ ಜಿನಾಲಯಗಳನ್ನು ನಿರ್ಮಾಣ ಮಾಡಿದ ಉದಾಹರಣೆಗಳಿವೆ. ಬಾದಾಮಿ ಚಾಲುಕ್ಯರು ಜೈನರಿಗೆ ಕೊಟ್ಟ ದೊಡ್ಡ ಕೊಡುಗೆ ಎಂದರೆ ಬಾದಾಮಿಯಲ್ಲಿ ನಿರ್ಮಿಸಿದ ಗುಹಾಂತರ ದೇವಾಲಯಗಳಲ್ಲಿ ಜೈನ ಧರ್ಮಕ್ಕೂ ಸ್ಥಾನ ಕೊಟ್ಟಿರುವುದು. ಈ ರೀತಿ ಗುಹೆಗಳು ಐಹೊಳೆಯಲ್ಲೂ ಇವೆ. ಪಂಪನಿಗೆ ಆಶ್ರಯ ಕೊಟ್ಟು

ಅಮೂಲ್ಯ ಕೃತಿಗಳಾದ 'ಆದಿಪುರಾಣ', 'ವಿಕ್ರಮಾರ್ಜುನ ವಿಜಯ' ಹೊರತರುವಲ್ಲಿ ಬಾದಾಮಿ ಚಾಲುಕ್ಯರ ಪಾತ್ರ ಮನನೀಯ. ಇವರ ಕಾಲದಲ್ಲಿ ಪುಲಿಗೆರೆ ಒಂದು ದೊಡ್ಡ ಜೈನ ಕೇಂದ್ರವಾಗಿತ್ತು.

**ರಾಷ್ಟ್ರಕೂಟರು (ಕ್ರಿ.ಶ. ೮ನೇ ಶತಮಾನದಿಂದ ೧೦ನೇ ಶತಮಾನ)**

ಗಂಗರ ನಂತರ ಜೈನಧರ್ಮಕ್ಕೆ ಮತ್ತಷ್ಟು ಪ್ರೋತ್ಸಾಹ ಕೊಟ್ಟವರು ರಾಷ್ಟ್ರಕೂಟರು. "ಸಾಂಸ್ಕೃತಿಕವಾಗಿ ಆಗ ಕರ್ನಾಟಕದಲ್ಲಿ ಜೈನರದ್ದೇ ಉತ್ಕರ್ಷ. ಕನ್ನಡ ಸಂಸ್ಕೃತ ಬರಹಗಾರರಲ್ಲಿ ಹೆಚ್ಚಿನವರು ಜೈನರೇ. ಇದು ಗಂಗ, ರಾಷ್ಟ್ರಕೂಟ, ಹೀಗೆ ಎರಡೂ ಆಸ್ಥಾನಗಳ ಬಗ್ಗೆ ನಿಜ". ಡಾ.ಆಳ್ತೇಕರರು ಊಹೆ ಮಾಡಿದಂತೆ ಕರ್ನಾಟಕದ ಜನಸಂಖ್ಯೆಯಲ್ಲಿ ಆಗ ಶೇಕಡ ೨೦ ರಷ್ಟು ಜೈನರಿದ್ದರು. ಇದಕ್ಕೆ ರಾಷ್ಟ್ರಕೂಟರು ಜೈನ ಧರ್ಮಕ್ಕೆ ಪೋಷಣೆ ನೀಡಿದ್ದು ಪ್ರಮುಖವಾಗುತ್ತದೆ. ಈ ಮನೆತನದ ಕೆಲವು ಅರಸರು ಜೈನಧರ್ಮವನ್ನು ಸ್ವೀಕರಿಸಿದ್ದರು. ಅಮೋಘವರ್ಷ ಇದಕ್ಕೆ ದೊಡ್ಡ ಉದಾಹರಣೆ. ಅಮೋಘವರ್ಷ (ಕ್ರಿ.ಶ. ೮೧೪-೭೮) ಜಿನಸೇನಾಚಾರ್ಯರ ಶಿಷ್ಯ. ದಕ್ಷ ಆಡಳಿತಗಾರ. 'ನೃಪತುಂಗ' 'ಅತಿಶಯಧವಳ' ಮೊದಲಾದವು ಇವನ ಬಿರುದುಗಳು.

'ಕಾವೇರಿಯಿಂದಮಾ ಗೋದಾವರಿ ವರಮಿರ್ದ ನಾಡದಾ ಕನ್ನಡದೊಳ್', ಎಂದು ಕರ್ನಾಟಕದ ಎಲ್ಲೆಯನ್ನು ಗುರುತಿಸಿದ ಶ್ರೀವಿಜಯನ ಕೃತಿ 'ಕವಿರಾಜಮಾರ್ಗ' ಅಮೋಘವರ್ಷನ ಪ್ರೋತ್ಸಾಹದಿಂದಲೇ ರಚನೆಯಾಯಿತು. ಇವನ ಅತಿಶಯಧವಳ ಎಂಬ ಬಿರುದಿನ 'ಧವಳ' ಎಂಬ ಪದವನ್ನು ವೀರಸೇನ ತನ್ನ ಕೃತಿಗೆ ಇಟ್ಟನು. ಧವಲಾ ಎಂಬುದು ಆ ಕೃತಿ. ಇವನ ಶಿಷ್ಯ ಜಿನಸೇನ 'ಜಯಧವಲಾ'ವನ್ನು ಗುಣಭದ್ರ ಉತ್ತರಪುರಾಣವನ್ನು ಬರೆದನು. ಅಮೋಘವರ್ಷ ಕಲಿಯೂ ಹೌದು; ಕವಿಯೂ ಹೌದು. ಇವನು ಚಾಳುಕ್ಯರನ್ನು ಸದೆಬಡಿದು ರಟ್ಟ ಸಾಮ್ರಾಜ್ಯವನ್ನು ರಕ್ಷಿಸಿದ. ಪಲ್ಲವರು ಇವನಜೊತೆ ಸ್ನೇಹದಿಂದ ಇದ್ದರು. ಮಹಾಸೇನಾನಿ ಬಂಕೇಯ ಅಮೋಘವರ್ಷನ ನೆಚ್ಚಿನ ಬಲಗೈ ಬಂಟ. ಅಮೋಘವರ್ಷನಿಗೆ "ಯುದ್ಧ ಕಲೆಗಳಿಗಿಂತ ಶಾಂತಿಯ ವಿಧಾನಗಳ ಬಗ್ಗೆ ಅವನಿಗೆ ಹೆಚ್ಚಿನ ಒಲವಿತ್ತು" ಎಂದು ಡಾ॥ಆಳ್ತೇಕರರು ಹೇಳಿದ್ದಾರೆ.[೧೮] ಮಳಖೇಡ ಎಂಬ ಹೊಸ ರಾಜಧಾನಿ ಕಟ್ಟಿದ್ದು, ರಾಜ್ಯವನ್ನು ೧೯ ಮಂಡಲಗಳನ್ನಾಗಿ ನಿರ್ಮಿಸಿದ್ದು ಅಮೋಘವರ್ಷನ ಸಾಧನೆಗಳು ಹೌದು. ಈತ ಕವಿ ಹೃದಯ ಹೊಂದಿದ ಆಡಳಿತಗಾರ. 'ಪ್ರಶ್ನೋತ್ತರಮಾಲಿಕಾ' ಎಂಬುದು ಇವನು ರಚಿಸಿದ ಕೃತಿ. ಅತ್ಯಂತ ವೈಭವದಿಂದ ಆಳಿದ ಇವನು ತನ್ನ ಜೀವನದ ಕೊನೆಗೆ ಜಿನದೀಕ್ಷೆಯನ್ನು ತಕ್ಕೊಂಡು ಸಮಾಧಿ ಮರಣವನ್ನು ಹೊಂದಿದನು.[೧೯]

"ಅಮೋಘವರ್ಷ ನೃಪತುಂಗ" ಎಂಬ ಹೆಸರು ಕನ್ನಡಿಗರಿಗಷ್ಟೇ ಅಲ್ಲದೇ ಜಗತ್ತಿನ ನಾಲ್ಕು ಸಾಮ್ರಾಟರಲ್ಲಿ ಒಬ್ಬ ಎಂದು ಗುರುತಿಸುವಂತೆ ಮಾಡಿದೆ. ರಾಷ್ಟ್ರಕೂಟರ ಈ ದೊರೆ ಅರಬ್, ಚೀನಾ ಹಾಗೂ ಕಾನ್ಸ್‌ಟೆಂಟಿನೋಪಲ್ ಸಾಮ್ರಾಟರಿಗೆ ನೆಲೆನಿಂತಿದ್ದ ಎಂಬುದನ್ನು

ಅರಬ್ ಪ್ರವಾಸಿ ಸುಲೇಮಾನ್ ದಾಖಲಿಸಿರುವುದು ಗಮನಾರ್ಹ. ರಾಷ್ಟ್ರದ ಅಗ್ರಗಣ್ಯ ಚಕ್ರವರ್ತಿ ಎಂದೇ ಗುರುತಿಸಲಾಗಿದ್ದ ಅಮೋಘವರ್ಷನು ಕನ್ನಡಿಗರ ಕಲೆ, ಸಾಹಿತ್ಯ, ಸಂಸ್ಕೃತಿಗಳ ಪ್ರತೀಕವಾಗಿದ್ದ."[೨೦] ಬಹುಶ: ಜೈನಧರ್ಮ ಕಂಡ ಅತ್ಯಂತ ಬಲಶಾಲಿ, ಸಹೃದಯಿ, ಪರಧರ್ಮ ಸಹಿಷ್ಣು ಅರಸ ಎಂದರೆ ಅಮೋಘವರ್ಷನೆಂದು ಕಾಣುತ್ತದೆ. ಇವನಂತೆ ಸಮಾಧಿವಿಧಿಯಿಂದ ಮರಣ ಹೊಂದಿದ ಈ ಮನೆತನದ ಇನ್ನೊಬ್ಬ ದೊರೆ 'ಇಂದ್ರ'. ಇವನು ಕ್ರಿ.ಶ ೯೮೪ರ ಸುಮಾರಿಗೆ ಶ್ರವಣಬೆಳಗೊಳದಲ್ಲಿ ಸಮಾಧಿ ವಿಧಿಯಿಂದ ಮಡಿದನು. ಇವನ ನಂತರ ರಾಷ್ಟ್ರಕೂಟರ ಸಾಮ್ರಾಜ್ಯ ಪತನವಾಯಿತು. ಅವರ ಕೊಡುಗೆ ಇನ್ನೂ ಜೀವಂತವಾಗಿವೆ.

### ಕಲ್ಯಾಣದ ಚಾಳುಕ್ಯರು (ಕ್ರಿ.ಶ. ೯೭೩ ರಿಂದ ೧೧೮೯ರವರೆಗೆ)

ಜೈನೇತರರಾದ ಇವರ ಕಾಲದಲ್ಲಿ ಜೈನರು ಮತ್ತು ಧರ್ಮ ಏಳ್ಗೆ ಹೊಂದುವುದರ ಜೊತೆಗೆ ತನ್ನ ಪ್ರಾಬಲ್ಯವನ್ನು ಕಳೆದುಕೊಳ್ಳತೊಡಗಿತು. ಮತಾಂತರ ಪ್ರಕ್ರಿಯೆ ವಿಪುಲವಾಗಿ ನಡೆಯಿತು. ಸಾಮಾನ್ಯ ಜನರಿಂದ ಹಿಡಿದು ರಾಜನವರೆಗೂ ಮತಾಂತರ ಪ್ರಕ್ರಿಯೆಗಳು ನಡದುವು. ಸ್ವತ: ಜೈನನಾದ ಕಲ್ಯಾಣ ಚಾಳುಕ್ಯರ ರಾಜ 'ಜಯಸಿಂಹ-೨ (ಕ್ರಿ.ಶ.೧೦೧೫-೪೩)ನನ್ನ ಜೈನ ಪಂತದಿಂದ ಮತಾಂತರ ಮಾಡಲಾಯಿತು'.[೨೧] ಬ್ರಹ್ಮಶಿವ ಕವಿ ಶೈವವನ್ನು ತ್ಯಜಿಸಿ ಜೈನನಾದ. ಕ್ರಿ.ಶ.೧೧೧೯ರಲ್ಲಿದ್ದ ಐಹೊಳೆಯ ಬಸದಿ ರೂಪಾಂತರಗೊಂಡು ಚರಂತಿ ಮಠವಾಯಿತು. ಆದರೂ ಜೈನರು ರಾಜನಿಗೆ ಸಾಮ್ರಾಜ್ಯಕ್ಕೆ ವಿನೀತರಾಗಿ ಹೋರಾಟಮಾಡಿ ಪ್ರಾಣತ್ಯಾಗ ಮಾಡಿದ್ದಾರೆ. ಇದಕ್ಕೆ ದೊಡ್ಡ ಉದಾಹರಣೆ ದಾನಚಿಂತಾಮಣಿ ಅತ್ತಿಮಬ್ಬೆಯ ಕುಟುಂಬ "ಕಲ್ಯಾಣಿ ಚಾಲುಕ್ಯ ಸಾಮ್ರಾಜ್ಯಕ್ಕಾಗಿ ಒಂದು ಇಡೀ ಕುಟುಂಬ ಬಲಿದಾನವಾಯಿತು; ಅದೇ ಅತ್ತಿಮಬ್ಬೆಯ ಮನೆತನ. ಆಕೆಯ ತಂದೆ ಮಲ್ಲಪಯ್ಯ, ಚಿಕ್ಕಪ್ಪ ಪುನ್ನಮಯ್ಯ, ಸೋದರನಾದ ಗುಂಡಮಯ್ಯ ಎಳಮಯ್ಯ ಪೊನ್ನಮಯ್ಯ ಅಹವಮಲ್ಲವಲ್ಲಿ ಎಂಬ ಐವರು, ಮಾವನಾದ ದಲ್ಲಪಯ್ಯ, ಗಂಡನಾದ ನಾಗದೇವ, ಮಗನಾದ ಅಣ್ಣಿಗದೇವ ಇವರೆಲ್ಲರೂ ಚಾಳುಕ್ಯ ಸೈನ್ಯದ ಚಮೂಪತಿಗಳಾಗಿ ಹೋರಾಡಿದರು".[೨೨]

### ಕಲ್ಯಾಣದ ಕಲಚೂರಿಗಳೂ (ಕ್ರಿ.ಶ. ೧೧೬೨ ರಿಂದ ೧೧೮೪)

ರಾಷ್ಟ್ರಕೂಟರು ಮತ್ತು ಗಂಗರ ಅವನತಿಯ ನಂತರ ಜೈನಧರ್ಮಕ್ಕೆ ಅತೀವ ರಾಜಾಶ್ರಯ ತಪ್ಪಿತು; ಮತ್ತೆ ರಾಜಾಶ್ರಯ ದೊರೆತದ್ದು ಹೊಯ್ಸಳರ ಕಾಲದಲ್ಲಿಯೇ ಈ ಮಧ್ಯ ಬಂದ ಕಲಚೂರಿಗಳ ಕಾಲದಲ್ಲಿ ಬಸವಣ್ಣನವರ ನೇತೃತ್ವದಲ್ಲಿ ವೀರಶೈವ ಧರ್ಮ ಉಚ್ಛ್ರಾಯ ಹಂತಕ್ಕೆ ಏರಿತು. ಇವರ ಕಾಲದ ಪ್ರಸಿದ್ಧ ಜೈನ ದಂಡನಾಯಕನೆಂದರೆ 'ವಸುಧೈಕ ಬಾಂಧವ ರೇಚಣ'. ಪ್ರೊ ರಾಮಸ್ವಾಮಿ ಅಯ್ಯಂಗಾರರು Studies in South Indian Jainism ನಲ್ಲಿ ಕಲಚೂರಿಗಳು ಕಲಭ್ರಮನೆತನಕ್ಕೆ ಸೇರಿದವರು. ಈ ಕಲಭ್ರವಂಶದ ರಾಜರು ಜೈನರೆಂದು

ಹೇಳಿದ್ದಾರೆ. ಇವರು ಜೈನರೇ ಆಗಿದ್ದರೇ ತಮ್ಮ ಅವಧಿಯಲ್ಲಿ ಜೈನಧರ್ಮದ ಮೇಲಾದ ಸಂದರ್ಭದಲ್ಲಿ ಧಾರ್ಮಿಕ ದಾಳಿಗಳನ್ನು ತಡೆಯುತ್ತಿದ್ದರು.

ಕಲಚೂರಿ ಆಡಳಿತ ಏಕಾಂತರಾಮಯ್ಯ, ಗೊಗ್ಗಿದೇವ ಮುಂತಾದ ಶೈವರು ಜೈನಧರ್ಮದ ಮೇಲೆ ಭಾರಿ ಪ್ರಹಾರ ನಡೆಸಿದರು. ಅಬ್ಬಲೂರು ಶಾಸನದಲ್ಲಿ ಏಕಾಂತರಾಮಯ್ಯ ಜೈನರೊಡನೆ ಪಂಥದಲ್ಲಿ ಗೆದ್ದಾಗ ಜೈನರೆಲ್ಲರೂ ಬಿಜ್ಜಳನ ಹತ್ತಿರ ನ್ಯಾಯ ಕೇಳಲು ಹೋದಾಗ ಆಗ "ಬಿಜ್ಜಣರಾಯಂ ನಕ್ಕು ನೀವಿಂನುಸಿರದೆ ಪೋಗಿ"[೨೩] ಎಂದು ಏಕಾಂತರಾಮಯ್ಯನಿಗೆ ಜಯಪತ್ರವನ್ನು ಕೊಟ್ಟು ಕಳುಹಿಸಿದ. ಬಿಜ್ಜಳ ಜೈನನಾಗಿದ್ದರೇ ಈ ಧಾರ್ಮಿಕ ಕಲಹವನ್ನು ಬಗೆಹರಿಸಿ ಎರಡು ಗುಂಪಿಗೆ ಸಮಾನವಾದ ನ್ಯಾಯ ಒದಗಿಸುತ್ತಿದ್ದ. ಜೊತೆಗೆ ಸ್ವಧರ್ಮದ ಹಿತಾಸಕ್ತಿಯನ್ನು ಕಾಪಾಡುತ್ತಿರಲಿಲ್ಲವೇ? ಹಾಗೆ ಮಾಡದೇ ಜೈನೇತರರಿಗೆ ಬೆಂಬಲ ನೀಡುತ್ತಾನೆ. ಆದ್ದರಿಂದ ಕಲಚೂರಿಗಳು ಜೈನರಲ್ಲ ಎಂಬ ಸಾಧ್ಯತೆಗಳೇ ಹೆಚ್ಚು.

## ಹೊಯ್ಸಳರು (ಕ್ರಿ.ಶ. ೯೫೦ ರಿಂದ ೧೩೪೯ರವರೆಗೆ)

ಕಲಚೂರಿಗಳ ಕಾಲದಲ್ಲಿ ತನ್ನ ಪ್ರಖರತೆಯನ್ನು ಕಳೆದುಕೊಂಡ ಜೈನಧರ್ಮ ಹೊಯ್ಸಳರ ಕಾಲದಲ್ಲಿ ಬಹುಬೇಗ ಪ್ರವರ್ಧಮಾನಕ್ಕೆ ಬಂದಿತು. ಕಾರಣ ಪ್ರಾರಂಭಿಕ ಹೊಯ್ಸಳರು ಜೈನರೇ ಆಗಿದ್ದರು. ಈ ಮನೆತನದ ಉಗಮ 'ಸಳ' ಎಂಬುವನಿಂದಾಯ್ತು. ಇವನು ಪರಮ ಜಿನಭಕ್ತ; ವಾಸಂತಿಕಾದೇವಿ (ಪದ್ಮಾವತಿ ಯಕ್ಷಿ)ಯ ಸದ್ಭಕ್ತ. ವರ್ಧಮಾನ ಸುದತ್ತ ಇವನ ಗುರುಗಳು. ಸಳ ಒಂದು ದಿನ ವಾಸಂತಿಕಾದೇವಿಯ ದರ್ಶನಗೈದು ಮುನಿಗಳ ಬಳಿ ಉಪದೇಶ ಕೇಳುತ್ತಿದ್ದಾಗ ಹುಲಿಯೊಂದು ದಾಳಿ ಮಾಡಿತು. ಆ ಸಮಯದ ಸಂಧಿಗ್ಧತೆ ಅರಿತ ಸುದತ್ತಾಚಾರ್ಯನು ತನ್ನ ಪಿಂಚವನ್ನು ಕೊಟ್ಟು 'ಪೊಯ್ ಸಳ' ಎಂದನಂತೆ. 'ಪೊಯ್ ಎಂದರೆ ಹೊಡೆ ಎಂದರ್ಥ'.[೨೪] ಅಂದರೆ ಸಳ ಹುಲಿಯನ್ನು ಹೊಡೆ ಎಂದನು. ಗುರುವಿನ ಆಜ್ಞಾಪ್ರಕಾರವಾಗಿ ಸಳನು ಹುಲಿಯನ್ನು ಹೊಡೆದು ಕೊಂದು ಹಾಕಿದನು. 'ಪೊಯ್ ಸಳ' ಎಂಬುದೆ ಮುಂದೆ ಮನೆತನದ ಹೆಸರಾಗಿ ನಿಂತಿತು. ಇದು ಇಂದಿಗೂ ಇರುವ ಜನಪದ ಕತೆ. ಈ ಕಥೆ ಸತ್ಯವೆನ್ನುವಂತೆ ವಿಷ್ಣುವರ್ಧನ (ಬಿಟ್ಟಿದೇವ)ನ ಬೇಲೂರು ಶಾಸನದಲ್ಲಿ ದಾಖಲಿತವಾಗಿದೆ.[೨೫] ಭಾಷೆಯ ಬದಲಾವಣೆ ಪ್ರಕ್ರಿಯೆಯಲ್ಲಿ 'ಪ' ಕಾರ 'ಹ' ಕಾರವಾಗುವಂತೆ ಇಲ್ಲಿಯೂ 'ಪೊಯ್' ಎಂಬ ಕ್ರಿಯಾಪದ ಮುಂದೆ 'ಹೊಯ್' ಆಗಿ, ಸಳನ ಹೆಸರೂ ಸೇರಿ ಹೊಯ್ಸಳ ಎಂದಾಯ್ತು.

ಸೊಸವೂರು (ಚಿಕ್ಕಮಗಳೂರು ಜಿಲ್ಲೆ ಮೂಡಿಗೆರೆ ತಾಲ್ಲೂಕಿನ ಅಂಗಡಿ ಎಂಬ ಊರು) ಹೊಯ್ಸಳರ ಮೊದಲ ರಾಜಧಾನಿ. ನೃಪಕಾಮ ಎಂಬ ಹೊಯ್ಸಳ ದೊರೆ ಮೊದಲು ಚಾಳುಕ್ಯರ ಮಹಾಮಂಡಲೇಶ್ವರನಾಗಿ ಕ್ರಿ.ಶ.೧೦೨೨ ರಿಂದ ಕ್ರಿ.ಶ.೧೦೪೫ರವರೆಗೆ ಆಳಿದ. ನಂತರ ಬಂದ ವಿನಯಾದಿತ್ಯ (ಕ್ರಿ.ಶ. ೧೦೪೫-೯೪) ರಾಜಧಾನಿಯನ್ನು ಸೊಸವೂರಿನಿಂದ ಧೋರಸಮುದ್ರಕ್ಕೆ ಬದಲಾಯಿಸಿದ. ಆ ಹೊತ್ತಿಗೆ ಸೊಸವೂರಿನಲ್ಲಿ ವಾಸಂತಿಕಾದೇವಿಯ ಬಸದಿಯೊಂದು ಇತ್ತು.

ಹೊಯ್ಸಳರು ಈ ದೇವಿಯ ನಿತ್ಯ ಆರಾಧಕರು. ಈ ಅಂಶದಿಂದಲೇ ಪ್ರಾರಂಭಿಕ ಹೊಯ್ಸಳರು ಜೈನರೆ ಎಂಬುದು ಸ್ಪಷ್ಟವಾಗುತ್ತದೆ. ಸೊಸವೂರಿನಲ್ಲಿ ಈಗಲೂ ವಾಸಂತಿಕಾದೇವಿ ಗುಡಿಯ ಅವಶೇಷಗಳು, ಇನ್ನೂ ಅನೇಕ ಜೈನ ಅವಶೇಷಗಳು ಕಂಡುಬರುತ್ತವೆ. ಇಲ್ಲಿ 'ಮಕರ ಜಿನಾಲಯ'ವೂ ಇತ್ತು.

ಹೊಯ್ಸಳರ ಜೈನ ಪ್ರಸಿದ್ಧ ದೊರೆ ಬಿಟ್ಟಿದೇವ. ಪ್ರಾರಂಭದಲ್ಲಿ ಜೈನನಾಗಿದ್ದ ಇವನು ಆನಂತರ ರಾಮಾನುಜಾಚಾರ್ಯರಿಂದ ಶ್ರೀವೈಷ್ಣವ ಧರ್ಮವನ್ನು ಸ್ವೀಕರಿಸಿ 'ವಿಷ್ಣುವರ್ಧನ'ನಾದ "ಕ್ರಿ.ಶ. ೧೧೨೫ರ ತನಕವೂ ವಿಷ್ಣುವರ್ಧನ ಜೈನಯತಿ ಶ್ರೀಪಾಲ ತ್ರೈವಿದ್ಯಾದೇವರಿಗೆ ಅಸೀಮ ಭಕ್ತನಾಗಿದ್ದ".[೨೬] ಆದ್ದರಿಂದಲೇ ಇವನು ಜೈನ ಮತ್ತು ಶ್ರೀವೈಷ್ಣವ ಧರ್ಮಗಳನ್ನು ಸಮಾನತೆಯಿಂದ ಕಂಡನು. ಇವನ ರಾಣಿ ಶಾಂತಲೇ ಜೈನಳಾಗಿದ್ದು ಶ್ರವಣಬೆಳಗೊಳದಲ್ಲಿ ಒಂದು 'ಸವತಿ ಗಂಧವಾರಣ' ಜಿನಾಲಯವನ್ನು ನಿರ್ಮಿಸಿದಳು. ಇಡೀ ಜೀವನದ ಉದ್ದಕ್ಕೂ ಜೈನ ಧರ್ಮದ ಅನುಯಾಯಿಯಾದ ಇವಳು ಅಂತ್ಯದಲ್ಲಿ ಸಲ್ಲೇಖನ ವಿಧಿಯಿಂದ ಮುಡಿಪದಳು. ವಿಷ್ಣುವರ್ಧನ ತಾನು ಶ್ರೀವೈಷ್ಣವ ಧರ್ಮ ಸ್ವೀಕರಿಸಿದರೂ ಹೆಂಡತಿ ಶಾಂತಲೆಗೆ ಮಾತ್ರ ಜೈನಧರ್ಮದಲ್ಲಿಯೇ ಇರಲು ಅವಕಾಶ ನೀಡಿದ್ದ. ಪ್ರಾಯಶಃ ಜೈನ ಧರ್ಮದ ಮೇಲಿದ್ದ ಅವನ ಆದರಗುಣ ಇದಕ್ಕೆ ಕಾರಣ ಇರಬಹುದು.

ವಿಷ್ಣುವರ್ಧನ ಕಾಲದಲ್ಲಿ ಅನೇಕ ಜೈನರು ಆಡಳಿತದ ಚುಕ್ಕಾಣಿ ಹಿಡಿದಿದ್ದರು. ಪ್ರಸಿದ್ಧ ದಂಡನಾಯಕ ಗಂಗರಾಜ, ಸೇನಾನಿಗಳಾದ ಬೊಪ್ಪ, ಪುರಿಸಮರಿಯಾನೆ, ಭರತೇಶ ಮುಂತಾದವರು ಜೈನರೇ ಆಗಿದ್ದರು. ತದನಂತರ ಬಂದ ಹುಳ್ಳದಂಡಾಧಿಪತಿಯೂ ಜೈನನೆ ಎಂಬುದನ್ನು ಅರಿಯಬೇಕು. ತನ್ನ ಸುತ್ತಲೂ ಜೈನರೇ ತುಂಬಿದಾಗ ಮೂಲದಲ್ಲಿನ ವಂಶಸ್ಥರು ಜೈನರೇ ಆದರು ಬಿಟ್ಟಿದೇವ ಶ್ರೀವೈಷ್ಣವ ಧರ್ಮವನ್ನು ಸ್ವೀಕರಿಸಲು ಕಾರಣವೇನು ಎಂಬ ಪ್ರಶ್ನೆ ಮೂಡುವುದು ಸಹಜ. ಬಹುಶಃ ಆಗಿನ ಸಂದರ್ಭ ಸನ್ನಿವೇಶಗಳು ಅವನನ್ನು ಮತಾಂತರ ಪ್ರಕ್ರಿಯೆಗೆ ಹುರಿದುಂಬಿಸಿದಂತೆ ಕಾಣುತ್ತದೆ. ಅಥವಾ "ಚಾಳುಕ್ಯರ ಜೊತೆ ಸ್ಪರ್ಧಿಸಿ 'ಚಕ್ರವರ್ತಿ' ಎನಿಸಲು, ಯಜ್ಞ ಯಾಗಗಳನ್ನು ಮಾಡಬೇಕೆಂದು ಭಾವಿಸಿ ವಿಷ್ಣುವರ್ಧನನು ಜೈನ ಸಂಪ್ರದಾಯ ತ್ಯಜಿಸಿ ವೈದಿಕ ವೈಷ್ಣವನಾದ"[೨೭] ಎನ್ನಿಸುತ್ತದೆ.

## ವಿಜಯನಗರ ಅರಸರು (ಕ್ರಿ.ಶ. ೧೩೩೬ ರಿಂದ ೧೬೩೨ರವರೆಗೆ)

ಹದಿನಾಲ್ಕನೆಯ ಶತಮಾನದ ಹೊತ್ತಿಗೆ ಕರ್ನಾಟಕದ ಆಡಳಿತ ವಿಜಯನಗರ ಅರಸರ ತೆಕ್ಕೆಗೆ ಒಳಪಟ್ಟಿತು. ಇವರು ಜೈನ ಅರಸರಲ್ಲದಿದ್ದರೂ ಜೈನರಿಗೆ ಮತ್ತು ಧರ್ಮಕ್ಕೆ ಪ್ರೋತ್ಸಾಹ ಕೊಟ್ಟಿದ್ದಾರೆ. ಬಾಳಪ್ಪ-ಬಲ್ಲಪನು ಹರಿಹರನ ಅಳಿಯನಾಗಿದ್ದನು. ಇವನು ಹೊಯ್ಸಳರ ಮೂರನೆಯ ಬಲ್ಲಾಳನ ಮಗನು, ಜೈನ ವೀರನು"[೨೮] ಆಗಿದ್ದನು. ಮಹಾಮಂಡಲೇಶ್ವರ ಮತ್ತು

ದಂಡನಾಯಕ ಬಿಲ್ಲಪ, ದಂಡನಾಯಕ ಬಾಳಪ್ಪ, ಮಲ್ಲಪ್ಪ, ಬೈಚಪ್ಪ ಅವನ ಮಗ ಇರುಗಪ್ಪ ಮುಂತಾದ ಜೈನರು ವಿಜಯನಗರ ರಾಜರ ಆಡಳಿತಾವಧಿಯಲ್ಲಿ ಅಧಿಕಾರಿಗಳ ಸ್ಥಾನಗಳಲ್ಲಿದ್ದರು.

೧ನೆಯ ದೇವರಾಯ (ಕ್ರಿ.ಶ.೧೪೦೬-೨೨)ನ ಪತ್ನಿಯಾದ ಭೀಮಾದೇವಿ ಜೈನಧರ್ಮದವಳಾಗಿದ್ದು, ಶ್ರವಣಬೆಳಗೊಳದಲ್ಲಿ ಮಂಗಾಯಿ ಬಸದಿಯಲ್ಲಿ 'ಶಾಂತಿನಾಥ' ಬಿಂಬವನ್ನು ಸ್ಥಾಪನೆ ಮಾಡಿದಳು. ಎರಡನೆಯ ಮತ್ತು ನಾಲ್ಕನೆಯ ದೇವರಾಯರು, ಬುಕ್ಕರಾಯ ಬಸದಿಗಳನ್ನು ಕಟ್ಟಿ, ದಾನ-ದತ್ತಿಗಳನ್ನು ಕೊಟ್ಟರು. ದೇವರಾಯ ಮೂಡಬಿದರೆಯಲ್ಲಿ ಜಿನಮಂಟಪವನ್ನು ಕಟ್ಟಿಸಿದ.[೨೯] ಬುಕ್ಕರಾಯ ಬೆಳ್ಗೊಳದ ಗೊಮ್ಮಟ ಮೂರ್ತಿಯ ಸಂರಕ್ಷಣೆಗಾಗಿಯೂ ಜೀರ್ಣೋದ್ಧಾರಕ್ಕಾಗಿಯೂ ಪ್ರಜೆಗಳಿಂದ ಹಣವನ್ನು ಕೊಡಿಸಲು ತಾತಯ್ಯನೆಂಬ ಅಧಿಕಾರಿಯನ್ನು ನಿಯಮಿಸಿದನು. ವೈಷ್ಣವರಿಂದ ಜೈನರಿಗೆ ಆದ ಅನ್ಯಾಯವನ್ನು ಅಲ್ಲಗಳೆದನು. ಪಂಚಮಹಾವಾದ್ಯ, ಕಲಶಗಳನ್ನು ಉಪಯೋಗಿಸುವ ಅಧಿಕಾರವನ್ನು ಜೈನರಿಗೆ ನೀಡಿದನು.[೩೦] ಜೈನಧರ್ಮ ಮೇಲೆ ದಬ್ಬಾಳಿಕೆ ಏರ್ಪಟ್ಟಾಗ ವಿಜಯನಗರದ ಅರಸರು ಖಂಡಿಸಿ ಜೈನರಿಗೆ ಒತ್ತಾಸೆಯಾಗಿದ್ದರು ಎಂಬುದು ಮೇಲಿನ ಸನ್ನಿವೇಶದಿಂದ ಸ್ಪಷ್ಟವಾಗುತ್ತದೆ.

ಜೈನಧರ್ಮ ಕರ್ನಾಟಕದಲ್ಲಿ ನೆಲೆಕಂಡುಕೊಂಡು ಒಂಟಿಯಾಗಿ, ರಾಜಸತ್ತೆ ಪೋಷಣೆಯಲ್ಲಿ ೨೦೦೦ ವರ್ಷಗಳ ಕಾಲ ವಿಜೃಂಭಿಸಿ, ಒಂದೊಮ್ಮೆ ಪರಧರ್ಮಗಳ ದಾಳಿಯ ಹೊಡೆತಕ್ಕೆ ಸಿಕ್ಕಿ ತನ್ನ ತತ್ವಗಳನ್ನು ಬಿಡದೆ ಪ್ರಸ್ತುತದಲ್ಲಿಯೂ ತನ್ನ ಇರುವಿಕೆಯನ್ನು ಜೀವಂತಿಕರಿಸಿಕೊಂಡಿದೆ. ಇದಕ್ಕೆ ಅದು ಕಂಡುಕೊಂಡಿರುವ ಅಂತರ್ಮುಖಿ ಚಲನೆಯ ಘಟ್ಟಿಯಾದ ತಳಹದಿ ಮತ್ತು ಪರಧರ್ಮಗಳ ಜೊತೆ ಅನುಸಂಧಾನದಂಥ ಮಾರ್ಗಗಳು. ಇನ್ನೊಂದು ಬಹುಮುಖ್ಯ ಕಾರಣ ಅಧಿಕಾರ. ಜೈನ ಆಡಳಿತಗಾರರು ತಮ್ಮ ಕಾಲಾವಧಿಯಲ್ಲಿ ಬಸದಿಗಳನ್ನು ನಿರ್ಮಿಸುವ ಮೂಲಕ ಮುಖ್ಯ ಆಡಳಿತದ ಸ್ಥಾನಗಳನ್ನು ಅವರಿಗೇ ಕೊಡುವ ಮೂಲಕ ಧರ್ಮ ಸಂರಕ್ಷಣೆ ಮಾಡಿದರು. ಒಂದು ಧರ್ಮದ ಜನ ಅಧಿಕಾರ, ಆಡಳಿತದಲ್ಲಿದ್ದಾಗ ಸಹಜವಾಗಿ ತಮ್ಮ ಸಂಸ್ಕೃತಿಯನ್ನು ಉಳಿಸಿಕೊಂಡು ಹೋಗುತ್ತಾರೆ. ಒಂದು ಧರ್ಮದ ಸಂಸ್ಕೃತಿಯು ವೃದ್ಧಿಯಾಗಬೇಕಾದರೆ ರಾಜಾಶ್ರಯ ಬಲವಾಗಿರಬೇಕು. ಅದು ಗಂಗ, ರಾಷ್ಟ್ರಕೂಟ, ಹೊಯ್ಸಳ ಕಾಲದಲ್ಲಿ ಸಾಧ್ಯವಾಯಿತು. ಕದಂಬ, ಚಾಲುಕ್ಯ, ಕಲಚೂರಿ, ವಿಜಯನಗರ ಅರಸರು ಜೈನಧರ್ಮಕ್ಕೆ ಒತ್ತಾಸೆಯಾಗಿದ್ದರು, ಬಲವಾಗಿರಲಿಲ್ಲ. ಒಂದು ಧರ್ಮದ ಪ್ರಸಾರ ಕೇವಲ ರಾಜರಿಂದ ಅಷ್ಟೇ ಅಲ್ಲ ಅವರ ಅಧೀನದಲ್ಲಿದ್ದ ಸಾಮಂತರಿಂದಲೂ ಸಾಧ್ಯವಾಗುತ್ತದೆ. ಜೈನಧರ್ಮಕ್ಕೆ ಸಾಮಂತರ ಕೊಡುಗೆಯೂ ಅಪಾರವಾಗಿದೆ.

### ೨.೨ಜೈನ ಸಾಮಂತ ಆಡಳಿತಗಾರರು

ಒಂದು ಧರ್ಮ ಏಳಿಗೆಯಾಗಲು ರಾಜಾಶ್ರಯ ಎಷ್ಟು ಮುಖ್ಯವೋ; ಸಾಮಂತರ ಆಶ್ರಯವೂ ಅಷ್ಟೇ ಮುಖ್ಯ. ರಾಜನಾದವನು ಬೃಹತ್ ಸಾಮ್ರಾಜ್ಯದ ಅಡಿಯಲ್ಲಿ ತನ್ನ ಧರ್ಮದ

ಜೊತೆಗೆ ಇತರ ಧರ್ಮವನ್ನೂ ಆತ್ಮೀಯತೆಯಿಂದ ನೋಡಿಕೊಳ್ಳಬೇಕಾಗುತ್ತದೆ. ಈ ಮಾತು ಸಾಮಂತರಾಜನಿಗೂ ಅನ್ವಯಿಸಿದರೂ ಬಹುತೇಕ ಸ್ಥಳೀಯ ಆಡಳಿತ ನಡೆಸುವುದರಿಂದ ಸ್ವಧರ್ಮ ಹಿತಾಸಕ್ತಿಗಳೇ ಹೆಚ್ಚು. ದೇವತಾಸ್ಥಾನಗಳ ನಿರ್ಮಾಣದ ಮೂಲಕ ಈ ಜಾಗೃತಿ ಏರ್ಪಡುತ್ತದೆ. ಅಂತೆಯೇ ಕರ್ನಾಟಕದ ಉದ್ದಗಲಕ್ಕೂ ಇರುವ ದೇವಾಲಯಗಳು, ಬಸದಿಗಳು, ಮಸೀದಿಗಳು ಇದಕ್ಕೆ ಸಾಕ್ಷಿ. ಈ ಅಂಶಕ್ಕೆ ಜೈನ ಸಾಮಂತರಾಜರು ಹೊರತಾದವರೇನಲ್ಲ. ಕರ್ನಾಟಕದ ಸಾಮಂತದಲ್ಲಿ ಜೈನರ ಸಂಖ್ಯೆಯೇನು ಕಮ್ಮಿಯಲ್ಲ. ಸವದತ್ತಿ ರಟ್ಟರು, ಸೇನವಾರರು, ಸಾಂತರರು, ಸಾಳುವರು, ಚೆಂಗಾಳ್ವರು, ಕೊಂಗಾಳ್ವರು ಇವರಲ್ಲಿ ಪ್ರಮುಖರು. ಈ ಮನೆತನಗಳ ಪ್ರಸಿದ್ಧ ಆಡಳಿತಗಾರರ ಸಂಬಂಧಿ ವಿಚಾರಗಳನ್ನು ಮಾತ್ರ ಇಲ್ಲಿ ಅಭ್ಯಸಿಸಲಾಗಿದೆ.

## ಸವದತ್ತಿಯ ರಟ್ಟರು

ಸುಮಾರು ೩೫೦ ವರ್ಷಗಳ ಧೀರ್ಘ ಆಳ್ವಿಕೆ ನಡೆಸಿದ ಇವರು 'ಕುಹುಂಡಿ-೩೦೦೦'ದ ಅಧಿಪತಿಗಳಾಗಿದ್ದರು. "ಮೊದಲು ರಾಷ್ಟ್ರಕೂಟರ, ಆ ಬಳಿಕ ಪಶ್ಚಿಮ ಚಾಳುಕ್ಯರ ಸಾಮಂತರಾಗಿದ್ದು ತರುವಾಯ ಸ್ವತಂತ್ರ ರಾಜರಾಗಿದ್ದರು; ಕಡೆಗೆ ಸೇಉಣ ಸಾಮ್ರಾಜ್ಯಕ್ಕೆ ಸೇರಿಹೋದರು".[೩೧] ಈ ಮನೆತನದ ಪ್ರಸಿದ್ಧ ದೊರೆ ೪ನೆಯ ಕಾರ್ತವೀರ್ಯ. ಹೊಯ್ಸಳರ ಮತ್ತು ಯಾದವರ ಕಲಹದ ಸಂದರ್ಭವನ್ನು ಸಾಧಿಸಿ ತಾನು ಸ್ವತಂತ್ರನೆಂದು ಘೋಷಿಸಿಕೊಂಡನು. ಕ್ರಿ.ಶ.೧೨೬೫ರಲ್ಲಿ ಸುಗಂಧವರ್ತಿ (ಸೌಂದತ್ತಿ) ಯಿಂದ ವೇಣುಗ್ರಾಮ (ಬೆಳಗಾವಿ)ಕ್ಕೆ ರಾಜಧಾನಿಯನ್ನು ಸ್ಥಳಾಂತರಿಸಿ ಸ್ವತಂತ್ರ ರಾಜ್ಯಭಾರ ಪ್ರಾರಂಭಿಸಿದನು. ಚಾಣಾಕ್ಷಮತಿ, ಧೈರ್ಯಶಾಲಿಯಾದ ಕಾರ್ತವೀರ್ಯನು ಪರಮ ಜಿನಭಕ್ತನು ಆಗಿದ್ದ. ಇವನ ಕಾಲದಲ್ಲಿಯೇ ಬೆಳಗಾವಿಯ ಪ್ರಸಿದ್ಧ 'ಕಮಲಬಸದಿ' ನಿರ್ಮಾಣವಾಯಿತು. ಇದೇ ಮನೆತನದ ರಾಣಿ ಜಕ್ಕಲಾದೇವಿ ಬೆಳಗಾವಿಯನ್ನು ೧೦೮ ಬಸದಿಗಳನ್ನು ಕಟ್ಟಿಸಿದಳು ಎಂಬುದು ಜನಪದರ ನಂಬಿಕೆ.

ಇವತ್ತಿನ ಪ್ರಸಿದ್ಧ "ಸೌದತ್ತಿಯ ಎಲ್ಲಮ್ಮನಗುಡಿಯು ಆ ಪ್ರದೇಶವನ್ನು ಆಳಿದ ಅಪ್ಪಟ ಜೈನರಾದ ರಟ್ಟರ ಪಟ್ಟ ಜಿನಾಲಯವಾಗಿತ್ತು ಎಂಬುದು ಈಗ ಸ್ಥಾಪಿತವಾಗಿರುವ ಸತ್ಯ".[೩೨] ಇದು ಮೂಲತ: ಪಾರ್ಶ್ವನಾಥ ಬಸದಿ. "ಮತೀಯ ಸಂಘರ್ಷದಲ್ಲಿ ತೀರ್ಥಂಕರನನ್ನು ಭಗ್ನಗೊಳಿಸಿ, ಆತನ ಯಕ್ಷಿಯನ್ನೇ ಮಧ್ಯದಲ್ಲಿ ಪ್ರತಿಷ್ಠಾಪಿಸಿ, ಎಲ್ಲಮ್ಮ ಹೆಸರಿನಿಂದ ಹಿಂದುಗಳು ಪೂಜಿಸುತ್ತಿರಬಹುದು"[೩೩] ಈ ಯಕ್ಷಿ ಪದ್ಮಾವತಿ. "ಎಲ್ಲಮ್ಮ ಆಗಿನ ಪದ್ಮಾವತಿಯಾಗಿರಬಹುದು. ಪದ್ಮಾವತಿಯ ವಾಸಸ್ಥಾನ ಲೊಕ್ಕಿಯ ಗಿಡ. ಇಂದಿಗೂ ಎಲ್ಲಮ್ಮನ ವಿಗ್ರಹದ ಹಿಂದೆ ಒಂದು ಕಂಟಿ ಇರುವುದಾಗಿ ಹೇಳುತ್ತಾರೆ".[೩೪] ಈ ಯಕ್ಷಿಯೇ ಜಕ್ಕಿ > ಜಕ್ಕಲೆ > ಎಕ್ಕಲೆ > ಎಕ್ಕಲದೇವಿಯೆಂದು ರೂಪಾಂತರಗೊಂಡು, ಆಮೇಲೆ ಎಕ್ಕಲಮ್ಮ ಆಗಿ, ಅಪರಿಚಿತ ಪದವನ್ನು ಪರಿಚಿತ ಪದವನ್ನಾಗಿಸುವ ತತ್ವದಂತೆ 'ಎಲ್ಲಮ್ಮ' ಆಗಿರಬೇಕು.[೩೫] ಜಕ್ಕಲಾದೇವಿ ಎಂಬುದು ರಟ್ಟರಾಣಿಯ

ಒಬ್ಬ ರಾಣಿಯ ಹೆಸರಿತ್ತು. ಈ ಪದ ಯಕ್ಷಿ ಪದದ ಮುಂದುವರೆದ ರೂಪ. ಸವದತ್ತಿಯ ಪದ್ಮಾವತಿ ಯಕ್ಷಿಯ ಆರಾಧನೆಯಿಂದಲೇ ಈ ಹೆಸರು ಪ್ರಾಪ್ತವಾಗಿರಬಹುದು. ಜೈನ ಧರ್ಮದ ಏಳ್ಗೆಗೊಳಿಸಿದ ರಟ್ಟರು ತೆರದಾಳ, ರಾಯಭಾಗ, ಎಕ್ಸಂಬಾ, ಕಲ್ಲೋಳಿ, ಭೋಜ, ಕೊಣ್ಣೂರು, ಸಂಕೇಶ್ವರ, ಸೌದತ್ತಿ ಮುಂತಾದ ಸ್ಥಳಗಳಲ್ಲಿ ಜಿನಾಲಯಗಳನ್ನು ಕಟ್ಟಿಸಿದರು.

## ಹೊಂಬುಜದ ಸಾಂತರರು

ಜನಪದ ಕತೆಯ ಪ್ರಕಾರ ಸಾಂತರರ ಮೊದಲ ಅರಸ ಜಿನದತ್ತರಾಯ ಇವನ ತಂದೆ ಸಹಕಾರ ತಾಯಿ ಶ್ರೀಯಾದೇವಿ. ತಂದೆಯ ಹಿಂಸಾ ಪ್ರವೃತ್ತಿಯಿಂದ ಬೇಸತ್ತ ತಾಯಿ ಜಿನದತ್ತನನ್ನು ಕುದುರೆಯ ಮೇಲೆ ಕುಳ್ಳರಿಸಿ, ಬೆನ್ನಹಿಂದೆ ಪದ್ಮಾವತಿ ಯಕ್ಷಿಯನ್ನು ರಕ್ಷಣೆಗಾಗಿ ಕಟ್ಟಿ ಕಳುಹಿಸಿದಳು. ಆ ಕುದುರೆಯು ಎಲ್ಲಿ ಹೋಗಿ ನಿಲ್ಲುತ್ತದೆಯೋ ಅಲ್ಲಿ ರಾಜ್ಯಭಾರ ಮಾಡು ಎಂದಳಂತೆ ಆ ಪ್ರಕಾರ ಬಂದ ಜಿನದತ್ತರಾಯನ ಕುದುರೆ ಈಗಿನ ಹೊಂಬುಜ (ಹುಂಚ)ದಲ್ಲಿ ಬಂದು ನಿಂತಿತಂತೆ ತದನಂತರ ಜಿನದತ್ತ ಹೊಂಬಜವನ್ನೇ ತನ್ನ ಕೇಂದ್ರವಾಗಿರಿಸಿಕೊಂಡು ಪದ್ಮಾವತಿಯನ್ನು ಆರಾಧ್ಯದೈವವಾಗಿ ಮಾಡಿಕೊಂಡು ಆಳತೊಡಗಿದನಂತೆ. ಯಕ್ಷಿಯ ಆರಾಧಕನಾದ ಜಿನದತ್ತ ಸ್ಪಷ್ಟವಾಗಿ ಜೈನನೇ ಎಂಬ ಅಂಶವನ್ನು ತಿಳಿಯಬಹುದು. ಇವನ ಕಾಲ ಕ್ರಿ.ಶ. ಏಳನೇ ಶತಮಾನ[೩೬] ಕೆಲವು ವಿದ್ವಾಂಸರು ಇವನ ಕಾಲ ೯ನೇ ಶತಮಾನ ಎಂದಿದ್ದಾರೆ.[೩೭] ಇವನು ಆದಿ ಜಿನದತ್ತನಾಗಿದ್ದರೆ ಇಮ್ಮಡಿ ಜಿನದತ್ತನಾಗಿದ್ದಾನೆ. ಜಿನದತ್ತ ಎಂಬ ಎರಡು ಹೆಸರುಗಳಿದ್ದುದ್ದು ಈ ರೀತಿಯ ಅಭಿಪ್ರಾಯಕ್ಕೆ ಕಾರಣವಾಗಿರಬಹುದು. ಸದ್ಯದ ಹುಂಚದಲ್ಲಿರುವ 'ಪಂಚಕೂಟದ ಬಸದಿ', 'ಪಾಳಿಯಕ್ಕನ ಬಸದಿ', 'ಪದ್ಮಾವತಿ ಯಕ್ಷಿಯ ಬಸದಿ', 'ಗುಡ್ಡದ ಬಸದಿ', ಸಾಂತರರು ಆಳಿದ ವೈಭವವನ್ನು ಅವರು ಜೈನಧರ್ಮಕ್ಕೆ ಕೊಟ್ಟ ಕೊಡುಗೆಗಳನ್ನು ಸೂಚಿಸುತ್ತದೆ.

ರಾಷ್ಟ್ರಕೂಟರು ಮತ್ತು ಚಾಳುಕ್ಯರ ಸಾಮಂತರಾದ ಸಾಂತರರು ವಿಶ್ವಾಸಕ್ಕೆ ಹೆಸರಾದವರು. ಅರಸನ ವಿಶ್ವಾಸಕ್ಕೆ ಪಾತ್ರನಾದ ಗೊಗ್ಗನ–ಗೋವಿಂದರದೇವ ನನ್ನಿ ಶಾಂತರನಿಮ್ಮಡಿ (ಕ್ರಿ.ಶ. ೧೦೭೬–೭೭)ಯನ್ನು "ಚಾಳುಕ್ಯ ಚಕ್ರಿ ಆರನೆಯ ವಿಕ್ರಮಾದಿತ್ಯನು (ಕ್ರಿ.ಶ. ೧೦೭೬–೧೧೨೬) ಆರ್ಧದಾರಿಗೆ ಬಂದು ಕೈ ಹಿಡಿದು ಕರೆದುಕೊಂಡು ಹೋಗಿ, ತನ್ನ ಚಕ್ರವರ್ತಿ ಸಿಂಹಾಸನದಲ್ಲಿ ಪಕ್ಕದಲ್ಲಿ ಕೂಡಿಸಿಕೊಂಡು ಅರ್ಧಾಸನದ ಅಪೂರ್ವ ಗೌರವವನ್ನು ತೋರಿಸಿದನು"[೩೮] ಸಾಮಂತರಿಗೆ ಈ ರೀತಿಯ ಮರ್ಯಾದೆ ಸಿಗುವುದು ಅಪರೂಪ. ಚಕ್ರವರ್ತಿಯೇ ಇದಿರುಗೊಂಡು ತನ್ನ ಸಿಂಹಾಸನದಲ್ಲಿ ಕುಳ್ಳರಿಸಿಕೊಂಡದ್ದು ನನ್ನಿಶಾಂತರನಿಗಷ್ಟೇ ಅಲ್ಲ ಇಡೀ ಸಾಂತರ (ಶಾಂತರ)ರಿಗೆ ಧನ್ಯತೆಯನ್ನು ತಂದುಕೊಟ್ಟನು. ಈ ಹಿಂದೆ ಗಂಗರ ಪೆರ್ಮಾನಡಿಯನ್ನು ರಾಷ್ಟ್ರಕೂಟರ ಚಕ್ರಿ ಕೃಷ್ಣ ಇದೇ ರೀತಿ ಸನ್ಮಾನಿಸಿದ್ದನು.

ಸಾಂತರ ಸಾಮಂತರಲ್ಲಿ ಒಂದನೆಯ ನನ್ನಿಸಾನ್ತರ (೯ನೆಯ ಶತಮಾನ) ಒಂದನೆಯ ವಿಕ್ರಮಸಾನ್ತರ (ಕ್ರಿ.ಶ.೮೯೫–೯೩೫), ವಿಕ್ರಮಸಾನ್ತರ, ಇಮ್ಮಡಿ ವಿಕ್ರಮಸಾನ್ತರ, ಇಮ್ಮಡಿ

ನನ್ನಿಶಾಂತರ (ಕ್ರಿ.ಶ.೧೦೨೭–೩೫), ಒಂದನೆಯ ತೈಲಪದೇವ (ಕ್ರಿ.ಶ.೧೦೩೫–೫೦), ವೀರಸಾನ್ತರ (ಕ್ರಿ.ಶ.೧೦೫೦–೬೯), ಇಮ್ಮಡಿ ಸಾನ್ತರ ದೇವ (ಕ್ರಿ.ಶ.೧೦೭೦–೭೬), ಮುಮ್ಮಡಿ ವಿಕ್ರಮ ಶಾಂತರ (ಕ್ರಿ.ಶ.೧೦೨೨–೮೭), ಮುಮ್ಮಡಿ ತೈಲಪ (ಕ್ರಿ.ಶ.೧೦೯೦–೧೧೩೦), ನಾಲ್ಕನೆಯ ವಿಕ್ರಮ ಶಾನ್ತರ (ಕ್ರಿ.ಶ.೧೧೪೭–೫೬), ಮುಂತಾದವರು ಪ್ರಮುಖ ಸಾಂತರ ಸಾಮಂತ ರಾಜರು. "ಸುಮಾರು ಒಂದು ಸಾವಿರ ವರ್ಷಗಳವರೆಗೆ ಕರ್ನಾಟಕದಲ್ಲಿ ಶಾಂತರಸರು ಜೈನಧರ್ಮಕ್ಕೆ ಆಶ್ರಯವನ್ನು ಕೊಟ್ಟರು"[೩೯] ಎಂದೆ ಹೇಳಬಹುದು.

## ಸಾಳುವರು

ಹೊನ್ನನೆಂಬುವನು ಈ ಮನೆತನದ ಮೂಲ ವ್ಯಕ್ತಿ. ಹೊಯ್ಸಳರ ವೀರಬಲ್ಲಾಳನ ಸೈನಿಕನಾದ ಇವನು ಹೊಯ್ಸಳರ ಪತನಾನಂತರ ಗೇರುಸೊಪ್ಪೆ ರಾಜ್ಯವನ್ನು ಕಟ್ಟಿದ.[೪೦] ತದನಂತರ ಸಾಳುವೇಂದ್ರ ಹೈವರಸ (ಕ್ರಿ.ಶ.೧೩೭೫–೧೪೦೦) ವಿಜಯನಗರದ ಸಾಮಂತನಾಗಿ ಆಳಿದ. ಹೈವನ ನಂತರ ಸಾಳುವರು ಇಬ್ಭಾಗವಾಗಿ ಹಾಡುವಳ್ಳಿಯಲ್ಲಿ (ಸಂಗೀರಪುರ) ಹೈವನ ಮಗ ಸಂಗಿರಾಯ (ಕ್ರಿ.ಶ.೧೪೦೮–೩೧), ಗೇರುಸೊಪ್ಪೆಯಲ್ಲಿ ಹೈವನ ಅಳಿಯ ಸಂಗಮ ಅರಸರಾದರು.[೪೧]

ಈ ಮನೆತನದ ಅತೀಮುಖ್ಯವಾದ ಆಡಳಿತಗಾರ್ತಿಯರು ಇಬ್ಬರು. ಮಹಾಮಂಡಳೇಶ್ವರಿ ಚೆನ್ನಾದೇವಿ (ಕ್ರಿ.ಶ. ೧೫೪೦–೫೯) ಮತ್ತು ಮಹಾಮಂಡಳೇಶ್ವರಿ ರಾಣಿ ಚೆನ್ನಭೈರಾದೇವಿ. ರಾಣಿ ಚೆನ್ನಾದೇವಿಯ ಬಹುಮುಖ್ಯ ಸಾಧನೆ ಪೋರ್ಚುಗೀಸರಿಗೆ ಕಪ್ಪ ಕೊಡುವುದನ್ನು ನಿಲ್ಲಿಸಿದ್ದು. ಇದಕ್ಕೆ ಪ್ರತಿಯಾಗಿ ಕೋಪಗೊಂಡ ಪೋರ್ಚುಗೀಸ್ ಮಂಡಲಾಧಿಕಾರಿ ಡಿಸೋಜ ಹಾಡುವಳ್ಳಿ ರಾಜ್ಯದ ನರನಾಡಿ ಬಂದರಾದ ಭಟ್ಕಳವನ್ನು ಮುತ್ತಿಗೆ ಹಾಕಿ ಸಿಕ್ಕಿದನ್ನೆಲ್ಲಾ ಸೂರೆಮಾಡಿದನು.[೪೨] ೨೩–೧೦–೧೫೪೨ರಂದು ಸೋಮವಾರ ಭಟ್ಕಳಕ್ಕೆ ಪರಂಗದ ಕಪಿತಾ ಮೆರೆಯು (ಪೋರ್ಚುಗೀಸ್ ಪಡೆಯ ಕ್ಯಾಪ್ಟನ್ನನು) ಲಗ್ಗೆ ಹಾಕಿದನು. ಗೋವೆಯಿಂದ ೧೨೦೦ ಸೈನಿಕರೊಂದಿಗೆ ಬಂದ ಅಲ್ಫಾನ್ಸೋ ಡಿಸೋಜನು ಮುತ್ತಿಗೆ ಹಾಕಿದ್ದಲ್ಲದೆ ಅರಮನೆಯನ್ನು ಬೆಂಕಿಯಿಟ್ಟು ಸುಟ್ಟನು. ಈ ಹೋರಾಟದ ಫಲಶೃತಿಯೆಂದರೆ ರಾಣಿ ಮತ್ತೆ ಕಪ್ಪ ಕೊಡಬೇಕಾಯಿತು.

ಪೋರ್ಚುಗೀಸರನ್ನು ಸದೆಬಡಿದು ಬುದ್ಧಿಕಲಿಯುವಂತೆ ಮಾಡಿದ್ದು ರಾಣಿ ಚೆನ್ನಭೈರಾದೇವಿ. ಫೇಡ್ರಿಕ್ ಪನವರ್ ಚಾರ್ಲಸ್ 'ದಿ ಪೋರ್ಚುಗಿಸ್ ಇನ್ ಇಂಡಿಯಾ' ಎಂಬ ಕೃತಿಯಲ್ಲಿ ಕರಿಮೆಣಸಿನ ಕುರಿತಾಗಿ ಗ್ರೀಕ್ ದೇಶದ ದೊಡ್ಡ ವೈದ್ಯನಾದ ಹಿಪೊಕ್ರೇಟಿಸ್‌ನು ಮಲೇರಿಯಾ ರೋಗಕ್ಕೆ ಕರಿಮೆಣಸು ರಾಮಬಾಣ ಎಂದು ಹೇಳಿರುತ್ತಾನೆ. ೧೫, ೧೬, ೧೭ನೇ ಶತಮಾನದಲ್ಲಿ ಮಲೇರಿಯಾ ಐರೋಪ್ಯ ರಾಷ್ಟ್ರಗಳಲ್ಲಿ ಮಾರಣಾಂತಿಕ ಹಲ್ಲೇ ನಡೆಸಿ ಬಹುಜನರನ್ನು ಕೊಂದಿತ್ತು. ಆದ್ದರಿಂದಲೇ ಕರಿಮೆಣಸಿಗೆ ಬಹುಬೇಡಿಕೆ ಬಂದು ಕರ್ನಾಟಕದ ಕರಾವಳಿ ತೀರದಿಂದ ಕೊಂಡು ಪೋರ್ಚುಗೀಸರು ಐರೋಪ್ಯ ದೇಶದಲ್ಲಿ ಮಾರಾಟ

ಮಾಡುತ್ತಿದ್ದರು.[೪೩] ಹೀಗೆ ವ್ಯಾಪಾರಕ್ಕೆ ಬಂದ ಪೋರ್ಚುಗೀಸರು ಬಹುಬೇಗ ಕರಾವಳಿ ಪ್ರದೇಶವನ್ನು ಆಕ್ರಮಿಸಿಕೊಂಡು ತಮ್ಮ ಹಿಡಿತದಲ್ಲಿಟ್ಟುಕೊಂಡು ಸ್ಥಳೀಯ ಆಡಳಿತಗಾರರಿಂದ ಕಪ್ಪ ಕಾಣಿಕೆಗಳನ್ನು ಕೊಡುವ ಹಾಗೆ ಮಾಡಿದರು ಇದನ್ನು ಮೊದಲು ಪ್ರತಿಭಟಿಸಿದವಳು ರಾಣಿ ಚೆನ್ನಾದೇವಿ. ಇವರನ್ನು ಬಗ್ಗು ಬಡೆದದ್ದು ಮಾತ್ರ ಚೆನ್ನಭೈರಾದೇವಿ.

ಮಹಾಮಂಡಲೇಶ್ವರಿ ರಾಣಿ ಚೆನ್ನಾಭೈರಾದೇವಿ ಗೇರುಸೊಪ್ಪೆ ಮತ್ತು ಹಾಡುವಳ್ಳಿಯನ್ನು ಒಟ್ಟುಗೂಡಿಸಿ ಸುದೀರ್ಘ ೪೯ ವರ್ಷಗಳ ಕಾಲ ಆಳ್ವಿಕೆ ನಡೆಸಿದಳು. 'ಕರಿಮೆಣಸಿನ ರಾಣಿ' (ಕ್ವಿನ್ ಆಫ್ ಬ್ಲಾಕ್ ಪೆಪ್ಪರ್) ಎಂಬ ವಿಶೇಷ ಬಿರುದು ಇವಳಿಗಿತ್ತು. ಇವಳ ನಾಡಿನಲ್ಲಿ ಕರಿಮೆಣಸು ಸಂಮೃದ್ಧಿಯಾಗಿ ಬೆಳೆಯುತ್ತಿದ್ದರಿಂದ ವಹಿವಾಟು ಮತ್ತು ಆದಾಯ ಹೆಚ್ಚಿನ ಪ್ರಮಾಣದಲ್ಲೇ ಇತ್ತು. ಬಹುಬೇಗ ಪೋರ್ಚುಗೀಸರ ಕಣ್ಣು ಇವಳ ವಹಿವಾಟಿನ ಮೇಲೆ ಬಿದ್ದು, ರಾಣಿಯನ್ನು ತಮ್ಮ ಅಧೀನದಲ್ಲಿರಿಸಿಕೊಳ್ಳಲು ಹವಣಿಸದರು. "ಪೋರ್ಚುಗೀಸರ ಸಂಪರ್ಕದಿಂದಾಗಿ ಚೆನ್ನಭೈರಾದೇವಿ ಕೆಚ್ಚೆದೆಯ ರಾಣಿ ಎಂದು ಪ್ರಸಿದ್ಧಳಾದಳು. ಕ್ರಿ.ಶ. ೧೫೬೯–೭೦ರ ಕಾಲದಲ್ಲಿ ಈ ರಾಣಿಗೆ ಪೋರ್ಚುಗೀಸರೊಡನೆ ಹೋರಾಡುವ ಸಂದರ್ಭ ಬಂತು. ಪೋರ್ಚುಗೀಜರು ಕ್ಷುಲ್ಲಕ ಕಾರಣವನ್ನು ಮುಂದೊಡ್ಡಿಕೊಂಡು ಇವಳ ರಾಜ್ಯವನ್ನು ಆಕ್ರಮಿಸಿಕೊಂಡರು. ಆದರೆ ಚೆನ್ನಭೈರಾದೇವಿ ಪೋರ್ಚುಗೀಸರ ಬೆದರಿಕೆಗೆ ಸೊಪ್ಪು ಹಾಕಲಿಲ."[೪೪] ಅವರ ವಿರುದ್ಧ ರಣಚಂಡಿಯಂತೆ ಹೋರಾಡಿ ಘನಘೋರ ಯುದ್ಧಮಾಡಿ, ಅವರಿಗೆ ಅಪಾರ ಪ್ರಮಾಣದ ನಷ್ಟವನ್ನುಂಟು ಮಾಡಿದಳು. ನಂತರ ಪೋರ್ಚುಗೀಸರು ಇವಳ ಜೊತೆಗೆ ಸ್ನೇಹದಿಂದ ವ್ಯಾಪಾರವಹಿವಾಟನ್ನು ಮುಂದುವರೆಸಿಕೊಂಡು ಬಂದರು.

ಪರಕೀಯರ ವಿರುದ್ಧ ಹೋರಾಡಿ ತಮ್ಮ ರಾಜ್ಯ ರಕ್ಷಣೆ ಮಾಡಿದವಳು ಚೆನ್ನಭೈರಾದೇವಿ. ಇತಿಹಾಸದಲ್ಲಿ ಮಿಂಚಿದ್ದು ಕಿತ್ತೂರು ರಾಣಿ ಚೆನ್ನಮ್ಮ ಮಾತ್ರ (ಇವಳೂ ಜೈನ ಮೂಲದವಳೆ)[೪೫] ಬ್ರಿಟೀಷರ ವಿರುದ್ಧ ಹೋರಾಡಿ ಚೆನ್ನಮ್ಮ ಅಮರಳಾದರೆ. ಪೋರ್ಚುಗೀಸರ ವಿರುದ್ಧ ಚೆನ್ನಭೈರಾದೇವಿ ವಿಜಯ ಪತಾಕೆ ಸಾರಿಸಿದಳು. "ಬ್ರಿಟಿಷರು ಭಾರತಕ್ಕೆ ಬಂದದ್ದು ಕ್ರಿ.ಶ. ೧೬೦೦ ರಿಂದ ರಾಣಿಚೆನ್ನಭೈರಾದೇವಿ ಹಂಸಗೀತೆ ಹಾಡಿದ ಮೇಲೆ"[೪೬] ಚೆನ್ನಭೈರಾದೇವಿ ಪೋರ್ಚುಗೀಸರನ್ನು ಸೋಲಿಸದೇ ಹೋಗಿದ್ದರೆ ಅವರೇ ಎಲ್ಲಿ ಕರ್ನಾಟಕವನ್ನು ತಮ್ಮ ಕಪಿಮುಷ್ಠಿಯಲ್ಲಿ ಇಟ್ಟುಕೊಳ್ಳುತ್ತಿದ್ದರೋ ಗೊತ್ತಿಲ್ಲ. "ಚೆನ್ನಭೈರಾದೇವಿ, ಚೆನ್ನಾದೇವಿ, ಅಬ್ಬಕ್ಕ ಇವರು ಪೋರ್ಚುಗೀಸರನ್ನು ಸೋಲಿಸದೇ ಹೋಗಿದ್ದರೆ ಅವರೇ ಕಾಶ್ಮೀರದಿಂದ ಕನ್ಯಾಕುಮಾರಿಯವರೆಗೂ (ರಾಜ್ಯವನ್ನು) ವಿಸ್ತರಿಸುತ್ತಿದ್ದರು. ಆದರೆ ಅವರು ಚೇತರಿಸಿಕೊಳ್ಳದ ಹಾಗೆ ಅವರನ್ನು ಬಗ್ಗು ಬಡಿದು ಓಡಿಸದವರು ಈ ತುಳುನಾಡಿನ ರಾಣಿಯರು"[೪೭]

೨೦೧೧ ಸೆಪ್ಟೆಂಬರ್ ೨೬ ರಂದು ಸಾಗರದ ಆಳದಲ್ಲಿ ಎಸ್ ಎಸ್ ಗೇರುಸೊಪ್ಪಾ (S S Gairsoppa) ಎಂಬ ಬೃಹತ್ ಹಡಗುವೊಂದು ಸಿಕ್ಕಿತು. ಇದರಲ್ಲಿ ೨೦೦ ಟನ್ ಬೆಳ್ಳಿಯ ಅಚ್ಚುಗಳು ಸಿಕ್ಕವು. "Shipwreek of SS Gairsoppa Reveuls £ 150m Silver"[೪೮]

ಇಷ್ಟೊಂದು ಪ್ರಮಾಣದ ಬೆಳ್ಳಿ ಗೇರುಸೊಪ್ಪೆಯಿಂದ ಕೊಂಡೊಯ್ದದ್ದೇ? ಹಡಗಿನ ಹೆಸರೆ 'ಗೇರುಸೊಪ್ಪಾ' ಎಂದಾದಮೇಲೆ ಈ ಸಂಪತ್ತು ಗೇರುಸೊಪ್ಪೆಯದ್ದೆ ಇರಬೇಕು.

ಜೈನ ಮಹಿಳೆಯರೂ ಕರ್ನಾಟಕದ ರಾಜಕೀಯಾಡಳಿತದಲ್ಲಿ ಪ್ರಮುಖ ಪಾತ್ರವಹಿಸಬಹುದೆಂದು ತೋರಿಸಿಕೊಟ್ಟವಳು ಮಹಾಮಂಡಲೇಶ್ವರಿ ರಾಣಿ ಚೆನ್ನಭೈರಾದೇವಿ ಇವಳು ಮಹಾಜಿನ ಧರ್ಮಿಯೂ ಹೌದು. ಗೇರುಸೊಪ್ಪೆಯ ಚತರ್ಮುಖ ಬಸದಿ, ಭಟ್ಕಳದ ರತ್ನತ್ರಯ ಬಸದಿ, ಹಾಡುವಳ್ಳಿಯ ಬಸದಿಗಳು, ಶಾಂತೇಶ್ವರ ಮುಂತಾದ ಬಸದಿಗಳು ಇವಳ ಕಾಲದಲ್ಲಿಯೇ ನಿರ್ಮಾಣವಾದುವು. ಈ ಬಸದಿಗಳಲ್ಲಿ ಚೆನ್ನಾಭೈರಾದೇವಿ ಧಾರ್ಮಿಕ ಕಾರ್ಯಕ್ಕೆ ಸರಾಗವಾಗಿ ನಡೆಯಲು ಉಂಬಳಿ ಬಿಟ್ಟಿದ್ದಳು".[೨೯]

ಸಾಳುವರು ಮುಖ್ಯತೆಯೇನೆಂದರೆ, ಅವರು ಸೆಉಣರಿಗೆ 'ಸಾಳುವ ತಿಕ್ಕಮ'ನೆಂಬ ಒಬ್ಬ ಮಹಾಸೇನಾಧಿಪತಿಯನ್ನು ಒದಗಿಸಿಕೊಟ್ಟರು. ಅಲ್ಲದೇ ವಿಜಯನಗರ ಸಾಮ್ರಾಜ್ಯಕ್ಕೆ ಸಾಳುವ ವಂಶವನ್ನೂ ಕೊಟ್ಟವರು ಇವರೆ.[೩೦]

ಜೈನಧರ್ಮವನ್ನು ತಳಮಟ್ಟದಲ್ಲಿಯೂ ಹರಡುವ ಕೆಲಸವನ್ನು ಸಾಮಂತರು ಮಾಡಿದರು. ಕರ್ನಾಟಕದ ಸಂಸ್ಕೃತಿಯನ್ನು ಮತ್ತಷ್ಟು ವಿರಾಜಮಾನವಾಗಿಸಿದರು. ಇವರಷ್ಟೇ ಅಲ್ಲದೇ ಕಡೂರಿನ ಸೇನವಾರರು, ಚಂಗಾಳ್ವರು, ಕೊಂಗಾಳ್ವರು, ಕೆಲ್ಲಪುತ್ತಿಗೆಯ ಕೆಲ್ಲರು.[೩೧] ಬಂಗಾಡಿಯ ಬಂಗರು ಮುಂತಾದ ಜೈನ ಅರಸರು ಜೈನಧರ್ಮವನ್ನು ಪೋಷಿಸಿ ರಕ್ಷಿಸಿಕೊಂಡು ಬಂದರು. ಜೊತೆಗೆ ಪರಧರ್ಮ ಸಹಿಷ್ಣುವಾದಿಗಳಾಗಿದ್ದರು.

### ೩.೩ದಂಡನಾಯಕತ್ವದಲ್ಲಿ ಜೈನರು

ಪ್ರಜೆಗಳಿದ್ದರೆ ರಾಜ–ರಾಜತ್ವ, ರಾಜ್ಯ ಇದೆಯೆಂದಾದರೆ ರಕ್ಷಣೆ ಅಗತ್ಯ. ಆದ್ದರಿಂದಲೇ ರಾಜ ಸಾಕಷ್ಟು ಪ್ರಮಾಣದ ಸೈನಿಕರನ್ನು ನಿಯಮಿಸಕೊಂಡಿರುತ್ತಿದ್ದನು. ರಾಜನಿಗೆ ಆರ್ಥಿಕ ಬಲವೊಂದಿದ್ದರೆ ಸಾಲದು, ಕೆಚ್ಚದೆಯ ರಕ್ಷಣಾ ಪಡೆ ಬೇಕು. ಆ ಸೈನ್ಯದ ದಂಡು ವೀರರಿಂದ ಕೂಡಿರಬೇಕು. ಇಂಥ ದಂಡನ್ನು ನಿಯಂತ್ರಿಸಲು ಸಮರ್ಥ ದಂಡನಾಯಕ ಬೇಕೆ ಬೇಕು. ದಂಡನಾಯಕನ ಸ್ಥಾನ ಆಯಕಟ್ಟಿನ ಜಾಗ. ಸ್ವಲ್ಪ ನಿರ್ಲಕ್ಷವಹಿಸಿದರೂ ರಾಜನ ಸಂಪತ್ತು, ರಾಜ್ಯ, ರಾಜತ್ವ ಎಲ್ಲವೂ ಶತ್ರು ರಾಜನ ಪಾಲಾದಂತೆಯೇ. ಆದ್ದರಿಂದಲೇ ರಾಜ ಈ ಅಧಿಕಾರವನ್ನು ಶೌರ್ಯ, ಸಮರ್ಥತೆ, ತನ್ನ ಪ್ರಾಣವನ್ನೂ ಲೆಕ್ಕಿಸದ ನನ್ನಿ ಇರುವ ವ್ಯಕ್ತಿಗೆ ಕೊಡುತ್ತಿದ್ದ. ಇಂಥ ಅಧಿಕಾರವನ್ನು ಅತ್ಯಂತ ವಿಶ್ವಾಸದಿಂದ ಕಾಯಾ, ವಾಚ, ಮನಸ್ಸಿನಿಂದ ಸಾಕಷ್ಟು ಜೈನ ದಂಡನಾಯಕರು ನಿರ್ವಹಿಸಿದ್ದಾರೆ. ಅವರಲ್ಲಿ ಕೆಲವರನ್ನು ಮಾತ್ರ ಇಲ್ಲಿ ಅಭ್ಯಸಿಸಲಾಗಿದೆ.

## ಶ್ರುತಕೀರ್ತಿ (ಐದನೇ ಶತಮಾನ)

ಆದಿಕದಂಬರ ಕಾಕುಸ್ಥವರ್ಮನ ದಂಡನಾಯಕನಾದ ಇವನು ವೀರಸೇನಾನಿ. ಕ್ರಿ.ಶ.೪೦೫–೪೩೦ರ ಕಾಲಾವಧಿಯಲ್ಲಿ ಯುವರಾಜ ಕಾಕುಸ್ಥವರ್ಮ ಹಲಸಿಯನ್ನು ಗೆದ್ದುಕೊಂಡ. ಯಾವುದೋ ಒಂದು ಭಯಂಕರವಾದ ಯುದ್ಧದಲ್ಲಿ ಇವನನ್ನು ಶ್ರುತಕೀರ್ತಿಯು ಕಾಪಾಡುತ್ತಾನೆ.[೫೨] ಜೀವ ಉಳಿಸಿದ ಶ್ರುತಕೀರ್ತಿಯ ಸಾಧನೆಗೆ ಮೆಚ್ಚಿ ಕಾಕುಸ್ಥವರ್ಮನು ಇವನಿಗೆ ಹಲಸಿಯ 'ಖೇಟಗ್ರಾಮ'ವನ್ನು ದಾನ ನೀಡಿದ. ಪ್ರಾಯಶ: ಹಲಸಿಯ ಯುದ್ಧದಲ್ಲಿಯೇ ಶ್ರುತಕೀರ್ತಿಯು ಕಾಕುಸ್ಥವರ್ಮನನ್ನು ಕಾಪಾಡಿರುವ ಸಾಧ್ಯತೆಗಳಿವೆ. ಅಂತೆಯೇ ಹಲಸಿಯ ಬಳಿ ಇರುವ ಖೇಟಗ್ರಾಮ ಇವನಿಗೆ ಲಭಿಸಿದೆ. ಹಲಸಿಯ ದಂಡಾಧಿಪತಿಯ ಸ್ಥಾನ ಶ್ರುತಕೀರ್ತಿಗೆ ಲಭಿಸಿರಲಿಕ್ಕು ಸಾಕು. ಹಲಸಿ ಕದಂಬರ ಎರಡನೆಯ ರಾಜಧಾನಿ.

## ಚಾವುಂಡರಾಯ (೧೦ನೇ ಶತಮಾನ)

ಗಂಗ ದೊರೆಗಳಾದ ಮಾರಸಿಂಹ (ಕ್ರಿ.ಶ.೯೬೩–೭೫) ನಾಲ್ವಡಿ ರಾಜಮಲ್ಲ (ಕ್ರಿ.ಶ.೯೭೫–೮೬) ಐದನೇ ರಾಚಮಲ್ಲ ಮೂವರಲ್ಲಿಯೂ ಮಂತ್ರಿ ಮತ್ತು ದಂಡನಾಯಕ ಎರಡೂ ಪದವಿಗಳನ್ನು ಸಮರ್ಥವಾಗಿ ನೆರವೇರಿಸಿದವನು  ಚಾವುಂಡರಾಯ. ನಾಲ್ವಡಿ ರಾಚಮಲ್ಲನಿಗೆ ಪಟ್ಟಕಟ್ಟಿದವನೂ ಇವನೆ. ರಾಚಮಲ್ಲ ಇವನಿಗೆ 'ರಾಯ' ಎಂಬ ಬಿರುದನ್ನು ನೀಡಿದ. ಸಮರ ದುರಂಧರ, ವೀರಮಾರ್ತಾಂಡ, ರಣರಂಗಸಿಂಗ, ವೈರಿಕುಲಕಾಲದಂಡ, ಭುಜವಿಕ್ರಮ, ಸಮರ ಪರಶುರಾಮ, ಭಟಮಾರಿ, ಸುಭಟಚೂಡಾಮಣಿ[೫೩] ಎಂಬ ಬಿರುದಾವಳಿಗಳು ಚಾವುಂಡರಾಯನು ಸಮರ್ಥ ಮಹಾಸೇನಾನಿ ಎಂಬುದನ್ನು ಸ್ಪಷ್ಟಪಡಿಸುತ್ತವೆ. "ಚಾವುಂಡರಾಯ ತಾನಿದ್ದ ಸ್ಥಳದಿಂದ ದಂಡೆತ್ತಿ ಹೊರಡಲು, ಅವನು ಈಗ ಎಲ್ಲಿ ಮುತ್ತಿಗೆ ಹಾಕಿದ್ದಾನೆ? ಯಾರ ಮೇಲೆ ಎರಗಿದ್ದಾನೆ? ಎಂದು ಬುಟ್ಟಿಯೊಳಗಿನ ಮೊಲದಂತೆ ವೈರಿಗಳು ಚಡಪಡಿಸುತ್ತಿದ್ದರು."[೫೪] ಚಾವುಂಡರಾಯ ಗಂಗರಿಗೆ ಆನೆ ಬಲದಂತಿದ್ದ. ಸಾಮ್ರಾಜ್ಯಶಾಹಿತ್ವವನ್ನು ಕಾಪಾಡುವ ಎಲ್ಲ ತಂತ್ರೋಪಾಯಗಳು ಅವನಿಗೆ ಕರಗತವಾಗಿದ್ದುವು. ಅವನ ಮರಣದ ನಂತರ ಗಂಗರ ಸಾಮ್ರಾಜ್ಯವು ಶಿಥಿಲವಾಯಿತು.

ಜೈನಧರ್ಮದ ಕೀರ್ತಿಯ ಪತಾಕೆಯನ್ನು ಕರ್ನಾಟಕದಲ್ಲಿ ಅಷ್ಟೇ ಅಲ್ಲ ವಿಶ್ವಮಟ್ಟಕ್ಕೆ ಹಾರಿಸಿದ ಕೀರ್ತಿ ಚಾವುಂಡರಾಯನಿಗೆ ಸಲ್ಲುತ್ತದೆ. ಆ ಕೀರ್ತಿ ಅವನು ಮಾಡಿಸಿದ ನಯನಮನೋಹರ ಬೃಹತ್ ೫೮'೮" ಅಳತೆಯ ಎತ್ತರದ ಶ್ರವಣಬೆಳಗೊಳದಲ್ಲಿರುವ ಬಾಹುಬಲಿ ಏಕಶಿಲಾಮೂರ್ತಿಯಿಂದ ಸಂದುದಾಗಿದೆ. ಬಾಹುಬಲಿಯ ಅಣ್ಣ ಭರತನು ತಮ್ಮನ ನೆನಪಿಗಾಗಿ ಪೌದನಪುರದಲ್ಲೊಂದು ೫೨೮ ಬಿಲ್ಲು ಪ್ರಮಾಣದ ಬಾಹುಬಲಿಯ ವಿಗ್ರಹವೊಂದನ್ನು ಸ್ಥಾಪಿಸಿದ್ದನಂತೆ. ಅದು ದಟ್ಟ ಕಾನನದಲ್ಲಿ ಹುದುಗಿಹೋಗಿದ್ದು, ಅದರ ಸುತ್ತಲೂ ಅನೇಕ ಕಾಳೋರಗಗಳು ಸುತ್ತಿಕೊಂಡು ಅಲ್ಲಿಗೆ ಹೋಗುವುದು ಅತೀ ಕಷ್ಟದ ಕೆಲಸ ಎಂಬುದು ಜನನಂಬಿಕೆಯಿಂದ ಬಂದ ಐತಿಹ್ಯವಾಗಿತ್ತು. ಈ ವಿಚಾರ ಚಾವುಂಡರಾಯನ ತಾಯಿ

ಕಾಳಲಾದೇವಿಗೂ ಗೊತ್ತಿತ್ತು. ನೇಮಿಚಂದ್ರಾಚಾರ್ಯರ ಆದಿಪುರಾಣದ ಬೋಧನೆಯ ಬಾಹುಬಲಿಯನ್ನು ನೋಡುವ ಆಸೆ ದಿನೆ ದಿನೆ ಇವಳಲ್ಲಿ ಚಿಗುರುತ್ತಲೇ ಇತ್ತು. ತಾಯಿಯ ಆಸೆ ಮನಗಂಡ ಚಾವುಂಡರಾಯ ಶ್ರವಣಬೆಳಗೊಳದ ಇಂದ್ರಗಿರಿಯಲ್ಲಿಲ್ಲೊಂದು "ಕ್ರಿ.ಶ. ೯೮೧"[೫೫] ರಲ್ಲಿ ಬೃಹತ್ ಪ್ರಮಾಣದ ಬಾಹುಬಲಿಯ ಮೂರ್ತಿಯನ್ನು ನಿರ್ಮಿಸಿದನು. ಪ್ರೀತಿಯ ದ್ಯೋತಕವಾಗಿ ಚಾವುಂಡರಾಯನಿಗೆ ಮನೆಯಲ್ಲಿ ಕರೆಯುವ 'ಗೋಮಟ' ಎಂಬ ಹೆಸರನ್ನು ಬಾಹುಬಲಿಗೆ ಕರೆಯುವ ವಾಡಿಕೆಯೂ ಬಂತು. ಈಗಲೂ ಬಾಹುಬಲಿಗೆ ಗೋಮಟೇಶ್ವರ ಎಂದೇ ನಾಡಿನ ಜನ ಸಂಬೋಧಿಸುತ್ತಾರೆ.

ಒಬ್ಬ ಸೇನಾನಿ ಅಥವಾ ಮಂತ್ರಿ ಇಷ್ಟು ದೊಡ್ಡ ಪ್ರಮಾಣದ ಮೂರ್ತಿಯನ್ನು ಕೆತ್ತಿಸುವುದು ಸಾಮಾನ್ಯ ಮಾತಲ್ಲ. ಒಂದು ಅವನು ಆರ್ಥಿಕವಾಗಿ ಸಬಲನಾಗಿರಬೇಕಾಗುತ್ತದೆ. ಹಾಗಾದರೇ ಚಾವುಂಡರಾಯ ಆರ್ಥಿಕವಾಗಿ ಸಬಲನಿದ್ದನೆ? ಅಥವಾ ರಾಜ್ಯದ ಭಂಡಾರ ಇವನ ಅಧೀನದಲ್ಲಿತ್ತೇ? ರಾಜನೇ ಗೊಮಟೇಶ್ವರನನ್ನು ಕೆತ್ತಿಸಲು ಆರ್ಥಿಕ ಸಹಾಯ ಮಾಡಿದನೆ? ತನ್ನ ಇಡೀ ಜೀವಮಾನದ ಆದಾಯವನ್ನು ಒಟ್ಟಿಗೆ ಸೇರಿಸಿ ಚಾವುಂಡರಾಯನು ಬಾಹುಬಲಿ ಮೂರ್ತಿಯನ್ನು ಮಾಡಿಸಿದನೆ? ಎಂಬ ಪ್ರಶ್ನೆಗಳು ಎದುರಾಗುತ್ತವೆ. ಮೂರ್ತಿಯನ್ನು ಚಾವುಂಡರಾಯನೇ ಕೆತ್ತಿಸಿದನು ಎಂಬುದು ನಿರ್ವಿವಾದ. ಅಲ್ಲಿರುವ 'ಚಾಮುಂಡರಾಜಂ ಮಾಡಿಸಿದಂ' ಎಂಬ ಶಾಸನ ಇದನ್ನು ಖಚಿತಪಡಿಸುತ್ತದೆ. ಮೂರ್ತಿಯನ್ನು ಚಾವುಂಡರಾಯ ಮಾಡಿಸಿದ್ದು ದಿಟ. ಜೊತೆಗೆ ಗಂಗರ ಆರ್ಥಿಕ ಸಹಾಯವೂ ಇತ್ತು.

ಚಾವುಂಡರಾಯ ಕಲಿಯೂ ಹೌದು, ಕವಿಯೂ ಹೌದು. ಇವನು 'ಚರಿತ್ರಸಾರ' 'ಚಾವುಂಡರಾಯ ಪುರಾಣ' (ತ್ರಿಷಷ್ಠಿ ಲಕ್ಷಣ ಮಹಾಪುರಾಣ) ಎಂಬ ಕೃತಿಗಳನ್ನು ಬರೆದಿದ್ದಾನೆ. ರನ್ನ ನಾಗವರ್ಮ ಇವನ ನಿಕಟವರ್ತಿಗಳು. ಮಹಾಪರಾಕ್ರಮಿ, ಧರ್ಮನಿಷ್ಠ, ಅನ್ಯ ಧರ್ಮಗಳ ಮಿತ್ರ ಚಾವುಂಡರಾಯ ಗಂಗರ ಮತ್ತು ಕರ್ನಾಟಕ ಇತಿಹಾಸದ ಒಂದು ಮೈಲಿಗಲ್ಲು.

## ಗಂಗರಾಜ (ಹನ್ನೆರಡನೆಯ ಶತಮಾನ)

ಹೊಯ್ಸಳರ ವಿಷ್ಣುವರ್ಧನ (ಬಿಟ್ಟಿದೇವ) ಕಾಲದಲ್ಲಿ ಪ್ರಧಾನ ಮಂತ್ರಿಯೂ ಮುಖ್ಯ ಸೇನಪತಿಯೂ ಆದ ಗಂಗರಾಜ ಬಿಟ್ಟಿದೇವನ ಬಲಗೈ. "ಲೋಕದ ದು:ಖನಿವಾರಕನಾಗಿ, ದ್ರೋಹಿಗರಟ್ಟನಾಗಿ, ವಜ್ರಧರನಿಗೆ ವಜ್ರಾಯುಧವಾಗಿ, ಹಲಾಯುಧನಿಗೆ ಹಲಾಯುಧನಾಗಿ, ಚಕ್ರಧರನಿಗೆ ಚಕ್ರಾಯುಧವಾಗಿ, ಶಕ್ತಿಧರನಿಗೆ (ಸ್ಕಂಧ) ಶಕ್ತಿಯಾಗಿ, ಗಾಂಡೀವಿಗೆ ಗಾಂಡಿವವಾಗಿ ಕಂಗೊಳಿಸುವ ಗಂಗರಾಜನು ವಿಷ್ಣುವರ್ಧನನ ರಾಜ್ಯಕಾರ್ಯದಲ್ಲಿ ತಾನೇ ತಾನಾಗಿದ್ದನು."[೫೬] ಇಲ್ಲಿನ ಕೆಲವು ಬಿರುದುಗಳು ಅತಿಶಯವೆನಿಸಿದರೂ ಸತ್ಯಕ್ಕೆ ಹತ್ತಿರವಾದುವು. 'ವಿಷ್ಣುವರ್ಧನನ ರಾಜಕಾರ್ಯದಲ್ಲಿ ತಾನೆ ತಾನಾಗಿದ್ದನು' ಎಂಬ ಮಾತು ಗಂಗರಾಜನ ಸ್ವಾಮಿ ನಿಷ್ಠೆಯನ್ನು ತೋರಿಸುತ್ತದೆ.

ಚಾಳುಕ್ಯರ ತ್ರಿಭುವನಮಲ್ಲ ಪೆರ್ಮಾಡಿ ದೇವನನ್ನು ಅವನ ಸೈನ್ಯವನ್ನು ನಿರಾಯಾಸ ಗೆದ್ದು ಗಂಗರಾಜ ಶತ್ರುಸೈನ್ಯದ ಸಂಪತ್ತನ್ನು ದೋಚಿ ತನ್ನ ಪ್ರಭು ವಿಷ್ಣುವರ್ಧನನಿಗೆ ಅರ್ಪಿಸಿದನು. ಪ್ರತಿಯಾಗಿ ವಿಷ್ಣುವರ್ಧನ ಬಹುಮಾನ ಏನು ಕೊಡಲಿ ಬೇಡಿಕೊ ಎಂದಾಗ ನಿಷ್ಕಾಮ ಸೇವೆಯ ಗಂಗರಾಜನ ಜಿನಪೂಜೆಗಾಗಿ 'ಪರಮ' ಎಂಬ ಗ್ರಾಮವನ್ನು ಕೇಳಿದನು. ವಿಷ್ಣುವರ್ಧನ ಇವನ ಧರ್ಮನಿಷ್ಠೆಗೆ ಮೆಚ್ಚಿ ಪರಮ ಗ್ರಾಮವನ್ನು 'ಪರಮ' ಎಂಬ ಪದವಿಯನ್ನೂ ನೀಡುತ್ತಾನೆ. ನಂತರ ಕ್ರಿ.ಶ. ೧೧೧೭ರಲ್ಲಿ ಗಂಗರಾಜ ತಮ್ಮ ಗುರುಗಳಾದ ಶುಭಚಂದ್ರ ಸಿದ್ಧಾಂತ ದೇವಗೆ ಈ ಗ್ರಾಮವನ್ನು ದತ್ತಿ ಬಿಟ್ಟನು.[೫೭] ಇದೇ ಅಲ್ಲವೇ ಒಬ್ಬ ಆಡಳಿತಗಾರನಿಗೆ ಇರಬೇಕಾದ ನಿಷ್ಕಾಮ ಗುಣ. ಇಷ್ಟೇ ಅಲ್ಲದೇ ಶ್ರವಣಬೆಳಗೊಳದಲ್ಲಿ ಕ್ರಿ.ಶ. ೧೧೧೭ರಲ್ಲಿ 'ಇಂದಿರಾಕುಲ' ಎಂಬ ಜಿನಾಲಯವನ್ನೂ ಕಟ್ಟಿಸಿದನು. ನಾಡಿನಾದ್ಯಂತ ಸಾಕಷ್ಟು ಜಿನಾಲಯಗಳನ್ನು ಕಟ್ಟಿಸಿ ಅವುಗಳಿಗೆ ದತ್ತಿಯನ್ನು ಕೊಟ್ಟ ಕೀರ್ತಿ ಗಂಗರಾಜನಿಗೆ ಸಲ್ಲುತ್ತದೆ. ಇವನ ಮರಣದ ತರುವಾಯ ಇವನ ಮಗ ಬೊಪ್ಪನು ತಂದೆಯ ನೆನಪಿಗಾಗಿ ಪಾರ್ಶ್ವನಾಥ ಚೈತ್ಯಾಲಯವನ್ನು ಕಟ್ಟಿಸಿದ ಇದಕ್ಕೆ 'ದ್ರೋಹಗರಟ್ಟ' ಜಿನಾಲಯವೆಂದು ಹೆಸರು.

ಶೃತಕೀರ್ತಿ, ಗಂಗರಾಜ ಚಾವುಂಡರಾಯ ದಂಡಾಧಿಪತಿಯಲ್ಲದೆ ಇನ್ನೂ ಅನೇಕ ಜೈನ ದಂಡಾಧಿಪತಿಗಳಾಗಿ ಹೋಗಿದ್ದಾರೆ. ಅಂಥವರಲ್ಲಿ ಅತ್ತಿಮಬ್ಬೆಯ ವಂಶದ ಕುಡಿ 'ವಸುಧೈಕ ಬಾಂಧವ ರೇಚಣದಂಡನಾಥ' ಒಬ್ಬನು. ಇವನು ಕಲಚೂರಿ ಬಿಜ್ಜಳನ ರಾಜ್ಯಕಟ್ಟಲು ಸಹಾಯಮಾಡಿದ. "ಬಿಜ್ಜಳನನ್ನು ಕಲಚೂರಿವಂಶ ಚಕ್ರವರ್ತಿಯೆನಿಸಿ ಸಿಂಹಾಸನದಲ್ಲಿ ಕೂಡಿಸಿದನು; ದಲ್ಲಪನನ್ನು ತೈಲಪಕುಳ್ಳಿರಿಸಿದಂತೆ ಚಾಳುಕ್ಯರ ರಾಜಧಾನಿಯಾದ ಕಲ್ಯಾಣವನ್ನೇ ತಮ್ಮ ರಾಜಧಾನಿಯಾಗಿ ಮುಂದುವರಿಸಲು ಬಿಜ್ಜಳನಿಗೆ ರೇಚಣನು ಸೂಚಿಸಿದನು."[೫೮] ರೇಚಣ ಅಹವಮಲ್ಲನ ಕಾಲಕ್ಕೆ ಮಹಾಪ್ರಧಾನನೂ, ಬಾಹತ್ತರ ನಿಯೋಗಾಧಿಪತಿಯು, ದಂಢಾಧಿನಾಥನೂ, ನಾಗರಖಂಡಕ್ಕೆ ಅಧಿಪತಿಯಾಗಿಯೂ ಆಳುತ್ತಿದ್ದನು.[೫೯] ಕಲಚೂರಿ ವಂಶ ಕೊನೆಗೊಂಡ ನಂತರ ಹೊಯ್ಸಳರ ವೀರಬಲ್ಲಾಳನ ಮಹಾಮಂತ್ರಿಯಾದ. ಇವನೂ ಧರ್ಮನಿಷ್ಠನೂ ಹೌದು. ಅರಸಿಕೆರೆಯ ಸಹಸ್ರಕೂಟ ಜಿನಾಲಯ, ಲಕ್ಕುಂಡಿಯ 'ವಸುಧೈಕ ಬಾಂಧವ ಜಿನಾಯಲ' ಇವು ರೇಜಣನ ನಿರ್ಮಾಣಗಳೆ. ಶೃತಕೀರ್ತಿ, ಗಂಗರಾಜ, ಚಾವುಂಡರಾಯ, ವಸುಧೈಕ ಬಾಂಧವ ರೇಚಣ, ಕೋಶಾಧಿಕಾರಿ ಹುಲ್ಲ, ಸಾಳುವ ತಿಕ್ಕಮ, ಬಿಲ್ಲಪ, ಬಾಳಪ್ಪ ಮುಂತಾದ ಜೈನ ದಂಡಾಧಿಪತಿಗಳು ಕರ್ನಾಟಕ ಅರಸುಮನೆತನಗಳ ಆಡಳಿತದ ಚುಕ್ಕಾಣಿ ಹಿಡಿದು ರಾಜನಿಗೆ, ಮನೆತನಕೆ, ಸ್ವಧರ್ಮಕ್ಕೆ ಪರಧರ್ಮಕ್ಕೆ ಮೆಚ್ಚುವಂತೆ ಆಳ್ವಿಕೆ ನಡೆಸಿ ಕೀರ್ತಿವಂತರಾದರು. ಜೈನರು ಮೂಲತ; ಕ್ಷಾತ್ರವಂಶದವರಾದ್ದರಿಂದ ಆಡಳಿತದ ನಿರ್ವಹಣೆ ಇವರಿಗೆ ರಕ್ತಗತವಾಗಿಯೇ ಬಂದಿತ್ತು ಎಂದು ತೋರುತ್ತದೆ. ಅರಸೊತ್ತಿಗೆಯಲ್ಲಿ ಇದು ಅನಿವಾರ್ಯವೂ ಆಗಿತ್ತು.

## ೩.೪ವಾಡೆಯ ಅಧಿಕಾರಿಗಳಾಗಿ ಜೈನರು

ಕನ್ನಡನಾಡಿನ ಆಳ್ವಿಕೆಯಲ್ಲಿ ಜೈನರು ಸಾಮ್ರಾಟರಾಗಿ, ಅರಸರಾಗಿ, ಸಾಮಂತ ಅರಸರಾಗಿ, ಮಹಾಮಾಂಡಳಿಕರಾಗಿ, ದಂಡಾಧಿಪತಿಗಳಾಗಿ, ನಾಳ್ಗಾವುಂಡರಾಗಿ ಪ್ರಮುಖ ಪಾತ್ರವಹಿಸಿದ್ದರು. ಈ ಅನುಭವ ಮತ್ತು ಹಿರಿಮೆ ವಿಜಯನಗರೋತ್ತರದ ಬಿಜಾಪುರದ ಆದಿಲ್‌ಶಾಹಿಗಳು ಮತ್ತು ಪೇಶ್ವೆಗಳ ಅರಸೊತ್ತಿಗೆಯಲ್ಲಿ ನಾಡಗೌಡಿಕೆಯನ್ನು (ದೇಸಾಯಿಕೆ) ಪಡೆಯುವಲ್ಲಿ ಸಹಕಾರಿಯಾದುವು. ಈ ಹಿಂದೆ ಜೈನ, ಜೈನೇತರ ರಾಜ, ಸಾಮಂತರಲ್ಲಿ ಆಡಳಿತ ನಿರ್ವಹಿಸಿದ್ದು; ಆದಿಲ್ ಶಾಹಿಗಳ ಕಾಲದಲ್ಲಿ ದೇಸಾಯಿಕೆ ಪಡೆದದ್ದು ಸೋಜಿಗವೇ! ಯಾಕೆಂದರೆ ಭಾರತೀಯ ಸಂಪ್ರದಾಯಕ್ಕೆ ಮುಸ್ಲಿಂರು ತೀರಾ ಭಿನ್ನರು. ಶೈವ, ವೈಷ್ಣವ ಪಂಥಗಳೂ ಜೈನಕ್ಕೆ ಬೇರೆಯಾದರೂ ಭಾರತೀಯ ಧರ್ಮಗಳೆ. ಧರ್ಮಾಚರಣೆಗಳು ಬೇರೆ ಬೇರೆಯಾದರೂ ಎಲ್ಲರದ್ದೂ ಭಾರತೀಯ ಮನಸ್ಸುಗಳೆ. ಮುಸ್ಲಿಂರು ನಿರೀಶ್ವರವಾದಿಗಳು, ಒಂದು ಕಡೆ ದೇವರು ಮೂರ್ತಿ ಆರಾಧನೆ ಮತ್ತೊಂದು ಕಡೆ ಅಮೂರ್ತದ ಕಲ್ಪನೆ. ಮೇಲೆ ಹೇಳಿದ ಮೂರು ಧರ್ಮಗಳು ಕರ್ನಾಟಕದ ಮಟ್ಟಿಗೆ ಹೇಳುವುದಾದರೆ ಅವು ರಾಜ್ಯಾಡಳಿತದಲ್ಲಿ ಕಲಹ ಇದ್ದರೂ ಹೊಂದಿಕೊಂಡು ಹೋಗಿರುವುದೇ ಹೆಚ್ಚು. ಧರ್ಮ ಕಲಹಗಳು, ಧರ್ಮಾಂಧರು ಇದ್ದರೂ ಕೂಡಿಬಾಳಲು ಸಮಸ್ಯೆಯೇನಿರಲಿಲ್ಲ. ಅಂಥ ಸಾಕಷ್ಟು ನಿದರ್ಶನಗಳನ್ನು ಕಾಣಬಹುದು.

ಆದಿಲ್‌ಶಾಹಿಗಳು ಮುಸ್ಲಿಂ ಧರ್ಮಕ್ಕೆ ಸೇರಿದವರಾಗಿದ್ದರೂ ರಾಜ್ಯಾಡಳಿತ ದೃಷ್ಟಿಯಿಂದ ಹಿಂದೂ-ಜೈನರ ಓಲೈಸಬೇಕಾಗಿ ಬಂತು. ರಾಜ್ಯಾಡಳಿತದಲ್ಲಿ ಸ್ಥಳೀಯ ಧರ್ಮಗಳನ್ನು ವಿಶ್ವಾಸಕ್ಕೆ ತೆಗೆದುಕೊಳ್ಳಬೇಕಾದುದು ಅನಿವಾರ್ಯವೂ ಆಗಿತ್ತು. ಆದ್ದರಿಂದಲೇ ಇವರು 'ದೇಶಕ್' ಎಂಬ ಹೊಸ ಆಡಳಿತ ಕೇಂದ್ರಗಳನ್ನು ಪ್ರಾರಂಭಿಸಿದರು. 'ದೇಶಕ' ಪದದ ಮುಂದುವರೆದ ರೂಪ 'ದೇಸಗತಿ'. ಜನರ ಬಾಯಿಯಲ್ಲಿ 'ದೇಶಕ್' 'ದೇಸಗತಿ' ಪದಗಳಿಗಿಂತ ನಾಡಗೌಡಕಿ, ದೇಸಾಯಿಕೆ ಪದಗಳೇ ಪ್ರಚಲಿತವಾದವು. 'ನಾಡಗೌಡ' ರಾಷ್ಟ್ರಕೂಟರ ಕಾಲದಲ್ಲಿಯೇ ಪ್ರಚಲಿತದಲ್ಲಿತ್ತು. ಈ ವ್ಯವಸ್ಥೆಯನ್ನೇ ಆದಿಲ್‌ಶಾಹಿಗಳು ಘಟ್ಟಿಗೊಳಿಸಿ 'ದೇಶಕ್' ಎಂದು ಮರುನಾಮಕರಣ ಮಾಡಿ ಸಾಕಷ್ಟು ಇನಾಂ ಭೂಮಿಯನ್ನು ಕೊಟ್ಟು ದೇಸಾಯಿ ಅಥವಾ ನಾಡಗೌಡನನ್ನು ತಮ್ಮ ವಿಶ್ವಾಸದಲ್ಲಿ ಇರಿಸಿಕೊಂಡರು.

ದೇಸಗತಿಗಳ ಅಧಿಕಾರವನ್ನು ಆದಿಲ್‌ಶಾಹಿಗಳಿಂದ ಪಡೆಯಲು ವ್ಯಕ್ತಿಗಳ ಸಾಹಸವನ್ನು ಸ್ವಾಮಿನಿಷ್ಠೆಯನ್ನು ತೋರಬೇಕಿತ್ತು. ಸದ್ಯ ಇರುವ ದೇಸಗತಿಗಳ ಇತಿಹಾಸ ಮತ್ತು ಜನಪದರಲ್ಲಿರ ಕಥೆಗಳ ಪ್ರಕಾರ ದೇಸಗತಿಗಳ ಮೂಲ ಪುರುಷ ಆದಿಲ್‌ಶಾಹಿಗಳ ಹತ್ತಿರ ತನ್ನ ಸಾಹಸ ತೋರಿ ದೇಸಗತಿಯನ್ನು ಪಡೆದ ಎಂಬ ವಿಷಯಗಳ ಪ್ರಸ್ತಾಪಗಳು ದೊರೆಯುತ್ತವೆ. ತೋರಗಲ್ ದೇಸಗತಿಯ ವಿಟಗೌಡ ವಿಜಯನಗರ ಅರಸರ ವಶದಲ್ಲಿದ್ದ ತೋರಗಲ್ ಕಿಲ್ಲೆ (ಬುರ್ಜು)ಯ ಮೇಲೆ ವಿಜಾಪುರದ ಒಂದನೇ ಇಬ್ರಾಹಿಂ ಆದಿಲ್‌ಶಾಹ (ಕ್ರಿ.ಶ. ೧೫೩೪-೧೫೫೭)ನ ನೆಚ್ಚಿನ ಬಂಟನಾಗಿ ದಾಳಿ ಮಾಡಿದನು ಮೂರು ದಿನ ಸತತ ಪರಿಶ್ರಮದಿಂದ ತೋರಗಲ್ಲು ಕಿಲ್ಲೇಯನ್ನು

ವಿಟಗೌಡ ವಶಪಡಿಸಿಕೊಂಡ. ಈ ಸಾಹಸಕ್ಕೆ ಮೆಚ್ಚಿ ಆದಿಲ್‌ಶಾಹಿಯು "ನೀವು ಬಹಳ ಪರಿಶ್ರಮಪಟ್ಟು ಕಿಲ್ಲೆಯನ್ನು ವಶಪಡಿಸಿಕೊಂಡಿರಿ. ನೀವು ಏನು ಬೇಡುವಿರಿ? ಬೇಡಿದನ್ನು ಕೊಡವೆನು" ಎಂದು ಅಪ್ಪಣೆ ಕೊಡಿಸಿದನು. ಅದಕ್ಕೆ ವಿಟಗೌಡನು "ನಾವು ನಮ್ಮ ಹಿರಿಯರ ಸಂಗಡ ಜಗಳಾಡಿ ಬಂದಿದ್ದೇವೆ ಆದ್ದರಿಂದ ತೋರಗಲ್ಲ ತಾಲೂಕ ಮತ್ತು ಮಹಲಿನ ದೇಸಗತಿ, ಸರದೇಸಗತಿ, ನಾಡಗೌಡಕಿ ಇವುಗಳನ್ನು ವತನ ಮಾಡಿಕೊಡಬೇಕು" ಎಂದು ಕೇಳಿಕೊಂಡನು. ಅದಕ್ಕೆ ಬಾದಶಾಹನು ಸಂತಷ್ಟವಾಗಿ ವಿಟಗೌಡ ದೇಸಾಯಿಗೆ ದೇಸಗತಿ, ಸರದೇಸಗತಿ, ನಾಡಗೌಡಕಿ ವತನಗಳನ್ನು ಫಸಲಿ ಸನ್ ೯೫೪ ಅಂದರೆ ಕ್ರಿ.ಶ.೧೫೪೫ರಲ್ಲಿ ಉಂಬಳಿ ಹಾಕಿಕೊಟ್ಟನು.[೬೦] ಐಹೊಳೆಯ ದೇಸಗತಿಯ ಭೀಮಾನಾಯಕ ಗುರುಸ್ಸೈಯದರ ಆಜ್ಞೆಯಂತೆ ಮುದಗಲ್ಲ ಕೋಟೆಗೆ ಮುತ್ತಿಗೆ ಹಾಕಿ ಅವರ ಮಗಳನ್ನು ಬಿಡಿಸಿಕೊಂಡು ಬಂದನು. ಇದರಿಂದ ಗುರು ಸ್ಸೈಯದರ ಆಜ್ಞೆಯಂತೆ ಮುದಗಲ್ಲವರೆಗೆ ಇನಾಂ ಪಡೆದುದು ವಿಶೇಷವಾಗಿದೆ.[೬೧] ಈಗಿನ ಹಾವೇರಿ ತಾಲ್ಲೂಕಿನ ಹಂದಿಗನೂರು ವಾಡೆಯ ಮೂಲ ವ್ಯಕ್ತಿ ವಿಠ್ಠಲನಾಥ ಬುಳ್ಳಸರ ಶೆಟ್ಟಿ ಕ್ರಿ.ಶ.೧೫೭೫ರ ಸುಮಾರಿಗೆ ಬಿಜಾಪುರದ ಆದಿಲ್‌ಶಾಹನ ಯುದ್ಧಗಳಲ್ಲಿ ಆಹಾರ, ಮೇವು, ಇತ್ಯಾದಿ ಸಲಕರಣೆ ಒದಗಿಸಿ ಅವರನ್ನು ರಕ್ಷಿಸುತ್ತಿದ್ದನಂತೆ. ಈ ಸಾಹಸಕ್ಕೆ ಮೆಚ್ಚಿ ಆದಿಲ್‌ಶಾಹಿಯು ಬುಳ್ಳಸರಶೆಟ್ಟಿಗೆ ೧೬೦೦೦ ಸಾವಿರ ಎಕರೆ ಭೂಮಿಯನ್ನು ಕೊಟ್ಟು ಬಂಕಾಪುರ ಪ್ರದೇಶಕ್ಕೆ ಗಾದಿಮಾಲಕನನ್ನಾಗಿ ಮಾಡಿದನು ಎಂದು ಅಲ್ಲಿಯ ಈಗಿನ ಗಾದಿಮಾಲಕರಾದ ಶ್ರೀ ಅರವಿಂದ ಮಾಮಲೇದಾರರು ಹೇಳುತ್ತಾರೆ. ಪ್ರಸ್ತುತ ಅಧ್ಯಯನಕ್ಕೆ ಒಳಪಡಿಸಿರುವ ಜೈನ ವಾಡೆಗಳ ಮೂಲ ಪುರಷ ಬಗ್ಗೆ ಇಂಥದ್ದೇ ಕಥೆಗಳಿವೆ.



**೩.೫ ತೇರದಾಳ ವಾಡೆಯ ಅಧಿಕಾರಿಗಳಾಗಿ ಜೈನರು**

ಜನಪದರ ನಂಬಿಕೆಯ ಮತ್ತು ಉಕ್ತವಾಗಿರುವ ಕಥೆಗಳ ಪ್ರಕಾರ ಕೃಷ್ಣಪ್ಪ ಮತ್ತು ಬಸಗೌಡ ಖಾರಿ ತೇರದಾಳ ವಾಡೆಯ ಮೂಲ ಪುರುಷರು. ಇವರು ತೇರದಾಳದ ನಿವಾಸಿಗಳಾಗಿದ್ದು ಅಲ್ಲಿಂದಲೇ ಆಡಳಿತ ಪ್ರಾರಂಭಿಸುತ್ತಾರೆ. ಕಾಲಾನಂತರ ಹನಗಂಡಿಗೆ ಆಡಳಿತ ವರ್ಗಾವಣೆಯಾಗುತ್ತದೆ. ಮೂಲದಲ್ಲಿ ತೇರದಾಳದಿಂದ ಆಡಳಿತ ಪ್ರಾರಂಭವಾದರೂ ಅದು ಸ್ಪಷ್ಟವಾಗಿ ಸ್ಥಾಪನೆಯಾದದ್ದು ಹನಗಂಡಿಯಲ್ಲಿಯೇ ಎಂದು ದರೂರು ವಾಡೆಯ ಶ್ರೀ ರಾಹುಲ ಅವರು ತಿಳಿಸುತ್ತಾರೆ. "ಕುರಣ ದರ್ಗಾದ ಅಭಾಖಾನ್ ಮತ್ತೂ ಅಲ್ಲಮಪ್ರಭುಗಳೂ ಜೋತಿಲೀ ದೇಶಸಂಚಾರ ಮಾಡಕೊಂತ ತೇರದಾಳಕ್ಕೆ ಬರತಾರರ‍್ರೀ. ಇದ ಹೊತ್ತ್ಯಾಗ ಬಿಜಾಪುರದ ದೊರಿ ಆದಿಲ್‌ಶಾಹಿ ಅಭಾಖಾನನನ್ನು ನೋಡಾಕ, ತೇರದಾಳಕ್ಕೆ ಬಂದನರ‍್ರೀ. ಆವಾಗ ಆದಿಲ್‌ಶಾಹಿ ಊರಿನ ಇನಾಂದಾರಿಕೆಯ ಬಗ್ಗೆ ಪ್ರಸ್ತಾಪ ಮಾಡತಾನರ‍್ರೀ. ಅಲ್ಲಿ ಸೇರಿದ್ದ ಜನರಾಗ ಯಾರು ಮುಂದ ಬರಲಿಲ್ಲರೀ ಆಗ ಅಭಾಖಾನನು ಚಾವಡಿಯ್ಯಾಗ ಕುಂತ ಕೃಷ್ಣಪ್ಪ ಮತ್ತು ಜಿನಬಸವನಗೌಡರನ್ನ ಕರಿತಾನರೀ, ಅವರು ಬಂದರರ‍್ರೀ ಇನಾಂದಾರಿಕೆಯನ್ನ ಮಾಡಿತ್ತಿರ‍್ಯಾ

ಅಂತ ಅಭಾಖಾನ ಇವರನ್ನ ಕೇಳಿದನರೀ ಅದಕ್ಕೆ ಇವರು ಹುಂ ಅಂದರ್ರೀ. ಅದಕ್ಕೆ ಒಂದ್ ಶರತ್ತು ಐತಿ ಅದರಾಗ ಗೆದ್ದು ಬರಬೇಕು ಅಂತ ಹೇಳತಾರ್ರರೀ. ಏನ್ರೀ ಅಂತ ಕೇಳಿದಾಗ ಹುಚ್ಚುಕುದರೇ ಸವಾರಿ ಮಾಡಬೇಕು ಅಂತಾರ್ರರೀ. ಅದಕ್ಕೆ ಇವರು ಹೆದರ್‌ತಾರ್ರರೀ, ಅಲ್ಲೇ ಕುಂತ ಅಲ್ಲಮಪ್ರಭು ಸ್ವಾಮಿಗಳು ಕೃಷ್ಣಪ್ಪ ಜಿನಬಸವನಗೌಡನ ಕರೆದು ಮೂರು ಹಳ್ಳು (ಚಿಕ್ಕ ಕಲ್ಲು, ಹರಳು) ಮಂತ್ರಿಸಿ ಕೊಡತಾರ್ರೀ. ಒಂದು ಕುದುರಿ ಲಾಯದಾಗ ಒಂದು, ಕುದುರಿ ಹತ್ತುಬೇಕಾದ್ರ ಒಂದು, ಕುದುರಿ ಇಳಿಬೇಕಾದರ ಒಂದೊಂದು ಚಲ್ಲಕೋತಾ ಹೋಗ್ರೀ ಅಂತಾರ್ರೀ. ಇವರು ಹಂಗ ಮಾಡಿ ಹುಚ್ಚುಕುದರಿ ಸವಾರಿ ಮಾಡಿ ತೋರಿಸಿದ್ರರ್ರೀ. ಈ ಸವಾರಿಗೆ ಮೆಚ್ಚಿ ಆದಿಲ್‌ಶಾಹ ಇವರಿಗೆ ಭೇಷ್ ಎಂದು ೫೦೦೦ ಸಾವಿರ ಎಕರೆ ಭೂಮಿ ಇನಾಂ ಆಗಿ ಕೊಟ್ಟು, 'ಹುಚ್ಚು ಕುದುರೆ ಸರದಾರ್ರು', 'ಪಗರಾನಿ ವತನದಾರ್ರು', 'ರಾವ್ ಸಾಹೇಬರು' ಅಂತ ಬಿರುದು ಕೊಟ್ಟು ಜೊತಿಗೆ 'ಫಾಗಲ್ ಘೋಡಾಖಾನ್' ಎಂಬ ಬಿರುದನ್ನು ಖುಷಿಯಿಂದ ಕೊಡತಾನರ್ರೀ. ಆವಾಗಿಂದ ತೇರದಾಳದಾಗ ಇವರು ದೇಶಗತಿ ನಡಸ್ತಾರಂತ್ರರಿ ಎಂದು ತೇರದಾಳ ವಾಡೆಯ ಗೌಡತಿ ಅಮ್ಮ ಜಯಶ್ರೀ ಪಾರ್ಶ್ವನಾಥ ನಾಡಗೌಡ್ರು ಹೇಳುತ್ತಾರೆ. ಒಟ್ಟಾರೆಯಾಗಿ ತೇರದಾಳ ಮತ್ತು ಹನಗಂಡಿಯ ಮೂಲಪುರುಷರಾದ ಕೃಷ್ಣಪ್ಪ ಮತ್ತು ಬಸವನಗೌಡ ಆದಿಲ್‌ಶಾಹಿಯನ್ನು ತಮ್ಮ ಸಾಹಸಿದಿಂದ ಮೆಚ್ಚಿಸಿ ನಾಡಗೌಡಿಕೆಯನ್ನು ಪಡೆದಿದ್ದು ಮೇಲಿನ ಹೇಳಿಕೆಯಿಂದ ಸ್ಪಷ್ಟವಾಗುತ್ತದೆ.

ತೇರದಾಳ ಬಹುಹಿಂದಿನಿಂದಲೂ ಜೈನ ಪ್ರಮುಖ ಕೇಂದ್ರ. ಈ ಗ್ರಾಮ ಕುಹುಂಡಿ–೩೦೦೦ ನಾಡಿ ಪ್ರಖ್ಯಾತವಾದ ವ್ಯಾಪಾರ ಕೇಂದ್ರವಾಗಿತ್ತು. ಕಲ್ಯಾಣ ಚಾಲುಕ್ಯರ ಮಾಂಡಲಿಕ ರಟ್ಟ ವಂಶದ ಮೂರನೆಯ ಕಾರ್ತವೀರ್ಯನ ಕಾಲದಲ್ಲಿ ತೇರದಾಳಕ್ಕೆ ಗೊಂಕರಸ ಎಂಬುವನು ಅಧಿಪತಿಯಾಗಿದ್ದ. ಇವನಿಗೆ ವಿಷಸರ್ಪವೊಂದು ಕಡಿಯಲು ಇವನು ಮಂತ್ರ–ತಂತ್ರ ವ್ಯಾಮೋಹಕ್ಕೆ ಬೀಳದೆ ಪಂಚಪರಮೇಷ್ಠಿಗಳನ್ನು ಸ್ಮರಿಸಿದಾಗ ವಿಷ ದೂರವಾಯಿತಂತೆ. ತನ್ನ ಪ್ರಾಣ ರಕ್ಷಿಸಿದ ಜಿನನಿಗಾಗಿ ಗೊಂಕರಸನು ತೇರದಾಳದಲ್ಲಿ ಒಂದು ನೇಮಿನಾಥ ಬಸದಿಯನ್ನು ನಿರ್ಮಿಸಿದ. ಇದಕ್ಕೆ 'ಗೊಂಕ ಜಿನಾಲಯ'ವೆಂದೂ ಹೆಸರಿದೆ. ಇದರ ಕಾಲ ೧೨ನೇ ಶತಮಾನ. ಈ ಬಸದಿಗೆ ಕ್ರಿ.ಶ. ೧೧೮೧ರಲ್ಲಿ ಅಯ್ಯಾವೊಳೆ ಅಯ್ನೂರುರ ವ್ಯಾಪಾರಿಗಳು ಅಪಾರ ಪ್ರಮಾಣದ ದಾನ ಮಾಡುತ್ತಾರೆ. ಪ್ರಾಚೀನ ಕಾಲದಿಂದಲೂ ಜೈನಸಂಸ್ಕೃತಿಯ ಊರಾದ ತೇರದಾಳದ ಆಳ್ವಿಕೆ ಜೈನರ ಅಧೀನದಲ್ಲಿಯೇ ಇತ್ತು. ಗ್ರಾಮಾಧಿಕಾರ ವಂಶಪಾರಂಪರ್ಯವಾಗಿ ಬರುವಂತಹದ್ದು. ಆದ್ದರಿಂದ ಕೃಷ್ಣಗೌಡ ಮತ್ತು ಜಿನಬಸವನಗೌಡ ಗೊಂಕರಸನ ವಂಶಸ್ಥರೆ ಇರಬೇಕು. ಖಚಿತವಾಗಿ ಹೇಳಲು ಇರುವ ಆಧಾರ ಇರದಿದ್ದರೂ ಊರಿನ ಗೌಡ ಅಧಿಕಾರದಿಂದಲೇ ಈ ವಿಚಾರವನ್ನು ಸ್ಪಷ್ಟಪಡಿಸಬಹುದು. "ಗೊಂಕದೇವ ಅರಸನು ಈ ಹನಗಂಡಿ ಸಂಸ್ಥಾನದ ಮೂಲಪುರುಷನಿದ್ದು ತಾರೀಖು ೦೫–೦೯–೧೮೫೩ ಇಸ್ವಿ ದಿವಸ ಆಗಿನ ದೇಸಾಯಿಯು ಈ ಸಂಸ್ಥಾನದ ಮೂಲಪುರುಷನು ಕರಿಬಸವಗೌಡನೆಂದು ಬರೆದು ಅದರ ವಂಶಾವಳಿಯನ್ನು ಇನಾಂ ಕಮೀಟಿಗೆ ಹಾಜರು ಮಾಡಿರುವರು.[೨] ಆದ್ದರಿಂದ ಕರಿಬಸಗೌಡ

ದೇಸಗತಿಯ ಮೂಲಪುರಷನಾಗಿದ್ದಾನೆ. ಪ್ರಾರಂಭದ ಕಥೆಯಲ್ಲಿ ಬರುವ ಕೃಷ್ಣಪ್ಪ ಕರಿಬಸವಗೌಡ ಇಬ್ಬರೂ ಒಂದೇಯಾಗಿದ್ದಂತೆ ತೋರುತ್ತದೆ. ಏಕೆಂದರೆ ತೇರದಾಳ ಮತ್ತು ಹನಗಂಡಿ ವಂಶವೃಕ್ಷದ ದಾಖಲೆಯಲ್ಲಿ ಮೂಲಪುರಷ ಬಸಗೌಡ ಕಾರಿ ಎಂದಿದೆ. ಕರಿಬಸವನಗೌಡ ಕೃಷ್ಣಪ್ಪ ಜಿನಬಸವನ ಗೌಡ ಎಂಬುವ ಬಸಗೌಡ ಕಾರಿ ಎಂಬುವನಿಗಿರುವ ಇತರ ನಾಮಾವಳಿಗಳು. ಬಸವ (ವೃಷಭ) ಆದಿತೀರ್ಥಂಕರರ ಲಾಂಛನವೂ ಹೌದು. ಆದ್ದರಿಂದ ಹನಗಂಡಿ ವಾಡೆಯ ಅಧಿಕಾರಿಗಳು ಸ್ಪಷ್ಟವಾಗಿ ಜೈನರೇ ಆಗಿದ್ದಾರೆ. ಕಾಲಾನಂತರ ತೇರದಾಳದಿಂದ ೧ ಹನಗಂಡಿ, ೨ ಹಳ್ಳಿಂಗಳ್ಳಿ, ೩ ದರೂರು, ೪ ಸಪ್ತಸಾಗರ, ೫ ತೀರ್ಥ, ೬ ಸಸಾಲಟ್ಟಿ ಎಂಬ ವಾಡೆಗಳು ಉದಯವಾದುವು. ಇವು ಯಾವಾಗ ಬೇರೆಯಾದುವು ಎಂಬುದರ ಬಗ್ಗೆ ಸ್ಪಷ್ಟವಾದ ದಾಖಲೆಗಳು ದೊರೆತಿಲ್ಲ. ಇದ್ದುದರಲ್ಲೆ ದೊರೆತ ಮಾಹಿತಿ ಪ್ರಕಾರ ೧೭ನೆಯ ಶತಮಾನದಲ್ಲಿ ಬಂದ ಸಾರ್ಸ್ ರೋಗದ ಪರಿಣಾಮವಾಗಿ ತೇರದಾಳ ದೇಸಗತಿ ಒಡೆದು ೬ ಮನೆತನಗಳು ಉದಯವಾದವು.

ಸಾಳುವ ವಂಶದ ಗೇರುಸೊಪ್ಪೆಯ ಮಹಾಮಂಡಲೇಶ್ವರಿ ರಾಣಿ ಚೆನ್ನಭೈರಾದೇವಿ ಪ್ರಭಾವಿ ಜೈನರಾಣಿ ಕ್ರಿ.ಶ. ೧೫೫೪ ರಿಂದ ೧೬೦೩ರವರೆಗೆ ಆಳಿದ ಇವಳು ಬಿಜಾಪುರದ ಆದಿಲ್‌ಶಾಹಿಗಳ ರಾಜಕೀಯ ಮಿತ್ರಳು ಆಗಿದ್ದಳು. ಇವಳ ಬದ್ಧ ವೈರಿಗಳು, ಪೋರ್ಚುಗೀಸರು. ಇವರು ಮಹಾಮಂಡಲೇಶ್ವರಿ ರಾಣಿಚೆನ್ನಭೈರಾದೇವಿಯನ್ನು ಅವಕಾಶಸಿಕ್ಕಾಗಲೆಲ್ಲಾ ಕಾಲುಕೆದರಿ ಜಗಳವನ್ನು ಮಾಡುತ್ತಲೇ ಇದ್ದರು. ೧೫೭೦ರಲ್ಲಿ ಪೋರ್ಚುಗೀರಸಲು ರಾಣಿಯ ಹೊನ್ನಾವರಕ್ಕೆ ಮುತ್ತಿಗೆ ಹಾಕಿದರು. ಕೆಚ್ಚೆದೆಯ ರಾಣಿ ಚೆನ್ನಭೈರಾದೇವಿಯು ಇದೇ "೧೫೭೦ರಲ್ಲಿ ಬಿಜಾಪುರ ಸುಲ್ತಾನ ಇಬ್ರಾಹಿಂ ಆದಿಲ್ ಶಾಹಿ ಮತ್ತು ಜಾಮೋರಿನರೊಡಗೂಡಿ ಪೋರ್ಚುಗೀಜರನ್ನು ಹೊನ್ನಾವರದಿಂದ ಓಡಿಸುವ ಇರಾದೆಯಿಂದ ಭೀಕರ ಕದನವನ್ನು ಮಾಡಿ ಪೋರ್ಚುಗೀಸರಿಗೆ ಅಪಾರ ನಷ್ಟವನ್ನುಂಟು ಮಾಡಿದಳು ಚೆನ್ನಭೈರಾದೇವಿ".[೬೩] ಚೆನ್ನಭೈರಾದೇವಿ ಮತ್ತು ಆದಿಲ್‌ಶಾಹಿಗಳು ರಾಜಕೀಯವಾಗಿ ಆಪ್ತರಾಗಿದ್ದರಿಂದ ಜೈನರು ಬಹುಬೇಗ ಆದಿಲ್‌ಶಾಹಿಗಳ ರಾಜ್ಯದಲ್ಲಿ 'ದೇಸಗತಿ' ಅಧಿಕಾರವನ್ನು ಸಂಪಾದಿಸಿರಲಿಕ್ಕೂ ಸಾಧ್ಯವಿದೆ. ಅಂತೆಯೇ ತೇರದಾಳ ದೇಸಗತಿ ಬಸಗೌಡ ಕಾರಿಗೆ ಒಲಿದು ಬಂದಿರುವ ಸಾಧ್ಯತೆಗಳನ್ನು ತಳ್ಳಿ ಹಾಕುವಂತಿಲ್ಲ.

ಪ್ರಸ್ತುತ ಅಧ್ಯಯನಕ್ಕೆ ಉತ್ತರ ಕರ್ನಾಟಕದ ಜೈನ ವಾಡೆಗಳನ್ನು ಒಳಪಡಿಸಿಕೊಳ್ಳಲಾಗಿದೆ. ಇವುಗಳಲ್ಲಿ ಬಹುತೇಕ ವಾಡೆಗಳು ಬಾಗಲಕೋಟೆ ಅವಿಭಜಿತ ಧಾರವಾಡ, ಬೆಳಗಾವಿ ಜಿಲ್ಲೆಯಲ್ಲಿವೆ. ಇವುಗಳ ಅಧ್ಯಯನವು ತದನಂತರದ ಅಧ್ಯಾಯಗಳಲ್ಲಿ ಬರುವುದರಿಂದ ಅವುಗಳ ಯಾದಿಯನ್ನು ಮಾತ್ರ ಇಲ್ಲಿ ಕೊಡಲಾಗಿದೆ.

| ಊರು | ತಾಲ್ಲೂಕು | ಜಿಲ್ಲೆ |
|---|---|---|
| ೧. ತೇರದಾಳ ನಾಡಗೌಡ ವಾಡೆ | ತೇರದಾಳ | ಬಾಗಲಕೋಟೆ |
| ೨. ಹನಗಂಡಿ ದೇಸಾಯಿ ವಾಡೆ | ತೇರದಾಳ | ಬಾಗಲಕೋಟೆ |

| | | |
|---|---|---|
| ೩. ದರೂರು ನಾಯಕರ ವಾಡೆ | ಅಥಣಿ | ಬೆಳಗಾವಿ |
| ೪. ಅಣ್ಣೀಗೆರೆ ದೇಶಪಾಂಡೆ ವಾಡೆ | ನವಲಗುಂದ | ಧಾರವಾಡ |
| ೫. ಮುಳಗುಂದ ದೇಶಪಾಂಡೆ ವಾಡೆ | ಗದಗ | ಗದಗ |

**ಅಡಿಟಿಪ್ಪಣಿಗಳು.**

೧.

| | | | |
|---|---|---|---|
| ೧. ಆದಿನಾಥ/ವೃಷಭನಾಥ | ೭. ಸುಪಾರ್ಶ್ವನಾಥ | ೧೩. ವಿಮಲನಾಥ | ೧೯. ಮಲ್ಲಿನಾಥ |
| ೨. ಅಜಿತನಾಥ | ೮. ಚಂದ್ರಪ್ರಭ | ೧೪. ಅನಂತನಾಥ | ೨೦. ಮುನಿಸುವ್ರತ |
| ೩. ಸಂಭವನಾಥ | ೯. ಪುಷ್ಪದಂತ | ೧೫. ಧರ್ಮನಾಥ | ೨೧. ನಮಿನಾಥ |
| ೪. ಅಭಿನಂದನ | ೧೦. ಶೀಥಲನಾಥ | ೧೬. ಶಾಂತಿನಾಥ | ೨೨. ನೇಮಿನಾಥ |
| ೫. ಸುಮತಿನಾಥ | ೧೧. ಶ್ರೇಯಾಂಸ | ೧೭. ಕುಂಥುನಾಥ | ೨೩. ಪಾರ್ಶ್ವನಾಥ |
| ೬. ಪದ್ಮಪ್ರಭ | ೧೨. ವಾಸುಪೂಜ್ಯ | ೧೮. ಅರನಾಥ | ೨೪. ಮಹಾವೀರ |

೨

| | | | |
|---|---|---|---|
| ೧. ನಿರ್ವಾಣ | ೭. ಅಮಲಪ್ರಭ | ೧೩. ಶಿವಗಣ | ೧೯. ಕೃಷ್ಣ |
| ೨. ಸಾಗರ | ೮. ಉದ್ಧರ | ೧೪. ಉತ್ಸಾಹ | ೨೦. ಜ್ಞಾನಮತಿ |
| ೩. ಮಹಾಸಾಧು | ೯. ಅಂಗೀರ | ೧೫. ಜ್ಞಾನೇಶ್ವರ | ೨೧. ಶುದ್ಧಮತಿ |
| ೪. ವಿಮಲಪ್ರಭ | ೧೦. ಸನ್ಮತಿ | ೧೬. ಪರಮೇಶ್ವರ | ೨೨. ಶ್ರೀಭದ್ರ |
| ೫. ಶ್ರೀಧರ | ೧೧. ಸಿಂಧೂ | ೧೭. ವಿಮಲೇಶ್ವರ | ೨೩. ಅತಿಕ್ರಾಂತ |
| ೬. ಸುದತ್ತ | ೧೨. ಕುಸುಮಾಂಜಲಿ | ೧೮. ಯಶೋಧರ | ೨೪. ಶಾಂತಶ್ವೇತಿ |

೩ ಯಸ್ಯ ಕಿಲಾನುಚರಿತಮುಪಾಕರ್ಣ್ಯ ಕೊಙ್ಕ ವೇಙ್ಕ ಕುಟಕಾನಾಂ ರಾಜಾ ಅರ್ಹನ್ನಾಮೋಪಶಿಕ್ಷ್ಯ ಕಲಾವಧರ್ಮ ಉತ್ಕೃಷ್ಯಮಾಣೇ ಭವಿತವ್ಯೇನ ವಿಮೋಹಿತ: ಸ್ವಧರ್ಮಪಥಮಕುತೋಭಯಮಪಹಾಯ ಕುಪಿತಪಾಖಣ್ಡ ಮಸಮಂಜಸಂ ನಿಜಮುನಿಷಯಾ ಮನ್ದ: ಸಮ್ಪ್ರವರ್ತಯ್ಯಿತೆ॥ ೯ ॥ ಯೇನ ಸಹವಾವಕಲೌ ಮನಜಾಪಸದಾ ದೇವಮಾಯಾಮೋಹಿತಾ:ಸ್ವವಿಧಿನಿಯೋಗ ಶೌಚಚಾರಿತ್ರವಿಹೀನಾ ದೇವಹೇಲನಾನ್ಯಪವ್ರತಾನಿ ನಿಜೇಚ್ಛಯಾ ಗೃಹ್ಣಾನಾ ಅಸ್ನಾನಾಚಮನಶೌಚಕೇಶೋಲ್ಲುಚನಾದೀನಿ ಕಲಿನಾ ಧರ್ಮಬಹುಲೇನೋಪಹತಧಿಯೋ ಬ್ರಹ್ಮ-ಬ್ರಾಹ್ಮಣ-ಯಜ್ಞಪುರುಷಲೋಕ ವಿದೂಷಕಾ: ಪ್ರಾಯೇಣ ಭವಿಷ್ಯನ್ತಿ ॥ ೧೦ ॥ ತೇ ಚ ಸ್ವಹ್ಯರ್ವಾಕೂತನಯಾ ನಿಜಲೋಕ ಯಾತ್ರಯಾಽನ್ಧ ಪರಂಪರಯಾಶ್ವಸ್ತಾ: ತವಸ್ಯನ್ಧೇ ಸ್ವಯಮ್ಯೇವ ಪ್ರಪತಿಷ್ಯನ್ತಿ । ಆಯಮವತಾರೋ ರಜಸೋಪಪ್ಲುತ ಕೈವಲ್ಯೋಪಶಿಕ್ಷಣಾರ್ಥ: ॥ – ಸ್ಕಂದ ಪುರಾಣ ೫ ಅಧ್ಯಾಯ-೬

೪ ಭಗವಾನ್ ಆದಿನಾಥರ ಪರ್ಯಾಯ ನಾಮ ವೃಷಭನಾಥ, ವೃಷಭ ಧರ್ಮ ಎಂದಿದ್ದು ಇವರನ್ನು ಕುರಿತಾಗಿಯೇ, ಜೈನಧರ್ಮದ ಮೊದಲ ತೀರ್ಥಂಕರರು ಇವರೇ ಆಗಿದ್ದರಿಂದ, ಮತ್ತು ಪ್ರಥಮ ಧರ್ಮಪ್ರವರ್ತಕರಾಗಿದ್ದರಿಂದ ಇವರ ಅನುಯಾಯಿಗಳ ವೃಷಭಮತದವರು ಎಂದಿರಲಿಕ್ಕೆ ಸಾಕು.

೫ ಡಾ॥ ಸೂರ್ಯನಾಥ ಕಾಮತ್ – ಕರ್ನಾಟಕದ ಸಂಕ್ಷಿಪ್ತ ಇತಿಹಾಸ. ಪುನರ್ ಮುದ್ರಣ ೨೦೧೩ ಪುಟ – ೧೭

೬ ಜಿ ಬ್ರಹ್ಮಪ್ಪ – ಶ್ರವಣಬೆಳಗೊಳದ ಶಾಸನಗಳು ೧೯೮೮ ಪುಟ–೧

೭ ಜೈನಧರ್ಮ ಉತ್ತರದಿಂದ ಬಂದದ್ದು ಎಂಬುದು ಚರ್ವಿತ ಚರ್ವಣ ಮಾತು. ಉತ್ತರದಲ್ಲಿ ಬರಗಾಲವಾದ ಕಾರಣ ಭದ್ರಬಾಹು, ಸಹಸ್ರಾರು ಮುನಿಗಳು ವಲಸೆ ಬಂದುದು ದಿಟ. ಆದರೆ ಜೈನಧರ್ಮ ಅವರು ಬರುವುದಕ್ಕೂ ಮೊದಲು ಇಲ್ಲಿತ್ತು. ಜೈನಮುನಿಗಳು ತಾವಾಗಿ ಅಡುಗೆ ಮಾಡಿ ಉಣ್ಣರು. ಅವರು ಗೃಹಸ್ಥರಿಂದ ಆಹಾರ ಪಡೆಯುತ್ತಾರೆ. ಬೃಹತ್ ಪ್ರಮಾಣದ ಮುನಿ ಸಂಘಕ್ಕೆ ಭಿಕ್ಷೆ ನೀಡಲು ಜೈನರು ದೊಡ್ಡ ಸಂಖ್ಯೆಯಲ್ಲಿ ಇಲ್ಲಿದ್ದರು. ತಮ್ಮ ತಪಸ್ಸಿಗೂ ಆಹಾರಕ್ಕೂ ಇಲ್ಲಿ ನಿರಾತಂಕವೆನಿಸಿ ನೆಲಸಿದರು. ಜೈನಧರ್ಮ ದ್ರಾವಿಡವೆಂದು ಕೊಂಡಕುಂದರೂ ಪೂಜ್ಯಪಾದರೂ ಪ್ರಾಕೃತ, ಸಂಸ್ಕೃತ ಕೃತಿಗಳಲ್ಲಿ ತಿಳಿಸಿದ್ದಾರೆ. ದ್ರಾವಿಡ ಸಂಘವೆಂಬ ಪ್ರಾಚೀನ ಜೈನ ಮುನಿ ಸಂಘವಿದೆ. ಆರ್ಯಪೂರ್ವ ಜೈನ ದ್ರಾವಿಡರು ದಕ್ಷಿಣ ಭಾರತದಲ್ಲಿ ಹಬ್ಬಿದ್ದರು. ತಮಿಳುನಾಡು, ಕರ್ನಾಟಕ, ಆಂಧ್ರ ಕೇರಳದಲ್ಲಿ ಕ್ರಿಪೂ ನಾಲ್ಕನೆಯ ಶತಮಾನದಿಂದ ಕ್ರಿ.ಶ. ಎರಡನೆಯ ಶತಮಾನದವರೆಗೆ ೮೯ ಪ್ರಾಚೀನ ತಮಿಳು ಶಾಸನಗಳು ಸಿಕ್ಕಿವೆ. ಈ ೮೯ರಲ್ಲಿ ೮೫ ಜೈನ ಶಾಸನಗಳು. ಕ್ರಿಪೂ. ಎರಡನೆಯ ಶತಮಾನದ ಶಾಸನಗಳಲ್ಲಿ ಕರ್ನಾಟಕ ಜೈನ ಸನ್ಯಾಸಿನಿಯರ ಪ್ರಭಾವವಿದೆ. ಈ ಬಗೆಯ ಆಧಾರಗಳು ಜೈನಧರ್ಮ ಹೊರಗಿನಿಂದ ವಲಸೆ ಬಂದುದಲ್ಲ. ಅದು ಇಲ್ಲಿಯೇ ಈ ನೆಲದಲ್ಲಿಯೇ ಇದ್ದು ಹಬ್ಬಿದ ಮೂಲ ದೇಸಿ ಧರ್ಮವೆಂದು ಸಾರುತ್ತಿದೆ – ಪ್ರೊ ಹಂಪನಾ – ಕನ್ನಡಿಗರ ಮೊದಲ ಧರ್ಮ. ಪ್ರಜಾವಾಣಿ – ಶುಕ್ರವಾರ ೨೫ನೇ ಏಪ್ರಿಲ್–೨೦೧೪ ಪುಟ–೬ ಸಂಪುಟ–೧೫; ಸಂಚಿಕೆ–೧೧೪. ಜೈನವು ಉತ್ತರ ಭಾರತದಿಂದ ಕರ್ನಾಟಕಕ್ಕೆ 'ವಲಸೆ ಬಂದಿದ್ದು' ಎಂಬಂತಹ ಮಾತುಗಳು ಅರ್ಥಹೀನ; 'ವ್ಯಾಪಿಸಿತು' ಎಂದು ಬೇಕಾದರೆ ಹೇಳಲಿ ನಾನು ದೆಹಲಿಗೆ ಹೋಗಿ ವಾಸಿಸಿದರೆ ಅದು ವಲಸೆ ಹೋದಂತಲ್ಲ; ಆದರೆ ಇಂಗ್ಲೆಂಡಿಗೆ ಹೋಗಿ ಅಲ್ಲಿ ನೆಲೆಸಿದರೆ ವಲಸೆ ಹೋದಂತೆ – ಡಾ.ಎಂ. ಚಿದಾನಂದ ಮೂರ್ತಿ., ವೀರಶೈವ – ಲಿಂಗಾಯತ ಪ್ರತ್ಯೇಕ ಧರ್ಮಗಳಲ್ಲ – ಪ್ರಜಾವಾಣಿ ಬುಧವಾರ ಮೇ ೭, ೨೦೧೪. ಸಂಪುಟ–೧೨, ಸಂಚಿಕೆ–೧೨೬, ಪುಟ–೬.

೮ ಜೈನ ಧರ್ಮದಲ್ಲಿ ಸಂಘ (ಮೂಲಸಂಘ, ದ್ರಾವಿಡ ಸಂಘ, ನಂದಿ ಸಂಘ, ಯಾಪನೀಯ ಸಂಘ), ಗಣ (ದೇಶಿಕಗಣ, ಸೇನಗಣ, ಕಾಣೂರುಗಣ), ಗಚ್ಛ (ಪುಸ್ತಕಗಚ್ಛ, ಮೇಷಪಾಷಾಣಗಚ್ಛ, ಸ್ವರ್ಣಪಾಷಾಣಗಚ್ಛ), ಅನ್ವಯ (ಕುಂದ ಕುಂದಾನ್ವಯ, ಮೈಳಾಪಾನ್ವಯ, ಚಂದ್ರಿಕಾವಾಟ ಅನ್ವಯ) ಬಳಿ (ಇಂಗಳೇಶ್ವರ ಬಳಿ, ಪನಸೋಗೆ ಬಳಿ), ಗಣ (ಕಂಡೂರು ಗಣ, ಕಾರೇಯ ಗಣ) ಗಚ್ಛ (ಪೊಗರಿಗಚ್ಛ) – ಹಂಪ ನಾಗರಾಜಯ್ಯ– ಯಾಪನೀಯ ಸಂಘ–೧೯೯೯ ಪುಟ–೨೧

೯ ಡಾ.ಬಿ.ಆರ್.ಹಂದೂರ – (ಸಂ) ೨೦೧೦ ಪುಟ–೨ ಬೆಳಗಾವಿ ಜಿಲ್ಲೆಯ ಜೈನ ಶಾಸನಗಳು

೧೦ ಡಾ.ಶಿವಾನಂದ ಗಾಳಿ, ಡಾ.ಶ್ರೀಧರ ಹೆಗಡೆ ಭದ್ರನ್ (ಸಂ) ೨೦೦೪ ಪುಟ-೪೪ – ಜಿನದೃಷ್ಟಿ

೧೧ ಸಾಂದರ್ಭಿಕವಾಗಿ ಭೇಟಿಯಾದಾಗ ನಾಡೋಜ ಹಂಪನಾರವರು ಹೇಳಿದ್ದರು

೧೨ ಡಾ.ಸೂರ್ಯನಾಥ ಕಾಮತ್ – ಪೂರ್ವೋಕ್ತ ಪುಟ-೩೪

೧೩ ಅದೇ ಪುಟ-೩೪

೧೪ ಜಿ ಬ್ರಹ್ಮಪ್ಪ. ಪೂರ್ವೋಕ್ತ ಪುಟ-೪-೫

೧೫ ಡಾ. ಸೂರ್ಯನಾಥ ಕಾಮತ್. ಪೂರ್ವೋಕ್ತ ಪುಟ-೪೪

೧೬ ಡಾ. ಸಿ.ಆರ್. ಗೋವಿಂದ ರಾಜು (ಸಂ) ೨೦೧೦ ಪುಟ-೩ – ಚಾರಿತ್ರಿಕ ಕರ್ನಾಟಕ

೧೭ ಡಾ. ಸೂರ್ಯನಾಥ ಕಾಮತ್ – ಪೂರ್ವೋಕ್ತ, ಪುಟ-೫೮

೧೮ ಅದೇ ಪುಟ ೭೦

೧೯ ಮಿರ್ಜಿ ಅಣ್ಣಾರಾಯ – ಜೈನ ಧರ್ಮ ಮೂರನೇ ಮುದ್ರಣ, ೧೯೯೭, ಪುಟ ೧೧೧

೨೦ ಡಾ. ಸಿ.ಆರ್. ಗೋವಿಂದರಾಜು – ಪೂರ್ವೋಕ್ತ, ಪುಟ-೪

೨೧ ಡಾ. ಸೂರ್ಯನಾಥ ಕಾಮತ್, ಪೂರ್ವೋಕ್ತ, ಪುಟ-೯೦

೨೨ ಡಾ. ಹಂಪ ನಾಗರಾಜಯ್ಯ – ಚಂದ್ರಕೊಡೆ. ೧೯೯೭. ಪುಟ-೪೯

೨೩ ಡಾ. ಆರ್.ಸಿ. ಹಿರೇಮಠ, ಡಾ. ಎಂ.ಎಂ. ಕಲಬುರ್ಗಿ (ಸಂ) ಕನ್ನಡ ಶಾಸನ ಸಂಪದ ಚತುರ್ಥ ಮುದ್ರಣ-೧೯೯೫, ಪುಟ-೯೧ ಉದ್ಧೃತ E.I.V P.P. 245-252

೨೪ ಕನ್ನಡ ರತ್ನಕೋಶ (ಪರಿಷ್ಕೃತ – ಕನ್ನಡ ಸಾಹಿತ್ಯ ಪರಿಷತ್ತು – ಒಂಬತ್ತನೆಯ ಮುದ್ರಣ- ೨೦೧೩ ಪುಟ-೧೮೩)

೨೫ ಡಾ.ಸೂರ್ಯನಾಥ ಕಾಮತ್- ಪೂರ್ವೋಕ್ತ, ಪುಟ-೧೧೧

೨೬ ಸಾಂದರ್ಭಿಕವಾಗಿ ಭೇಟಿಯಾದಾಗ ನಾಡೋಜ ಹಂಪನಾರವರು ಹೇಳಿದ್ದರು

೨೭ ಡಾ.ಸೂರ್ಯನಾಥ ಕಾಮತ್- ಪೂರ್ವೋಕ್ತ, ಪುಟ-೧೧೯

೨೮ ಕರ್ನಾಟಕ ಮತ್ತು ಜೈನ ಸಂಸ್ಕೃತಿ – ಕರ್ನಾಟಕ ವಿಶ್ವವಿದ್ಯಾಲಯ, ಧಾರವಾಡ-೧೯೭೫, ಪುಟ-೧೪

೨೯ ಅದೇ ಪುಟ-೧೫-೧೬

೩೦ ಅದೇ ಪುಟ-೧೫

೩೧ ಡಾ.ಬಿ.ಎ. ಸಾಲೆತ್ತೊರೆ, ಡಾ.ದೇಸಾಯಿ ಪಾಂಡುರಂಗರಾಯರು – ಕನ್ನಡ ನಾಡಿನ ಚರಿತ್ರೆ- ಭಾಗ ಒಂದು. ೨೦೦೯, ಪುಟ-೪೮

೩೨ ಡಾ.ಹಂಪ ನಾಗರಾಜಯ್ಯ – ಚಂದ್ರಕೊಡೆ, ೧೯೯೭, ಪುಟ-೩೪

೩೩ ಡಾ.ಎಂ.ಎಂ. ಕಲಬುರ್ಗಿ – ಸಂಸ್ಕೃತಿ-ವಿಕೃತಿ, ೨೦೦೬, ಪುಟ-೩೮

೩೪ ಅದೇ ಪುಟ-೩೮-೨೯

೩೫ ಅದೇ ಪುಟ-೨೯

೩೬ ನಾಡೋಜ ಪ್ರೊ ಹಂಪ ನಾಗರಾಜಯ್ಯ - ಹೊಂಬುಜ ಮತ್ತು ಸಾಂತರರು, ೨೦೧೩ ಪುಟ-೧೦೭

೩೭ ಡಾ.ಬಿ.ಎ. ಸಾಲೆತ್ತೊರೆ, ಡಾ.ದೇಸಾಯಿ ಪಾಂಡುರಂಗರಾಯರು, ಪೂರ್ವೋಕ್ತ, ಪುಟ-೫೧

೩೮ ನಾಡೋಜ ಪ್ರೊ ಹಂಪ ನಾಗರಾಜಯ್ಯ ಪೂರ್ವೋಕ್ತ, ಪುಟ-೧೩೫

೩೯ ಮಿರ್ಜಿ ಅಣ್ಣಾರಾಯ ಪೂರ್ವೋಕ್ತ, ಪುಟ-೧೧೯

೪೦ ಕೆ.ಜಿ ಭಟ್‌ಸೂರಿ-ಹಾಡುವಳ್ಳಿ, ಜೈನ ಶಾಸನ ಮೂರ್ತಿಶಿಲ್ಪ, ೨೦೧೧, ಪುಟ-೨

೪೧ ಅದೇ ಪುಟ-೨

೪೨ ನಾಡೋಜ ಪ್ರೊ ಕಮಲಾ ಹಂಪನಾ - ಮಹಾಮಂಡಲೇಶ್ವರಿ ರಾಣಿ ಚೆನ್ನಭೈರಾದೇವಿ ಮತ್ತು ಇತರ ಕರಾವಳಿ ರಾಣಿಯರು ೨೦೧೧, ಪುಟ-೩೩

೪೩ ಡಾ.ಎನ್. ಚಿನ್ನಸ್ವಾಮಿ ಸೋಸಲೆ - ಕರಾವಳಿ ಕರ್ನಾಟಕದ ಜೈನ ಅರಸು ಮನೆತನಗಳು ಸಾಂಸ್ಕೃತಿಕ ಅಧ್ಯನತ - ೨೦೧೪. ನಾಡೋಜ ಡಾ॥ಹಂ.ಪ. ನಾಗರಾಜಯ್ಯ - ಆಶಯ ನುಡಿ ಪುಟ-೨೭

೪೪ ನಾಡೋಜ ಪ್ರೊ ಕಮಲಾ ಹಂಪನಾ, ಪೂರ್ವೋಕ್ತ, ಪುಟ-೫೬

೪೫ ಕಾಗತಿ ದೇಸಗತಿಯ ಧೂಲಪ್ಪಗೌಡ-ಪದ್ಮಾವತಿ ದಂಪತಿಯ ಒಬ್ಬಳೇ ಮಗಳು ಚೆನ್ನಮ್ಮ. ಈ ಮನೆತನ ಮೊದಲು ಜೈನ ಧರ್ಮಕ್ಕೆ ಸೇರಿದ್ದು, ಮೂರನೆಯ ಖಾನಗೌಡ ದೇಸಾಯಿಯ ಕಾಲದಲ್ಲಿ ವೀರಶೈವ ಮತದತ್ತ ಒಲವು ತೋರಿತು. ಖಾನಗೌಡ ಕಾಗತಿಯಲ್ಲಿರುವ ಪ್ರಾಚೀನ ಬಸದಿಯೊಂದನ್ನು ಒಡೆದು ಹಾಕಿದ. ಚೆನ್ನಮ್ಮಳನ್ನು (೧೭೭೮-೧೮೨೯) ಕಿತ್ತೂರು ಮಲ್ಲಸರ್ಜನಿಗೆ ಮದುವೆ ಮಾಡಿಕೊಡುತ್ತಾರೆ. ಡಾ.ಬಿ.ಎಂ. ನೇಗಿನಹಾಳ್- ನೇಗಿನಹಾಳ ಪ್ರಬಂಧಗಳು ೧೯೯೯, ಪುಟ ೨೬೮-೩೦೦

೪೬ ನಾಡೋಜ ಪ್ರೊ ಕಮಲಾ ಹಂಪನಾ, ಪೂರ್ವೋಕ್ತ, ಪುಟ-೮೨

೪೭ ಡಾ.ಎನ್. ಚಿನ್ನಸ್ವಾಮಿ ಸೋಸಲೆ, ಪೂರ್ವೋಕ್ತ, - ಪುಟ-೨೯

೪೮ BBC NEWS UK, 26 Sept 2011. www.bbc.com/new/haul/uk-15061868

೪೯ ನಾಡೋಜ ಪ್ರೊ ಕಮಲಾ ಹಂಪನಾ, ಪೂರ್ವೋಕ್ತ, ಪುಟ-೫೭

೫೦ ಡಾ.ಬಿ.ಎ ಸಾಲೆತ್ತೊರೆ, ಡಾ.ದೇಸಾಯಿ ಪಾಂಡುರಂಗರಾಯರು, ಪೂರ್ವೋಕ್ತ, ಪುಟ-೫೨

೫೧ ಡಾ.ಎನ್ ಚಿನ್ನಸ್ವಾಮಿ ಸೋಸಲೆ, ಪೂರ್ವೋಕ್ತ, ಪುಟ-೧೭೩, ಈ ವಂಶ ಕರ್ನಾಟಕದ ಅತ್ಯಂತ ಪ್ರಾಚೀನ ಜೈನ ರಾಜವಂಶವೂ ಹೌದು.

೫೨ ಡಾ.ಬಿ.ಆರ್. ಹಂದೂರ, ಪೂರ್ವೋಕ್ತ ಪುಟ-೨

೫೩ ಡಾ. ಎಸ್.ಪಿ ಪಾಟೀಲ - ಚಾವುಂಡರಾಯ ಪುರಾಣ ಒಂದು ಅಧ್ಯಯನ, ೧೯೯೩, ಪುಟ-೪೮

೩೪ ಅದೇ ಪುಟ ೪೪

ನಡೆಯಲ್ ಬಗೆದಂ ತನ್ನಿ
ರ್ದಡೆಯಿಂದ ತಳರ್ದನೆತ್ತ ಮೊಗಸಿದನಾವಂ
ಗಡಿಯಿಟ್ಟನಣ್ಣನೆಂದುಂ
ಪುಡಿಕೆಯ ಮೊಲದಂತೆ ತುಬ್ಬುತಿರ್ಪರ್ ಪಗೆವರ್

೩೫ ಅದೇ ಪುಟ-೩೪

೩೬ ಜಿ.ಬ್ರಹ್ಮಪ್ಪ, ಪೂರ್ವೋಕ್ತ, ಪುಟ-೨೪

೩೭ ಅದೇ ಪುಟ-೨೪

೩೮ ಡಾ.ಹಂಪ ನಾಗರಾಜಯ್ಯ – ಚಂದ್ರಕೊಡೆ, ೧೯೯೭, ಪುಟ-೫೨

೩೯ ಅದೇ ಪುಟ -೫೩

೬೦ ಡಾ.ವಿರೂಪಾಕ್ಷ ಬಡಿಗೇರ: ಸಿರಸಂಗಿ ಸಂಸ್ಥಾನ ಒಂದು ಅಧ್ಯಯನ. ೧೯೮೮, ಪುಟ-೧೪

೬೧ ಡಾ.ಸಂಗಪ್ಪ ಚ ಕಲ್ಯಾಣಿ: ಬಾಗಲಕೋಟೆ ದೇಸಗತಿಗಳು (ಅಪ್ರಕಟಿತ ಪಿಎಚ್.ಡಿ ಮಹಾಪ್ರಬಂಧ) ಪುಟ-೫೩

## ಅಧ್ಯಾಯ–ನಾಲ್ಕು

# ಜೈನ ವಾಡೆಗಳ ಪರಿಸರ ಮತ್ತು ಇತಿಹಾಸ

೪.೧ ತೇರದಾಳ ನಾಡಗೌಡರ ವಾಡೆಯ ಪರಿಸರ ಮತ್ತು ಇತಿಹಾಸ.

೪.೨ ಹನಗಂಡಿ ದೇಸಾಯಿಗಳ ವಾಡೆಯ ಇತಿಹಾಸ.

೪.೩ ದರೂರು ನಾಯಕರ ವಾಡೆಯ ಇತಿಹಾಸ.

೪.೪ ಅಣ್ಣಿಗೇರಿ ದೇಶಪಾಂಡೆ ವಾಡೆಯ ಪರಿಸರ ಮತ್ತು ಇತಿಹಾಸ.

೪.೫ ಮುಳುಗುಂದ ದೇಶಪಾಂಡೆ ವಾಡೆಯ ಪರಿಸರ ಮತ್ತು ಇತಿಹಾಸ.

## ಅಧ್ಯಾಯ–ನಾಲ್ಕು

# ಜೈನ ವಾಡೆಗಳ ಪರಿಸರ ಮತ್ತು ಇತಿಹಾಸ

ಯಾವುದೇ ಒಂದು ಪ್ರಭುತ್ವದ ಯಶಸ್ಸು ಸ್ಥಳೀಯ ಆಡಳಿತದ ಮೇಲೆ ಅವಲಂಬಿತವಾಗಿರುತ್ತದೆ. ಸ್ಥಳೀಯ ಪ್ರಭುತ್ವ ಪ್ರಬಲವಾಗಿದ್ದಾಗ ರಾಜ ಪ್ರಭುತ್ವ ಬಲಿಷ್ಠವಾಗುತ್ತದೆ. ಈ ನಿಟ್ಟಿನಲ್ಲಿ ಬಿಜಾಪುರದ ಆದಿಲ್‌ಷಾಹಿಗಳು ಸ್ಥಳೀಯ ಪ್ರಭುತ್ವವನ್ನು ಪ್ರಬಲವಾಗಿಸಲು ವತನದಾರರನ್ನು ನಿಯಮಿಸಿದರು. ಜೊತೆಗೆ ಈ ಬಲಿಷ್ಠ ವ್ಯವಸ್ಥೆಯಿಂದ ರಾಜಪ್ರಭುತ್ವವು ಭದ್ರವಾಯಿತು. ವತನದಾರರು ಆದಿಲ್‌ಷಾಹಿಯಿಂದ ಇನಾಂ ಪಡೆದ ಭೂಮಿಯ ಜೊತೆಗೆ ಸ್ಥಳೀಯ ಗ್ರಾಮಗಳ ಆಡಳಿತ ನಿರ್ವಹಣೆ ಮಾಡಬೇಕಿತ್ತು. ಅದಕ್ಕಾಗಿಯೇ ಅವರಿಗೆ ಇನಾಂ ಭೂಮಿ ದೊರಕಿದ್ದು. ಇನಾಂ ಭೂಮಿ ಮತ್ತು ವತನದಾರಿಕೆ ಕೊಟ್ಟ ಪ್ರತಿಫಲವಾಗಿ ವತನದಾರ ಆದಿಲ್‌ಷಾಹಿಗಳಿಗೆ ನಿಷ್ಠರಾಗಿದ್ದರು. ಸ್ಥಳೀಯವಾಗಿ ಸಲ್ಲಬೇಕಾದ ಕಂದಾಯವೂ ಚಾಚುತಪ್ಪದೇ ರಾಜಧಾನಿಗೆ ತಲುಪುತ್ತಿತ್ತು. ಬಿಜಾಪುರದ ಆದಿಲ್‌ಷಾಹಿ ಆಡಳಿತ ತೀಕ್ಷಣತೆ ಉತ್ತರ ಕರ್ನಾಟಕ ಭಾಗದಲ್ಲಿ ಹೆಚ್ಚು ಇದ್ದುದರಿಂದ ಈ ಭಾಗದಲ್ಲಿ ವತನದಾರಿಕೆ ಹೆಚ್ಚು ಕಂಡುಬರುತ್ತವೆ. ಈ ತರಹದ ಆಡಳಿತ ವ್ಯವಸ್ಥೆಯ ಪಾಲು ಪಡೆದವರಲ್ಲಿ ಜೈನರೂ ಹೊರತಾದವರಲ್ಲ. ಜೈನರು ಸ್ವಭಾವತ: ಕ್ಷತ್ರಿಯರಾಗಿದ್ದರಿಂದ ರಾಜ್ಯಾಡಳಿತ ಅವರಿಗೆ ಸಹಜವಾಗಿಯೇ ಒಲಿದು ಬಂದಿತ್ತು. ಬಹುಶ: ಈ ಹಿಂದೇ ಇದ್ದ ಜೈನ ಪರಿಸರದ ಪ್ರಭಾವ ಸ್ಥಳಗಳಲ್ಲಿ ಜೈನರು ವತನದಾರಿಕೆಯನ್ನು ಪಡೆಯಲು ಯಶಸ್ವಿಯಾದರು. ಆದಿಲ್ ಷಾಹಿಗಳು, ಮರಾಠರು, ಸಾಂಗಲಿಯ ಪಟವರ್ಧನರು ಮತ್ತು ಬ್ರಿಟೀಷರ ಕಾಲಾವಧಿಯಲ್ಲಿ ಅಚ್ಚುಕಟ್ಟಾಗಿ ಆಡಳಿತ ನಡೆಸಿದ ಜೈನ ವಾಡೆಗಳ ಪರಿಸರ ಮತ್ತು ಇತಿಹಾಸದ ಮಜಲುಗಳನ್ನು ಅರಿಯುವುದು ಬಹು ಮುಖ್ಯ.

### ೪.೧) ತೇರದಾಳ ನಾಡಗೌಡರ ವಾಡೆಯ ಪರಿಸರ ಮತ್ತು ಇತಿಹಾಸ

ತಾಲ್ಲೂಕು ಕೇಂದ್ರ ಜಮಖಂಡಿಯಿಂದ ೩೦ ಕಿ.ಮೀ ಅಂತರದಲ್ಲಿರುವ ಊರು ತೇರದಾಳ. ಇಲ್ಲಿ ೧೨ನೆಯ ಶತಮಾನದ ಶಿಲಾಲೇಖಗಳು ದೊರೆತಿದ್ದು, ತೇರದಾಳ ಆ ಕಾಲಕ್ಕಾಗಲೇ ಒಂದು ಪ್ರಸಿದ್ಧವಾದ ವ್ಯಾಪಾರ ಕೇಂದ್ರವಾಗಿತ್ತು. ಅಯ್ಯಾವೊಳೆ ಅಯ್ನೂರು ವ್ಯಾಪಾರ ಸಂಘದವರು, ಸೆಟ್ಟಿಗುತ್ತರು ಕ್ರಿ.ಶ. ೧೧೮೧ರಲ್ಲಿ ಇಲ್ಲಿಯ ಬಸದಿಗೆ ದಾನಬಿಟ್ಟ ಉದಾಹರಣೆಗಳಿವೆ.[೧] ಈ ಊರಲ್ಲಿ ಗೊಂಕರಸ ಕಟ್ಟಿಸಿದ ಪ್ರಾಚೀನ 'ನೇಮಿನಾಥ ಬಸದಿ', ೩೦೦ ವರ್ಷ ಹಳೆಯದಾದ 'ಪ್ರಭುಸ್ವಾಮಿ ಮಠ'ವು, 'ಅಬಾಖಾನ್ ಪೀರ್ ದರ್ಗಾ'ವೂ ಇದೆ. ಹಿಂದೂ, ಜೈನ, ಮುಸ್ಲಿಂ ಸಂಕೇತದ ಈ ಐತಿಹಾಸಿಕ ಸ್ಮಾರಕಗಳನ್ನು ತೇರದಾಳದ ಜನತೆ ಇನ್ನೂ ಸುಸ್ಥಿತಿಯಲ್ಲಿರಿಸಕೊಂಡು ಜತನದಿಂದ ಕಾಪಾಡಿಕೊಂಡುಬಂದಿದ್ದಾರೆ.

ತೇರದಾಳವು ಕಲ್ಯಾಣಿಚಾಲುಕ್ಯರು, ರಟ್ಟರು, ಬಿಜಾಪುರದ ಆದಿಲ್‌ಷಾಹಿಗಳು, ಮರಾಠರು, ಸಾಂಗ್ಲಿ ಸಂಸ್ಥಾನದ ಪಟವರ್ಧನರ ಆಡಳಿತದ ವಿವಿಧ ಮಜಲುಗಳನ್ನು ಕಂಡಿದೆ. ಈಗಲೂ ಮರಾಠರ ಕಾಲದಲ್ಲಿ ನಿರ್ಮಿತವಾದುದು ಎನ್ನಲಾದ ಕಂದಕದಿಂದ ಆವರಿಸಲ್ಪಟ್ಟ ಕಲ್ಲಿನಕೋಟೆಯಿದೆ. ಜನಪದರು ಈಗಲೂ ಇದಕ್ಕೆ ಮರಾಠಾ ಕೋಟೆಯೇ ಎನ್ನುತ್ತಾರೆ. ಈ ಪ್ರದೇಶದಲ್ಲಿ ಪ್ರಾಗಿತಿಹಾಸಿಕ ನೆಲೆಗಳನ್ನು ಕಾಣಬಹುದು. ತೇರದಾಳದ ಪಶ್ಚಿಮದಿಕ್ಕಿಗೆ ಸುಮಾರು ೪ ಕಿ.ಮೀ ದೂರದಲ್ಲಿ 'ವಿಭೂತಿ ಮಡ್ಡಿ' ಎಂದು ಕರೆಯಲಾಗುವ ತಾಮ್ರ ಶಿಲಾಯುಗ ಅವಶೇಷಗಳಿಂದ ಕೂಡಿದ ಒಂದು ವಸತಿನೆಲೆ ಇದೆ. ಊರಿನ "ಉತ್ತರ ಗುಡ್ಡ ಪ್ರದೇಶದಲ್ಲಿ ಸಮೀಪದ ಹನಗಂಡಿ, ಹಳಿಂಗಳಿ, ಮದನಮಟ್ಟಿ, ಅಸಂಗಿ ಪರಿಸರದೊಳಗೆ ನೂರಾರು ಬೃಹತ್ ಶಿಲಾಗೋರಿಗಳು ಐದು ಕಿ.ಮೀ. ಪ್ರದೇಶದಲ್ಲಿ ಕಂಡು ಬರುತ್ತವೆ."[೨] ಇತ್ತೀಚಿಗೆ ಈ ದಿಬ್ಬಕ್ಕೆ ಜನರು 'ಭದ್ರಗಿರಿ ಬೆಟ್ಟ' ಎಂದು ಕರೆಯುತ್ತಾರೆ.

ಭದ್ರಬಾಹು ಮುನಿಗಳು ಚಂದ್ರಗುಪ್ತ ಮೌರ್ಯನ ಸಮೇತ ತಮ್ಮ ಅಪಾರ ಮುನಿಪರಂಪರೆಯೊಡಗೂಡಿ ದಕ್ಷಿಣ ಭಾರತಕ್ಕೆ ಬರುವಾಗ ಇಲ್ಲಿ ಉಳಿದುಕೊಂಡಿದ್ದರು ಎಂಬ ಸ್ಥಳೀಯ ಐತಿಹ್ಯವಿದೆ. ವಿಶಾಲ ಬಯಲು, ಸುಂದರ ಪರಿಸರ, ಕೃಷ್ಣಾನದಿಯ ಪಾತ್ರ ಮುಂತಾದ ಮುನಿಯೋಗ್ಯ ಪರಿಸರ ಅವರು ತಂಗಲಿಕ್ಕೆ ಸಹಾಯವಾಯಿತು ಎನ್ನಿಸುತ್ತದೆ. ಜೈನಮುನಿಗಳು ಇಂತಹ ಪರಿಸರವನ್ನೇ ಇಷ್ಟಪಡುತ್ತಿದ್ದರು. ಅವರು ಸ್ವಾಧ್ಯಾಯ, ತಪಸ್ಸು ಮತ್ತು ಏಕಾಗ್ರತೆ ಸಾಧಿಸಲು ಇಂಥಹ ಸ್ಥಳಗಳು ಪ್ರಶಸ್ತ್ಯವಾದವು ಆಗಿದ್ದವು. ಆದಿಮಾನವರ ಗುಹೆಗಳು, ಶಿಲಾಗೋರಿಗಳು, ಇಂದಿಗೂ ಉಳಿದು ಬರುವಲ್ಲಿ ಜೈನಮುನಿಗಳ ಪಾತ್ರವು ಇದೆ. ಏಕೆಂದರೆ ಜೈನಮುನಿಗಳು ಇವುಗಳಲ್ಲೇ ತಂಗುತ್ತಿದ್ದರು. ಆದ್ದರಿಂದ ಅವು ನಾಶವಾಗದಂತೆ ಹಾಗೇ ಉಳಿದಿವೆ. ಆದಿಮಾನವರು ತಮ್ಮ ರಕ್ಷಣೆ ಮತ್ತು ಅನುಕೂಲದ ದೃಷ್ಟಿಯಿಂದ ಬಹುತೇಕ ಕಡೆಗಳಲ್ಲಿ ತಮ್ಮ ಆವಾಸದ ನೆಲೆಗಳನ್ನು ಎತ್ತರ ಪ್ರದೇಶಗಳಾದ ದಿಬ್ಬ, ಗುಡ್ಡ, ಬೆಟ್ಟಗಳಲ್ಲಿಯೇ ನಿರ್ಮಿಸಿಕೊಂಡರು. ಬಹುಶ: ದುಷ್ಟ ಪ್ರಾಣಿಗಳಿಂದ ತಮ್ಮನ್ನು ರಕ್ಷಿಸಿಕೊಳ್ಳಲು ಅವರು ಈ ಉಪಾಯ ಕಂಡುಕೊಂಡಿದ್ದರು.

ಆದಿಮಾನವರ ಆವಾಸದ ನೆಲೆಗಳನ್ನು ಕಾಲಾಂತರದಲ್ಲಿ ಜೈನಮುನಿಗಳು ತಮ್ಮ ತಪದ ನೆಲಗಳನ್ನಾಗಿಸಿಕೊಂಡರು. ಶ್ರವಣಬೆಳಗೊಳದಲ್ಲಿರುವ ಭದ್ರಬಾಹು ಗುಹೆ ಈ ವಿಚಾರಕ್ಕೆ ಒಂದು ಮಾದರಿ. ಗೋಕಾಕ ತಾಲ್ಲೂಕು ಕೊಣ್ಣೂರು ಸಮೀಪ ಇದೇ ರೀತಿಯ ಜೈನಮುನಿಗಳ ಗುಹೆಗಳೆಂದು ಕರೆಯಲ್ಪಡುವ ಆದಿಮಾನವರ ಗುಹೆಗಳಿವೆ. ಸ್ಥಳೀಯರು ಇವುಗಳಿಗೆ 'ತಪಸ್ಸಿ ಮರಡಿ' ಎಂದು ಕರೆಯುತ್ತಾರೆ. ಹಿಂದೆ ಮತ್ತು ಈಗಲೂ ಜೈನಮುನಿಗಳು ಇಲ್ಲಿ ತಪಸ್ಸು ಮಾಡುತ್ತಾರೆ. ಎಂದು ಸ್ಥಳೀಯರಾದ ಸುಧೀರ ಹುಲ್ಲೋಳಿಯವರು ಹೇಳುತ್ತಾರೆ.[೩] ಕೆಲವೊಂದು ಜೈನಕ್ಷೇತ್ರಗಳು ಬೆಟ್ಟದ ಮೇಲೆಯೇ ವಿಕಾಸ ಹೊಂದಿದ್ದು ಸೋಜಿಗ. ಶ್ರವಣಬೆಳಗೊಳ, ಕೊಪ್ಪಳ, ತುಮಕೂರಿನ ಪಂಡಿತನಪಳ್ಳಿಯ ಮಂದರಗಿರಿ, ತೀರ್ಥಂಕರರ ನಿರ್ವಾಣ ಕ್ಷೇತ್ರ ಸಮ್ಮೇದನ ಶಿಖರ್ಜಿ (ಜಾರ್ಖಂಡ್) ಮುಂತಾದವುಗಳ ಜೊತೆ ತೇರದಾಳ ಸಮೀಪದ ಭದ್ರಗಿರಿ ಈ

ನಿದರ್ಶನಕ್ಕೆ ಉದಾಹರಣೆಗಳು. ಭದ್ರಗಿರಿ ಹಿಂದೆ ಜೈನಕ್ಷೇತ್ರವಾಗಿತ್ತು ಎಂದು ತೋರುತ್ತದೆ. ಯಾಕೆಂದರೆ ಇಲ್ಲಿ ಸಾಕಷ್ಟು ಕಡೆ ಭೂ ಅಗೆತದಲ್ಲಿ ಪಚ್ಚೆ, ಹವಳ, ವಜ್ರದಿಂದ ಕೂಡಿದ ಮೂರ್ತಿಗಳ ಜೊತೆಗೆ ಬಿಳಿ ಸಂಗಮುರಿ (ಗ್ರಾನೈಟ್) ಕರಿಕಲ್ಲಿನ ಜಿನಬಿಂಬಗಳು ದೊರೆತಿವೆ. ಇಲ್ಲಿ ಇನ್ನೂ ಸಾಕಷ್ಟು ಮೂರ್ತಿಗಳು ದೊರೆಯುತ್ತಿವೆ ಎಂದು ಈ ಕ್ಷೇತ್ರವನ್ನು ಅಭಿವೃದ್ಧಿ ಪಡಿಸುತ್ತಿರುವ ಕುಲರತ್ನ ಭೂಷಣ ಮುನಿ ಮಹಾರಾಜರು ಹೇಳುತ್ತಾರೆ.

## ತೇರದಾಳದ ಗೊಂಕ ಜಿನಾಲಯ

ತೇರದಾಳ ಪರಿಸರದಲ್ಲಿ ಪ್ರಾಚೀನ ಕಾಲದಿಂದಲೂ ಜೈನ ಬಾಹುಳ್ಯ ಇತ್ತೆಂಬುದಕ್ಕೆ ಇಲ್ಲಿರುವ ನೇಮಿನಾಥ ಜಿನಾಲಯವೇ ಸಾಕ್ಷಿಯಾಗಿ ನಿಲ್ಲುತ್ತದೆ. ಒಂದು ಧರ್ಮ ಸಮುದಾಯದ ಬಹುಕಾಲ ಪ್ರಯತ್ನವೇ ಬಸದಿ. ಬಸದಿ ಇದ್ದ ಪ್ರದೇಶದಲ್ಲಿ ಬಹುಕಾಲದಿಂದಲೇ ಜೈನರಿದ್ದರು. ಚಾಳುಕ್ಯ ಚಕ್ರವರ್ತಿ ಆರನೆಯ ವಿಕ್ರಮಾದಿತ್ಯನ ಆಳ್ವಿಕೆ ಸಂದರ್ಭದಲ್ಲಿ ಸವದತ್ತಿ ರಟ್ಟರು ಸಾಮಂತ ಜೈನ ರಾಜರಾಗಿದ್ದರು. ಕುಹುಂಡಿ ೩೦೦೦ ಆಡಳಿತ ವಿಭಾಗವು ರಟ್ಟರ ಆಳ್ವಿಕೆಗೆ ಒಳಪಟ್ಟಿತ್ತು. ಕುಹುಂಡಿ-೩೦೦೦ ಆಡಳಿತ ಪ್ರದೇಶದ ಪ್ರಸಿದ್ಧ ವ್ಯಾಪಾರ ಕೇಂದ್ರ ತೇರದಾಳ. ತೇರ ಎಂದರೆ ೧೩. ತೇರದಾಳವೂ ಸೇರಿ ೧೩ ಹಳ್ಳಿಗಳು ಒಂದು ಚಿಕ್ಕ ಆಡಳಿತ ಘಟಕ ತೇರದಾಳ.

ತೇರದಾಳ ಆಡಳಿತ ಘಟಕವನ್ನು ಕ್ರಿ.ಶ. ೧೧೨೩ರ ಹೊತ್ತಿಗೆ ಗೊಂಕದೇವ ಎಂಬ ಜೈನ ವ್ಯಕ್ತಿ ಆಳುತ್ತಿದ್ದ. ಈ ವ್ಯಕ್ತಿ ಪರಮಜಿನಭಕ್ತ, ಜೈನಧರ್ಮದ ತತ್ವ ಸಿದ್ಧಾಂತಗಳ ಮೇಲೆ ಅಪಾರ ನಂಬಿಕೆಯನ್ನಿಟ್ಟಿದ್ದ. ಇವನಿಗೆ ಒಮ್ಮೆ ಸರ್ಪ ಕಚ್ಚಿತು. ವಿಷಬಾಧೆಗೆ ಒಳಗಾದ ಗೊಂಕದೇವ ಮಂತ್ರ-ತಂತ್ರ ವಿದ್ಯೆಗಳ ಮೊರೆಹೋಗದೆ ಪರಮ ಪವಿತ್ರನೂ ಆದ ಜಿನನನ್ನು ನೆನೆಯುತ 'ಪಂಚಪದ'[೪]ವನ್ನು ಓದುತ, ಮನಸ್ಸನ್ನು ಸಂಪೂರ್ಣವಾಗಿ ಜಿನನಲ್ಲಿ ಕೇಂದ್ರಿಕರಿಸಿ ತನಗೇ ಏರಿದ ವಿಷಬಾಧೆಯಿಂದ ಹೊರಬಂದ. ಪಂಚಪರಮೇಷ್ಠಿಗಳ ಧ್ಯಾನ ಮನುಷ್ಯನಿಗೆ ಏರಿದ ವಿಷವನ್ನು ಹೋಗಲಾಡಿಸುತ್ತದೆ ಎಂಬುದು ಗೊಂಕರಸನಿಗೆ ಗೊತ್ತಿತ್ತು. ಮೇಲಾಗಿ ಮನುಷ್ಯನ ಮನಸ್ಸು ದೃಢವಾಗಿದ್ದಲ್ಲಿ ಎಂಥ ಘನಘೋರ ವಿಷದಿಂದಲೂ ಪಾರಾಗಬಹುದು. ಇದಕ್ಕೆ ಗೊಂಕರಸ ಒಂದು ನಿದರ್ಶನ.

> ಪಸಿದಸಿತಾಹಿ ಸೋಂಕಿದೊಡೆ ಸಂಕಿಸಿ ಮಂತ್ರದ ತಂತ್ರದಾಸೆಯಿಂ
> ದಸುವರೆಯಾಗಿ ಬಿರ್ದ್ದಿರದೆ ಪಂಚಪದಂಗಳನೋದಿ ತದ್ವಿಶ
> ಪ್ರಸರಮನೆಯ್ದೆ ಪಿಂಗಿಸಿ ಜಿನಬ್ರತದೊಳು ದ್ರಿಡನಾದ ತಂನಪೆಂ
> ಪೆಂಪೆಸೆದಿರೆ ತೇರಿದಾಳದರಸಂ ನೆಗಳ್ದಂ ಕಲಿ ಗೊಂಕಭೂಭುಜನು॥ [೫]

ಪಂಚಪದಗಳ ಓದು, ಜಿನಸ್ಮರಣೆಯಿಂದ ಮರುಜನ್ಮ ಪಡೆದ ಗೊಂಕದೇವ ತೇರದಾಳದಲ್ಲಿ ಒಂದು ನೇಮಿನಾಥ ಜಿನಾಲಯವನ್ನು ಕಟ್ಟಿಸಿದ. ಗೊಂಕದೇವ ಕಟ್ಟಿಸಿದ ನೇಮಿನಾಥ ಜಿನಾಲಯವು 'ಗೊಂಕ ಜಿನಾಲಯ'ವೆಂದೇ ಪ್ರಸಿದ್ಧಿ ಪಡೆಯಿತು. ಗೊಂಕದೇವನ

ಪ್ರತಿಷ್ಠೆ ಎಷ್ಟಿತ್ತೆಂದರೆ ಬಸದಿಯ ಮೂರ್ತಿಯ ಪ್ರತಿಷ್ಠಾಪನಾ ದಿನದಂದು ಮಹಾ ಮಂಡಳೇಶ್ವರನಾದ ರಟ್ಟರಾಜ ಕಾರ್ತ್ತಿವೀರ್ಯ್ಯನೇ ಬಂದಿದ್ದ. ಅಲ್ಲದೇ ಈ ಸಂದರ್ಭದಲ್ಲಿ ಕೊಲ್ಲಾಪುರದ ರೂಪನಾರಾಯಣ ಬಸದಿಯ ಆಚಾರ್ಯರಾದ ಶ್ರೀ ಮಾಘಣಂದಿಸೈದ್ಧಾನ್ತಿಕ ದೇವರು ಬಂದಿದ್ದರು.

> ಶ್ರೀಮತು ಗೊಂಕಿದೇವರಸರು ನಿಜರಾಜಧಾನಿಯಪ್ಪ ತೇರಿದಾಳದ ಮಧ್ಯಪ್ರದೇಶದೊಳು
> ಗೊಂಕಜಿನಾಲಯಮಂ ನಿರ್ಮ್ಮಿಸಿ ಶ್ರೀನೇಮಿಜಿನನಾಥ ಪ್ರತಿಷ್ಠೆಯಂ ರಾಷ್ಟ್ರಕೂಟಾನ್ವಯ
> ಶಿರಶಿಖಾಮಣಿ ಕಾರ್ತ್ತಿವೀರ್ಯ್ಯ ಮಹಾಮಣ್ಡಳೇಶ್ವರಂ ಮುಖ್ಯವಾಗಿ ಸದ್ಭಕ್ತಿಯಿಂ
> ಶುಭದಿನ ಮಹೂರ್ತ್ತದೊಳು ಮಾಡಿ ತಜ್ಜಿನ ಮುನಿಪ್ರಧಾನರಪ್ಪದೇಸಿಗಗಣ ಪೊಸ್ತಕ
> ಗಚ್ಛದ ಶ್ರೀ ಕೊಣ್ಡಕುನ್ದಾಚಾರ್ಯ್ಯಾನ್ವಯದ ಕೊಲ್ಲಾಪುರದ ಶ್ರೀರೂಪನಾರಾಯಣನ
> ಬಸದಿಯಾಚಾರ್ಯ್ಯರು ಮಣ್ಡಳಾಚಾರ್ಯ್ಯರುಮೆನಿಪ್ಪ ಶ್ರೀ ಮಾಘಣಂದಿ
> ಸೈದ್ಧಾನ್ತಿಕ ದೇವರ ಬರಿಸಿ ಸಕವರ್ಷ ೧೦೪೫ನೆಯ ಶುಭಕೃತ್ಸಂವತ್ಸರದ
> ವೈಶಾಖದ ಪುಣ್ಣಮಿ ಬ್ರಹಸ್ಪತಿವಾರದಲು ಗೊಂಕಜಿನಾಲಯಕ್ಕೆ.[೬]

ಗೊಂಕದೇವ ಕಟ್ಟಿಸಿದ ಈ ಜಿನಾಲಯಕ್ಕೆ ಅಪಾರ ಪ್ರಮಾಣದ ದಾನದತ್ತಿಗಳು ಹರಿದು ಬಂದಿವೆ. ಇಲ್ಲಿನ ಹನ್ನೆರಡು ಗೌಡರು, ಸೆಟ್ಟಿಗುತ್ತರು ರಿಷಿಯರ ಆಹಾರಕ್ಕೆ, ಬಸದಿಯ ಜೀರ್ಣೋದ್ಧಾರಕ್ಕೆ, ದೇವರ ಅಷ್ಟವಿಧಾರ್ಚ್ಚನೆಗೆ, ದೀಪ, ಧೂಪಕೆ ಅಪಾರ ಪ್ರಮಾಣದ ತೋಂಟ, ಪಣ, ಭೂಮಿಯನ್ನು ಬಿಡುತ್ತಾರೆ. ಅಲ್ಲದೆ ಅಯ್ಯಾವೊಳೆ ಅಯ್ನೂರು ವ್ಯಾಪಾರ ಸಂಘದವರು, ಸೆಟ್ಟಿಯರು, ಸೆಟ್ಟಿಗುತ್ತರು, ಕ್ರಿ.ಶ. ೧೧೮೧ರಲ್ಲಿ, ಸೇವುಣ ಸಿಂಘಣನ ಸೇನಾನಿಯಾದ ಬಾಯಿದೇವ ದಂಡನಾಯಕರು ಕ್ರಿ.ಶ.೧೧೮೭ರಲ್ಲಿ ಈ ಗೊಂಕಜಿನಾಲಯಕ್ಕೆ ದಾನ ಬಿಟ್ಟರೆಂದು ಇಲ್ಲಿನ ಶಾಸನಗಳಿಂದ ಮಾಹಿತಿ ದೊರೆಯುತ್ತದೆ.

ಗೊಂಕದೇವರಸ ಮತ್ತು ಅವನು ಕಟ್ಟಿಸಿದ ಜಿನಾಲಯದಿಂದ ತೇರದಾಳವು ಜೈನರ ನೆಲೆಯಾಗಿದ್ದಂತೂ ಸ್ಪಷ್ಟ. ಗೊಂಕರಸನಿಗೆ ಊರಿನ ಗೌಡಿಕೆ ಲಭಿಸಿದ್ದು ಶಾಸನೋಕ್ತವಾಗಿದೆ. ಅಂದಿನಿಂದ ಜೈನರ ಬಾಹುಳ್ಯ ಹೆಚ್ಚಿದಂತೂ ನಿಜ. ಗೊಂಕರಸನಿಂದ ಈ ಊರ ಗೌಡಿಕೆ ಜೈನರಿಗೆ ಒಲಿದುಬಂದಂತೆ ಕಾಣುತ್ತದೆ. ಇವನ ಮುಂದಿನ ತಲೆಮಾರಿನ ಜೈನ ಗೌಡರ ಮಾಹಿತಿ ಅಲಭ್ಯ. ಆದರೆ ಬಿಜಾಪುರ ಆದಿಲ್‌ಷಾಹಿಗಳ ಕಾಲದಲ್ಲಿ ಜೈನರು ತೇರದಾಳದ ದೇಸಗತಿಯನ್ನು ಸಂಪಾದನೆ ಮಾಡುತ್ತಾರೆ. ತೇರದಾಳದ ನಾಡಗೌಡರು ದೇಸಗತಿ ಸಂಪಾದನೆ ಮಾಡಿದ ನಾಡಗೌಡರಾಗಿದ್ದಾರೆ. ಇವರು ಗೊಂಕರಸನ ವಂಶಸ್ಥರೆನ್ನುವುದಕ್ಕೆ ಯಾವ ಆಧಾರವೂ ದೊರೆತಿಲ್ಲ. ಆದರೆ ಇವರ ಮನೆತನದವರು ಗೊಂಕರಸನು ಕಟ್ಟಿಸಿದ ನೇಮಿನಾಥ ಜಿನಾಲಯವನ್ನು ಜೀರ್ಣೋದ್ಧಾರಗೊಳಿಸಿದ್ದಾರೆ. ಹೀಗೆ ಜೀರ್ಣೋದ್ಧಾರಗೊಳಿಸಿದವರು

ತೇರದಾಳದ ದೇಸಾಯಿ ಮನೆತನದವರು. ನಾಡಗೌಡರು ಮತ್ತು ದೇಸಾಯಿ ವತನದಾರರು ಒಂದೇ ಕುಟುಂಬದವರು. ಮೂಲದಲ್ಲಿ ದೇಸಾಯಿಗಳು ತೇರದಾಳದಲ್ಲಿಯೇ ಇದ್ದು, ಮುಂದಿನ ದಿನಮಾನಗಳಲ್ಲಿ ಹನಗಂಡಿಗೆ ಸ್ಥಳಾಂತರವಾಗಿ ವಾಡೆಯನ್ನು ಕಟ್ಟಿಕೊಂಡು ವತನದಾರಿಕೆಯನ್ನು ಪ್ರತ್ಯೇಕವಾಗಿಯೇ ನಿಭಾಯಿಸತೊಡಗಿದರು. ದೇಸಾಯಿಗಳು ತೇರದಾಳದಲ್ಲಿಯೇ ಇರುವಾಗ ಗೊಂಕಜಿನಾಲಯವನ್ನು ಜೀರ್ಣೋದ್ಧಾರಗೊಳಿಸುತ್ತಾರೆ. ದೇಸಾಯಿ ಸತ್ಯವ್ವ ಮತ್ತು ಅವರ ಮಗ ಜಕ್ಕಪ್ಪರವರು ಕೂಡಿ ಕ್ರಿ.ಶ.೧೭೪೮ರ ನವೆಂಬರ್ ೧೮ ರಂದು ಬಸದಿಯಲ್ಲಿ ಶಿಥಿಲವಾಗಿದ್ದ ನೇಮಿನಾಥ ಮೂರ್ತಿಯನ್ನು ತೆಗೆದು ತಾವು ಮಾಡಿಸಿದ ಹೊಸ ನೇಮಿನಾಥ ತೀರ್ಥಂಕರ ಬಿಂಬವನ್ನು ಸ್ಥಾಪಿಸುತ್ತಾರೆ. ಜೊತೆಗೆ ಬಸದಿಯನ್ನು ಜೀರ್ಣೋದ್ಧಾರ ಮಾಡಿಸಿ ಮಾನಸ್ತಂಭವೊಂದನ್ನು ಪ್ರತಿಷ್ಠಾಪಿಸುತ್ತಾರೆ. ಮೂರ್ತಿ ಪ್ರತಿಷ್ಠಾಪಿಸಿದವರ ವಿವರ ಪಾದಪೀಠದಲ್ಲಿರುವ ಶಾಸನದಲ್ಲಿ ದಾಖಲಾಗಿದೆ.

೧. ಶ್ರೀಮನ್ನೇಮಿಜಿನೇಂದ್ರನ ಪ್ರತಿಮೆಯಂ ಸಮ್ಯಕ್ತ್ವಚೂಡಾಮಣಿಗಳಾದಂ
೨. ಥಾ ಶ್ರೀಮತ್ತೇರಿದಳದ ದೇಶಾಯಿ ಸತ್ಯೌವ್ವ ತತ್ಪುತ್ರ ಜಕ್ಕಪ್ಪ ಸಹವಾಗಿ
೩. ಮಾಡಿಸಿ ಶ್ರೀಗೊಂಕಜಿನಾಲಯದಲ್ಲಿ ಪ್ರತಿಷ್ಠೆಯನು ಮಾಡಿದ ಶ
೪. ಕ ವರ್ಷ । ೧೬೭೦ರ ವಿಭವನಾಮ ಸಂವತ್ಸರದ ಮಾರ್ಗ್ಗಶಿರದ
೫. ಶುಕ್ಲದಶಮಿ ಶುಕ್ರವಾರದಲ್ಲಿ ಭದ್ರಂ ಭೂಯಾತ್ ಶ್ರೀಶ್ರೀಶ್ರೀ ॥[2]

ದೇಸಾಯಿಗಳು ಅಷ್ಟೇ ಅಲ್ಲದೇ ಗೊಂಕಜಿನಾಲಯಕ್ಕೆ ನಾಡಗೌಡರು ಕಾಲಕಾಲಕ್ಕೆ ದಾನ-ದತ್ತಿಗಳನ್ನು ಸಲ್ಲಿಸುತ್ತಾ ಬಂದಿದ್ದಾರೆ.

### ತೇರದಾಳ ನಾಡಗೌಡರ ವಾಡೆಯ ಇತಿಹಾಸ

ವಾಡೆಯ ಹಿರಿಯರು, ಯಜಮಾನಿ, ಗೌಡತಿಯರಾದ ಶ್ರೀಮತಿ ಜಯಮ್ಮ ಪಾರ್ಶ್ವನಾಥ ನಾಡಗೌಡ ಅವರ ಹೇಳಿಕೆ ಮತ್ತು ಊರ ಜನಪದರ ಕಥೆಗಳು, ನಂಬಿಕೆಗಳಿಂದ ತೇರದಾಳ ವಾಡೆಯ ಮೂಲಪುರುಷರು ಕೃಷ್ಣಪ್ಪ ಮತ್ತು ಬಸವಗೌಡ ಎಂದು ತಿಳಿದುಬರುತ್ತದೆ. ಇವರ ಹೇಳಿಕೆಗಳ ಪ್ರಕಾರ ಅಭಾಖಾನ್ ಮತ್ತು ಅಲ್ಲಮಪ್ರಭುಗಳು ಎಂಬ ಸನ್ಯಾಸಿಗಳು ದೇಶಸಂಚಾರ ಮಾಡುತ್ತಾ ಬರುವಾಗ ತೇರದಾಳಕ್ಕೆ ಬರುತ್ತಾರೆ. ಈ ಸಂದರ್ಭದಲ್ಲಿ ಅಭಾಖಾನ್ ತೇರದಾಳದಲ್ಲಿ ಇರುವುದನ್ನು ತಿಳಿದ ಬಿಜಾಪುರದ ಆದಿಲ್‌ಷಾಹಿ ಅವನನ್ನು ಕಾಣಲು ಬರುತ್ತಾನೆ. ಅಭಾಖಾನ್‌ರ ಕುಶಲೋಪರಿ ವಿಚಾರಿಸಿದ ಆದಿಲ್‌ಷಾಹಿ ತೇರದಾಳದ ವತನದಾರಿಕೆಯ ಬಗ್ಗೆ ಪ್ರಸ್ತಾಪಿಸುತ್ತಾನೆ. ಈ ವಿಚಾರವಾಗಿ ಅಲ್ಲಿ ನೆರೆದ ಜನರನ್ನು ಕೇಳಿದಾಗ ಯಾರೂ ವತನದಾರರಾಗಲು ಮುಂದೆ ಬರಲಿಲ್ಲ. ಆ ಸಂದರ್ಭದಲ್ಲಿ ಚಾವಡಿಯಲ್ಲಿ ಕುಳಿತಿದ್ದ ಸಹೋದರರಾದ ಕೃಷ್ಣಪ್ಪ ಮತ್ತು ಬಸವಗೌಡರನು ಅಭಾಖಾನ್ ಕರೆಯುತ್ತಾನೆ. ಅವರು ಬರುತ್ತಾರೆ. ವತನದಾರಿಕೆ ಮಾಡುವಿರಾ

ಎಂದದ್ದಕ್ಕೆ ಸಹೋದರು ಒಪ್ಪಿಗೆ ಸೂಚಿಸುತ್ತಾರೆ. ಅಭಾಖಾನರು ಇವರ ಶೌರ್ಯ ಪರೀಕ್ಷೆ ಮಾಡಲು ಒಂದು ಷರತ್ತು ವಿಧಿಸುತ್ತಾರೆ. "ನೀವು ವತನದಾರಿಕೆ ಸಂಪಾದಿಸಬೇಕಾದರೆ ಹುಚ್ಚು ಕುದುರೆ ಸವಾರಿ ಮಾಡಬೇಕು ಎನ್ನುತ್ತಾರೆ." ಆಗ ಸಹೋದರರು ಸ್ವಲ್ಪ ಹೆದರಿಕೊಳ್ಳುತ್ತಾರೆ. ಅಲ್ಲಿಯೇ ಇದ್ದ ಪ್ರಭುಸ್ವಾಮಿಗಳು ಸಹೋದರರಿಬ್ಬರನ್ನೂ ಕರೆದು ಅಭಿಮಂತ್ರಿಸಿದ ಮೂರು ಹರಳು (ಚಿಕ್ಕಕಲ್ಲು)ಗಳನ್ನು ಕೊಡುತ್ತಾರೆ. ಇವುಗಳಲ್ಲಿ ಒಂದನ್ನು ಕುದುರೆ ಲಾಯದಲ್ಲಿ, ಒಂದನ್ನು ಕುದುರೆ ಹತ್ತುವಾಗ ಮತ್ತೊಂದನ್ನು ಕುದುರೆ ಇಳಿಯುವಾಗ ಚಲ್ಲಬೇಕು ಎನ್ನುತ್ತಾರೆ. ಸಹೋದರರಿಬ್ಬರೂ ಪ್ರಭುಸ್ವಾಮಿಗಳ ಆದೇಶದ ಪ್ರಕಾರ ಹರಳುಗಳನ್ನು ಚಲ್ಲುತ್ತಾ ಹುಚ್ಚು ಕುದುರೆ ಸವಾರಿ ಮಾಡಿ ತೋರಿಸಿದರು. "ಅರಿಯದವರಿಗೆ ಕುದುರೆ ಸವಾರಿ ಮಾಡುವುದೇ ಕಷ್ಟ ಅಂಥದ್ದು ನೀವು ಹುಚ್ಚು ಕುದುರೆ ಸವಾರಿ ಮಾಡಿ ತೋರಿಸಿದ್ದೀರಿ" ಎಂದ ಆದಿಲ್‌ಷಾಹಿ ಇವರಿಗೆ ಶಹಬ್ಬಾಶ್‌ಗಿರಿಯೊಂದಿಗೆ ೫೦೦೦ ಸಾವಿರ ಎಕರೆ ಭೂಮಿಯನ್ನು ಇನಾಂ ಆಗಿ ಕೊಟ್ಟು ತೇರದಾಳದ ಪರಗಣದ ಇನಾಂದಾರರ (ವತನದಾರ)ನ್ನಾಗಿ ಮಾಡುತ್ತಾನೆ. ಇದೇ ಸಂದರ್ಭದಲ್ಲಿ ಆದಿಲ್‌ಷಾಹಿ ಸಹೋದರರಿಬ್ಬರಿಗೆ 'ಹುಚ್ಚು ಕುದುರೆ ಸರದಾರರು' 'ಪಗರಾನಿವತನದಾರರು' 'ಪಾಗಲ್ ಘೋಡಾಖಾನ್' ಎಂದು ಬಿರುದು ನೀಡುತ್ತಾನೆ.

ಸ್ವಂತ ಶಕ್ತಿಸಾಮರ್ಥ್ಯದಿಂದ, ಅಲ್ಲಮಪ್ರಭುಸ್ವಾಮಿಗಳು ಮತ್ತು ಅಭಾಖಾನರ ಆಶೀರ್ವಾದದಿಂದ ಕೃಷ್ಣಪ್ಪ ಮತ್ತು ಬಸವಗೌಡ ತೇರದಾಳದ ವತನದಾರಿಕೆಯನ್ನು ಸಂಪಾದನೆ ಮಾಡಿದರು. ತೇರದಾಳದ ನಾಡಗೌಡರ ದೇಸಾಯಿ ವಂಶಾವಳಿಯಲ್ಲಿ ಮೂಲ ಪುರುಷ 'ಬಸಗೌಡ ಕಾರಿ' ಎಂದು ಮಾತ್ರ ಇದೆ. ಇಲ್ಲಿ ಕೃಷ್ಣಪ್ಪನ ಹೆಸರು ನಮೂದಾಗಿಲ್ಲ. ಐತಿಹ್ಯ, ಕುಟುಂಬದ ಹಿರಿಯರ ಮಾಹಿತಿ ಜನಪದರ ಕಥೆಗಳಲ್ಲಿ ಬಸಗೌಡ-ಕೃಷ್ಣಪ್ಪ ಸಹೋದರರು. ಆದರೆ ವಂಶಾವಳಿಯಲ್ಲಿ ಕೃಷ್ಣಗೌಡನ ಹೆಸರು ಇರದಿರುವುದು ಸೋಜಿಗ. ಬಹುಶಃ ಕೃಷ್ಣಗೌಡ ಅಕಾಲಿಕ ಮರಣಕ್ಕೆ ಈಡಾದಂತೆ ಕಾಣುತ್ತದೆ. ಅವನ ಮತ್ತು ಅವನ ಮಕ್ಕಳ ಹೆಸರು ವಂಶಾವಳಿಯಲ್ಲಿ ಎಲ್ಲಿಯೂ ದಾಖಲಾಗಿಲ್ಲ.

ಬಸಗೌಡಕಾರಿಯಿಂದ ಪ್ರಾರಂಭವಾಗುವ ವತನದಾರಿಕೆಯು ಇವನ ನಂತರ ಇಬ್ಭಾಗವಾಗುತ್ತದೆ. ಬಸಗೌಡ ಕಾರಿಗೆ ಕಲಗೌಡ ಮತ್ತು ಜಿನಗೌಡ ಎಂಬ ಇಬ್ಬರು ಮಕ್ಕಳು. ಒಟ್ಟು ೬೬ ಹಳ್ಳಿಗಳಿಂದ ಕೂಡಿದ ತೇರದಾಳದ ವತನದಾರಿಕೆಯನ್ನು, ೩೩ ಮತ್ತು ೩೩ ಹಳ್ಳಿಗಳನ್ನು ಸಮಭಾಗ ಮಾಡಿ ತನ್ನ ಇಬ್ಬರೂ ಮಕ್ಕಳಿಗೂ ಹಂಚಿದ. ಅಂದಿನಿಂದ ೩೩ ಹಳ್ಳಿಗಳ ವತನದಾರನಾದ ಕಲಗೌಡ 'ದೇಸಾಯಿ' ಎಂಬ ನಾಮಾಂಕಿತದಿಂದ ಮತ್ತು ೩೩ ಹಳ್ಳಿಗಳ ವತನದಾರನಾದ ಜಿನಗೌಡ 'ನಾಡಗೌಡ' ಎಂಬ ನಾಮಾವಳಿಯಿಂದ ವತನದಾರಿಕೆಯನ್ನು ತೇರದಾಳದಲ್ಲಿದ್ದುಕೊಂಡೆ ನಿರ್ವಹಣೆ ಮಾಡಿದರು. ಕ್ರಿ.ಶ.೧೭೪೮ರ ನಂತರದ ದಿನಮಾನಗಳಲ್ಲಿ 'ದೇಸಾಯಿ' ವಂಶಸ್ಥರು ತೇರದಾಳದಿಂದ ಹನಗಂಡಿಗೆ ತಮ್ಮ ಆಡಳಿತ ಕೇಂದ್ರವನ್ನು ವರ್ಗಾಯಿಸಿಕೊಳ್ಳುತ್ತಾರೆ. ನಾಡಗೌಡರು ಮೂಲ ಸ್ಥಳದಲ್ಲಿಯೇ ಇದ್ದುಕೊಂಡು ಮುಂದಿನ ದಿನಮಾನಗಳಲ್ಲಿ ವಾಡೆಯೊಂದನ್ನು ಕಟ್ಟಿಕೊಂಡು ಆಡಳಿತ ನಿರ್ವಹಿಸುತ್ತಾರೆ. ಈ ಎರಡೂ

ವಂಶಗಳ ಆಡಳಿತ ಬೇರೆ ಬೇರೆಯಾದರೂ ಕ್ರಿ.ಶ. ೧೮೪೬ರವರೆಗೂ ದತ್ತುಪುತ್ರರನ್ನು ವಿನಿಮಯ ಮಾಡಿಕೊಂಡು ಅನೂನ್ಯವಾಗಿದ್ದರು. ಪ್ರಸ್ತುತ ದಿನಮಾನಗಳಲ್ಲಿ ಈ ರೀತಿಯ ಕೊಡುಕೊಳ್ಳುವಿಕೆ ಇರುವುದಿಲ್ಲ.

ಜಿನಗೌಡನ ನೇತೃತ್ವದಲ್ಲಿ ಉತ್ತರೋತ್ತರವಾಗಿ ಬೆಳೆದ ತೇರದಾಳ ನಾಡಗೌಡರ ವಂಶ ಮತ್ತು ವಾಡೆ ಇಂದಿಗೂ ಉಳಿದು ಬಂದಿದೆ. 'ನಾಡಗೌಡ' ಎಂಬ ನಾಮಾವಳಿ ಈ ವಂಶದಲ್ಲಿ ಜಿನಗೌಡನ ಮಗನಾದ ಮಗೆಪ್ಪನಿಂದ ಪ್ರಾರಂಭವಾಗುತ್ತದೆ. ಮಗೆಪ್ಪಗೌಡ ನಾಡಗೌಡನಿಗೆ ಭೋಮಪ್ಪ ನಾಡಗೌಡ ಮತ್ತು ಜಕ್ಕಗೌಡ ಎಂಬಿಬ್ಬರು ಮಕ್ಕಳು. ಇದರಲ್ಲಿ ಭೋಮಪ್ಪ ನಾಡಗೌಡನಿಗೆ ನಾಡಗೌಡಕಿ ಬರುತ್ತದೆ. ಜಕ್ಕಗೌಡ ನಾಡಗೌಡ ಇದೇ ಊರಿನ ದೇಸಾಯಿ ಮನೆತನಕ್ಕೆ ದತ್ತು ಹೋಗುತ್ತಾನೆ. ದೇಸಾಯಿ ಮನೆತನದ ಕಲಗೌಡನ ಮಗ ಜಿನಗೌಡನಿಗೆ ಮಕ್ಕಳಿರದ ಕಾರಣ ಮಗೆಪ್ಪಗೌಡ ನಾಡಗೌಡನ ಎರಡನೆ ಮಗ ಜಕ್ಕಗೌಡನನ್ನು ದತ್ತು ತೆಗೆದುಕೊಂಡು ಜಕ್ಕಗೌಡ ದೇಸಾಯಿ ಎಂದು ನಾಮಕರಣ ಮಾಡುತ್ತಾನೆ.

ಭೋಮಪ್ಪ ನಾಡಗೌಡನಿಗೆ ಸಾಬಗೌಡ ನಾಡಗೌಡ ಎಂಬ ಒಬ್ಬ ಮಗನಿದ್ದು. ಅವನು ಮುಂದೆ ವತನದಾರಿಕೆಯ ಪಟ್ಟ ಅಲಂಕರಿಸುತ್ತಾನೆ. ಇವನು ಈ ಮನೆತನದ ಆರನೆಯ ತಲೆ. ಇವನಿಗೆ ಹಣಮಗೌಡ, ಧರಿಗೌಡ ಭೂ, ಧರಿಗೌಡ ಖುರ್ದಿ, ವೀರಗೌಡ ಎಂಬ ನಾಲ್ಕು ಮಕ್ಕಳಿರುತ್ತಾರೆ. ಇದರಲ್ಲಿ ಮೊದಲನೆಯ ಮಗನಾದ ಹಣಮಗೌಡ ನಾಡಗೌಡ ವತನದಾರಿಕೆಯನ್ನು ನಿರ್ವಹಿಸುತ್ತಾನೆ. ಇವನಿಗೆ ಗಂಡು ಸಂತಾನವಿರದ ಕಾರಣ ತನ್ನ ಎರಡನೆಯ ತಮ್ಮ ಧರಿಗೌಡ ಖುರ್ದಿಯ ಮಗನಾದ ರಾಯಗೌಡನನ್ನು ತನ್ನ ತಮ್ಮನ ಒಪ್ಪಿಗೆ ಮೇರೆಗೆ ದತ್ತು ತೆಗೆದುಕೊಂಡು ನಾಡಗೌಡಕಿಯ ಅಧಿಕಾರ ನಡೆಸಿದರು. ರಾಯಗೌಡ ನಾಡಗೌಡನ ನಂತರ ವೀರಗೌಡ ನಾಡಗೌಡ, ದಾತಪ್ಪ, ಜಕ್ಕಪ್ಪ ಸಾಬಣ್ಣವರ ಎಂಬವರಲ್ಲಿ ಹಿರಿಯವನಾದ ವೀರಗೌಡನಿಗೆ ತೇರದಾಳದ ನಾಡಗೌಡಕಿಯನ್ನು ರಾಯಗೌಡ ವಹಿಸುತ್ತಾರೆ. ದಾತಪ್ಪನಿಗೆ ಸಸಾಲಟ್ಟಿಯ ಪಾಟೀಲ ಗಿರಿಯನ್ನು ಮತ್ತು ಆ ಊರನ್ನು ಉಂಬಳಿಯಾಗಿ ಕೊಟ್ಟರು. ದಾತಪ್ಪ ಸಸಾಲಟ್ಟಿಯಲ್ಲಿ ಪಾಟೀಲಗಿರಿಯನ್ನು ನಿರ್ವಹಿಸುತ್ತ ಒಂದು ವಾಡೆಯನ್ನೂ ಕಟ್ಟಿಕೊಂಡ. ಸದ್ಯ ಹಳೆಯ ಸಸಾಲಟ್ಟಿಯು ಅಥಣಿ ತಾಲ್ಲೂಕು ಬೆಳಗಾವಿ ಜಿಲ್ಲೆಯಲ್ಲಿದ್ದು ಕೃಷ್ಣಾನದಿಯಲ್ಲಿ ಪ್ರವಾಹಕ್ಕೆ ಸಿಕ್ಕು ಮುಳುಗಿಹೋಗಿದೆ. ಇದೊಂದು ಬೇಚರಾಕ್ ಗ್ರಾಮವಾಗಿದೆ. ಪ್ರವಾಹಕ್ಕೆ ಸಿಕ್ಕ ಜನ ಗ್ರಾಮವನ್ನು ಬೇರೆ ಕಡೆ ಸ್ಥಳಾಂತರ ಮಾಡಿದ್ದಾರೆ. ದಾತಪ್ಪನ ವಂಶಸ್ಥರೂ ಕ್ಷೇತ್ರಕಾರ್ಯದ ಸಂದರ್ಭದಲ್ಲಿ ವಿಚಾರಿಸಿದಾಗ ಕಂಡುಬಂದಿಲ್ಲ. ಜಕ್ಕಪ್ಪ ಸಾಬಣ್ಣವರನಿಗೆ ಉದರ ನಿರ್ವಹಣೆಗೆ ಸಾಕಾಗುವಷ್ಟು ಭೂಮಿಯನ್ನು ವಾಡೆಯಿಂದ ಕೊಡಲಾಗುತ್ತದೆ.

ವೀರಗೌಡ ತೇರದಾಳದ ನಾಡಗೌಡಿಕೆಯನ್ನು ವಹಿಸಿಕೊಂಡ ನಂತರ ದಕ್ಷ ಆಡಳಿತ ನಡೆಸಿದ. ಇವನು ಸಂಯಮಿ ರೈತರನ್ನು ಮಕ್ಕಳಂತೆ ನೋಡಿಕೊಳ್ಳುತ್ತಿದ್ದನಂತೆ. ವೀರಗೌಡನಿಗೆ ಪಾಯಗೌಡ ನಾಡಗೌಡ, ಸಿದ್ಧಗೌಡ ನಾಡಗೌಡ, ಭೀಮಗೌಡ ನಾಡಗೌಡ, ಧರಿಗೌಡ ನಾಡಗೌಡ ಎಂಬ ನಾಲ್ಕು ಗಂಡುಮಕ್ಕಳು. ಇದರಲ್ಲಿ ಧರಿಗೌಡ ಅಧಿಕಾರಕ್ಕೆ ಬಂದಂತೆ ಕಾಣುತ್ತದೆ. ಇವನಿಗೆ

ಗಂಡುಮಕ್ಕಳಿರದ ಕಾರಣವಾಗಿ ಈ ಎಂಟನೆಯ ನಾಡಗೌಡ ಧರಿಗೌಡನು ದೇಸಾಯಿ ಮನೆತನದ ಮಗೆಪ್ಪ ದೇಸಾಯಿಯ ಎರಡನೆಯ ಮಗನಾದ ಪಾಯಪ್ಪನನ್ನು ದತ್ತು ತೆಗೆದುಕೊಂಡು, ಪಾಯಪ್ಪ ನಾಡಗೌಡ ಎಂದು ನಾಮಕರಣ ಮಾಡಿ ವತನದಾರಿಕೆಯ ಪಟ್ಟಕಟ್ಟುತ್ತಾನೆ. ಪಾಯಪ್ಪನಿಗೆ ಸಗುಣಪ್ಪ (ಸುಗುಣಪ್ಪ) ಎಂಬ ಒಬ್ಬ ಮಗನಿದ್ದು ಇವನು ಈ ಮನೆತನದ ಹತ್ತನೆಯ ತಲೆ. ಇವನಿಗೆ ಪಾಯಪ್ಪ, ಭೋಮಪ್ಪ, ಗದಗೆಪ್ಪ ಆದಪ್ಪ ಎಂಬ ನಾಲ್ಕು ಮಕ್ಕಳಲ್ಲಿ ಪಾಯಪ್ಪನಿಗೆ ನಾಡಗೌಡ ಪಟ್ಟ ಲಭಿಸುತ್ತದೆ. ನಂತರ ಇವನ ಒಂದನೆಯ ಮಗನಾದ ಸುಗಣಪ್ಪನಿಗೂ ಈ ಪಟ್ಟ ಮುಂದುವರೆಯುತ್ತದೆ. ಸುಗುಣಪ್ಪನ ತಮ್ಮ ಧರಿಗೌಡನನ್ನು ತಂದೆಯಾದ ಪಾಯಪ್ಪ ನಾಡಗೌಡರು ದೇಸಾಯಿ ಮನೆತನದ ಒಂಭತ್ತನೆಯ ತಲೆಮಾರಿನ ಅಲ್ಲಪ್ಪದೇಸಾಯಿಗೆ ಮಕ್ಕಳಿರದ ಕಾರಣ ದತ್ತು ಕೊಟ್ಟರು. ಧರಿಗೌಡನಿಗೆ ಅಲ್ಲಪ್ಪ ದೇಸಾಯಿಯು ಜಕ್ಕಪ್ಪ ದೇಸಾಯಿ ಎಂದು ನಾಮಕರಣ ಮಾಡಿದ. ಜಕ್ಕ ಎಂಬುದು ಯಕ್ಷ ಪದದಿಂದ ಬಂದುದಾಗಿದೆ. ಯಕ್ಷ > ಯಕ್ಕ > ಜಕ್ಕ.

ಸುಗುಣಪ್ಪನವರ ನಂತರ ಪಾಯಪ್ಪ ನಾಡಗೌಡರು, ನಂತರ ಸುಗುಣಪ್ಪ ನಾಡಗೌಡರು ಉರ್ಫ್ ಪಾರ್ಶ್ವನಾಥ ಆನಂತರ ಪಿ.ಎಸ್. ನಾಡಗೌಡಗೌಡರೆಂದೆ ಪ್ರಸಿದ್ಧರಾದ ಪಾಯಪ್ಪ ಸುಗುಣಪ್ಪ ನಾಡಗೌಡರು ಈ ವಂಶದ ೧೬ನೆಯ ನಾಡಗೌಡರಾದರು. ಇವರಿಗೆ ಗಂಗಾ, ವಿಜಯ, ಪ್ರವೀಣ, ಮಾಧವಿ ಎಂಬ ನಾಲ್ಕು ಮಕ್ಕಳು. ಪ್ರಸ್ತುತ ವಿಜಯ ನಾಡಗೌಡರು ತೇರದಾಳ ವಾಡೆಯ ಮುಖ್ಯಸ್ಥರು ಇವರಿಗೆ ಪೃಥ್ವಿರಾಜ ಎಂಬ ಮಗನಿದ್ದಾನೆ.

## ವಾಡೆಯ ಪ್ರಮುಖ ವ್ಯಕ್ತಿಗಳು

### ಎರಡನೆಯ ಸುಗುಣಪ್ಪ ಪಾಯಪ್ಪ ನಾಡಗೌಡರು.

ತೇರದಾಳ ವಾಡೆಯ ೧೩ನೆಯ ನಾಡಗೌಡರಾದ ೨ನೆಯ ಸುಗುಣಪ್ಪ ನಾಡಗೌಡರು ಸ್ವಾಭಾವಿಕವಾಗಿ ಸದ್ಗುಣ ಸಂಪನ್ನ ವ್ಯಕ್ತಿ. ಅಧಿಕಾರದ ಅಮಲಿನಲ್ಲಿ ಮಿಯ್ಯದೇ, ದರ್ಪ ದರ್ಭಾರು ನಡೆಸದೆ ರೈತರನ್ನು ಮಕ್ಕಳಂತೆ ಕಂಡವರು. ಧರ್ಮದ ಬಗ್ಗೆ ಅನನ್ಯ ಕಾಳಜಿ ಇದ್ದ ಇವರು ಧರ್ಮದ್ರೋಹಿಗಳನ್ನು ಕಂಡರೆ ಸಹಿಸುತ್ತಿರಲಿಲ್ಲ. ಪ್ರಜಾ ಧರ್ಮ ಮತ್ತು ಸ್ವಧರ್ಮಗಳಿಗೆ ಸಮಾನ ಸ್ಥಾನಮಾನಗಳು ಇವರ ಅಧಿಕಾರದ ಅವಧಿಯಲ್ಲಿ ಲಭಿಸಿದ್ದವು. ಧರ್ಮದಿಂದ ಜೈನರಾದ ಇವರು ಪ್ರಾತಃ ಕಾಲದಲ್ಲಿಯೇ ನಿತ್ಯಕರ್ಮಗಳನ್ನು ಮುಗಿಸಿ ಸ್ನಾನಮಾಡಿ, ಒದ್ದೆ ಬಟ್ಟೆಯಲ್ಲಿಯೇ ಜಿನಾಲಯಕ್ಕೆ ತೆರಳಿ ಅಷ್ಟವಿಧಾರ್ಚನೆ (ಅಕ್ಷತೆ, ಜಲ, ಗಂಧ, ಪುಷ್ಪ, ಧೂಪ, ದೀಪ, ನೈವೇದ್ಯ, ತಾಂಬೂಲಗಳಿಂದ ಕೂಡಿದ ಎಂಟು ಬಗೆಯ ಅರ್ಚನೆ) ಮಹಾಭಿಷೇಕ, ಚತುರ್ಭಕ್ತಿ (ಅರ್ಹತ್ ಭಕ್ತಿ, ಆಚಾರ್ಯ ಭಕ್ತಿ, ಬಹುಶ್ರುತ ಭಕ್ತ, ಶ್ರುತಭಕ್ತಿ) ಎಂಬ ಪೂಜಾ ವಿಧಿ ವಿಧಾನಗಳನ್ನು ಪೂರೈಯಿಸುತ್ತಿದ್ದರು. ಇಷ್ಟೇ ಅಲ್ಲದೇ ಚತುರ್ವಿಧ ದಾನಗಳಾದ ಆಹಾರ, ಔಷಧ, ವಿದ್ಯೆ ಮತ್ತು ಅಭಯಗಳನ್ನು ಪ್ರಜೆಗಳಿಗೆ ಕೊಡುತ್ತಿದ್ದರೆಂದು ವಾಡೆಯ ಹಿರೀಕರು ಹೇಳುತ್ತಾರೆ.

ಅಲ್ಲದೇ ತಮ್ಮ ವಾಡೆಯ ಕೆಲಸಗಾರರನ್ನು ಅಪ್ಯಾಯಮಾನವಾಗಿ ಕಂಡು ಅವರಿಗೆ ಕಾಲಕಾಲಕ್ಕೆ ಹೊಸ ಬಟ್ಟೆ ಸವಲತ್ತುಗಳನು ಕೊಡುತ್ತಿದ್ದರು.

ಸುಗುಣಪ್ಪ ನಾಡಗೌಡರು ಅಧಿಕಾರಕ್ಕೆ ಬಂದ ನಂತರ ತೇರದಾಳದ ಮತ್ತು ತಮ್ಮ ಅಧಿಕಾರ ವ್ಯಾಪ್ತಿಗೆ ಬರುವ ಹಳ್ಳಿಗಳು ಹಾಳು ಬಿದ್ದ ಭೂಮಿಯನ್ನು ಕೃಷಿಯೋಗ್ಯ ಭೂಮಿಯನ್ನಾಗಿ ಪರಿವರ್ತಿಸಿದರು. ಅಲ್ಲದೆ ಕೃಷಿಯೋಗ್ಯ ಭೂಮಿಯಲ್ಲಿ ವಾಣಿಜ್ಯ, ಬೆಳೆಗಳನ್ನು ಬೆಳೆಯಲು ರೈತರಿಗೆ ಪ್ರೋತ್ಸಾಹಿಸುವ ಮೂಲಕ ಭೂಮಿಯ ಫಲವತ್ತತೆ ಹೆಚ್ಚುವಂತೆ ಮಾಡಿದರು. ಸ್ವಾಭಾವಿಕವಾಗಿಯೇ ಫಲವತ್ತಾದ ಭೂಮಿಯನ್ನು ಹೊಂದಿದ್ದ ತೇರದಾಳ ಪರಿಸರದಲ್ಲಿ ಮತ್ತಷ್ಟು ಸಮೃದ್ಧ ಬೆಳೆ ಬರುತ್ತಿತ್ತು. ಅದು ಸುಗುಣಪ್ಪರವರ ಕಾರ್ಯ ಕ್ಷಮತೆಯ ಫಲ. ರೈತರ ಜೊತೆಗೆ ಅನ್ಯೋನ್ಯ ಮತ್ತು ಅವಿನಾಭಾವ ಸಂಬಂಧ ಬೆಳೆಸಿಕೊಂಡಿದ್ದ ಸುಗುಣಪ್ಪ ನಾಡಗೌಡರು ಹೇಳುವುದಕ್ಕೆ ಮುಂಚೆಯೇ ಕಂದಾಯ ಸಂದಾಯವಾಗುತ್ತಿತ್ತು. ಯಾರಾದರೂ ಕಂದಾಯ ಕಟ್ಟದಿದ್ದಾಗ ಅವರ ಸಮಸ್ಯೆಯ ಮೂಲ ಅರಿತು ನಿಜವಾಗಲೂ ರೈತರಿಗೆ ಸಂಕಷ್ಟ ಇದ್ದರೆ ಅವರಿಗೆ ಕಂದಾಯ ವಿನಾಯಿತಿ ನೀಡುತ್ತಿದ್ದರು. ಗಂಭೀರವಾದ ಸಮಸ್ಯೆ ಇರದೇ ಸುಳ್ಳು ಹೇಳಿ ಕಂದಾಯ ಕಟ್ಟದವರಿಗೆ ಕಂದಾಯ ಕಟ್ಟುವಂತೆ ಎಚ್ಚರಿಕೆ ಕೊಟ್ಟು ಕಳುಹಿಸುತ್ತಿದ್ದರು.

ಧರ್ಮನಿಷ್ಠರಾದ ೨ನೆಯ ಸುಗುಣಪ್ಪ ನಾಡಗೌಡರು ಧರ್ಮಬಾಹಿರ ಚಟುವಟಿಕೆಗಳಲ್ಲಿ ತೊಡಗಿದ ವ್ಯಕ್ತಿಗಳನ್ನು ಕಂಡರೆ ಸಹಿಸುತ್ತಿರಲಿಲ್ಲ. ಅಪರಾದ ಸಣ್ಣದಾದಲ್ಲಿ ಎಚ್ಚರಿಕೆ ಕೊಟ್ಟು ಮುಂದೆ ಹಾಗಾಗಕೂಡದೆಂದು ತಿಳಿಹೇಳುತ್ತಿದ್ದರು. ಅಪರಾಧ ಗಂಭೀರವಾದಲ್ಲಿ ಜೈಲು ಶಿಕ್ಷೆಯನ್ನೂ ಸಹ ವಿಧಿಸುತ್ತಿದ್ದರು. ಸಾಮಾಜಿಕ ಬಾಹಿರವಾದ ಚಟುವಟಿಕೆಗಳಲ್ಲಿ ತೊಡಗಿದವರಿಗೆ, ಕೆಟ್ಟೆ ವ್ಯಸನಗಳ ದಾಸರಿಗೆ ಶಿಕ್ಷೆ ತಪ್ಪುತ್ತಿರಲಿಲ್ಲ. ಕುಲದಿಂದ, ಧರ್ಮದಿಂದ, ಊರಿಂದ ಬಹಿಷ್ಕಾರ ಹಾಕುವ ಮತ್ತು ದಂಡವಿಧಿಸುವ, ಶಿಕ್ಷೆ ನೀಡುವ ಹಕ್ಕು ಭಾದ್ಯತೆಗಳು ನಾಡಗೌಡರಿಗೆ ಆದಿಲ್‌ಷಾಹಿಗಳ ಕಾಲದಿಂದಲೇ ಬಂದವಾಗಿದ್ದವು. ಈ ಅಧಿಕಾರವನ್ನು ಸುಗುಣಪ್ಪ ನಾಡಗೌಡರು ಎಂದೂ ದುರುಪಯೋಗ ಪಡಿಸಿಕೊಳ್ಳದೇ ದುಷ್ಟರಿಗೆ ಶಿಕ್ಷೆ: ಶಿಷ್ಟರಿಗೆ ರಕ್ಷಣೆ ಕೊಡುತ್ತಾ ಬಂದಿದ್ದಾರೆ.

**ಮೂರನೆಯ ಸುಗುಣಪ್ಪ ನಾಡಗೌಡರು**

ಕ್ರಿ.ಶ. ೧೯೦೦ರ ಸುಮಾರಿಗೆ ಅಧಿಕಾರ ವಹಿಸಿಕೊಂಡ ಸುಗುಣಪ್ಪ ನಾಡಗೌಡರು ಕೊಡುಗೈ ದಾನಿಯೆಂದೇ ಪ್ರಸಿದ್ಧರಾಗಿದ್ದರು. ಬ್ರಿಟೀಷರ ಆಡಳಿತಾವಧಿಯಲ್ಲಿ ಆಡಳಿತ ನಡೆಯಿಸಿದ ಇವರು ಧರ್ಮನಿಷ್ಠರಾಗಿದ್ದರು. ಇವರ ಆಡಳಿತದ ಮಹತ್ ಸಾಧನೆ ಎಂದರೆ ವಾಡೆಯ ಕೆಲಸಗಾರರಿಗೆ ಭೂದಾನ ಕೊಟ್ಟಿದ್ದು. 'ಸರ್ವವರಿಗೂ ಸಮಪಾಲು ಸಮಬಾಳು' ಎಂಬ ಕುವೆಂಪು ನುಡಿಗಳಂತೆ ಸುಗುಣಪ್ಪರವರು ಪರಂಪರೆಯಿಂದ ತಮ್ಮ ವಾಡೆಯಲ್ಲಿ ದುಡಿದುಕೊಂಡು ಬಂದ ಕುಟುಂಬದವರಿಗೆ ಜಮೀನು ಕೊಟ್ಟರು. ಹಣ ಕೊಟ್ಟರೆ ಖರ್ಚಾಗುತ್ತದೆ ಭೂಮಿ ಕೊಟ್ಟರೆ ದುಡಿದು ತಿನ್ನುತ್ತಾರೆ ಎಂದು ಇವರು ಹೇಳುತ್ತಿದ್ದರಂತೆ. ಆದ್ದರಿಂದಲೇ ಅವರು ಕೊಟ್ಟ ಭೂಮಿ

ಇನ್ನೂ ಅವರ ಕೆಲಸಗಾರರ ಕುಟುಂಬ ಉಳಿಸಕೊಂಡು ಬಂದಿವೆ. ಇಷ್ಟೇ ಅಲ್ಲದೇ ಇವರು ದೇವಾಲಯಗಳಿಗೆ ಭೂದಾನ ಮಾಡಿದ್ದಾರೆ. ವಾಡೆಗೆ ಯಾರೇ ಬಂದು 'ದೇಹಿ' ಎಂದರೆ ಅವರ 'ದಾಹ' ತೀರಿಸುವ ನಿರ್ಮಲ ಮನಸ್ಸು ೩ನೆಯ ಸುಗುಣಪ್ಪ ನಾಡಗೌಡರಲ್ಲಿತ್ತು.

ಸಿಪಾಯಿಗಳು, ಕುಂಬಾರರು, ಸಿಂಪಿಗರು, ಅಡುಗೆಯವರು, ತಳವಾರರು ಅಗಸರು, ಬೆಂಕಿ ಹೊಲದವರು (ಸ್ಮಶಾನ ಕಾಯುವವರು), ಕೊಂಬು, ಕಹಳೆ ಊದುವವರು, ವಾಡೆಯ ಕಾರಕೂನರು, ಬಡಿವ್ಯಾಗಳು (ಮೇಣಿ ಹೊರುವವರು) ಅಬಾಖಾನ್ ದರ್ಗಾಕ್ಕೆ, ದತ್ತಾತ್ರೇಯ ಗುಡಿಗೆ, ಗೊಂಕಜಿನಾಲಯದ ಪಂಡಿತರಿಗೆ, ಸ್ವಾಮಿಗಳಿಗೆ ಮುಂತಾದವರಿಗೆ ಒಟ್ಟು ೨೪೯ ಎಕರೆ ಭೂಮಿಯನ್ನು ದಾನ ಮಾಡಿದ ೩ನೆಯ ಸುಗುಣಪ್ಪ ಅವರು ಕೊಡುಗೈ ದಾನಿಯೇ ಸರಿ. ಎಲ್ಲವೂ ನನಗೆ ಇರಲಿ ಎಂಬ ಕಲಿಗಾಲದಲ್ಲಿಯೂ ಸಹ ಅಪಾರ ಪ್ರಮಾಣದ ಭೂಮಿಯನ್ನು ಆಯಗಾರರಿಗೆ ಕೊಟ್ಟಿದ್ದು ಸುಗುಣಪ್ಪರವರಿಗೆ ದುಡಿಯು ವರ್ಗದವರ ಮೇಲಿರುವ ಕಾಳಜಿಯನ್ನು ತೋರಿಸುತ್ತದೆ.

**ಶ್ರೀಮಂತ ಪಿ.ಎಸ್. ನಾಡಗೌಡರು**

ಶ್ರೀಮಂತ ಪಿ.ಎಸ್. ನಾಡಗೌಡರೆಂದೇ ಪ್ರಸಿದ್ಧರಾದ ಪಾಯಪ್ಪ ಸುಗುಣಪ್ಪ ನಾಡಗೌಡರು ತಂದೆ ೩ನೆಯ ಸುಗುಣಪ್ಪ ನಾಡಗೌಡರಂತೆ ಗಾಂಭೀರ್ಯ್ಯ ವ್ಯಕ್ತಿತ್ವ ಹೊಂದಿದವರು. ೩೩ ಹಳ್ಳಿಗಳ ವತನದಾರರಾದ ಇವರು ಸ್ವತಂತ್ರ ಪೂರ್ವ ಮತ್ತು ಉತ್ತರದಲ್ಲಿ ವಾಡೆಯ ಆಡಳಿತ ನಿರ್ವಹಿಸಿದ್ದಾರೆ. ವಿದೇಶದಲ್ಲಿ ವ್ಯಾಸಾಂಗ ಮಾಡಿದ ಇವರು ಮಾಜಿ ಉಪರಾಷ್ಟ್ರಪತಿಗಳಾದ ಬಿ.ಡಿ. ಜತ್ತಿಯವರ ಒಡನಾಡಿಗಳಾಗಿದ್ದರು. ಬಡಜನರಿಗೆ ಸದಾ ಸಹಾಯ ಮಾಡುವ ಇವರು ಶಿಕ್ಷಣ ಪ್ರೇಮಿಯೂ ಹೌದು. ಸಾಕಷ್ಟು ಬಡ ವಿದ್ಯಾರ್ಥಿಗಳಿಗೆ ಓದಿನ ಖರ್ಚನ್ನು ಇವರೆ ಭರಿಸುತ್ತಿದ್ದರು. ಸರಳ-ಸಜ್ಜನಿಕೆಯ ಜೀವನ ನಡೆಯಿಸಿದ ಶ್ರೀಮಂತ ಪಿ.ಎಸ್. ನಾಡಗೌಡರು ಪದವಿ-ಪುರಸ್ಕಾರಗಳನ್ನು ತಿರಸ್ಕರಿಸಿದ್ದರು. ಕಾಂಗ್ರೆಸ್ ಪಕ್ಷದಿಂದ ಎಂ.ಪಿ. ಸ್ಥಾನಕ್ಕೆ ಸ್ಪರ್ಧಿಸುವ ಅವಕಾಶ ಒಲಿದು ಬಂದರೂ ನಮ್ರವಾಗಿಯೇ ಅದನ್ನು ತಿರಸ್ಕರಿಸಿದರು. ಸ್ವತಂತ್ರ ಬಂದ ನಂತರ ವತನದಾರಿಕೆ ಅಧಿಕಾರ ಹೋದರೂ ಊರ ಜನ ಮಾತ್ರ ನಾಡಗೌಡರನ್ನು ಧಣಿಗಳೆಂದೆ ಕರೆದುಕೊಂಡು ಬಂದಿದ್ದಾರೆ. ಮೊದಲಿನ ಭಯ-ಭಕ್ತಿ ಈಗಲೂ ಜನಗಳಲ್ಲಿ ಇದೆ.

**೪.೨) ಹನಗಂಡಿ ದೇಸಾಯಿ ವಾಡೆಯ ಇತಿಹಾಸ**

ಉತ್ತರ ಕರ್ನಾಟಕದ ಜೈನ ವಾಡೆಗಳಲ್ಲೇ ಅತ್ಯಂತ ಬಲಿಷ್ಠ ಮತ್ತು ದೊಡ್ಡ ವಾಡೆ ಇರುವುದು ಹನಗಂಡಿಯಲ್ಲಿ. ಇಲ್ಲಿರುವ ಪ್ರಾಕೃತಿಕ ಸಂಪತ್ತು ವಾಡೆಯ ಶ್ರೀಮಂತಿಕೆಗೆ ಕಾರಣವಾಗಿದೆ. ಈ ವಾಡೆಗಿರುವ ೩೩ ಚಾವರಾತ್ ಹಳ್ಳಿಗಳಿಂದ ಬರುವ ಆದಾಯ ವಾಡೆಯ ಸಂಪತ್ತನ್ನು ಇನ್ನೂ ಹೆಚ್ಚಿಸಿತು. ಮೂಲತಃ ಹನಗಂಡಿ ಎಂದರೆ ಸಂಪದ್ಭರಿತ ಭೂ ಪ್ರದೇಶ

ಎಂದರ್ಥ. ಇಲ್ಲಿರುವ ಫಲವತ್ತಾದ ಭೂಮಿ ಸಾಕಷ್ಟು ಆದಾಯವನ್ನು ತರುತ್ತಿದ್ದರಿಂದ ಹೊನ್ನಿನ ಹೊಳೆಯೇ ಇಲ್ಲಿ ಹರಿಯುತ್ತಿತ್ತು ಎಂಬ ವಾಕ್ಯ ಜನಪದರಲ್ಲಿ ಮನೆ ಮಾತಾಗಿದೆ. ಹೊನ್ನ + ಖಂಡಿ = ಹೊನಗಂಡಿ > ಹನಗಂಡಿ ಯಾದಂತೆ ತೋರುತ್ತದೆ. ಹೊನ್ನು ಎಂದರೆ ಸಂಪತ್ತು, ಖಂಡಿ ಎಂದರೆ ಕಿಂಡಿ, ರಂಧ್ರ, ಒಂದು ಬಗೆಯ ತೂಕ ಒಂದು ಖಂಡಿಯಷ್ಟು ಬೀಜವರಿಯುಳ್ಳ ಭೂಮಿ ಎಂಬರ್ಥಗಳನ್ನು ನಿಘಂಟು ಹೇಳುತ್ತದೆ.[೧೧] ಇಲ್ಲಿ ಬೀಜವರಿಯುಳ್ಳ ಭೂಮಿ ಎಂದರೆ ಬಿತ್ತನೆ ಮಾಡುವ ಭೂಮಿ ಎಂದರ್ಥವಾಗುತ್ತದೆ. ಆದ್ದರಿಂದ ಹನಗಂಡಿ ಭೂ ಪ್ರದೇಶ ಸಾಕಷ್ಟು ಫಲವತ್ತತೆಯನ್ನು ಹೊಂದಿದ್ದು, ರೈತರು ಹುಲುಸಾದ ಬೆಳೆಯನ್ನು ತೆಗೆಯುತ್ತಿದ್ದರು. ಅಂತೆಯೆ ರಾಜ್ಯಬೊಕ್ಕಸಕ್ಕೆ ಸಲ್ಲುವ ಕಂದಾಯವೂ ಚಾಚುತಪ್ಪದೆ ಸಂದಾಯವಾಗುತ್ತಿತ್ತು. ರೈತರಿಂದ ಕಂದಾಯ ಸಂಗ್ರಹಿಸಿ ರಾಜ್ಯಬೊಕ್ಕಸಕ್ಕೆ ಪ್ರಾಮಾಣಿಕವಾಗಿ ಸಲ್ಲಿಸುತ್ತಿದ್ದ ವಾಡೆಯ ದೇಸಾಯಿಗಳು ರಾಜನಿಂದ ಸಾಕಷ್ಟು ಇನಾಂ ಭೂಮಿಯನ್ನು ಮತ್ತು ಬಹುಮಾನವನ್ನು ಪಡೆಯುತ್ತಿದ್ದರು. ರಾಜನಿಂದ ಬರುವ ಆದಾಯ, ಇನಾಂ ಭೂಮಿಯಿಂದ ಬರುವ ಆದಾಯದಿಂದ ಹನಗಂಡಿ ದೇಸಾಯಿಗಳು ಸಹಜವಾಗಿಯೇ ಶ್ರೀಮಂತರಾದರು. ಅಂತೆಯೇ ಶ್ರೀಮಂತಿಕೆಗೆ ತಕ್ಕ ವಾಡೆಯನ್ನೂ ನಿರ್ಮಿಸಿಕೊಂಡರು.

ಹನಗಂಡಿ ದೇಸಾಯಿಗಳು ಮೂಲದಲ್ಲಿ ತೇರದಾಳ ವಾಡೆಗೆ ಸೇರಿದವರು. ತೇರದಾಳದ ನಾಡಗೌಡರು ಹನಗಂಡಿಯ ದೇಸಾಯಿಗಳು ಸಹೋದರರು. ಈ ವಂಶಕ್ಕೆ ಸಂಬಂಧಿಸಿದ ಕಥೆಯೊಂದನ್ನು ಅಲಗೌಡ ಸಿ. ಪಾಟೀಲ ಅವರು ಹೀಗೆ ಹೇಳುತ್ತಾರೆ. "ಹನಗಂಡಿ ದೇಸಗತಿ ಮನೆತನವು ಮೂಲತಃ ತೇರದಾಳಗಲ್ಲಿದ್ದು, ತೇರದಾಳ ಪಟ್ಟಣವು ವಿಸ್ತಾರವಾಗಹತ್ತಿತು. ತೇರದಾಳ ಪಟ್ಟಣದಿಂದ ಸುಮಾರು ೪ ಕೀ.ಮೀ ದೂರದಲ್ಲಿರುವ ಒಂದು ವಿಶಾಲವಾದ ಪ್ರದೇಶದಲ್ಲಿ ವಾಡೆಯನ್ನು ನಿರ್ಮಿಸಿದರು. ಇವರ ಮೂಲದ ಬಗ್ಗೆ ಸ್ಪಷ್ಟವಾದ ಮಾಹಿತಿಗಳು ಲಭ್ಯವಿಲ್ಲ. ಆದರೂ ಕೂಡಾ ಈ ಒಂದು ಪ್ರದೇಶ ಬಿಜಾಪುರದ ಆದಿಲ್‌ಷಾಹಿಗಳ ಆಡಳಿತಕ್ಕೆ ಒಳಪಟ್ಟಿತ್ತೆಂದು ತಿಳಿದುಬರುತ್ತದೆ. ಬಿಜಾಪುರದ ಆದಿಲ್‌ಷಾಹಿಯ ಸೈನಿಕರು ಕುದುರೆಗಳ ಮೇಲೆ ಹೋಗುತ್ತಿರುವಾಗ ಅವರನ್ನು ತಡೆದು ಅವರ ಕುದುರೆಗಳನ್ನು, ಆನೆಗಳನ್ನು ಕಳವು ಮಾಡುತ್ತಿದ್ದರು. ಆಗ ಬಿಜಾಪೂರದ ಆದಿಲ್‌ಷಾ ಜಿನ್ನಪ್ಪಾ ದೇಸಾಯಿ ಇತನನ್ನು ಹಿಡಿದುಕೊಂಡು ಬರುವಂತೆ ಆಜ್ಞೆ ಮಾಡಿದನು. ಆಗ ಆದಿಲ್‌ಷಾಹಿಯ ಸೈನಿಕರು ಇತನನ್ನು ಹುಡುಕಲು ಪ್ರಾರಂಭಿಸಿದರು. ಆಗ ಜಿನ್ನಪ್ಪಾ ನನ್ನನ್ನು ಇವರು ಬಿಡುವುದಿಲ್ಲವೆಂದು ತಿಳಿದು ತೇರದಾಳದಲ್ಲಿದ್ದ ಮುಸ್ಲಿಂ ಸಂತನಾದ 'ಜಿನಗೆ ಷಾ'ನ ಹತ್ತಿರ ಬಂದು ನಡೆದ ಎಲ್ಲಾ ಘಟನೆಗಳನ್ನು ವಿವರಿಸಿದನು.

ಆಗ ಜಿನಗೆ ಷಾ ಜಿನ್ನಪ್ಪನಿಗೆ (ಕೃಷ್ಣಗೌಡ) ಮೂರು ಗುಟುಗಳನ್ನು (ಕಲ್ಲುಗಳು) ಕೊಟ್ಟನಂತೆ, ಅವುಗಳನ್ನು ತೆಗೆದುಕೊಂಡು ನಿನ್ನ ಹತ್ತಿರ ಇಟ್ಟುಕೊಳ್ಳಿ ನಿನಗೆ ಯಾವುದೇ ತೊಂದರೆಯಾಗುವುದಿಲ್ಲವೆಂದು, ನಿನಗೆ ಯಾವ ಆತಂಕಗಳು ಬುರುವುದಿಲ್ಲವೆಂದು ಹೇಳಿದರಂತೆ. ಆದಿಲ್‌ಷಾ ಸೈನಿಕರು ಇವನ್ನು ಹಿಡಿದುಕೊಂಡು ಬಿಜಾಪುರಕ್ಕೆ ಕರೆದೊಯ್ದರು ಆಗ ತನ್ನಲ್ಲಿದ್ದ ಒಂದು ಕಲ್ಲನ್ನು ಕೆಳಗೆ ಒಗೆದನು. ಬಿಜಾಪುರ ಆದಿಲ್‌ಷಾ ಇವನಿಗೆ ಏನು ಮಾತನಾಡದೆ

ಇತನನ್ನು ಕೊಲ್ಲುವುದಕ್ಕಾಗಿ ತನ್ನಲ್ಲಿ ಒಂದು ಕುದುರೆಗೆ ಹುಚ್ಚು ಹಿಡಿದಿತ್ತು. ಆ ಕುದುರೆಯನ್ನು ಕೊಟ್ಟು ಕಳುಹಿಸಿದನು. ಆಗ ಜಿನಗೆ ಷಾ ಹೇಳಿದಂತೆ ತನ್ನಲ್ಲಿ ಇದ್ದ ಎರಡನೆಯ ಕಲ್ಲನ್ನು ಕೆಳಗೆ ಬಿಟ್ಟು ಕುದುರೆಯನ್ನು ಏರಿದ, ಅದನ್ನು ಹತ್ತಿಕೊಂಡು ನಂದೇಶ್ವರದಲ್ಲಿ ಹನುಮಂತ ದೇವರ ಗುಡಿ ಮುಂದಿನ ಸ್ತಂಭವನ್ನು ಸುತ್ತು ಹಾಕಿ ಬಿಜಾಪೂರಕ್ಕೆ ಹೋಗಿ ಆದಿಲ್‌ಷಾ ಮುಂದೆ ನಿಂತಾಗ ಆತನಿಗೆ ಅಚ್ಚರಿಯಾಯಿತು. ಈತ ಸತ್ತು ಹೋಗಿದ್ದನೆಂದು ತಿಳಿದುಕೊಂಡಿದ್ದಾಗ ಆತನ ಮುಂದೆ ಪ್ರತ್ಯಕ್ಷನಾದನು ತನ್ನಲ್ಲಿ ಇದ್ದ ಇನ್ನೊಂದು ಕಲ್ಲನ್ನು ಕೆಳಗೆ ಒಗೆದನು. ಆಗ ಬಿಜಾಪೂರದ ಆದಲ್‌ಷಾ ಇತನಿಗೆ "ಹುಚ್ಚು ಕುದುರೆಯ ಯಜಮಾನ ಎಂಬ ಬಿರುದನ್ನು ಕೊಟ್ಟು ೫ ಹಳ್ಳಿಯ ಇನಾಂ ಕೊಟ್ಟರಂತೆ."[೧೨].

ಅಲಗೌಡ ಸಿ ಪಾಟೀಲ ಅವರು ಚರ್ಚಿಸಿದಂತೆ ಹನಗಂಡಿ ದೇಸಾಯಿಗಳು ಮೂಲದಲ್ಲಿ ತೇರದಾಳದಲ್ಲಿದ್ದುದ್ದು ನಿಜ. ಆದರೆ ಜಿನ್ನಪ್ಪ ಉರ್ಫ್ ಕೃಷ್ಣಗೌಡ ಹನಗಂಡಿ ದೇಸಾಯಿಗಳ ಮೂಲ ವ್ಯಕ್ತಿಯಲ್ಲ. ಮೂಲ ವ್ಯಕ್ತಿ ಕಲಗೌಡ ಎಂದು ಪೂನಾದ ಪತ್ರಾಗಾರ ಇಲಾಖೆಯಿಂದ ತೆಗೆಯಿಸಿದ ಹನಗಂಡಿ ದೇಸಾಯಿಗಳ ವಂಶವೃಕ್ಷದಲ್ಲಿ ದಾಖಲಾಗಿದೆ. ಜಿನ್ನಪ್ಪ ಉರ್ಫ್ ಕೃಷ್ಣಗೌಡ ಕಳ್ಳನಾಗಿದ್ದ ಎಂಬುದಕ್ಕೆ ಆಧಾರಗಳಿಲ್ಲ. ಜಿನ್ನಪ್ಪ ಉರ್ಫ್ ಕೃಷ್ಣಗೌಡ ಆದಿಲ್‌ಷಾಹಿಯ ಕುದುರೆಯನ್ನೇರಲಿಲ್ಲ. ಕುದುರೆಯನ್ನೇರಿದವರೇ ಬೇರೆ ವ್ಯಕ್ತಿಗಳು. ಆದಿಲ್‌ಷಾಹಿಯ ಹುಚ್ಚುಕುದುರೆಯನ್ನೇರಿ ವತನದಾರಿಕೆಯನ್ನು ಪಡೆದವರು ಕೃಷ್ಣಗೌಡ ಮತ್ತು ಬಸವಗೌಡ ಕಾರಿ ಎಂಬ ಸಹೋದರರು ಇವರೇ ಹನಗಂಡಿ ದೇಸಾಯಿಗಳಿಗೂ ಮತ್ತು ತೇರದಾಳ ನಾಡಗೌಡರಿಗೂ ಮೂಲ ವ್ಯಕ್ತಿಗಳು. ಜಿನ್ನಪ್ಪ ಎಂಬ ವ್ಯಕ್ತಿ ಹನಗಂಡಿ ದೇಸಾಯಿಗಳ ವಂಶಾವಳಿಯಲ್ಲಿ ೧೨ನೆಯ ತಲೆಮಾರಿನವರೆಗೂ ಪರಿಶೀಲಿಸಿದಾಗ ಈ ವ್ಯಕ್ತಿಯ ನಾಮವೇ ಬುರುವುದಿಲ್ಲ. ಜಿನಗೌಡ ಎಂಬ ವ್ಯಕ್ತಿ ತೇರದಾಳ ನಾಡಗೌಡರಲ್ಲಿ ಬರುತ್ತಾನೆ. ಆದಿಲ್‌ಷಾಹಿಗಳಿಂದ ವತನದಾರಿಕೆಯನ್ನು ಸಂಪಾದನೆ ಮಾಡುವಲ್ಲಿ ಜಿನಗಿ ಷಾನ ಪಾತ್ರ ಇದ್ದದ್ದು ಸ್ಪಷ್ಟ. ಜಿನಗಿ ಷಾನ ಜೊತೆ ಅಲ್ಲಮಪ್ರಭು ಎಂಬ ಸನ್ಯಾಸಿಯೂ ವತನದಾರಿಕೆ ಸಂಪಾದಿಸುವಲ್ಲಿ ಪ್ರಮುಖ ಪಾತ್ರ ವಹಿಸುತ್ತಾರೆ.

ಹನಗಂಡಿಯ ವಾಡೆಯ ಅಧಿಕೃತ ವ್ಯಕ್ತಿಯಾದ ಶ್ರೀ ಕೃಷ್ಣಗೌಡ ಅಲ್ಲಪ್ಪ ದೇಸಾಯಿಯವರು[೧೩] ಮತ್ತು ತೇರದಾಳದ ನಾಡಗೌಡತಿಯರಾದ ಜಯಶ್ರೀ ಅಮ್ಮ ಪಾರ್ಶ್ವನಾಥ ನಾಡಗೌಡ್ರರನ್ನು[೧೪] ತಮ್ಮ ಮೂಲ ಮನೆತನದ ಇತಿಹಾಸವನ್ನು ಕೇಳಿದಾಗ ಅವರಿಬ್ಬರು ಒಂದೇ ತೆರನಾದ ಕಥೆಯನ್ನು ಹೇಳಿದರು. ತೇರದಾಳ ವಾಡೆಯ ಇತಿಹಾಸದಲ್ಲಿ ಇದನ್ನು ಉಲ್ಲೇಖಿಸಲಾಗಿದೆ. ತೇರದಾಳ ಮತ್ತು ಹನಗಂಡಿ ವಾಡೆಗಳಿಗೆ ಸದ್ಯ ಮೂಲ ವ್ಯಕ್ತಿ ಬಸವಗೌಡ ಕಾರಿ. ಬಸವಗೌಡ ಕಾರಿ ಮತ್ತು ಕೃಷ್ಣಪ್ಪ ಅಣ್ಣತಮ್ಮಂದಿರು. ಕೃಷ್ಣಪ್ಪ ಅಕಾಲಿಕ ಮರಣಕ್ಕೆ ತುತ್ತಾದ. ಬಸವಗೌಡ ಕಾರಿಗೆ ಇಬ್ಬರು ಮಕ್ಕಳು ಕಲಗೌಡ ಮತ್ತು ಜಿನಗೌಡ. ಇವರಿಬ್ಬರು ಆದಿಲ್‌ಷಾಹಿಯ ಪರವಾಗಿ ಯುದ್ಧಮಾಡಿ, ಯದ್ಧದಲ್ಲಿ ವಿಶೇಷ ಪರಾಕ್ರಮ ತೋರಿ ಯುದ್ಧ ಗೆಲ್ಲುವಂತೆ ಮಾಡಿದರು. ಆದ್ದರಿಂದ ಬಾದಶಹ ಇವರಿಬ್ಬರಿಗೂ ೩೩ ಹಳ್ಳಿಗಳಂತೆ ವತನದಾರಿಕೆಯನ್ನು ಬೇರೆ ಬೇರೆ ಮಾಡಿಕೊಟ್ಟ. ಪಾಲುದಾರಿಕೆ ಬಿಜಾಪುರದ ಮೊಕ್ಕಾಂನಲ್ಲಿ ಕ್ರಿ.ಶ.೧೫೭ ಜನೇವರಿ ೪

ರಂದು ನಡೆಯಿತು.[೧೫] ಇಲ್ಲಿಂದ ಕಲಗೌಡನ ನೇತೃತ್ವದಲ್ಲಿ ದೇಸಾಯಕೆಯು, ಜಿನಗೌಡನ ನೇತೃತ್ವದಲ್ಲಿ ನಾಡಗೌಡಕಿಯು ಮೊದಲು ತೇರದಾಳದಲ್ಲಿಯೇ ಪ್ರಾರಂಭವಾಯಿತು. ಅಣ್ಣತಮ್ಮಂದಿರು ಬಹುಶ: ತೇರದಾಳ ವಾಡೆಯಲ್ಲಿಯೇ ಅಥವಾ ಕಲಗೌಡ ತೇರದಾಳದಲ್ಲಿಯೇ ಬೇರೆ ಇದ್ದುಕೊಂಡು ದೇಸಾಯಿಕೆಯನ್ನು ನಡೆಸಿದಂತೆ ಕಾಣುತ್ತದೆ. ತೇರದಾಳದಲ್ಲಿ ಸದ್ಯ ಇರುವ ನಾಡಗೌಡರ ವಾಡೆ ಹೊರತುಪಡಿಸಿ ಬೇರಾವುದೇ ವಾಡೆ ಇಲ್ಲ. ಆದ್ದರಿಂದ ದೇಸಾಯಿಗಳೂ ಇದೆ ವಾಡೆಯಲ್ಲಿದ್ದರೆಂದು ತೋರುತ್ತದೆ. ಕ್ರಿ.ಶ.೧೭೪೮ ನವೆಂಬರ್ ೧೮ ರಂದು ತೇರದಾಳದ ಗೊಂಕಜಿನಾಲಯಕ್ಕೆ ತೇರದಾಳದ ದೇಸಾಯಿ ಸತ್ಯವ್ವ ಮತ್ತು ಅವರ ಪುತ್ರ ಜಕ್ಕಪ್ಪ ದೇಸಾಯಿಯು ನೇಮಿನಾಥನ ಪ್ರತಿಮೆಯನ್ನು ಮಾಡಿಸಿಕೊಡುತ್ತಾರೆ.[೧೬] ಈ ಉಲ್ಲೇಖವು ನೇಮಿನಾಥ ತೀರ್ಥಂಕರ ಪ್ರತಿಮೆಯ ಪೀಠದಲ್ಲಿನ ಶಾಸನದಲ್ಲಿ ದಾಖಲಾಗಿದೆ. ಆದ್ದರಿಂದ ಕ್ರಿ.ಶ.೧೭೪೮ರವರೆಗೂ ಹನಗಂಡಿ ದೇಸಾಯಿಗಳು ತೇರದಾಳದಲ್ಲಿಯೇ ಇದ್ದರು. ಬಹುಶ: ಈಗಿನ ವಾಡೆಯಲ್ಲಿಯೇ?

ಹೆಳವರ (ಹೇಳುವವರು) ದಾಖಲೆಗಳ ಪ್ರಕಾರ ಹನಗಂಡಿಯ ದೇಸಾಯಿಗಳ ವಂಶಾವಳಿ ಏಳನೆಯ ತಲೆಮಾರಿನ ಪಾಸಪ್ಪ ದೇಸಾಯಿಯಿಂದ ಪ್ರಾರಂಭವಾಗುತ್ತದೆ. ಇವರ ದಾಖಲೆಯಲ್ಲಿ ಪಾಸಪ್ಪ ದೇಸಾಯಿಯನ್ನು ಪಾಸಪ್ಪ ದೇಸವರ ಎಂದು ಸಂಬೋಧಿಸಲಾಗಿದೆ. ದೇಸಾಯಿಯವರು ಎಂಬುದನ್ನು ಹೆಳವರು ದೇಸವರ ಎಂದು ಸಂಕ್ಷಿಪ್ತಗೊಳಿಸಿದ್ದಾರೆ. ಪಾಯಪ್ಪನ ನಂತರ ಜಕ್ಕಪ್ಪ ನಂತರ ಮಗೆಪ್ಪ ಅವನ ಮಗ ಕೃಷ್ಣಪ್ಪ ಎಂದು ಹೆಳವರು ಹೇಳುತ್ತಾರೆ. ಆದರೆ ನನಗೆ ಸಿಕ್ಕ ವಂಶಾವಳಿ ದಾಖಲಾತಿಯಲ್ಲಿ ಮಗೆಪ್ಪನ ಮಗ ಅಲ್ಲಪ್ಪ ಎಂದಿದೆ. ಅಲ್ಲಪ್ಪನಿಗೆ ಕೃಷ್ಣಪ್ಪ ಎಂಬ ಇನ್ನೊಂದು ಹೆಸರಿದ್ದಂತೆ ತೋರುತ್ತದೆ. ಅಲ್ಲಪ್ಪನಿಗೆ ಜಕ್ಕಪ್ಪನೆಂಬ ಮಗ ಅವನಿಗೆ ಅಲ್ಲಪ್ಪ ದೇಸವರ ಎಂಬ ಮಗ ಇದ್ದಂತೆ ಹೆಳವರು ಹೇಳುತ್ತಾರೆ. ಲಿಖಿತ ವಂಶಾವಳಿಯಲ್ಲಿ ಜಕ್ಕಪ್ಪನ ಮಗ ಅಲ್ಲಪ್ಪನಾಗಿರದೆ ಅಲ್ಲಪ್ಪ ದೇಸವರ ಆಗಿದ್ದಾನೆ. ಹೆಳವರ ದಾಖಲಾತಿಗಳಲ್ಲಿ ಹನಗಂಡಿ ದೇಸಾಯಿಯವರ ಅಪೂರ್ಣವಾಗಿದ್ದರೂ ಈ ಮನೆತನದ ದೇಸಾಯಿನಿಯವರ ಹೆಸರುಗಳು ದೊರೆಯುತ್ತವೆ. ಪ್ರಸ್ತುತ ಪೂನಾದ ಪತ್ರಾಗಾರ ಇಲಾಖೆಯಿಂದ ತೆಗೆಯಿಸಿದ ಹನಗಂಡಿ ದೇಸಾಯಿಗಳ ವಂಶವೃಕ್ಷವನ್ನೇ[೧೭] ಇಲ್ಲಿ ಅಧ್ಯಯನಕ್ಕೆ ಒಳಪಡಿಸಲಾಗಿದೆ.

ಹನಗಂಡಿ ದೇಸಾಯಿಗಳಿಗೆ ಮತ್ತು ತೇರದಾಳ ನಾಡಗೌಡರ ಮೂಲ ಪುರುಷರು ಕೃಷ್ಣಪ್ಪ ಮತ್ತು ಬಸಗೌಡ ಕಾರಿ ಎಂದು ಈ ಹಿಂದೆ ಚರ್ಚಿಸಲಾಗಿದೆ. ಕೃಷ್ಣಪ್ಪನ ಅಕಾಲಿಕ ಮರಣದಿಂದ ಬಸಗೌಡ ಕಾರಿ ತೇರದಾಳದ ವತನದಾರಿಕೆಯನ್ನು ನೋಡತೊಡಗಿದ ಇವನಿಗೆ ಕಲಗೌಡ ಮತ್ತು ಜಿನಗೌಡ ಎಂಬ ಶೂರ ಮಕ್ಕಳಿದ್ದರು. ಇವರು ಆದಿಲ್‌ಷಾಹಿಯ ಯುದ್ಧದಲ್ಲಿ ಭಾಗವಹಿಸಿ ವೀರತ್ವವನ್ನು ಮೆರೆದಾಗ ಇಬ್ಬರಿಗೂ ಬಾದಶಹನು ವತನದಾರರನ್ನಾಗಿ ಮಾಡಿದ. ಕಲಗೌಡನಿಗೆ ದೇಸಾಯಿ ಪಟ್ಟವನ್ನೂ, ಜಿನಗೌಡನಿಗೆ ನಾಡಗೌಡಕಿ ಪಟ್ಟವನ್ನು ಕೊಟ್ಟು ಸಾಕಷ್ಟು ಇನಾಂ ಭೂಮಿಯನ್ನು ಕೊಟ್ಟ. ಇಲ್ಲಿಂದ ಕಲಗೌಡ ಮತ್ತು ಜಿನಗೌಡ ಪ್ರತ್ಯೇಕ ಆಳ್ವಿಕೆಯನ್ನು ತೇರದಾಳದಿಂದಲೇ ನಡೆಸಲು ಪ್ರಾರಂಭಿಸಿದರು. ಕಲಗೌಡನಿಂದಲೇ ಹನಗಂಡಿ ದೇಸಾಯಿಕೆ

ವಂಶಾವಳಿ ಪ್ರಾರಂಭವಾಯ್ತು. ಆದರೆ ಕಲಗೌಡ ಆ ಸಂದರ್ಭದಲ್ಲಿ ಇನ್ನೂ ತನ್ನ ಆಡಳಿತದ ನೆಲೆಯನ್ನು ಹನಗಂಡಿಗೆ ವರ್ಗಾಯಿಸಿದ್ದಿಲ್ಲ.

ಕಲಗೌಡನಿಗೆ ಕೃಷ್ಣಗೌಡ ದೇಸಾಯಿ ಎಂಬ ಮಗನಿದ್ದ. ಇವನ ನಂತರ ಕೃಷ್ಣಗೌಡನೇ ವತನದಾರಿಕೆಯನ್ನು ಮುಂದುವರೆಸಿದ. ಕೃಷ್ಣಗೌಡನಿಗೆ ಗಂಡು ಸಂತಾನವಿರದ ಕಾರಣವಾಗಿ ಅವನು ತೇರದಾಳ ನಾಡಗೌಡರ ವಂಶಾವಳಿಯ ಮೂರನೆಯ ತಲೆಮಾರಿನ ಮಗೆಪ್ಪಗೌಡ ನಾಡಗೌಡನ ಎರಡನೆಯ ಮಗನನ್ನು ದತ್ತು ತೆಗೆದುಕೊಂಡ. ಅವನೆ ಜಕ್ಕಗೌಡ ನಾಡಗೌಡ. ಕೃಷ್ಣಗೌಡನಿಗೆ ದತ್ತಕ್ಕೆ ಬಂದ ಜಕ್ಕಗೌಡ ನಾಡಗೌಡನು; ಜಕ್ಕಗೌಡ ದೇಸಾಯಿಯಾದ. ದೇಸಾಯಿಕೆ ನೋಡಿಕೊಳ್ಳತೊಡಗಿದ ಜಕ್ಕಗೌಡನಿಗೆ ಮೂರು ಮಕ್ಕಳು. ಯಾದಪ್ಪ ದೇಸಾಯಿ, ಕೃಷ್ಣಪ್ಪ ಮತ್ತು ಪಾಸಪ್ಪ. ಇದರಲ್ಲಿ ಜೇಷ್ಠಪುತ್ರಾಧಿಕಾರತ್ವ ನಿಯಮದಿಂದ ದೇಸಾಯಿಕೆ ಯಾದಪ್ಪ ದೇಸಾಯಿಗೆ ಒಲಿದು ಬಂತು. ಈ ಯಾದಪ್ಪ ದೇಸಾಯಿಗೂ ಮೂರು ಜನ ಪುತ್ರರಿದ್ದರು. ಮಗೆಪ್ಪದೇಸಾಯಿ, ಕೃಷ್ಣಪ್ಪ, ರಾಯಪ್ಪರೆ ಅವರು. ಇದರಲ್ಲಿ ದೇಸಾಯಿ ಮನೆತನಕ್ಕೆ ಐದನೆಯ ದೇಸಾಯಿಯಾದ ಮಗೆಪ್ಪ ದೇಸಾಯಿಯು ಆರನೆಯ ತಲೆಮಾರಿನವನು. ಮಗೆಪ್ಪನ ಸಹೋದರರಿಬ್ಬರಿಗೂ ಬೇರೆ ಬೇರೆ ಅಧಿಕಾರವನ್ನು ಕೊಟ್ಟು, ಸಾಕಷ್ಟು ಭೂಮಿಯನ್ನು ಕೊಟ್ಟಂತೆ ಕಾಣುತ್ತದೆ. ಮೂಲ ವಂಶಾವಳಿಯಲ್ಲಿ ಕೃಷ್ಣಪ್ಪ ರಾಯಪ್ಪರ ವಂಶಾವಳಿಯನ್ನು ಬೇರೆಯೇ ತೋರಿಸಲಾಗಿದೆ. ಇವರಿಬ್ಬರೂ ಯಾವ ಯಾವ ಊರಿಗೆ ಹೋದರೆಂಬುದು ತಿಳಿದು ಬರುವುದಿಲ್ಲ.

ಐದನೆಯ ದೇಸಾಯಿಯಾದ ಮಗೆಪ್ಪ ದೇಸಾಯಿಯವರದು ವಿಶೇಷ ಹೆಸರು ತೇರದಾಳದ ಅಲ್ಲಮಪ್ರಭು ಮಠದ ಪ್ರಭಾವದಿಂದ ಈ ಹೆಸರು ಬರಲು ಕಾರಣ ಎಂದು ಸ್ಥಳೀಯರು ಹೇಳುತ್ತಾರೆ. ತೇರದಾಳದಲ್ಲಿ ಅಲ್ಲಮ ಪ್ರಭು ಮಠವಿದ್ದು ಅಲ್ಲಿ ಪ್ರಭುಸ್ವಾಮಿಯ ಸಂಕೇತವಾಗಿ ಕಮಂಡಲವನ್ನು ಪೂಜೆ ಮಾಡುತ್ತಾರೆ. ಕಮಂಡಲಕ್ಕೆ ಸ್ಥಳೀಯವಾಗಿ ಮಗಿ ಎನ್ನುತ್ತಾರೆ. ಮಗಿ ಎಂದರೆ ಮುನಿಗಳು, ಆಧ್ಯಾತ್ಮಿಕ ಸನ್ಯಾಸಿಗಳು ತಮ್ಮ ನೀರಡಿಕೆಯನ್ನು ನೀಗಿಸಲು ಇಟ್ಟುಕೊಂಡಿರುವ ಸಾಧನ. ಚಿಕ್ಕದಾದ ನೀರಿನ ಹೂಜಿ. ಈ ಮಗಿ ಎಂಬ ಪದದಿಂದ ಮಗೆಪ್ಪ ಎಂಬ ಹೆಸರು ಬಂದಿದೆ ಎಂದು, ಆದ್ದರಿಂದಲೇ ಹನಗಂಡಿ ದೇಸಾಯಿಗಳ ಈಗಲೂ ಅಲ್ಲಮಪ್ರಭು ಮಠಕ್ಕೆ ನಡೆದುಕೊಳ್ಳುತ್ತಾರೆ ಎಂಬ ಮಾತುಗಳಿವೆ. ವತನದಾರ ಸಾಮಾನ್ಯವಾಗಿ ತನ್ನ ಪ್ರದೇಶದಲ್ಲಿರುವ ಎಲ್ಲ ಧರ್ಮದ ದೇಗುಲಗಳಿಗೂ ನಡೆದುಕೊಳ್ಳಬೇಕಾಗುತ್ತದೆ. ನಡೆದುಕೊಳ್ಳಬೇಕು. ಇದು ರಾಜನೀತಿಯೂ ಸಹ ಹೌದು. ಹನಗಂಡಿ ದೇಸಾಯಿಯವರು ಪ್ರಭುಸ್ವಾಮಿಯ ಆರಾಧಕರಾಗಿದ್ದರು. ಈಗಲೂ ಆರಾಧಕರಾಗಿದ್ದಾರೆ. ಇವರ ಮುಂದಾಳತ್ವದಲ್ಲಿಯೇ ಜಾತ್ರೆ ನಡೆಯುತ್ತದೆ. ಪ್ರಭುಸ್ವಾಮಿ ಮಠಕ್ಕೆ ನಡೆದುಕೊಂಡ ಮಾತ್ರಕ್ಕೆ ಇವರು ಶೈವರಾಗಲು ಸಾಧ್ಯವಿಲ್ಲ. ಜೈನರಾದ ಡಾ. ವೀರೇಂದ್ರ ಹೆಗ್ಗಡೆಯವರು ಧರ್ಮಸ್ಥಳದ ಮಂಜುನಾಥನ ಆರಾಧಕರು ಮತ್ತು ದೇವಾಲಯದ ಆಡಳಿತಾಧಿಕಾರಿಗಳು. ಮಂಜುನಾಥನನ್ನು ಪೂಜೆ ಮಾಡಿದ ಮಾತ್ರಕ್ಕೆ ಅವರು ಶೈವರಾಗಲಿಲ್ಲ. ಹನಗಂಡಿ ದೇಸಾಯಿಗಳು ಮೂಲತ: ಜೈನರು ಈಗಲೂ ಜೈನರು. ತೇರದಾಳದ ಪ್ರಭುಸ್ವಾಮಿಯ ಮಠಕ್ಕೆ ನಡೆದುಕೊಳ್ಳುತ್ತಿರುವುದರಿಂದ

ಮತ್ತು ವತನದಾರಿಕೆ ಸಿಗಲು ಪ್ರಭುಸ್ವಾಮಿ ಪ್ರಮುಖ ಪಾತ್ರವಹಿಸಿದ್ದರಿಂದ, ಅವನ ಸಂಕೇತವಾದ ಮಗೆ ಮಗೆಪ್ಪ ದೇಸಾಯಿಯ ನಾಮಾವಳಿಯಾಗಿರಬಹುದು. ಇನ್ನೊಂದು ಮಹತ್ವದ ಸಂಗತಿ ಎಂದರೆ ಜೈನಮುನಿಯ ಕೈಯಲ್ಲೂ ಕಮಂಡಲ ಎಂದರೆ ಮಗಿ ಇರುತ್ತದೆ. ಜಿನಮುನಿಗಳ ಕೇಶಲೋಚನ ಸಂದರ್ಭದಲ್ಲಿ ಹಳೆಯದಾದ ಅವರ ಕುಂಚ ಮತ್ತು ಕಮಂಡಲಗಳನ್ನು ಶ್ರಾವಕರು ತೆಗೆದುಕೊಂಡು ಹೊಸದಾದ ಕಮಂಡಲ (ಮಗಿ) ಮತ್ತು ಕುಂಚ (ಪಿಂಛಿ)[೧೮] ಕೊಡಿಸುತ್ತಾರೆ. ಹನಗಂಡಿ ದೇಸಾಯಿಗಳು ಈ ಸಂದರ್ಭದಲ್ಲಿ ಮಗಿಯನ್ನು ತೆಗೆದುಕೊಂಡು ಯಾಕೆ ಪೂಜೆ ಮಾಡುತ್ತಿರಬಾರದು?[೧೯] ಈ ಸಾಧ್ಯತೆಗಳನ್ನು ಅಲ್ಲಗಳಿಯುವಂತಿಲ್ಲ ಮಗಿಯಿಂದ ಮಗೆಪ್ಪ ಎಂಬ ನಾಮಾವಳಿ ಬಂದಿರುವುದು ದಿಟ. ಅದು ಜಿನಮುನಿಗಳ ಮಗಿಯಿಂದಲೋ ಅಥವಾ ಪ್ರಭುಸ್ವಾಮಿ ಬಳಸುತ್ತಿದ್ದ ಮಗಿಯಿಂದಲೋ ಎಂಬುದು ಹೇಳಲು ಕಷ್ಟ ಆದರೆ ಇಂದಿಗೂ ಹನಗಂಡಿ ದೇಸಾಯಿಯವರ ಮನೆಯಲ್ಲಿ ಮಗಿಯ ಪೂಜೆ ನಡೆಯುತ್ತಿದೆ.

ಮಗೆಪ್ಪ ದೇಸಾಯಿ ವತನದಾರರಾದ ನಂತರ ಸಾಕಷ್ಟು ಧಾರ್ಮಿಕ ಕಾರ್ಯಗಳಲ್ಲಿ ಭಾಗವಹಿಸಿ, ಅನೇಕ ದೇವಾಲಯ, ಬಸದಿ, ದರ್ಗಾಗಳಿಗೆ ಅಲಿಖಿತ ದಾನ-ಧರ್ಮ ಮಾಡಿದರೆಂಬುದು ವಾಡೆಯವರ ಅಂಬೋಣ. ಇವರಿಗೆ ಒಟ್ಟು ಒಂಭತ್ತು ಜನ ಮಕ್ಕಳು. ೧ ಪಾಸಪ್ಪ, ೨ ಪಾಯಪ್ಪ, ೩ ರಾಯಪ್ಪ, ೪ ಅಪ್ಪಾರಾವ, ೫ ಅಲ್ಲಪ್ಪ, ೬ ಮೊತ್ಯೆಪ್ಪ, ೭ ಪಾವರೆಪ್ಪ, ೮ ಶಾಂತಪ್ಪ, ೯ ಜಕ್ಕಪ್ಪ, ಇದರಲ್ಲಿ ಪಾಸಪ್ಪ (ಪಾರ್ಶ್ವನಾಥ) ದೇಸಾಯಿಯು ಆರನೆಯ ದೇಸಾಯಿ ಪಟ್ಟ ಅಲಂಕರಿಸಿದರು. ಪಾಸಪ್ಪ ಅವರ ಮೊದಲ ತಮ್ಮ ಪಾಯಪ್ಪ ದೇಸಾಯಿಯು ತೇರದಾಳ ನಾಡಗೌಡ ಮನೆತನಕ್ಕೆ ದತ್ತು ಹೋದ. ತೇರದಾಳದ ೮ನೆಯ ನಾಡಗೌಡ ಧರಿಗೌಡ ನಾಡಗೌಡನಿಗೆ ಮಕ್ಕಳಿರದ ಕಾರಣ ದೇಸಾಯಿ ವಂಶದ ಪಾಯಪ್ಪನನ್ನು ದತ್ತು ತೆಗೆದುಕೊಂಡು ನಾಡಗೌಡಕಿ ಪಟ್ಟಕಟ್ಟಿದ. ಇನ್ನು ಪಾಸಪ್ಪನ ಎರಡನೆಯ ತಮ್ಮ ರಾಯಪ್ಪನಿಗೆ ನಾಯಕಪಟ್ಟ ಕೊಟ್ಟು ಅಥಣಿ ತಾಲ್ಲೂಕಿನ, ತಮ್ಮ ಆಡಳಿತಕ್ಕೆ ಒಳಪಡುವ ದರೂರುಗೆ ಕಳುಹಿಸಲಾಯಿತು. ರಾಯಪ್ಪ ನಾಯಕತನವನ್ನು ಮಾಡಿಕೊಂಡು ಅಲ್ಲಿ ಒಂದು ವಾಡೆ ಕಟ್ಟಿಕೊಂಡು ಆಡಳಿತ ನಡೆಸಲು ಪ್ರಾರಂಭಿಸಿದ. ಈಗಲೂ ಈ ವಂಶ ವಾಡೆಯಲ್ಲಿ ಅಸ್ಥಿತ್ವದಲ್ಲಿ ಇದೆ. ಮುಂದಿನ ಭಾಗದಲ್ಲಿ ಈ ವಾಡೆಯ ಬಗ್ಗೆ ಅಧ್ಯಯನ ಮಾಡಲಾಗಿದೆ.

ಪಾಸಪ್ಪನ ಆರನೆಯ ತಮ್ಮ ಮೋತ್ಯೆಪ್ಪಾ (ಮುತ್ತೆಪ್ಪ), ಏಳನೆಯ ತಮ್ಮ ಪಾವರೆಪ್ಪ ಮತ್ತು ಒಂಭತ್ತನೆಯ ತಮ್ಮ ಜಕ್ಕಪ್ಪ ಇವರುಗಳಿಗೆ ದೇಸಾಯಿಕೆ ಆಡಳಿತ ಭಾಗಗಳನ್ನು ಅಲ್ಲಿನ ಆಡಳಿತ ನೋಡಿಕೊಳ್ಳಲು ಕಳುಹಿಸಲಾಯಿತು. ಈ ಬಗ್ಗೆ ವಂಶಾವಳಿಯಲ್ಲಿ ಹೆಚ್ಚಿನ ಮಾಹಿತಿ ಲಭ್ಯವಿಲ್ಲ. ಪಾಸಪ್ಪನ ಉಳಿದ ತಮ್ಮಂದಿರು ವಾಡೆಯಲ್ಲಿಯೇ ಇದ್ದಂತೆ ತೋರುತ್ತದೆ.

ಪಾಸಪ್ಪ ಉರ್ಫ್ ಕೃಷ್ಣಪ್ಪ ದೇಸಾಯಿಕೆ ಅಧಿಕಾರವನ್ನು ಸಮರ್ಥವಾಗಿ ನಿಭಾಯಿಸುತ್ತಿದ್ದು, ಪರಮ ಜಿನಭಕ್ತಿಯನ್ನು ಹೊಂದಿದ್ದ ಅಂತೆಯೇ ತನ್ನ ಹೆಂಡತಿ ಸತ್ಯವ್ವ ಮತ್ತು ಜಕ್ಕಪ್ಪರವರು ಸಹಜವಾಗಿಯೇ ದೇಸಾಯಿಯವರ ಜಿನಭಕ್ತಿಯ ಗುಣಗಳನ್ನು ಬೆಳೆಸಿಕೊಂಡರು. ಪ್ರಜೆಗಳ ಸೇವೆ, ಹಸನಾದ ಆಡಳಿತ, ರಾಜನಿಷ್ಠೆ, ಜಿನನಿಷ್ಠೆಯಿಂದ ತುಂಬುಜೀವನ ನಡೆಸುತ್ತಿದ್ದ ಪಾಯಪ್ಪ

ಅಕಾಲಿಕ ಮರಣಕ್ಕೆ ತುತ್ತಾದರು. ಇವರ ಮಗ ಜಕ್ಕಪ್ಪ ಮುಂದೆ ದೇಸಾಯಿಕೆ ಪಟ್ಟ ವಹಿಸಕೊಂಡ. ಜಕ್ಕಪ್ಪ ಚಿಕ್ಕವನಿರುವ ಕಾರಣವಾಗಿ ದೇಸಾಯಿಕೆ ಅವರ ತಾಯಿ ಸತ್ಯವ್ವ ಹೇಳಿದಂತೆ ನಡೆಯಲು ಪ್ರಾರಂಭಿಸಿತು. ಸತ್ಯವ್ವ ಧೀರಮಹಿಳೆ ಮತ್ತು ಪರಮ ಜಿನಭಕ್ತಿ. ಈ ಉದಾತ್ತಗುಣಗಳು ಗಂಡ ಪಾಸಪ್ಪ ಉರ್ಫ್ ಪಾರ್ಶ್ವನಾಥ ರಿಂದ ಬಂದವಾಗಿದ್ದವು. ಇವರ ಕಾಲದಲ್ಲಿ ಚಾವರಾತ್ ಹಳ್ಳಿಗಳ ಪ್ರಜೆಗಳು ಸುಖಮಯ ಜೀವನ ನಡೆಸುತ್ತಿದ್ದರು.

ಸತ್ಯವ್ವ ಮತ್ತು ಜಕ್ಕಪ್ಪರವರು ಪರಮ ಜಿನಭಕ್ತರಾಗಿದ್ದರು ಎಂಬುದಕ್ಕೆ ಕುರುಹಾಗಿ ಈಗಲೂ ಉಳಿದು ಬಂದಿರುವ ಅವರು ಮಾಡಿದ ಧಾರ್ಮಿಕ ಕಾರ್ಯ. ತೇರದಾಳದಲ್ಲಿ ಪ್ರಾಚೀನ ಪ್ರಸಿದ್ಧ ಗೊಂಕದೇವರಸ ನಿರ್ಮಿಸಿದ ನೇಮಿನಾಥ ತೀರ್ಥಂಕರರ ಜಿನಾಯಲವೊಂದಿತ್ತು ಎಂದು ಈಗಾಗಲೇ ಚರ್ಚಿಸಲಾಗಿದೆ.[೨೦] ಈ ಜಿನಾಲಯ ಸವದತ್ತಿ ರಟ್ಟರ ಕಾರ್ತ್ಯವೀರನ ಅಧೀನ ಕಂಪಣಾಧಿಕಾರಿಯಾದ ಗೊಂಕದೇವರಸ ಕ್ರಿ.ಶ.೧೧೨೩ರಲ್ಲಿ ಕಟ್ಟಿಸಿದ. ಅವನ ಹೆಸರೆ ಬಸದಿಗಾಗಿ 'ಗೊಂಕಜಿನಾಲಯ'ವಾಯ್ತು. ಕಾಲಕಾಲಕ್ಕೆ ಈ ಗೊಂಕ ಜಿನಾಲಯಕ್ಕೆ ದಾನ-ದತ್ತಿಗಳು ಸಲ್ಲುತ್ತಾ ಬಂದಿವೆ. ಒಂದು ಕಾಲದಲ್ಲಿ ಸ್ವತಂತ್ರವಾಗಿ ವಿಜೃಂಭಣೆಯಿಂದಿದ್ದ ಗೊಂಕಜಿನಾಲಯದ ಮೇಲೆ ಅತೀ ಬೇಗವಾಗಿ ಅನ್ಯಧರ್ಮ ಹಿಡಿತ ಬಂದಿತು. ಇದು ತೇರದಾಳದ ಒಂದು ಶಾಸನದಿಂದ ದಿಟವಾಗುತ್ತದೆ.

> "ಸ್ವಸ್ತಿ ಶ್ರೀಮತು ಕೊಣ್ಡಕುಂನ್ದಾಚಾರ್ಯ್ಯಾಂನ್ವಯದ ಶ್ರೀಮೂಲಸಂಗದ ದೇಸಿಯಗಣದ ಪೊಸ್ತಕಗಚ್ಚದ ಶ್ರೀಕೊಲ್ಲಾಪುರದ ನಿಂಬದೇವ ಸಾಮನ್ತ ಮಾಡಿಸಿದ ರೂಪನಾರಾಯಣ ದೇವರ ಬಸದಿಯ ಪ್ರತಿಬದ್ಧಮಪ್ಪ ತೇರಿದಾಳದ ಗೊಂಕಜಿನೇಂದ್ರ ಮಂದಿರಕ್ಕೆ ಕೊಲ್ಲಾಪುರದಗಸ್ತ್ಯೇಶ್ವರದ ಕಣಗಿಲೇಶ್ವರದ ಮಹಾಲಕ್ಷ್ಮೀದೇವಿಯ ಗೋಕಾಗೆಯ ಮಹಾಲಿಂಗದೇವರ ಯಿನ್ತೀ ಘಟಿಕಾಸ್ಥಾನದಾಚಾರ್ಯರು ಮುಖ್ಯ ಎಳ್ಕೋಟಿಯುವ ಸಂಖ್ಯಾತಗಣಗಳು ಮಹಾಮಣ್ಡಳಿಯಾಗಿ ತೇರಿದಾಳದ ಮೂಲಸ್ಥಾನದ ಕಲಿದೇವಸ್ವಾಮಿಗೆ ಪ್ರತಿಬದ್ಧಂಮಾಡಿ ಆ ನೇಮಿನಾಥ ಸ್ವಾಮಿಯ ಪ್ರತಿಷ್ಠಾಕಾಲದಲಾ ಗೊಂಕಜಿನಾಲಯದಾಚಾರ್ಯ್ಯರಪ್ಪ ಪ್ರಭಾಚಂದ್ರಪಂಡಿತ ದೇವರಿಗ್ಗಿಳೆಯ ಜೋಗವಟ್ಟಿಗೆಯ ಸ್ಥಾನಮೆನ್ದು ಜೋವಟ್ಟಿಗೆಮನಿಕಿದರು ಬಸದಿಯ ಮೇಲೆ ಶೂದ್ರಕನ ಸಿಂಹದಚಕ್ರದ ಚಿಹ್ನೆಮೆಂಬಿವಂತಿಸುಳದ ಘಂಟೆಯಂ ಪರೆಯನಾಗದೆನಿಪ್ಪವನೇಳು . . . . . . . . . . . . . . . ಕೋಟಿತಾವಸರ್ಗ್ಗೆ ಮಹಾವಿರೋಧೀಯವನೀಶ್ವವ್ಯೆರಿಯೆನುತವಿಕ್ಕಿದಂರ್ಮ್ಮಿಸುಗುವೆ ಜೋಗವಟ್ಟಿಗೆಯನಾ ಮುನಿಸಂಕೆಯ ಕೋಟಿತಾಪಸು".[೨೧]

೧೨ನೆಯ ಶತಮಾನದಲ್ಲಿ ಧಾರ್ಮಿಕ ಸ್ಥಿತ್ಯಂತರದ ಕಾರಣವಾಗಿ ತೇರದಾಳದ ಗೊಂಕಜಿನಾಲಯವನ್ನು ಎಳ್ಕೋಟಿ > ಎಕ್ಕೋಟಿ ಮುನಿಗಳು ಅಲ್ಲಿನ ಮೂಲಸ್ಥಾನದ ಕಲಿದೇವಸ್ವಾಮಿ ದೇವಾಲಯಕ್ಕೆ ಪ್ರತಿಬದ್ಧ ಮಾಡಿದರು. ಅಲ್ಲದೇ ಗೊಂಕ ಜಿನಾಲಯದ ಮೇಲೆ ಶೂದ್ರಕನ ಸಿಂಹದ ಚಕ್ರ, ತಿಸುಳ (ತ್ರಿಶೂಲ) ಘಂಟೆಯನ್ನು ಕಟ್ಟಿದರು. ಇದು ಗೊಂಕಜಿನಾಲಯದ ಮೇಲಾದ ಶೈವ ಧರ್ಮದ ಪ್ರಭಾವ. ಹೀಗೆ ಅನ್ಯಧರ್ಮಗಳ ಪ್ರಭಾವಕ್ಕೆ ಸಿಲುಕಿ ಯಾವುದೋ ಒಂದು ಕಾಲಕ್ಕೆ ಜಿನಾಲಯದ ಮೂಲಮೂರ್ತಿ ನೇಮಿನಾಥನ ವಿಗ್ರಹ ವಿರೂಪವಾಗಿತ್ತು. ಜೊತೆಗೆ ಜಿನಾಲಯವು ಶಿಥಿಲವಾಗಿತ್ತು. ಇಂಥಹ ಜಿನಾಲಯವನ್ನು ಜೀರ್ಣೋದ್ಧಾರಗೊಳಿಸದವರೆ ಸತ್ಯವ್ವ ಮತ್ತು ಜಕ್ಕಪ್ಪ ದೇಸಾಯಿಯವರು.

ಗೊಂಕಜಿನಾಲಯದ ಮೂಲಮೂರ್ತಿ ನೇಮಿನಾಥ ವಿಗ್ರಹ ವಿರೂಪಗೊಂಡು ನಾಪತ್ತೆಯಾದಾಗ ಸತ್ಯವ್ವ ಜಕ್ಕಪ್ಪ ನೇಮಿನಾಥರ ವಿಗ್ರಹವೊಂದನ್ನು ಪ್ರತಿಷ್ಠಾಪಿಸಿದರು. "ಶ್ರೀಮನ್ನೇಮಿ ಜಿನೇಂದ್ರನ ಪ್ರತಿಮೆಯಂ ಸಮ್ಯಕ್ತ್ವ ಚೂಡಾಮಣಿಗಳಾದಂಥಾ ಶ್ರೀಮತ್ತೇರಿದಾಳದ ದೇಶಾಯಿ ಸತ್ಯವ್ವ ತತ್ಪುತ್ರ ಜಕ್ಕಪ್ಪ ಸಹವಾಗಿ ಮಾಡಿಸಿ ಶ್ರೀಗೊಂಕ ಜಿನಾಲಯದಲ್ಲಿ ಪ್ರತಿಷ್ಠೆಯನ್ನು ಮಾಡಿದ ಶಕವರ್ಷ ೧೬೭೦"[೨೨] ಎಂಬ ಶಾಸನವು ೫೧ ಇಂಚು ಎತ್ತರದ ಪರ್ಯಂಕಾಸನಸ್ಥ ನೇಮಿನಾಥ ತೀರ್ಥಂಕರನ ಪಾದಪೀಠದ ಮೇಲೆ ಇದೆ. ನಸುಕರಿಯುಕ್ತ ಪಚ್ಚೆ ಕಲ್ಲಿನಲ್ಲಿ ರಚನೆಯಾದ ಮೂರ್ತಿಯನ್ನಲ್ಲದೆ, ಸತ್ಯವ್ವ ಜಕ್ಕಪ್ಪ ದೇಸಾಯಿಯವರು ಬಸದಿಯ ಮುಂದೆ ಸುಮಾರು ೨೦ ಅಡಿಯ ಮಾನಸ್ತಂಭವೊಂದನ್ನು ನಿರ್ಮಿಸುತ್ತಾರೆ. ಅಲ್ಲದೆ ಗೊಂಕಜಿನಾಲಯ ಮೇಲೆ ಇನ್ನೊಂದು ಚಿಕ್ಕ ಬಸದಿಯನ್ನು ನಿರ್ಮಿಸಿ. ಅಲ್ಲಿಯೂ ಬಿಳಿ ಅಮೃತ ಶಿಲೆಯ ನೇಮಿನಾಥ ತೀರ್ಥಂಕರನ ವಿಗ್ರಹದ ಮೂರ್ತಿಯನ್ನು ಪ್ರತಿಷ್ಠಾಪಿಸಿದರು. ಇದು ನಾಡಿನಲ್ಲಿದ್ದ ಬಸದಿಯ ವಾಸ್ತುಶಿಲ್ಪವನ್ನು ನೋಡಿ ನಿರ್ಮಿಸಿದಂತೆ ಕಾಣುತ್ತದೆ. ಈ ಮಾದರಿಯನ್ನು 'ಸಮವಸರಣ ಮಂಟಪ' ಎಂದು ಕರೆಯುತ್ತಾರೆ. ಕೆಳಹಂತದ ಬಸದಿಯಲ್ಲಿ ತೀರ್ಥಂಕರ ದರ್ಶನ ಪಡೆಯಬಹುದು. ಮೇಲಂತಸ್ತಿನ ಬಸದಿಯಲ್ಲಿ ದರ್ಶನ ನಿಶಿದ್ಧ. ಯಾಕೆಂದರೆ ತೀರ್ಥಂಕರರು ಈ ಹಂತದಲ್ಲಿ ಮೋಕ್ಷದ ಸಾಧನೆಗೈದು ಜಿನನಾಗುವ ಸ್ಥಿತಿ ತಲುಪಿರುತ್ತಾರೆ. ಆದ್ದರಿಂದಲೇ ಇಲ್ಲಿ ದರ್ಶನ ನಿಶಿದ್ಧ. ಮೂರ್ತಿ ಪ್ರತಿಷ್ಠಾಪನೆ, ಮಾನಸ್ತಂಭ ನಿರ್ಮಾಣ ಬಸದಿಯ ಮೇಲೊಂದು ಸಮವಸರಣ ಮಂಟಪ, ಬಸದಿಯ ಜೀರ್ಣೋದ್ಧಾರದಂತಹ ಮಹತ್ಕಾರ್ಯವನ್ನು ಸತ್ಯವ್ವ ಜಕ್ಕಪ್ಪರವರು ಮಾಡಿದರು. ನವನಿರ್ಮಿತ ನೇಮಿನಾಥ ತೀರ್ಥಂಕರ ಮೂರ್ತಿಯ ಪ್ರತಿಷ್ಠಾಪನೆಯ ನಿಮಿತ್ತ ಪಂಚಕಲ್ಯಾಣ ಮಹೋತ್ಸವವನ್ನೂ ಇವರು ನೆರವರಿಸಿದರು. ಒಂದು ಪಂಚಕಲ್ಯಾಣ ಕಾರ್ಯಕ್ರಮ ಮಾಡಲು ಅಪಾರ ಹಣ ಖರ್ಚಾಗುತ್ತದೆ. ಪಂಚಕಲ್ಯಾಣ ಮತ್ತು ಜೀರ್ಣೋದ್ಧಾರದ ಖರ್ಚನ್ನು ಸತ್ಯವ್ವ ಮತ್ತು ಜಕ್ಕಪ್ಪರವರೆ ಭರಿಸಿದ್ದು ಅವರಿಗಿದ್ದ ಧಾರ್ಮಿಕ ಪರಾಕಾಷ್ಠೆಯ ಗುಣವನ್ನು ತಿಳಿಸುತ್ತದೆ.

ಗೊಂಕಜಿನಾಲಯದ ನೇಮಿನಾಥ ತೀರ್ಥಂಕರ ಪಾದಪೀಠದಲ್ಲಿರುವ ಶಾಸನದಲ್ಲಿ ಮೂರ್ತಿಯನ್ನು ಮಾಡಿಸಿದವರು "ಶ್ರೀಮತ್ತೇರಿದಾಳದ ಸತ್ಯೌವ್ವ ತತ್ಪುತ್ರ ಜಕ್ಕಪ್ಪ" ಎಂದಿದೆ.

ಅಂದರೆ ಸತ್ಯವ್ವ ಮತ್ತು ಜಕ್ಕಪರವರು ದೇಸಾಯಿಕೆಯನ್ನು ತೇರದಾಳದಿಂದಲೇ ನಡೆಸುತ್ತಿದ್ದರೆಂದು ದಿಟವಾಗುತ್ತದೆ. ಇವರೇ ಮುಂದೆ ತಮ್ಮ ದೇಸಾಯಿಕೆಯ ನೆಲೆಯನ್ನು ತೇರದಾಳದಿಂದ ಹನಗಂಡಿಗೆ ವರ್ಗಾಯಿಸುತ್ತಾರೆ. ಜೊತೆಗೆ ಒಂದು ಬಲಿಷ್ಠವಾದ ವಾಡೆಯೊಂದನ್ನು ಕಟ್ಟುತ್ತಾರೆ. ಸತ್ಯವ್ವ ಪರಮ ಜಿನಭಕ್ತೆಯಾಗಿದ್ದಳು ಎಂದು ಅವರ ಧರ್ಮಪರ ಕೆಲಸಗಳನ್ನ ನೋಡಿದರೆ ಗೊತ್ತಾಗುತ್ತದೆ. ಆಡಳಿತದ ನೆಲೆ ತೇರದಾಳದಿಂದ ಹನಗಂಡಿಗೆ ವರ್ಗವಾದ ನಂತರ ದಿನಾಲು ಬಸದಿಗೆ ಹೋಗುವುದು ಸತ್ಯವ್ವ ಅವರಿಗೆ ದುಸ್ತರವಾಗುತ್ತದೆ. ಆದ್ದರಿಂದಲೇ ವಾಡೆಯಲ್ಲಿಯೇ ಒಂದು ಪಾರ್ಶ್ವನಾಥ ಬಸದಿಯನ್ನು ನಿರ್ಮಿಸುತ್ತಾರೆ.

ಇಪ್ಪತ್ತು ಗುಂಟೆ ಜಾಗೆಯಲ್ಲಿ ನಿರ್ಮಾಣವಾದ ಪಾರ್ಶ್ವನಾಥ ಬಸದಿಯು ಸಮವಸರಣ ಶೈಲಿಯಲ್ಲಿದ್ದು ಗೋಪುರ ಮಸೀದಿಯ ಗುಮ್ಮಟದ ತರಹ ಇದೆ. ಬಹುಶ: ಬಿಜಾಪುರ ಆದಿಲ್‌ಷಾಹಿಗಳ ಕಟ್ಟಡಗಳ ಪ್ರಭಾವವೋ ಅಥವಾ ಮುಸ್ಲಿಂ ವಾಸ್ತು ಶಿಲ್ಪಿಗಳ ಕೈಚಳಕವೋ ಇಲ್ಲಿ ಒಡಮೂಡಿರಬಹುದು. ಬಸದಿಯ ಮೇಲಂತಸ್ತಿನ ಕಮಾನುಗಳು ಮಾತ್ರ ಪಕ್ಕಾ ಮುಸ್ಲಿಂ ಶೈಲಿಯನ್ನು ಹೋಲುತ್ತವೆ. ಇವು ಮಸೀದಿಗಳ ಕಮಾನುಗಳಂತೆಯೇ ಕಾಣುತ್ತವೆ. ಬಸದಿಯ ಮುಂದೆ ಒಂದು ಮಾನಸ್ತಂಭವನ್ನೂ ನಿರ್ಮಿಸಲಾಗಿದೆ. ಇದು ದೀಪಮಾಲೆ ಕಂಬದ ತರಹ ಇದ್ದು ಮಾನಸ್ತಂಭದ ಲಕ್ಷಣವನ್ನು ಹೋಲುತ್ತಿಲ್ಲವಾಗಿದೆ. ಹೀಗೆ ಹತ್ತು ಹಲವಾರು ಧಾರ್ಮಿಕ ಕಾರ್ಯಗಳ ಪ್ರಕ್ರಿಯೆಯಲ್ಲಿ ತೊಡಗಿದ ಸತ್ಯವ್ವ ದೇಸಾಯಿಯಿಯವರು ಜನಾನುರಾಗಿಗಳಾಗಿದ್ದರು.

ಜಕ್ಕಪ್ಪ ದೇಸಾಯಿಗೆ ಮಗೆಪ್ಪ ದೇಸಾಯಿ ಮತ್ತು ಅಲ್ಲಪ್ಪ ದೇಸಾಯಿ ಎಂಬ ಎರಡು ಮಕ್ಕಳು. ಇದರಲ್ಲಿ ಮಗೆಪ್ಪ ದೇಸಾಯಿಯಾದ ನಂತರ ಇವನ ಮಗ ಅಲ್ಲಪ್ಪ ದೇಸಾಯಿಗೆ ಪಟ್ಟವಾಯಿತು. ಅಲ್ಲಪ್ಪ ದೇಸಾಯಿಯು ಈ ವಂಶದ ೧೦ನೆಯ ತಲೆಮಾರಿನ ಒಂಭತ್ತನೆಯ ದೇಸಾಯಿ. ಅಲ್ಲಪ್ಪ ದೇಸಾಯಿಯು ಅಕಾಲಿಕ ಮರಣಕ್ಕೆ ತುತ್ತಾದ್ದರಿಂದ ವಾಡೆಯ ಜವಾಬ್ದಾರಿ ಇವರ ಹೆಂಡತಿಯಾದ ರುಕ್ಮಿಣಿಬಾಯಿಯವರಿಗೆ ಬಂದಿತು. ಈ ದಂಪತಿಗಳಿಗೆ ಮಕ್ಕಳಿರದ ಕಾರಣವಾಗಿ ವಾಡೆಯ ಸಂಪೂರ್ಣ ಆಡಳಿತವನ್ನು ರುಕ್ಮಿಣಿಬಾಯಿಯವರೆ ಸಮರ್ಥವಾಗಿ ನಿರ್ವಹಿಸಿದರು. ದೇಸಾಯಿಗಿದ್ದ ಗೌರವ ದೇಸಾಯಿನಿಗೂ ಜನರಿಂದ ದೊರೆಯಲು ಪ್ರಾರಂಭಿಸಿತು. ರುಕ್ಮಿಣಿಬಾಯಿಯವರು ಮಾತೃಹೃದಯದ ಕರುಣಾಮಯಿಯಾಗಿದ್ದರು. ವಾಡೆಯವರೆಗೆ ಬೇಡಿ ಬಂದವರನ್ನು ನಿರಾಶೆಗೊಳಿಸದೆ ಅವರ ಆಸೆಗಳನ್ನು ಸಮಸ್ಯೆಗಳನ್ನು ಬಗೆಹರಿಸುತ್ತಿದ್ದರು. 'ದೇಹಿ' ಎಂದವರ 'ದಾಹ' ತೀರಿಸುವ ಸ್ವಭಾವ ರುಕ್ಮಣಿಬಾಯಿಯವರದಾಗಿತ್ತು. ಇವರ ಕಾಲದಲ್ಲಿ ಬಸದಿಗಳಿಗೆ, ದೇವಾಲಯಗಳಿಗೆ ದರ್ಗಾಗಳಿಗೆ ಯಥೇಚ್ಛವಾಗಿ ದಾನಧರ್ಮಗಳು ಸಂದವು. ಒಬ್ಬ ಪುರುಷ ಯಾವ ರೀತಿಯ ಅಧಿಕಾರ ನಡೆಸುತ್ತಾನೋ ಅದೇ ರೀತಿಯ ಆಡಳಿತ ನಡೆಸಿದರು ರುಕ್ಮಿಣಿಬಾಯಿಯವರು. ಇದೇ ವಂಶದ ಸತ್ಯವ್ವ ಪಾಸಪ್ಪ ದೇಸಾಯಿನಿಯವರ ಆಡಳಿತವೈಖರಿ ರುಕ್ಮಿಣಿಬಾಯಿ ಅಲ್ಲಪ್ಪ ದೇಸಾಯಿನಿಯವರಲ್ಲಿಯೂ ಕಂಡುಬರುತ್ತದೆ. ತನ್ನ ನಂತರ ವಾಡೆಯ ಜವಾಬ್ದಾರಿಯನ್ನು ಯಾರು ನೋಡಿಕೊಳ್ಳುತ್ತಾರೆಂಬ ಚಿಂತೆ ರುಕ್ಮಿಣಿಬಾಯಿಯವರಿಗೆ ಪದೇ ಪದೇ ಕಾಡುತ್ತಿತ್ತು.

ಕೊನೆಗೆ ಒಂದು ನಿರ್ಧಾರ ಮಾಡಿ ವಾಡೆಗೆ ದತ್ತು ಪುತ್ರನನ್ನು ತರುವ ಯೋಚನೆ ಮಾಡಿದರು. ನಂತರ ತೇರದಾಳದ ೧೧ನೆಯ ನಾಡಗೌಡ ಪಾಯಪ್ಪನ ಎರಡನೆಯ ಮಗನಾದ ಧರಿಗೌಡನನ್ನು ದತ್ತಕ್ಕೆ ತೆಗೆದುಕೊಂಡರು. ಧರಿಗೌಡ ಹನಗಂಡಿ ವಾಡೆಗೆ ದತ್ತು ಬಂದ ನಂತರ ಜಕ್ಕಪ್ಪ ದೇಸಾಯಿಯಾಗಿ ಆಡಳಿತ ನಡೆಸಲು ಪ್ರಾರಂಭಿಸಿದ.

ಜಕ್ಕಪ್ಪ ದೇಸಾಯಿಯವರು ಹನಗಂಡಿ ವಾಡೆಯ ೧೦ನೆಯ ದೇಸಾಯಿಯವರು ಇವರಿಗೆ ಕುಸುಮಾಬಾಯಿ ಎಂಬ ಹೆಂಡತಿ. ಈ ದಂಪತಿಗಳಿಗೂ ಪುತ್ರಸಂತಾನ ಭಾಗ್ಯ ಇರದೆ ಇವರು ಒಂದು ಮಗುವನ್ನು ದತ್ತು ಪಡೆಯಲು ನಿರ್ಧರಿಸುತ್ತಾರೆ. ತೇರದಾಳ ನಾಡಗೌಡ ಮನೆತನದ ೧೦ನೆಯ ನಾಡಗೌಡ ಸುಗುಣಪ್ಪ ಅವರ ಎರಡನೆಯ ಪುತ್ರನಿಗೆ ನಾಡಗೌಡಕಿಯನ್ನು ಅಥಣಿ ತಾಲ್ಲೂಕಿನ ಸಪ್ತಸಾಗರದಲ್ಲಿ ಕೊಡಲಾಗುತ್ತದೆ. ಇವನ ಹೆಸರು ಭೋಮಪ್ಪ ನಾಡಗೌಡ ಇವನ ಮೂರನೆಯ ಮಗ ಜಿನ್ನಪ್ಪ. ಜಿನ್ನಪ್ಪನಿಗೆ ಎರಡು ಮಕ್ಕಳು ಅದರಲ್ಲಿ ಮೊದಲನೆಯ ಮಗ ಧರಿಗೌಡನ ಮಗನಾದ ಪಾಯಪ್ಪ ನಾಡಗೌಡನನ್ನು ಜಕ್ಕಪ್ಪ ದೇಸಾಯಿ ದತ್ತು ಪುತ್ರನನ್ನಾಗಿ ಸ್ವೀಕರಿಸಿದರು. ಪಾಯಪ್ಪ ಉರ್ಫ್ ಅಪ್ಪಾಸಾಹೇಬ ದೇಸಾಯಿಯಾಗಿ ಹನಗಂಡಿಗೆ ಬಂದರು.

ಪಾಯಪ್ಪ ದೇಸಾಯಿಯವರು ಕ್ರಿ.ಶ.೧೯೪೨ರವರೆಗೆ ದೇಸಾಯಿಕೆಯನ್ನು ನಡೆಸಿದರು. ಬ್ರಿಟೀಷರ ಆಳ್ವಿಕೆಯ ತೀವ್ರತೆಯ ಕಾಲ ಇದಾಗಿದ್ದರಿಂದ ಪಾಯಪ್ಪ ದೇಸಾಯಿಯವರು ಬ್ರಿಟೀಷರಿಗೆ ನಿಷ್ಠವಾಗಿಯೇ ಇದ್ದರು. ಬ್ರಿಟೀಷ್ ಮಾಮಲೇದಾರನಿಗೆ ಕಾಲಕಾಲಕ್ಕೆ ವಾಡೆಯಿಂದ ಕಂದಾಯ ಸಂದಾಯವಾಗುತ್ತಿತ್ತು. ಕುಸುಮಾವತಿ ಎಂಬುವರೊಂದಿಗೆ ವಿವಾಹವಾದ ಪಾಯಪ್ಪ ಉರ್ಫ್ ಅಪ್ಪಾಸಾಹೇಬ ದೇಸಾಯಿಯವರಿಗೆ ಒಟ್ಟು ಐದು ಮಕ್ಕಳು. ೧ ಅಲ್ಲಪ್ಪ ದೇಸಾಯಿ ಉರ್ಫ್ ಬಾಳಾಸಾಹೇಬ, ೨ ರಮಿಳಾದೇವಿ, ೩ ಪುಷ್ಪಾವತಿ, ೪ ಮಗೆಪ್ಪ ದೇಸಾಯಿ ಉರ್ಫ್ ಬಾಪೂ ಸಾಹೇಬ, ೫ ಪರಪ್ಪ ದೇಸಾಯಿ ಉರ್ಫ್ ನಾನಾಸಾಹೇಬ. ಇವರಲ್ಲಿ ಮಗೆಪ್ಪ ದೇಸಾಯಿ ಮತ್ತು ಪರಪ್ಪಾ ದೇಸಾಯಿ ವಾಡೆಯಿಂದ ಹೊರಗೆ ಮನೆಕಟ್ಟಿಕೊಂಡಿದ್ದಾರೆ. ೧೨ನೆಯ ದೇಸಾಯಿಯಾದ ಅಲ್ಲಪ್ಪ ದೇಸಾಯಿಯೂ ಸಹ ಬ್ರಿಟೀಷರ ಕಾಲಾವಧಿಯಲ್ಲಿ ಆಡಳಿತ ನಡೆಸಿದರು ಇವರು ಕ್ರಿ.ಶ. ೧೯೪೦ರವರೆಗೆ ಆಡಳಿತ ನಡೆಸುತ್ತಾರೆ. ಇವರಿಗೆ ನಾಲ್ಕು ಗಂಡುಮಕ್ಕಳು ೧ ಜಕ್ಕಪ್ಪ ದೇಸಾಯಿ, ೨ ಕೃಷ್ಣಗೌಡ ದೇಸಾಯಿ, ೩ ದಾದಾಸಾಹೇಬ ದೇಸಾಯಿ, ೪ ಶಂಕರಗೌಡ ದೇಸಾಯಿ. ಅಲ್ಲಪ್ಪ ದೇಸಾಯಿಯರವ ಕಾಲದಲ್ಲಿ ಹಳೆಯ ವಾಡೆಯಷ್ಟೇ ಭವ್ಯವಾದ ಒಂದು ಹೊಸ ವಾಡೆ ನಿರ್ಮಾಣವಾಗುತ್ತದೆ. ಅಲ್ಲಪ್ಪ ದೇಸಾಯಿಯವರ ನಂತರ ಭಾರತಕ್ಕೆ ಸ್ವಾತಂತ್ರ ಬಂದ ಕಾರಣವಾಗಿ ದೇಸಾಯಿಕೆ ರದ್ದಾಗುತ್ತದೆ. ಆ ಕಾರಣವಾಗಿ ದೇಸಾಯಿಕೆ ಆಡಳಿತ ಅಲ್ಲಪ್ಪ ದೇಸಾಯಿಕೆಯವರ ಕಾಲಕ್ಕೆ ನಿಂತು ಹೋದಂತೆ ಕಾಣುತ್ತದೆ.

ಅಲ್ಲಪ್ಪ ದೇಸಾಯಿಯವರ ನಾಲ್ಕು ಮಕ್ಕಳಲ್ಲಿ ದಾದಾಸಾಹೇಬ ದೇಸಾಯಿಯವರು ವಾಡೆಯಿಂದ ಬೇರೆಯಾಗಿ, ಹೊಲದಲ್ಲಿಯೇ ಪ್ರತ್ಯೇಕ ಮನೆ ಕಟ್ಟಿಕೊಂಡು ವಾಸವಾಗಿದ್ದಾರೆ. ಇವರಿಗೆ ಅಜೀತ ದೇಸಾಯಿ, ಸಾಗರ ದೇಸಾಯಿ ಎಂಬ ಮಕ್ಕಳಿದ್ದಾರೆ. ಅಜೀತ ದೇಸಾಯಿಯವರಿಗೆ ಸಿದ್ಧಾಂತ ಎಂಬ ಮಗ, ಸಾಗರ ದೇಸಾಯಿಯವರಿಗೆ ಸಾರ್ಥಕ ಮತ್ತು

ಪಾರ್ಥ ಎಂಬ ಮಕ್ಕಳಿದ್ದಾರೆ. ಇನ್ನು ಅಲ್ಲಪ್ಪ ದೇಸಾಯಿಯವರ ಮೊದಲ ಮಗ ಜಕ್ಕಪ್ಪ ದೇಸಾಯಿಯವರು ಹಳೆಯ ವಾಡೆಯ ಪಕ್ಕಕ್ಕೆ ಒಂದು ಮನೆ ಕಟ್ಟಿಕೊಂಡಿದ್ದಾರೆ. ಇವರಿಗೆ ಸಂದೇಶದೇಸಾಯಿ, ನೀಲೇಶ ದೇಸಾಯಿ ಎಂಬಿಬ್ಬರು ಗಂಡುಮಕ್ಕಳು. ಇವರಲ್ಲಿ ಸಂದೇಶ ಅವರಿಗೆ ಪೃಥ್ವಿರಾಜ, ನೀಲೇಶ ಅವರಿಗೆ ಮೌರ್ಯ ಎಂಬ ಮಕ್ಕಳಿದ್ದಾರೆ.

ಅಲ್ಲಪ್ಪ ದೇಸಾಯಿಯವರ ಎರಡನೆಯ ಮಗ ಕೃಷ್ಣಗೌಡ ದೇಸಾಯಿಯವರು ಸದ್ಯ ಹಳೆಯ ವಾಡೆಯಲ್ಲಿದ್ದಾರೆ. ವಾಡೆಯ ಹಿರಿಯರು ಇವರು. ಇವರಿಗೆ ತೀರ್ಥಂಕರ ಮತ್ತು ಸುನೀಲಕುಮಾರ ಎಂಬ ಗಂಡು ಮಕ್ಕಳು. ತೀರ್ಥಂಕರ ದೇಸಾಯಿಯವರಿಗೆ ಶುಭಂ ಮತ್ತು ಸುನೀಲಕುಮಾರ ದೇಸಾಯಿಯವರಿಗೆ ಮೂರು ಜನ ಹೆಣ್ಣು ಮಕ್ಕಳಿದ್ದಾರೆ. ನೂರು ವರ್ಷ ಹಳೆಯದೆನ್ನಬಹುದಾದ ಹೊಸವಾಡೆಯಲ್ಲಿ ಅಲ್ಲಪ್ಪದೇಸಾಯಿಯವರ ಮೂರನೆಯ ತಮ್ಮ ಶಂಕರಗೌಡ ದೇಸಾಯಿಯವರಿದ್ದಾರೆ. ಇವರಿಗೆ ಪ್ರಸನ್ನಕುಮಾರ ದೇಸಾಯಿ ಮತ್ತು ಸಪ್ನನೀಲಕುಮಾರ ದೇಸಾಯಿ ಎಂಬ ಇಬ್ಬರು ಪುತ್ರರು. ಇದರಲ್ಲಿ ಪ್ರಸನ್ನಕುಮಾರರಿಗೆ ಆದಿತ್ಯ, ಸಪ್ನನೀಲಕುಮಾರರಿಗೆ ರಾಹಿ ಎಂಬ ಮಕ್ಕಳಿದ್ದಾರೆ.

೧೬ ತಲೆಮಾರಿನ ವಂಶಾವಳಿಯನ್ನು ಹೊಂದಿದ ಹನಗಂಡಿ ವಾಡೆ ಒಂದೊಮ್ಮೆ ರಾಜಚಟುವಟಿಕೆಗಳ ತಾಣವಾಗಿತ್ತು. ಬಿಜಾಪುರದ ಆದಿಲ್‌ಷಾಹಿಗಳ, ಮರಾಠರ, ಸಾಂಗಲಿ ಪಟವರ್ಧನರ, ಬ್ರಿಟೀಷರ ಆಡಳಿತ ಕಂಡ ವಾಡೆ. ಒಂದೊಮ್ಮೆ ಆಡಳಿತ ಇಲ್ಲಿ ನಡೆದಿತ್ತು ಎಂಬ ಸಂಕೇತದೊಂದಿಗೆ ಹಾಗೆ ನಿಂತಿದೆ. ವಾಡೆಯ ಇನ್ನೊಂದು ಅದೃಷ್ಟ ಎಂದರೆ ವಾರಸುದಾರರು ಅದರಲ್ಲಿ ಇನ್ನೂ ವಾಸಿಸುತ್ತಿದ್ದಾರೆ ಎಂಬುದು. ಆದ್ದರಿಂದಲೇ ಹನಗಂಡಿ ದೇಸಾಯಿ ವಾಡೆ ಶಿಥಿಲವಾಗದೆ ಹಾಗೆ ಭದ್ರವಾಗಿದೆ. ಅಣ್ಣಿಗೇರಿ ದೇಶಪಾಂಡೆ ವಾಡೆಯ ಹಾಗೆ ಈ ವಾಡೆ ವಾರಸುದಾರರು ಖಾಯಂ ನೆಲೆಗೊಂಡಿಲ್ಲ ಎಂಬ ಆತಂಕ ಇಲ್ಲ. ರಾಜ ಅಧೀನ ಆಡಳಿತ ಇರದಿದ್ದರು ವಾಡೆಗೆ ಇರುವ ಗತ್ತು ಇನ್ನೂ ಮಾಸಿಲ್ಲ.

**೪.೩) ದರೂರು ನಾಯಕರ ವಾಡೆಯ ಇತಿಹಾಸ**

ದರೂರಿನ ಮಧ್ಯಭಾಗದಲ್ಲಿ ಪೂರ್ವಾಭಿಮುಖವಾಗಿ ಇರುವುದೇ ನಾಯಕರ ವಾಡೆ. ಸುಭದ್ರ ಕಟ್ಟಡಕ್ಕೆ ಬಹುಮುಖ್ಯ ಕಾರಣ ಕಲ್ಲುಗಳ ಬಳಕೆ. ಸ್ಥಳೀಯವಾಗಿ ದೊರೆಯುವ ಕಾಡುಗಲ್ಲುಗಳು, ಕರಿಗಲ್ಲುಗಳನ್ನು ಬಳಸಿ ಮೂರು ಎಕರೆ ಪ್ರದೇಶದಲ್ಲಿ ವಾಡೆ ನಿರ್ಮಾಣವಾಗಿದೆ. ೧೦ ತಲೆಮಾರುಗಳ ಸುಧೀರ್ಘ ಇತಿಹಾಸವನ್ನು ಹೊಂದಿದ ವಾಡೆಗೆ ೨೫೦ ವರ್ಷಗಳ ಇತಿಹಾಸವಿದೆ. ಹೇಳುವವರು (ಹೆಳವರು) ಮಾಹಿತಿಯ ಪ್ರಕಾರ ಇವರ ಇತಿಹಾಸ ಕ್ರಿ.ಶ. ೧೧೨೬ಕ್ಕೆ ಪ್ರಾರಂಭವಾಗುತ್ತದೆ. ಮೂಲ ಊರು ಸಾಲಬಿದರಿ. ದರೂರು ನಾಯಕರ ವಂಶವು ಸಾಲಬಿದರಿಯಲ್ಲಿ ಉದಯವಾಗಿ ಗೋಕಾಕ ತಾಲ್ಲೂಕು ಕೊಣ್ಣೂರಿಗೆ ಬಂದು ನೆಲೆಸಿತು. ನಂತರ ಕ್ರಿ.ಶ.೧೩೦೮ ನಂತರದ ದಿನಮಾನಗಳಲ್ಲಿ ಹನಗಂಡಿಗೆ ಬಂದು ನೆಲೆಸಿತು. ಹೆಳವರ ಈ ದಾಖಲೆಯನ್ನು ಈ ವಾಡೆಯ ಶ್ರೀ ರಾಹುಲ ಸುಭಾಸ್ ನಾಯಕ[೨೩] ಅವರೂ

ಅನುಮೋದಿಸುತ್ತಾರೆ. ಹೆಳವರ ದಾಖಲೆ ಬಿಟ್ಟು ರಾಹುಲ ಅವರಿಗೆ ತಮ್ಮ ಮನೆತನದ ವಂಶಾವಳಿ ಮೂಲ ಲಭ್ಯವಿಲ್ಲ. ನನ್ನ ಅಧ್ಯಯನದ ಪ್ರಕಾರ ದರೂರು ನಾಯಕರ ವಂಶಾವಳಿ ತೇರದಾಳದಿಂದ ದರೂರಿಗೆ ಬಂದಿದೆ. ಈ ವಿಷಯ ತೇರದಾಳ ನಾಡಗೌಡರ ವಂಶಾವಳಿ ಮತ್ತು ದೇಸಾಯಿ (ಹನಗಂಡಿ) ವಂಶಾವಳಿಯಲ್ಲಿ ಲಭ್ಯವಾಗುತ್ತದೆ. ಈ ದಾಖಲೆಗಳು ಪೂನಾದ ಪತ್ರಾಗಾರ ಇಲಾಖೆಯಿಂದ ಲಭ್ಯವಾದವು.

ಕೃಷ್ಣಪ್ಪ ಮತ್ತು ಬಸಗೌಡ ಎಂಬ ಸಹೋದರರು ಅಲ್ಲಮಪ್ರಭು ಮತ್ತು ಅಬಾಖಾನ್ ಎಂಬ ಸಂತರಿಂದ ಬಿಜಾಪುರದ ಆದಿಲ್‌ಷಾಹಿಯಿಂದ ತೇರದಾಳದ ವತನದಾರಿಕೆಯನ್ನು ಸಂಪಾದಿಸಿದರು. ಇದರಲ್ಲಿ ಕೃಷ್ಣಪ್ಪ ಅಕಾಲಿಕ ಮರಣಕ್ಕೆ ತುತ್ತಾದಂತೆ ಕಾಣುತ್ತದೆ. ಬಸಗೌಡಕಾರಿಯಿಂದ ತೇರದಾಳ ವತನದಾರಿಕೆ ಪ್ರಾರಂಭವಾಗುತ್ತದೆ.[೨೪] ಬಸಗೌಡಕಾರಿಗೆ ಕಲಗೌಡ ಮತ್ತು ಜಿನಗೌಡ ಎಂಬ ಮಕ್ಕಳು. ಇವರು ಆದಿಲ್‌ಷಾಹಿಯ ಪರವಾಗಿ ಯುದ್ಧಮಾಡಿ ತಮ್ಮ ಶೌರ್ಯವನ್ನು ಪ್ರದರ್ಶನಮಾಡುವರು. ಇವರು ಪರಾಕ್ರಮಕ್ಕೆ ಮೆಚ್ಚಿ ವಿಜಾಪುರದ ಮುಕ್ಕಾಮಿನಲ್ಲಿ ಬಾದಶಹನ ಅಣ್ಣತಮ್ಮರಿಗೆ ಜನೇವರಿ ೦೪ ೧೫೭೭ನೆಯ ಇಸ್ವಿಯಂದು ಮೂಲ ಆಸ್ತಿಯನ್ನು ಭಾಗ ಮಾಡಿಕೊಡುತ್ತಾನೆ.[೨೫] ಅಂದಿನಿಂದ ತೇರದಾಳದಲ್ಲಿ ಕಲಗೌಡ ವತನದಾರಿಕೆಯ ೩೩ಹಳ್ಳಿಗಳನ್ನು ತೆಗೆದುಕೊಂಡು 'ದೇಸಾಯಿ' ಎಂಬ ವಿಶೇಷಣದಿಂದ, ಜಿನಗೌಡ ೩೩ ಹಳ್ಳಿಗಳನ್ನು ತೆಗೆದುಕೊಂಡು 'ನಾಡಗೌಡ' ಎಂಬ ವಿಶೇಷಣದಿಂದ ವತನದಾರಿಕೆ ಪ್ರಾರಂಭಿಸಿದರು. ಈ ಆಳ್ವಿಕೆಗೆ ತೇರದಾಳವೇ ಮೂಲವಾಗಿತ್ತು.

ಕಲಗೌಡನ ನಂತರ ದೇಸಾಯಿಕೆಯನ್ನು ಅವನ ಮಗ ಕೃಷ್ಣಗೌಡ ದೇಸಾಯಿ ಮುಂದುವರಿಸಿದ. ಕೃಷ್ಣಗೌಡ ದತ್ತು ಮಗನಾಗಿದ್ದು, ನಾಡಗೌಡ ಮನೆತನದಿಂದ ಬಂದವನು. ಜಿನಗೌಡನ ಎರಡನೆಯ ಮೊಮ್ಮಗ ಜಕ್ಕಗೌಡ ಮಗೇಪ್ಪ ನಾಡಗೌಡನೇ ದೇಸಾಯಿ ಮನೆತನಕ್ಕೆ ಬಂದು ಕೃಷ್ಣಗೌಡ ದೇಸಾಯಿಯಾದ. ಇವನಿಗೆ ಜಕ್ಕಗೌಡ ದೇಸಾಯಿ ಎಂಬ ಮಗನಿದ್ದ. ಜಕ್ಕಗೌಡನಿಗೆ ಯಾದಪ್ಪ ದೇಸಾಯಿ, ಕೃಷ್ಣಪ್ಪ ದೇಸಾಯಿ, ಪಾಸಪ್ಪ ದೇಸಾಯಿ ಎಂಬ ಮಕ್ಕಳು. ಇದರಲ್ಲಿ ಯಾದಪ್ಪ ದೇಸಾಯಿ ವತನದಾರಿಕೆಯನ್ನು ನೋಡಿಕೊಳ್ಳತೊಡಗಿದ. ಇವನಿಗೆ ಮಗೆಪ್ಪ ದೇಸಾಯಿ, ಕೃಷ್ಣಪ್ಪ, ರಾಯಪ್ಪ ಎಂಬ ಮೂರು ಮಕ್ಕಳು. ಹಿರಿಯ ಮಗನಾದ ಮಗೆಪ್ಪ ದೇಸಾಯಿ ವತನದಾರಿಕೆ ವಹಿಸಿಕೊಂಡ. ಇವನಿಗೆ ಒಂಭತ್ತು ಮಕ್ಕಳು. ಇದರಲ್ಲಿ ರಾಯಪ್ಪ ಮೂರನೆಯ ಮಗ. ಈ ರಾಯಪ್ಪನಿಗೆ ದರೂರಿನ ನಾಯಕ ಪಟ್ಟಕೊಟ್ಟು, ದರೂರಿನ ಆಡಳಿತ ನೋಡಲು ಕಳುಹಿಸಲಾಯಿತು. ರಾಯಪ್ಪನ ಮಕ್ಕಳ ಬಗ್ಗೆ ಮುಂದುವರೆದ ವಂಶದ ಬಗ್ಗೆ ಮೂಲ ವಂಶಾವಳಿಯಲ್ಲಿ ದಾಖಲಾಗಿಲ್ಲ. ಆದರೆ ದರೂರು ನಾಯಕರ ವಂಶದ ಮೂಲ ಪುರಷ ರಾಯಪ್ಪ ಎಂಬುದು ಈ ದಾಖಲೆಯಿಂದ ಸ್ಪಷ್ಟವಾಗುತ್ತದೆ. ಇವನ ನಂತರದ ವಂಶಾವಳಿಯನ್ನು ಹೆಳವರು ಮತ್ತು ದರೂರು ನಾಯಕರ ಹಿರಿಯರಿಂದ ತಿಳಿಯಲಾಯಿತು.

ರಾಯಪ್ಪನನ್ನು ದರೂರು ನಾಯಕರ ಮೂಲವ್ಯಕ್ತಿ ಎಂದು ಮೇಲೆ ಚರ್ಚಿಸಿದ ವಂಶಾವಳಿಯಿಂದ ಖಚಿತವಾಗುತ್ತದೆ. ಆದರೆ ಪ್ರಸ್ತುತ ದರೂರು ವಾಡೆಯವರು ತಮ್ಮ ಮೂಲ

ವಂಶಸ್ಥ 'ಅಲ್ಲಪ್ಪ ನಾಯಕ' ಎಂದೇ ಹೇಳುತ್ತಾರೆ. ಬಹುಶ: ಅಲ್ಲಪ್ಪ ನಾಯಕ ರಾಯಪ್ಪನ ಮಗನಿರಬಹುದು. ಅಲ್ಲಪ್ಪ ನಾಯಕ ಒಬ್ಬ ದಕ್ಷ ಚಾಣಾಕ್ಷ ಆಡಳಿತಗಾರ. ದರೂರು ಕಸಬೆಯ ಆಡಳಿತವನ್ನು ಅತೀ ಶೀಘ್ರದಲ್ಲಿ ತನ್ನ ಸುಪರ್ಧಿಗೆ ತೆಗೆದುಕೊಂಡು ರಾಜಧಾನಿಗೆ ಸಲ್ಲುವ ಕಂದಾಯವನ್ನು ಕಾಲಕಾಲಕ್ಕೆ ಸಲ್ಲಿಸುತ್ತಾ ಹೋದ. ಇವನ ಚಾಣಾಕ್ಷ ಮತ್ತು ಪ್ರಾಮಾಣಿಕತೆಯನ್ನು ಮೆಚ್ಚಿ ಬಾದಶಹ ೭೦೦ ಎಕರೆ ಇನಾಂ ಭೂಮಿಯನ್ನು ಕೊಡುತ್ತಾನೆ. ಇವನ ಕಾಲದಲ್ಲಿಯೇ ವಾಡೆ ನಿರ್ಮಾಣವಾದಂತೆ ಕಾಣುತ್ತದೆ. ಬಹುಶ: ಸಣ್ಣ ಪ್ರಮಾಣದ್ದಾಗಿತ್ತೆಂದು ತೋರುತ್ತದೆ.

ಅಲ್ಲಪ್ಪನಾಯಕನ ನಂತರ ಅವನ ಮಗ ಮಗೆಪ್ಪನಾಯಕ, ನಂತರ ಅವನ ಮಗ ಜಕ್ಕಪ್ಪ ನಾಯಕ ದರೂರಿನ ನಾಯಕತ್ವವನ್ನು ನೋಡಿಕೊಂಡರು ಜಕ್ಕಪ್ಪನಾಯಕನು ಅಜ್ಜ ಅಲ್ಲಪ್ಪ ನಾಯಕನಂತೆ ದಕ್ಷ ಆಡಳಿತಗಾರ, ಚತುರಮತಿಯಾಗಿದ್ದ. ಇವನ ಕಾಲಕ್ಕೆ ೭೦೦ ಎಕರೆ ಇದ್ದ ವಾಡೆಯ ಆಸ್ತಿ ೮೦೦ ಎಕರೆಗೆ ಏರಿತು. ಜೊತೆಗೆ ಸುಭದ್ರವಾಗಿರುವ ವಾಡೆಯೂ ನಿರ್ಮಾಣವಾಯಿತು. ಪ್ರಸ್ತುತವಾಗಿ ಜಕ್ಕಪ್ಪನಾಯಕ ಕಟ್ಟಿದ ವಾಡೆಯನ್ನು ನೋಡಬಹುದು. ಒಂದೂವರೆ ಎಕರೆ ಜಾಗೆಯಲ್ಲಿ ವಾಡೆ ನಿರ್ಮಾಣವಾಗಿದೆ. ವಾಡೆಯ ಸುತ್ತಲೂ ೨ ಎಕರೆ ಖಾಲಿ ಜಾಗೆ ಇದೆ. ಜಕ್ಕಪ್ಪನಾಯಕನ ತರುವಾಯ ಅವನ ಮಗ ಮಗೆಪ್ಪನಾಯಕ ನಂತರ ಅವನ ಮಗ ಅಲ್ಲಪ್ಪನಾಯಕ ವಾಡೆಯ ಅಧಿಕಾರಿ ಕಾರ್ಯ ನಿರ್ವಹಿಸಿದರು. ಇವರ ಕಾಲಕ್ಕಾಗಲೇ ಬ್ರಿಟೀಷ್ ಆಡಳಿತ ಬಂದಿತ್ತು. ಬ್ರಿಟೀಷರಿಗೆ ನಿಷ್ಠನಾಗಿದ್ದ ಅಲ್ಲಪ್ಪನಾಯಕ ಮಹಾಧರ್ಮಿಯೂ ಆಗಿದ್ದ ಪ್ರಜೆಗಳ, ದು:ಖಕ್ಕೆ ಸದಾ ಸ್ಪಂದಿಸುವ ಇವನು ಸಾಕಷ್ಟು ಅಲಿಖಿತ ದಾನ ಧರ್ಮಗಳನ್ನು ಮಾಡಿದ್ದಾನೆ ಎಂದು ವಾಡೆಯವರ ಆಡೊಂಬೋಲ.

ಅಲ್ಲಪ್ಪನಾಯಕರಿಗೆ ಜಕ್ಕಪ್ಪನಾಯಕ ಅಪ್ಪಣ್ಣನಾಯಕ ಎಂಬಿಬ್ಬರು ಮಕ್ಕಳು, ಹಿರಿಯ ಮಗನಾದ ಜಕ್ಕಪ್ಪನಾಯಕ ವಾಡೆಯ ಅಧಿಕಾರವಹಿಸಿಕೊಂಡ. ಕಿರಿಯ ಮಗ ಅಪ್ಪಣ್ಣ ಅಣ್ಣನ ಆಡಳಿತಕ್ಕೆ ಸಹಾಯ ಮಾಡಿದಂತೆ ಕಾಣುತ್ತದೆ. ಆದ್ದರಿಂದಲೇ ಬ್ರಿಟೀಷ್ ಸರ್ಕಾರ ಇವರಿಗೆ 'ಸಾಹೇಬ್' ಎಂಬ ಬಿರುದಾವಳಿಯನಿತ್ತು ಗೌರವಿಸಿತು. ಅಪ್ಪಣ್ಣ ಉರ್ಫ್ ಅಪ್ಪಾಸಾಹೇಬ್‌ರವರಿಗೆ ರಾಧಾಬಾಯಿ ಲಕ್ಷ್ಮಿಬಾಯಿ ಎಂಬ ಇಬ್ಬರು ಹೆಂಡತಿಯರಿದ್ದರು. ಈ ದಂಪತಿಗಳಿಗೆ ಧೂಳಗೌಡ, ಬಾಳಾಸಾಹೇಬ, ಬಾಬಣ್ಣ ಎಂಬ ಮೂರು ಮಕ್ಕಳು. ಇವರಲ್ಲಿ ಧೂಳಗೌಡ ಗೋಕಾಕ ತಾಲ್ಲೂಕು ಕೊಣ್ಣೂರಿಗೆ ದತ್ತಕ ಹೋಗುತ್ತಾರೆ. ಅಲ್ಲಿ ಇವರಿಗೆ ಪಾಟೀಲ ವೃತ್ತಿ ಲಭಿಸುತ್ತದೆ. ಇವರಿಗೆ ಸುರೇಶಪಾಟೀಲ ಎಂಬ ಮಗ ಅಂಕಿತ ಮತ್ತು ನೇಹ ಎಂಬ ಮೊಮ್ಮಕ್ಕಳಿದ್ದಾರೆ.

ಅಪ್ಪಾಸಾಹೇಬರ ಎರಡನೆಯ ಮಗ ಬಾಳಾಸಾಹೇಬ ಇವರಿಗೆ ಪ್ರಕಾಶ, ಅಪ್ಪಾಸಾಹೇಬ ಎಂಬ ಮಕ್ಕಳು, ಪ್ರಕಾಶ ಅವರಿಗೆ ಪ್ರತೀಕ ಎಂಬ ಮಗ ಮತ್ತು ಎರಡು ಹೆಣ್ಣು ಮಕ್ಕಳು ಅಪ್ಪಾಸಾಹೇಬರಿಗೆ ಅಭಿಷೇಕ ಮತ್ತು ಪೂಜಾ ಎಂಬೆರಡು ಮಕ್ಕಳಿದ್ದಾರೆ. ಇನ್ನು ಅಪ್ಪಾಸಾಹೇಬರ ಮೂರನೆಯ ಮಗ ಬಾಬಣ್ಣ ಅವರಿಗೆ ರಾಜಕುಮಾರ, ದಿಲೀಪಕುಮಾರ ಎಂಬೆರಡು ಮಕ್ಕಳು. ರಾಜಕುಮಾರರಿಗೆ ಬೀಬಿತಾಯಿ ಎಂಬುವರನ್ನು ಮದುವೆಮಾಡಲಾಗಿದೆ. ಈ ದಂಪತಿಗಳಿಗೆ ಅಣ್ಣಾಸಾಹೇಬ ಮತ್ತು ವೃಷಭ ಎಂಬ ಪುತ್ರ ಜನಿಸಿದರು. ಅಣ್ಣಾ ಸಾಹೇಬರಿಗೆ ಶ್ರೀರಾಮ ಎಂಬ

ಮಗ, ವೃಷಭ ಅವರಿಗೆ ಸಮರ್ಥ, ಸೌಮ್ಯ ಎಂಬ ಮಕ್ಕಳಿದ್ದಾರೆ. ಬಾಬಣ್ಣ ಅವರ ಎರಡನೆಯ ಮಗ ದಿಲೀಪಕುಮಾರ ಇವರ ಹೆಂಡತಿ ಆಶಾತಾಯಿ. ಅಮೀತ, ಅಮೋಲ, ಅಮರ ಎಂಬುವರು ಇವರ ಮಕ್ಕಳು ಅಮೀತ ಅವರಿಗೆ ವೀರ, ಅಮೋಲ ಅವರಿಗೆ ಭೂಷಣ ಎಂಬ ಮಕ್ಕಳಿದ್ದಾರೆ. ಅಮರ ಅವರಿಗೆ ಇತ್ತೀಚಿಗೆ ಅನುಜ ಎಂಬುವರ ಜೊತೆ ವಿವಾಹವಾಗಿದೆ. ಇದಿಷ್ಟು ದರೂರು ವಾಡೆಯ ಐದನೆಯ ತಲೆಮಾರಿನ ಅಲ್ಲಪ್ಪನಾಯಕ ಅವರ ಎರಡನೆಯ ಮಗ ಅಣ್ಣಪ್ಪ ಉರ್ಫ್ ಅಪ್ಪಾಸಾಹೇಬರ ವಂಶಾವಳಿ.

ಅಲ್ಲಪ್ಪನಾಯಕರ ನಂತರ ವಾಡೆಯ ಅಧಿಕಾರತ್ವವನ್ನು ಜಕ್ಕಪ್ಪನಾಯಕರು ವಹಿಸಿಕೊಳ್ಳುತ್ತಾರೆ. ಇವರು ವಾಡೆಯ ಆರನೆಯ ತಲೆಮಾರಿನವರು. ರಾಯಪ್ಪನನ್ನು ಲೆಕ್ಕಕ್ಕೆ ತೆಗೆದುಕೊಂಡರೆ ಏಳನೆಯ ತಲೆಮಾರಿನವರು. ಇವರು ಬಂದ ನಂತರ ವಾಡೆಯ ಕಾರ್ಯಚಟುವಟಿಕೆಗಳು ಚುರುಕಾದವು. ತೀಕ್ಷ್ಣಮತಿಯಾದ ಜಕ್ಕಪ್ಪ ಕಾರಕೂನ ತಮ್ಮ ನಾಲ್ಕು ಎಕರೆ ಹೊಲ ಲಪಟಾಯಿಸಿದ್ದನ್ನು ಪತ್ತೆ ಹಚ್ಚಿದ. ಸಾಕಷ್ಟು ಚತುರಮತಿ ಮತ್ತು ಗಟ್ಟಿತನದ ವ್ಯಕ್ತಿತ್ವ ಜಕ್ಕಪ್ಪನವರದಾಗಿತ್ತು. ದರೂರ ಸುತ್ತಲೂ ಇರುವ ಊರವರು ಜಕ್ಕಪ್ಪನೆಂದರೆ ನಡುಗುತ್ತಿದ್ದರು. ಹಾಗೆಯೇ ಗೌರವ ಆದರವನ್ನೂ ಕೊಡುತ್ತಿದ್ದರು. ಜಕ್ಕಪ್ಪನವರು ಬಂದನಂತರವೇ ಪ್ರಸಿದ್ಧವಾದ ಮೂಡಲಗಿ ಸಂತೆ ಪ್ರಾರಂಭವಾಗುತ್ತಿತ್ತಂತೆ ಎಂದು ವಾಡೆಯ ಶ್ರೀ ರಾಹುಲನಾಯಕರು ಹೇಳುತ್ತಾರೆ. ಒಂದು ವೇಳೆ ಸಂತೆಗೆ ಜಕ್ಕಪ್ಪನವರು ಹೋಗದೇ ಇದ್ದರೆ ಆ ಹೊತ್ತಿನ ಸಂತೆ ನಡೆಯುತ್ತಿರಲಿಲ್ಲವಂತೆ. ವ್ಯಾಪಾರಿಗಳು, ಗ್ರಾಹಕರು ಮರಳಿ ತಮ್ಮ ತಮ್ಮ ಊರಿಗೆ ಸ್ವಘೋಷಿತವಾಗಿಯೇ ಹೋಗುತ್ತಿದ್ದರು. ಜಕ್ಕಪ್ಪನವರಿಗೆ ಜನರು ಕೊಡುವ ಒಂದು ರೀತಿಯ ಗೌರವ, ಭಯವೂ ಇರಬಹುದು.

ಜಕ್ಕಪ್ಪ ದೇಸಾಯಿ ಚತುರಮತಿ ಆಡಳಿತಗಾರನಿದ್ದಷ್ಟೇ ಧಾರ್ಮಿಕತೆಯನ್ನು ಹೊಂದಿದ್ದರು. ಪರಮ ಜಿನಭಕ್ತ, ಪರಧರ್ಮಸಹಿಷ್ಣು ಸುತ್ತಮುತ್ತಲ ಊರುಗಳಲ್ಲಿ ಜಾತ್ರೆಯಲ್ಲಿ ಭಾಗಿಯಾಗುತ್ತಿದ್ದರು. ಬಸದಿ, ದೇವಾಲಯಗಳಿಗೆ ಅಲಿಖಿತ ದಾನ-ದತ್ತಿ ಬಿಟ್ಟಿದ್ದಾರೆ. ಇವರಿಗೆ ಕುದುರೆಗಳೆಂದರೆ ತುಂಬಾ ಪ್ರೀತಿ ವಾಡೆಯ ಲಾಯದಲ್ಲಿ ಸದಾ ನಾಲ್ಕೈದು ಕುದುರೆಗಳು ಇದ್ದೇ ಇರುತ್ತಿದ್ದವು. ಇವರು ಕುದುರೆಯ ಮೇಲೆ ಕುಳಿತು ದಿನಾಲು ತಮ್ಮ ಹೊಲಗಳನ್ನು ವೀಕ್ಷಿಸುತ್ತಿದ್ದರು. ದರೂರಿನಿಂದ ಚಿಕ್ಕೋಡುವರೆಗೂ ಇವರ ಹೊಲಗಳಿದ್ದವು. ಸುಮಾರು ೮-೧೦ ಕಿ.ಮೀ. ವ್ಯಾಪ್ತಿ ಸುತ್ತಲೂ ಈ ಹೊಲ ಆವರಿಸಿತ್ತು. ಸುತ್ತಮುತ್ತಲಿನ ಹಳ್ಳಿಗಳಿಗೆ ಪ್ರಸಿದ್ಧರಾದ ಜಕ್ಕಪ್ಪರವರ ಶ್ರೀಮಂತ ಜಕ್ಕಪ್ಪನಾಯಕರೆಂದೇ ಸಂಬೋಧಿತರಾಗಿದ್ದರು. ಸುತ್ತ ಹಳ್ಳಿಯ ನ್ಯಾಯ ವ್ಯವಸ್ಥೆಯ ತೀರ್ಮಾನಕಾರರು ಇವರೇ ಆಗಿದ್ದರು ಎಂಬುದು ಇವರಿಗೆ ದೊರೆತ ಜನಮಾನಸದ ಗೌರವ ಪಟ್ಟ. ಇವರ ತೀರ್ಮಾನಗಳು ನ್ಯಾಯಯುತವಾಗಿ ಇರುತ್ತಿದ್ದವು. ಜನರೂ ತೀರ್ಮಾನಕ್ಕೆ ತಲೆಬಾಗುತ್ತಿದ್ದರು.

ಜಕ್ಕಪ್ಪನವರಿಗೆ ಐನಾಪುರದ ಶ್ರೀಮಂತ ಕುಟುಂಬದಿಂದ ಸಾತಾಬಾಯಿ ಎಂಬುವರೊಂದಿಗೆ ಮದುವೆಯಾಗಿತ್ತು. ಸಾತಾಬಾಯಿಯವರು ಸದ್ಗುಣಿ, ಸರಳ ಸ್ವಭಾವದವರು.

ಧಾರ್ಮಿಕವಾಗಿ ಸಾಕಷ್ಟು ನೋಂಪಿ ವ್ರತಗಳನ್ನು ಮಾಡುತ್ತಿದ್ದರಂತೆ. ಈ ದಂಪತಿಗಳಿಗೆ ಅಲ್ಲಪ್ಪನಾಯಕ, ಅಣ್ಣಾಸಾಬ ನಾಯಕ, ಬಾಪುಸಾಹೇಬ ನಾಯಕ ಮೂರು ಜನ ಮಕ್ಕಳು. ಇವರೆಲ್ಲ ತಮ್ಮ ಬಾಲ್ಯವನ್ನು ತಾಯಿಯ ತವರುಮನೆಯಾದ ಐನಾಪುರದಲ್ಲಿಯೇ ಕಳೆದರು. ಐನಾಪುರ ಪ್ರಾಚೀನ ಕಾಲದಿಂದಲೂ ಜೈನಕೇಂದ್ರ. ಇಲ್ಲಿ ಸಹಸ್ರಕೂಟ ಜಿನಬಿಂಬ ಇರುವ ಜಿನಾಲಯವಿದೆ. ಇದು ೧೧-೧೨ನೆಯ ಶತಮಾನದಲ್ಲಿ ನಿರ್ಮಾಣವಾದ್ದು ಅತೀ ಮಹತ್ವದ್ದು. ಶ್ರವಣಬೆಳಗೊಳ, ಅರಸಿಕೆರೆ, ಲಕ್ಷ್ಮೇಶ್ವರ, ಮೂಡಬಿದ್ರೆ, ಅಡಗೂರು (ಹಾಸನ ಜಿಲ್ಲೆ) ಐನಾಪುರ (ಬೆಳಗಾವಿ ಜಿಲ್ಲೆ) ಕೆಲವೇ ಕೆಲವು ಕರ್ನಾಟಕದ ಜೈನಕ್ಷೇತ್ರಗಳಲ್ಲಿ ಸಹಸ್ರಕೂಟ ಜಿನಬಿಂಬಗಳಿವೆ.[೨] ಐನಾಪುರ ಸಹಸ್ರಕೂಟ ಜಿನಬಿಂಬ ವಿರುವುದರಿಂದ ಸಹಜವಾಗಿಯೇ ಅಲ್ಲಿ ಜೈನ ಧರ್ಮದ ಸಂಸ್ಕೃತಿಯು ಔನತ್ಯದಲ್ಲಿತ್ತು. ಇದು ಸಾತಾಬಾಯಿಯ ತವರು ಮನೆಯಲ್ಲಿಯೂ ಸಹ ಜೈನ ಧಾರ್ಮಿಕ ಚಟುವಟಿಕೆಗಳು ನಿತ್ಯನೂತನವಾಗಿದ್ದವು. ಇಂಥ ಸಂಸ್ಕೃತಿಯಲ್ಲಿ ಬೆಳೆದ ಜಕ್ಕಪ್ಪನವರ ಮೂರೂ ಮಕ್ಕಳು ಸುಸಂಸ್ಕೃತರಾದರು.

ಜಕ್ಕಪ್ಪನವರ ಮೊದಲ ಮಗ ಅಲ್ಲಪ್ಪ ನಾಯಕರು ಐನಾಪುರಕ್ಕೆ ದತ್ತಕ್ಕೆ ಹೋದರು. ವಾಡೆಯ ಅಧಿಕಾರ ಸಹಜವಾಗಿಯೇ ಎರಡನೆಯ ಮಗ ಅಣ್ಣಾಸಾಹೇಬರಿಗೆ ಒಲಿದು ಬಂದಿತು. ಇವರು ಹೆಚ್ಚು ವರ್ಷ ಅಧಿಕಾರ ನಡೆಸದೆ ಅಕಾಲಿಕ ಮರಣಕ್ಕೆ ತುತ್ತಾದರು. ಇವರ ನಂತರ ವಾಡೆಯ ಉತ್ತರಾಧಿಕಾರಿ ಯಾರನ್ನು ಮಾಡಬೇಕು ಎಂಬ ವಿಚಾರಗಳು ಕುಟುಂಬದಲ್ಲಿ ತಲೆದೋರಿದವು. ಅಣ್ಣಾಸಾಹೇಬರ ಮಕ್ಕಳಾದ ದಾದಾಸಾಹೇಬ ಮತ್ತು ರಾವಸಾಹೇಬ ಚಿಕ್ಕವರಿರುವುದರಿಂದ ಬ್ರಿಟೀಷ್ ಸರ್ಕಾರ ಜಕ್ಕಪ್ಪನವರ ಮೂರನೆಯ ಮಗನಾದ ಬಾಪುಸಾಹೇಬರನ್ನು ವಾಡೆಯ ಉತ್ತರಾಧಿಕಾರಿಯನ್ನಾಗಿ ಮಾಡಿತ್ತು. ಇವರ ಪ್ರಾಮಾಣಿಕತೆ ಮತ್ತು ದಕ್ಷತೆಯನ್ನು ಮೆಚ್ಚಿ ಮುಂದೆ 'ಮಂಡಲ ಅಧಿಕಾರಿ'ಯನ್ನಾಗಿಯೂ ಮಾಡಿತು. ಈ ಮಂಡಲದಲ್ಲಿ ತೀರ್ಥ, ಸಪ್ತಸಾಗರ, ಚಿಕ್ಕೂರೂ, ನದಿಇಂಗಳಗಾವ ಸವದಕೊಪ್ಪ, ಸಂಕ್ರಟ್ಟಿ ಊರುಗಳು ಸೇರಿದ್ದವು. ದರೂರ ಜೊತೆಗೆ ಮಂಡಲದ ಎಲ್ಲ ಆಗುಹೋಗುಗಳ ಅಧಿಕಾರ ಬಾಪುಸಾಹೇಬರಿಗೆ ಲಭಿಸಿತ್ತು. ತಮಗೆ ಬಂದ ಅಧಿಕಾರವನ್ನು ಅಚ್ಚುಕಟ್ಟಾಗಿಯೇ ನಿರ್ವಹಿಸಿದ ಬಾಪೂರವರು ಬ್ರಿಟೀಷರು ಕೊಡಮಾಡುವ 'ಸಾಹೇಬ್' ಗೌರವಕ್ಕೆ ಭಾಜನರಾದರು.

ತಾರಾಬಾಯಿ ಎಂಬುವರನ್ನು ವಿವಾಹವಾದ ಬಾಪೂಸಾಹೇಬರಿಗೆ ಒಟ್ಟು ೦೭ ಜನ ಮಕ್ಕಳು. ಅದರಲ್ಲಿ ೦೩ ಗಂಡು ೦೪ ಹೆಣ್ಣು. ಗಂಡುಮಕ್ಕಳಲ್ಲಿ ಮೊದಲನೆಯವರು ಚಂದ್ರಕಾಂತ್ ಉರ್ಫ್ ಅಜಿತ್‌ನಾಯಕ, ಎರಡನೆಯವರು ತಾತ್ಯಾಸಾಹೇಬ, ಮೂರನೆಯವರು ಸುಭಾಸ್‌ರವರು. ಬಾಪೂಸಾಹೇಬರ ನಂತರ ವಾಡೆಯ ಉತ್ತರಾಧಿಕಾರತ್ವ ಅವರ ಮೊದಲ ಮಗ ಚಂದ್ರಕಾಂತ ಉರ್ಫ್ ಅಜಿತ್ ನಾಯಕರಿಗೆ ಬಂತು. ಅಪ್ಪನ ಎಲ್ಲ ಜವಾಬ್ದಾರಿಗಳನ್ನು ಸಮರ್ಥವಾಗಿ ನಿರ್ವಹಿಸಲು ಪ್ರಾರಂಭಿಸಿದ ಅಜಿತ್‌ನಾಯಕರು ದಕ್ಷತೆಯ ಆಡಳಿತಕ್ಕೆ ಹೆಸರಾದವರು. ಇವರ ದಕ್ಷತೆ ಮತ್ತು ನ್ಯಾಯಬದ್ಧ ಆಡಳಿತಕ್ಕೆ ಮೆಚ್ಚಿ 'ಪೊಲೀಸ್ ಪಾಟೀಲ' ಎಂಬ ಮತ್ತೊಂದು ಅಧಿಕಾರ ಒಲಿದು ಬಂತು. ಇವರು ಭಾರತದ ಸ್ವತಂತ್ರ ಪೂರ್ವ ಮತ್ತು

ಉತ್ತರದಲ್ಲಿಯೂ ವಾಡೆಯ ಅಧಿಕಾರ ನಡೆಸಿದ್ದಾರೆ. ಸ್ವತಂತ್ರ ನಂತರ ಪೊಲೀಸ್ ಪಾಟೀಲಿಕೆ ಅಧಿಕಾರ ಹೋಯ್ತು. ಪೊಲೀಸ್ ಪಾಟೀಲಕಿ ಸೇವೆ ಸಲ್ಲಿಸಿದವರಿಗೆ ಮಾಸಾಶನ ಕೊಡುವ ವ್ಯವಸ್ಥೆ ಜಾರಿಯಾಗಿದ್ದರಿಂದ ಅಜಿತ್‌ಕುಮಾರ ನಾಯಕರು ಸರ್ಕಾರಕ್ಕೆ ಮಾಶಾಸನಕ್ಕೆ ಅರ್ಜಿ ಸಲ್ಲಿಸುತ್ತಾರೆ. ಮಾಶಾಸನದ ಹಣದಿಂದ ಕುಟುಂಬ ನಡೆಸುವ ಅಗತ್ಯ ಅಜಿತ್‌ಕುಮಾರರಿಗೆ ಇದ್ದಿಲ್ಲವಾದರೂ ಅದುವರೆಗೆ ಸಲ್ಲಿಸಿದ ಸೇವೆ ಮತ್ತು ಸರ್ಕಾರ ಕೊಡುವ ಗೌರವ, ಸಾಮಾಜಿಕ ವಲಯದಲ್ಲಿ ಸಿಗುವ ಗೌರವಕ್ಕೋಸ್ಕರ ಮಾಶಾಸನಕ್ಕೆ ಅಥಣಿ ತಾಲ್ಲೂಕಿನ ತಹಶೀಲ್ದಾರರಿಗೆ ಮನವಿ ಸಲ್ಲಿಸುತ್ತಾರೆ. ಈ ಅರ್ಜಿಯು ವಿಶೇಷ ಜಿಲ್ಲಾಧಿಕಾರಿ ಕಛೇರಿ ಬೆಳಗಾವಿಗೂ ತಲುಪುತ್ತದೆ. ದಿನಾಂಕ: ೦೧-೦೨-೧೯೭೭ರಲ್ಲಿ ದರೂರಿನ ಕಂದಾಯ/ಪೊಲೀಸ್ ಪಾಟೀಲ ಆಗಿ ಸೇವೆ ಸಲ್ಲಿಸಿದ ಅಗತ್ಯ ದಾಖಲೆಗಳನ್ನು ಮತ್ತೆ ಸರ್ಕಾರಕ್ಕೆ ಅಜಿತ್‌ಕುಮಾರ ನಾಯಕರು ಹಾಜರುಪಡಿಸುತ್ತಾರೆ. ಎಲ್ಲಾ ದಾಖಲೆಗಳನ್ನು ಪರಿಶೀಲಿಸಿದ ಸರಕಾರ ಕ್ರಿ.ಶ. ೧೯೮೧ರ ಕಂದಾಯ/ಪೊಲೀಸ್ ಪಾಟೀಲಕಿ ಆ್ಯಕ್ಟ್‌ನಂತೆ ಅಜೀತಕುಮಾರ ನಾಯಕರಿಗೆ ಮಾಶಾಸನ ನಿಗಧಿಯಾಗುತ್ತದೆ.

ಅಂದಿನ ಅಥಣಿ ತಾಲ್ಲೂಕಿನ ತಹಶೀಲ್ದಾರರಾದ ಶ್ರೀ ಪಿ.ಎಸ್. ಮಲ್ಲಾಪುರ ಅವರು ಮಾಜಿ ಪೊಲೀಸ್ ಪಾಟೀಲರಾದ ಶ್ರೀ ಅಜಿತ್‌ಕುಮಾರ ನಾಯಕರಿಗೆ ಅವರ ಹಿಂದಿನ ಸೇವೆಯನ್ನು ಪರಿಗಣಿಸಿ ಸರ್ಕಾರಿ ನಿಯಮಾವಳಿ ೧೯೮೧ರಂತೆ ದಿನಾಂಕ: ೧೫-೦೮-೧೯೮೪ರಂದು ಪ್ರತಿ ತಿಂಗಳಿಗೆ ೧೦೦ (ನೂರು ರೂಪಾಯಿಗಳು ಮಾತ್ರ) ರೂಪಾಯಿಗಳ ಮಾಶಾಸನವನ್ನು ನಿಗಧಿಗೊಳಿಸಿ ಆದೇಶ ಹೊರಡಿಸುತ್ತಾರೆ. ಈ ಆದೇಶದ ಪ್ರತಿಗಳು ಅಜಿತ್‌ಕುಮಾರ ನಾಯಕರಿಗೆ ಒಂದು, ಮಾಹಿತಿಗಾಗಿ ಅಥಣಿ ತಹಶೀಲ್ದಾರ್‌ರರ ಕಛೇರಿಗೆ ಒಂದು, ಅಥಣಿಯ ಖಜಾನೆ ಇಲಾಖೆಗೆ ಒಂದು ಪ್ರತಿಯನ್ನು ಕಳುಹಿಸಿಕೊಡಲಾಗುತ್ತದೆ.

ಅಜೀತಕುಮಾರ ನಾಯಕ ಉರ್ಫ್ ಚಂದ್ರಕಾಂತ ನಾಯಕರಿಗೆ ಇಂದುಮತಿ ಎಂಬುವರ ಜೊತೆ ವಿವಾಹವಾಗುತ್ತದೆ. ಇವರಿಗೆ ಆನಂದ, ಕೋಮಲ ಮತ್ತು ಒಂದು ಹೆಣ್ಣು ಮಗು ಒಟ್ಟು ಮೂರು ಮಕ್ಕಳು. ಇವರಲ್ಲಿ ಸಂಪ್ರದಾಯದಂತೆ ಆನಂದರವರು ವಾಡೆಯ ನಾಯಕರು. ಅದು ಅವರ ಮಗ ಪದ್ಮರಾಜ ಅವರಿಗೂ ಮುಂದುವರೆದುಕೊಂಡು ಹೋಗುತ್ತದೆ. ಆದರೆ ಅಜೀತಕುಮಾರ ಅವರ ಕಾಲಕ್ಕೆ ವಾಡೆಯ ಸಹೋದರರಲ್ಲಿ ಮನಸ್ತಾಪಗಳು ಉಂಟಾಗಿ ವಾಡೆ ಮತ್ತು ಆಸ್ತಿ ಪಾಲಾಗುತ್ತದೆ. ಈ ಒಟ್ಟು ಐದು ಕುಟುಂಬಗಳು ವಾಡೆಯಲ್ಲಿ ವಾಸಿಸುತ್ತವೆ. ಚಂದ್ರಕಾಂತ ಉರ್ಫ್ ಅಜೀತಕುಮಾರವರ ಕುಟುಂಬ, ಇವರ ಸಹೋದರ ತಾತ್ಯಾಸಾಹೇಬ ಅವರ ಮಕ್ಕಳ ಕುಟುಂಬ, ಮತ್ತೊಬ್ಬ ಸಹೋದರ ಸುಭಾಸ್ ಜಯಶ್ರೀ ದಂಪತಿ ಮಗ ರಾಹುಲ (ಇವರ ಮಗ ರಾಜವೀರ) ಮಗಳು ದೀಪಾಲಿಯರ ಕುಟುಂಬ ಮತ್ತು ಅಣ್ಣಪ್ಪ ಉರ್ಫ್ ಅಪ್ಪಾಸಾಹೇಬರ ತಲೆಮಾರಿನ ಬಾಬಾಸಾಹೇಬ ಮತ್ತು ಬಾಬಣ್ಣ ಕುಟುಂಬಗಳು ಸದ್ಯದ ವಾಡೆಯಲ್ಲಿ ಇವೆ.

## ೪.೪ ಅಣ್ಣಿಗೇರೆ ದೇಶಪಾಂಡೆ ವಾಡೆಯ ಪರಿಸರ ಮತ್ತು ಇತಿಹಾಸ

ಪ್ರಾಚೀನ ರಾಜಕೀಯ ಆಡಳಿತದ ವಿಭಾಗವಾಗಿದ್ದ ಬೆಳ್ವಲ-೩೦೦ರ ಕೇಂದ್ರ ಮತ್ತು ರಾಜಧಾನಿ ಅಣ್ಣಿಗೇರೆ. ಸ್ಥಳೀಯ ಐತಿಹ್ಯದ ಪ್ರಕಾರ ಈ ಊರ ಇತಿಹಾಸ ಪಾಂಡವರ ಕಾಲಕ್ಕೆ ಸಲ್ಲುತ್ತದೆ. ಪಾಂಡವರು ಅಜ್ಞಾತವಾಸಕ್ಕೆ ಹೋಗುವ ಸಂದರ್ಭದಲ್ಲಿ ಇಲ್ಲಿ ತಂಗಿದ್ದರು. ದುರ್ಯೋಧನನ ಕುತಂತ್ರದಿಂದ ಋಷಿಗಳು ಅತಿಥಿ ರೂಪದಲ್ಲಿ ಬಂದು ಪಾಂಡವರಿಗೆ ಸತ್ಕರಿಸುವಂತೆ ಕೋರಿದರು. ಆಗ ದ್ರೌಪದಿಯು ಕೃಷ್ಣನಿಂದ ಪಡೆದ ಅಕ್ಷಯ ಪಾತ್ರೆ ಸ್ಮರಿಸಲು ಅನ್ನ ಅಕ್ಷಯವಾಗುತ್ತ ಒಂದು ಗಿರಿಯ ಪ್ರಮಾಣದಲ್ಲಿ ಸೃಷ್ಠಿಯಾಯಿತು. ಋಷಿ ಸಂಘವು ಪಾಂಡವರ ಆತಿಥ್ಯ ಸ್ವೀಕರಿಸಿ ಹರಸಿ ಹೋದರಂತೆ. ಅಂದಿನಿಂದ ಇಲ್ಲಿ ಬಿದ್ದಿದ್ದ ಅನ್ನದ ಗಿರಿಯಿಂದ ಈ ಊರಿಗೆ ಅನ್ನಗಿರಿ, ಅನ್ನಿಗೆರೆ, ಅಣ್ಣಿಗೇರೆ ಎಂದು ಹೆಸರಾಯಿತು. ಇನ್ನೊಂದು ಹೇಳಿಕೆಯ ಪ್ರಕಾರ ನಾಗದೇವನ (ಅತ್ತಿಮಬ್ಬೆಯ ಪತಿ ನಾಗದೇವ) ಮಗ ಅಣ್ಣಿಗದೇವ ಇಲ್ಲಿ ಒಂದು ಕೆರೆ ಕಟ್ಟಿಸಿದ್ದ. ಆ ಕೆರೆಗೆ ಅಣ್ಣಿಗದೇವನ ಕೆರೆ ಎಂದೇ ಹೆಸರಿತ್ತು. ನಂತರ ಇವರ ಹೆಸರೇ ಊರಿಗಾಯ್ತು ಎಂಬ ವಾದಗಳಿವೆ. ಅಣ್ಣಿಗದೇವ ಒಬ್ಬ ಜೈನ ದಂಡನಾಯಕ.

ಒಂದು ಪ್ರಬಲ ಜೈನಕೇಂದ್ರವಾದ ಅಣ್ಣಿಗೇರಿಯಲ್ಲಿ ಚೇದಿಯ (ಚೈತ್ಯ) ಜಿನಾಲಯ, ಗಂಗಪೆರ್ಮ್ಮಾಡಿ ಬಸದಿ, ಸೇನಗಣ ಬಸದಿ, ಆದಿನಾಥ ಬಸದಿ, ಹೆಮ್ಮಾಡಿದೇವನ ಬಸದಿ, ಪಂಚಬಸದಿ, ಚಂದ್ರನಾಥ ಬಸದಿ ಎಂಬ ಮುಂತಾದ ಪ್ರಾಚೀನ ಬಸದಿಗಳಿದ್ದವು. ಈಗ ಈ "ಪರಿಸರದಲ್ಲಿ ಬಾದಾಮಿ ಚಾಲುಕ್ಯರು (ಕ್ರಿ.ಶ. ೫೪೩-೭೫೭), ಮಳಖೇಡದ ರಾಷ್ಟ್ರಕೂಟರು (ಕ್ರಿ.ಶ. ೭೫೭-೯೭೩), ಕಲ್ಯಾಣದ ಚಾಲುಕ್ಯರು (ಕ್ರಿ.ಶ. ೯೭೩-೧೧೬೮), ಕಲಚೂರಿಗಳು (ಕ್ರಿ.ಶ. ೧೧೬೨-೧೧೮೮), ಮಹಾಸಾಮಂತರಾದ ಗಂಗ ಮನೆತನದ ಇಮ್ಮಡಿ ಬೂತುಗ, ನವಲಗುಂದದ ಕತ್ತಲೆಕುಲದ ಕಾಟರಸ ಮೊದಲಾದ ಅರಸಾದಿಗಳು ಜೈನ ಧರ್ಮಕ್ಕೆ ವಿಶೇಷವಾಗಿ ಆಶ್ರಯ-ಪ್ರೋತ್ಸಾಹ ಕೊಟ್ಟು ಪೋಷಿಸಿದ್ದಾರೆ. ಹಾಗೆಯೇ ಇಲ್ಲಿ ಜಯಕೀರ್ತಿ ಸಿದ್ಧಾಂತದೇವ, ನಾಗಚಂದ್ರ ಸಿದ್ಧಾಂತದೇವ, ಕನಕಶಕ್ತಿಸಿದ್ಧಾಂತದೇವ, ವರ್ಧಮಾನ, ವಿದ್ಯಾನಂದ, ಮಾಣಿಕ್ಯನಂದಿ, ಗುಣಕೀರ್ತಿಪಂಡಿತ, ವಿಮಳಚಂದ್ರ, ಗುಣಚಂದ್ರ, ಅಭಯನಂದಿ, ತ್ರಿಭುವನಚಂದ್ರ, ಉದಯಚಂದ್ರಸಿದ್ಧಾಂತದೇವ, ಸಕಳಚಂದ್ರದೇವ, ನೇಮಿಚಂದ್ರ ಭಟ್ಟಾರಕದೇವ, ಕನಕನಂದಿ ಪಂಡಿತದೇವ, ಜಯಕೀರ್ತಿದೇವ, ರತ್ನಸೇನ ಸಿದ್ಧಾಂತದೇವ ಮೊದಲಾದ ಅನೇಕ ಜೈನಾಚಾರ್ಯರು ಧರ್ಮಪ್ರಸಾರದ ಜೊತೆಗೆ ಸಾಂಸ್ಕೃತಿಕ ಚಟುವಟಿಕೆಗಳಿಗೂ ಸ್ಫೂರ್ತಿ ಪ್ರೇರಣೆ ಕೊಡಮಾಡಿದ್ದಾರೆ. ಹೀಗಾಗಿ ಇಲ್ಲಿ ಬಸದಿಗಳ ನಿರ್ಮಾಣ, ಜೀರ್ಣೋದ್ಧಾರ, ಶಿಲ್ಪಗಳ ಪ್ರತಿಷ್ಠಾಪನೆ, ದಾನ-ದತ್ತಿಗಳು ಇತ್ಯಾದಿ ಜೈನ ಧಾರ್ಮಿಕ, ಸಾಮಾಜಿಕ ಸಾಹಿತ್ಯಿಕ ಮತ್ತು ಸಾಂಸ್ಕೃತಿಕ ಚಟುವಟಿಕೆಗಳು ಅವಿಚ್ಛಿನ್ನವಾಗಿ ಸಾಗಿ ಬಂದಿವೆ."[೨೭]

ಗಂಗರ ಇಮ್ಮಡಿ ಭೂತುಗ ನಿರ್ಮಿಸಿದ ಗಂಗಪೆರ್ಮಾಡಿ (ಶಾಂತಿನಾಥ ಬಸದಿ) ಬಸದಿ ಈಗಲೂ ಅಣ್ಣಿಗೇರಿಯಲ್ಲಿ ಉಳಿದು ಬಂದಿದೆ. ಉಳಿದ ಬಸದಿಗಳು ಧಾರ್ಮಿಕ ಕಲಹದಲ್ಲಿ ಸ್ಥಿತ್ಯಂತರ ಹೊಂದಿ ದೇವಾಲಯಗಳಾಗಿವೆ. ಕೆಲವು ನಾಶವಾಗಿವೆ. "ಅಣ್ಣಿಗೇರಿಯಲ್ಲಿರುವ ಇಂದಿನ

ಪ್ರಮುಖ ವೀರಶೈವ ದೇವಾಲಯಗಳಲ್ಲಿ ಕೆಲವು ಹಿಂದೆ ಜಿನ ಮಂದಿರಗಳಾಗಿದ್ದವು ಎಂಬುದು ಸ್ಪಷ್ಟವಾಗಿ ಗೊತ್ತಾಗುತ್ತದೆ. ಆದಿನಾಥ ಬಸದಿ ಪರಿವರ್ತನೆಗೊಂಡು ಅಮೃತೇಶ್ವರ ಗುಡಿಯಾಗಿದೆ. ಪದ್ಮಪ್ರಭ ಜಿನಮಂದಿರವು ಪರಿವರ್ತಿತವಾಗಿ ಪುರದೀರಪ್ಪನ ಗುಡಿಯಾಗಿದೆ. ಚೇದಿಯ ಮಂದಿರವು ಪರಿವರ್ತಿತವಾಗಿ ಬನಶಂಕರಿಯ ದೇವಾಲಯವಾಗಿದೆ. ಧೋರ ಜಿನಾಲಯವು ಪರಿವರ್ತಿತವಾಗಿ ಧೋರೇಶ್ವರ ಗುಡಿಯಾಗಿ, ಮತ್ತೆ ಪರಿವರ್ತನೆಗೊಂಡು ಹನುಮಂತನ ಗುಡಿಯಾಗಿದೆ. ಇಂದಿನ ಈಶ್ವರಸ್ವಾಮಿಯ ಮಠವು ಹಿಂದೆ ಜಿನಮಂದಿರವಾಗಿತ್ತು. ಈ ರೀತಿ ಪರಿವರ್ತನೆಯಾದುದಕ್ಕೆ ಯಾವುದೇ ಶಾಸನಗಳ ಆಧಾರವು ಇಲ್ಲವಾದರೂ ಈ ಗುಡಿಗಳ ರಚನಾ ವಿನ್ಯಾಸ, ಶಿಲ್ಪಕಲೆ ಹಾಗೂ ದೇವಾಲಯಗಳ ಸುತ್ತಲೂ ಗೋಚರಿಸುವ ಅವಶೇಷಗಳನ್ನು ಅವಲೋಕಿಸಿದಾಗ ಈ ಹೇಳಿಕೆಯು ಸತ್ಯವೆನಿಸುತ್ತದೆ".[೨೮] ಮುನಿಸಂಘ, ಬಸದಿಗಳು, ಶ್ರಾವಕರಿಂದ ತುಂಬಿ ತುಳುಕುತಿದ್ದ ಅಣ್ಣಿಗೇರೆ ಜೈನಸಮುದಾಯವು ಎರಡು ಹಂತಗಳಲ್ಲಿ ವೈರಿಗಳ ದಾಳಿಗೆ ಒಳಗಾಗಿ ನಲುಗಿತು. ಮೊದಲನೆಯದು ಕಲ್ಯಾಣ ಚಾಲುಕ್ಯರ ವೈರಿಗಳಾಗಿದ್ದ ತಂಜಾವೂರಿನ ಚೋಳ ಮನೆತನದ ಕೋಪರಕೇಸರಿ ರಾಜೇಂದ್ರದೇವ ೧೦೪೫ರಲ್ಲಿ ಅಣ್ಣಿಗೇರಿ ಪರಿಸರದಲ್ಲಿ ದಾಳಿ ಮಾಡಿದಾಗ ಅನೇಕ ಬಸದಿಗಳು ನೆಲಕ್ಕುರುಳಿದವು. ದಾಳಿಯ ನಂತರ ಕೆಲವು ಬಸದಿಗಳು ಜೀರ್ಣೋದ್ಧಾರಗೊಂಡರೂ ಮೊದಲಿನ ಹೊಳಪನ್ನು ಕಳೆದುಕೊಂಡವು. ಎರಡನೆಯದು ವೀರಗೊಗ್ಗಿದೇವನ ದಾಳಿ. "ಕ್ರಿ.ಶ. ೧೦೮೪ರ ಅಣ್ಣಿಗೇರೆಯ ಶಾಸನದಲ್ಲಿ ಒಂದು ಕಡೆ ಈ ಪದ್ಯಗಳಿವೆ.

ಜಯಿನಮ್ರಿಗ ಬೇಣ್ಟೆಕಾರಂ
ಜಯಿನಾಗಮ ಧೂಮಕೇತು ಜಯಿನಕುಠಾರಂ
ಜಯಿನಫಣಿ ವಯಿನತೇಯಂ
ಜಯಿನಾಂತಕನೆನಿಸಿ ನೆಗಳ್ದನೀ ಗೊಗ್ಗರಸಂ॥[೨೯]

ಜೈನರು ಎಂಬ ಮೃಗಗಳನ್ನು ಭೇಟಿಯಾಡಿದವನು, ಜೈನ ಆಗಮಗಳಿಗೆ ಧೂಮಕೇತುವಿನಂತೆ ಅಪ್ಪಳಿಸಿದವನು, ಜೈನಧರ್ಮಕ್ಕೆ ಕೊಡಲಿ ಪೆಟ್ಟು ಹಾಕಿದವನು, ಜೈನರಿಗೆ ಕಾಳೋರಗವಾಗಿ ಕಾಡಿದವನು, ಜೈನರಿಗೆ ಆತಂಕವೆನಿಸಿದ ಗೊಗ್ಗರಸ ಪ್ರಸಿದ್ಧನಾಗಿದ್ದಾನೆ ಎಂಬ ಅರ್ಥಸೂಚಿಸುವ ಈ ಪದ್ಯ ಅಂದಿನ ಅಣ್ಣಿಗೇರಿ ಜೈನರ ಪರಿಸ್ಥಿತಿಯನ್ನು ಸೂಚಿಸುತ್ತದೆ. ಇಷ್ಟೆಲ್ಲಾ ದಾಳಿ ನಡೆದರೂ ಇಂದಿಗೂ ಜೈನರು ಇಲ್ಲಿದ್ದಾರೆ. ರೈಲು ಬೋಗಿಯಂತಿರುವ ಬೂತುಗ ನಿರ್ಮಿಸಿದ ಶಾಂತಿನಾಥ ಬಸದಿ ಉಳಿದು ಈಗ ಪಾರ್ಶ್ವನಾಥ ಜಿನಾಲಯವಾಗಿದೆ.

ಅಣ್ಣಿಗೇರೆಯ ಮತ್ತೊಂದು ದೊಡ್ಡ ಜೈನ ಕುರುಹು ಎಂದರೆ ಆದಿಕವಿ ನಾಡೋಜ ಪಂಪನ ಜನನ. ಈಗಾಗಲೆ ಸಾಹಿತ್ಯ ಅಧ್ಯಯನಕಾರರಿಗೆ ಪಂಪನ ತಾಯಿಯ ತವರು ಮನೆ ಅಣ್ಣಿಗೇರೆ ಎಂದೇ ತಿಳಿದಿದೆ. ಪಂಪನ ತಾಯಿಯಾದ ಅಬ್ಬಣಬ್ಬೆಯು ಅಣ್ಣಿಗೇರೆಯ ಜೋಯಿಸ ಸಿಂಘಣನ ಮೊಮ್ಮಗಳು. ಆದ್ದರಿಂದ ಪಂಪ ತನ್ನ ಬಾಲ್ಯವನ್ನು ಇಲ್ಲಿಯೇ ಕಳೆದು, ಇಲ್ಲಿ ಭಾಷೆ,

ಸಂಸ್ಕೃತಿಯ ಅರಿವು ಪಡೆದು ವಿಕ್ರಮಾರ್ಜುನ ಕೃತಿ ರಚನೆಯ ಕಾಲದಲ್ಲಿ ಬಳಸಿಕೊಂಡ. ಈ ಪ್ರಾಂತದ ಭಾಷೆಗೆ ಪುಲಿಗೆರೆಯ ತಿರುಳ್ಗನ್ನಡ ಎಂದು ಹೆಸರಿತ್ತು. ಕನ್ನಡ ಸಾಹಿತ್ಯದ ಮತ್ತು ಜೈನ ಸಾಹಿತ್ಯದ ದಿಗ್ಗಜನಾದ ಪಂಪನ ವಂಶಸ್ಥರು ಇಂದಿಗೂ ಅಣ್ಣಿಗೇರೆಯಲ್ಲಿದ್ದಾರೆ. ಅಲ್ಲದೆ ೧೬-೧೭ನೆಯ ಶತಮಾನದ ಹೊತ್ತಿಗೆ ಅಣ್ಣಿಗೇರೆಯ ಆಡಳಿತವನ್ನು ಅವರು ನಿರ್ವಹಿಸಿದ್ದಾರೆ.

**ಅಣ್ಣಿಗೇರೆ ದೇಶಪಾಂಡೆ ವಾಡೆಯ ಇತಿಹಾಸ**

ಹದಿನೆಂಟು ತಲೆಮಾರುಗಳ ಆಡಳಿತ ಕಂಡ ಅಣ್ಣಿಗೇರೆ ದೇಶಪಾಂಡೆ ವಾಡೆ ಉತ್ತರ ಕರ್ನಾಟಕದ ಜೈನ ವಾಡೆಗಳಲ್ಲಿಯೇ ಅತ್ಯಂತ ಪ್ರಾಚೀನವಾದದ್ದು. ಸದ್ಯ ದೊರೆಯುವ ವಾಡೆಯ ವಂಶಾವಳಿಯಲ್ಲಿ ನಾಗರಸ್ಯಯ್ಯ ಎಂಬುವನೇ ಮೂಲಪುರುಷ. ಆದರೆ ಈ ಕುಟುಂಬದ ಮೂಲಪುರುಷ ಪಂಪನ ತಂದೆ ಭೀಮಪ್ಪಯ್ಯ ಎಂಬುದು ಹಿರಿಯ ವಿದ್ವಾಂಸರಾದ ಜಿ. ಬ್ರಹ್ಮಪ್ಪ, ಡಾ.ಹಂ.ಪ.ನಾಗರಾಜಯ್ಯ, ಡಾ.ಎಂ.ಚಿದಾನಂದಮೂರ್ತಿ, ಡಾ.ಎಂ.ಎಂ. ಕಲಬುರ್ಗಿಯವರುಗಳು ಗುರುತಿಸಿದ್ದಾರೆ. ಇವರು ಈ ಆಧಾರಕ್ಕೆ ಕೊಡುವ ಬಹುಮುಖ್ಯ ಕಾರಣ ಭೀಮಪ್ಪಯ್ಯನ ಹೆಸರು ವಂಶಾವಳಿಯಲ್ಲಿ ಪುನರಾವರ್ತನೆಯಾದದ್ದು.

ಪಂಪನ ತಂದೆ ಭೀಮಪ್ಪಯ್ಯನ ಹೆಸರು ವಾಡೆಯ ವಂಶಾವಳಿಯಲ್ಲಿ ಪದೇ ಪದೇ ಕಂಡು ಬರುತ್ತದೆ. ವಾಡೆಯ ವಂಶವೃಕ್ಷದ ಹದಿನಾಲ್ಕನೆಯ ತಲೆಮಾರಿನ ವ್ಯಕ್ತಿ ಚಂದಪ್ಪಯ್ಯ. ಚಂದಪ್ಪಯ್ಯನಿಗೆ ಭಾಗುಬಾಯಿ, ಪದ್ಮಾಬಾಯಿ, ರಂಗೂಬಾಯಿ ಎಂಬ ಮೂರು ಜನ ಹೆಂಡತಿಯರು. ಭಾಗುಬಾಯಿಗೆ ಚಲ್ಲುಬಾಯಿ ಎಂಬ ಮಗಳು, ಪದ್ಮಾಬಾಯಿಗೆ ಲಕ್ಷ್ಮೀಬಾಯಿ ಎಂಬ ಮಗಳನ್ನು ಪಡೆದ ಚಂದಪ್ಪಯ್ಯ ಉತ್ತರಾಧಿಕಾರಕ್ಕೆ ಗಂಡು ಸಂತಾನದ ಪ್ರಾಪ್ತತೆಗಾಗಿ ರಂಗೂಬಾಯಿಯನ್ನು ಮದುವೆಯಾದ. ರಂಗೂಬಾಯಿಯವರಲ್ಲಿ ಪುತ್ರರತ್ನವನ್ನು ಕಂಡ ಚಂದಪ್ಪಯ್ಯ ತನ್ನ ಪೂರ್ವಿಕ ಭೀಮಪ್ಪಯ್ಯನ ಹೆಸರನ್ನು ನಾಮಕರಣ ಮಾಡಿದ. ಈ ಭೀಮಪ್ಪಯ್ಯ ಹದಿನೈದನೆಯ ತಲೆಮಾರಿನವನು. ಈ ಭೀಮಪ್ಪಯ್ಯ ನಂತರ ಬರುವ ಹದಿನೇಳನೆಯ ತಲೆಮಾರಿನ ವ್ಯಕ್ತಿಗೂ ಭೀಮಪ್ಪಯ್ಯ ಎಂಬ ಹೆಸರಿದೆ. ಭೀಮಪ್ಪಯ್ಯನ ಹೆಸರು ಈ ವಾಡೆಯ ವಂಶಾವಳಿಯಲ್ಲಿ ಪುನರಾವರ್ತನೆಯಾಗುತ್ತಿದ್ದರಿಂದ ಈ ವಂಶ ಪಂಪನ ವಂಶಸ್ಥರದ್ದೆಂದೆ ಹೇಳಬಹುದು. ಆದರೆ ವಂಶಾವಳಿಯಲ್ಲಿ ಪಂಪನ ಹೆಸರು ಎಲ್ಲಿಯೂ ಕಂಡುಬರುವುದಿಲ್ಲ. 'ಸಾಹಿತ್ಯಿಕ ಸಂದರ್ಭದಲ್ಲಿ ಸಮಸ್ತ ಕನ್ನಡಿಗರಿಗೆ ಪಂಪನೇ ಮುಖ್ಯ. ಭೀಮಪ್ಪಯ್ಯ ಅಮುಖ್ಯ. ಆದರೆ ಜೈನಕ್ಕೆ ಮತಾಂತರಗೊಂಡ ವ್ಯಕ್ತಿಯಾಗಿರುವುದರಿಂದ ಮೂಲ ಪುರುಷನೆನಿಸುವ ಕಾರಣ, ಈ ಮನೆತನದವರಿಗೆ ಭೀಮಪಯ್ಯನೇ ಮುಖ್ಯ. ಪಂಪ ಅಮುಖ್ಯ. ಹೀಗಾಗಿ ಅಣ್ಣಿಗೇರೆ ಮನೆತನ ಪಂಪ ಎಂಬ ಹೆಸರನ್ನು ಉಳಿಸಿಕೊಂಡು ಬರದೆ, ತಮಗರಿಯದಂತೆ ಮೂಲ ಪುರುಷ ಭೀಮಪ್ಪಯ್ಯ ಹೆಸರನ್ನು ರಕ್ಷಿಸಿಕೊಂಡು ಬಂದಿದೆ'.[೩೦] ಬಹುಮುಖ್ಯವಾಗಿ ಚಂದಪ್ಪಯ್ಯ ಈ ಹೆಸರನ್ನು ಇಡಲು ಪ್ರೇರಕ. ಯಾಕೆಂದರೆ ಬಹುದಿನ ಗಂಡು

ಸಂತಾನ ಕಾಣದ ಇವನು ಒಂದರ ಮೇಲೊಂದರಂತೆ ಮೂರು ಮದುವೆಯಾದ. ಮೂರನೆಯ ಹೆಂಡತಿಯಲ್ಲಿ ಗಂಡುಮಗು ಜನಿಸಿದಾಗ ಮತ್ತೆ ನಮ್ಮ ಮನೆತನದ ವಂಶ ಮುಂದುವರೆಯಿತು ಎಂಬ ಸಂತೋಷದಿಂದ ವಂಶದ ಮೂಲ ಪ್ರವರ್ತಕನಾದ ಭೀಮಪ್ಪಯ್ಯನ ಹೆಸರನ್ನು ಮಗುವಿಗೆ ನಾಮಕರಣ ಮಾಡಿ ಮೂಲ ಭೀಮಪ್ಪಯ್ಯನ ಹೆಸರನ್ನು ಪುನರ್ಜೀವಿಸಿದ. ಈ ಹೆಸರೆ ಮುಂದಿನ ತಲೆಮಾರಿಗೆ ಬಳುವಳಿಯಾಯ್ತು.

ಜನಪದರಲ್ಲಿ ಹಿರಿಯರಿಗೆ ಗೌರವ ಸಲ್ಲಿಸುವ ಸಲುವಾಗಿ ಅವರ ಹೆಸರನ್ನು ಮಕ್ಕಳಿಗೆ ಇಡುವುದು ರೂಢಿ. ಅದು ಅಜ್ಜ, ಮುತ್ತಜ್ಜನ ಹೆಸರೋ, ಮೂಲ ಪುರಷನ ಹೆಸರೋ ಇಡುವುದು ವಾಡಿಕೆ. ಉತ್ತರ ಕರ್ನಾಟಕದಲ್ಲಿ ಇನ್ನೂ ಈ ಸಂಪ್ರದಾಯ ಚಾಲ್ತಿಯಲ್ಲಿದೆ. ಅಜ್ಜನ ಹೆಸರನ್ನು ಮೊಮ್ಮಕ್ಕಳಿಗೆ ಇಟ್ಟು ಆ ಹೆಸರನ್ನು ನೇರವಾಗಿ ಕರೆದರೆ ಅಗೌರವ ತೋರಿದಂತಾಗುತ್ತದೆ ಎಂದು ಆ ಮಗುವಿಗೆ ಪ್ರೀತಿಯ ಮತ್ತೊಂದು ಹೆಸರಿನಿಂದ ಸಂಬೋಧಿಸುತ್ತಾರೆ. ಉದಾ: ಮುದುಕ, ಮುತ್ಯಾ, ಗೌಡ್ಯಾ, ಅಪ್ಯಾ, ಬಾಳಾ ಇತರೆ. ಆದ್ದರಿಂದ ವಾಡೆಯ ವಂಶಸ್ಥರು ಭೀಮಪ್ಪಯ್ಯನ ಹೆಸರನ್ನು ಮುಂದುವರಿಸಿಕೊಂಡು ಬಂದಿದ್ದಾರೆ. ಹದಿನಾರನೆಯ ತಲೆಮಾರಿನ ಭೀಮಪ್ಪಯ್ಯನಿಗೆ 'ಬಾಳಾ' ಎನ್ನುವ ಪ್ರೀತಿಯ ಇನ್ನೊಂದು ಹೆಸರಿನಿಂದ ಕರೆಯುತ್ತಿದ್ದುದು ಮೂಲ ಪುರುಷ ಭೀಮಪ್ಪಯ್ಯನಿಗೆ ತೋರಿದ ಗೌರವದ ಸಂಕೇತ.

ಮೇಲಿನ ಚರ್ಚಿತದಲ್ಲಿ ಪಂಪನ ತಂದೆ ತಾಯಿ ಊರು ಅಣ್ಣಿಗೇರಿ ಎಂಬುದು ವಿಧಿತವಾಗುತ್ತದೆ. "ಬೆಳ್ವಲದಣ್ಣಿಗೆರ್ವಿಯೆ ಜೋಯಿಸ ಸಿಂಘಣ ಮರ್ಮ್ಮಳ್ ಅಬ್ಬಣಬ್ಬೆಯ ಮಗಂ ಜಿನವಲ್ಲಭನ್"[೩೧] ಎಂಬ ಆಂಧ್ರದ ಜಿನವಲ್ಲಭನ ಕುರಿಕ್ಯಾಲ ಶಾಸನ ಸಾಲುಗಳು ಪಂಪನೂ ಸಹ ಅಣ್ಣಿಗೇರೆಯ ಜೋಯಿಸ ಸಿಂಘಣ ಮೊಮ್ಮಗಳಾದ ಅಬ್ಬಣಬ್ಬೆಯ ಮಗನಾಗಿದ್ದ. ಪಂಪ ಜಿನವಲ್ಲಭ ಅಣ್ಣ-ತಮ್ಮ. ಪಂಪನ ತಾಯಿ ತವರು ಮನೆ ಅಣ್ಣಿಗೇರೆ ಎಂಬುದು ಶಾಸನ ಸಾಲುಗಳಿಂದ ಸ್ಪಷ್ಟವಾಗಿದೆ. ಆದರೆ ತಂದೆಯ ಮನೆ ಅಣ್ಣಿಗೇರೆ ಎಂಬುದಕ್ಕೆ ದೇಶಪಾಂಡೆ ವಾಡೆಯ ವಂಶಾವಳಿಯ ಆಧಾರಗಳನ್ನು ಬಿಟ್ಟು ಸ್ಪಷ್ಟವಾದ ಆಧಾರಗಳಿಲ್ಲ. ಆದರೂ ಪಂಪನ ಕಾವ್ಯ ಭಾಷೆ, ಅವನಿಗೆ ದೊರೆತ ರಾಜಗೌರವ, ಬಹುಮಾನದ ಶ್ರೀಮಂತಿಕೆಯಿಂದ ಅವನು ಅಣ್ಣಿಗೇರೆಯವನೆ ಎಂದು ಖಚಿತಪಡಿಸಬಹುದು.

ಪಂಪನ ತನ್ನ ಕಾವ್ಯದ ಭಾಷೆ ಯಾವುದೆಂಬುದಕ್ಕೆ ಅವನೇ ಹೇಳಿಕೊಂಡಂತೆ ಪುಲಿಗೆರೆಯ ತಿರುಳುಕನ್ನಡ ಎಂಬುದು ಉತ್ತರವಾಗಿದೆ.

ರಾಜದ್ರಾಜಕಮೆನಿಸಿದ
ಸಾಜದ ಪುಲಿಗೆಯೆಯ ತಿರುಳ ಕನ್ನಡದೊಳ್ ನಿ
ರ್ವ್ಯಾಜದೆಸಕದೊಳೆ ಪುದಿದೊಂ
ದೋಜೆಯ ಬಲದಿನಿಯ ಕವಿತೆ ಪಂಪನ ಕವಿತೇ॥[೩೨]

ಪಂಪನ ಕವಿತೆ ರಾಜಮನ್ನಣೆಗಳಿಸಿದ ಪುಲಿಗೆರೆಯ ತಿರುಳಕನ್ನಡದಲ್ಲಿ ರಚನೆಯಾಗಿವೆ. ಪುಲಿಗೆರೆ ಕನ್ನಡ ಒಂದು ಪ್ರಾಂತೀಯವಾಗಿ ಮಾತನಾಡುವ ಶೈಲಿ. ಈಗಿನ ಮೈಸೂರು ಕನ್ನಡ, ಧಾರವಾಡ ಕನ್ನಡ, ಮಂಗಳೂರು ಕನ್ನಡ ಇದ್ದಂತೆ. ಒಬ್ಬ ವ್ಯಕ್ತಿ ಒಂದು ಪ್ರಾಂತೀಯ ಭಾಷೆಯನ್ನು ಬಹುವಾಗಿ ತನ್ನ ಕಾವ್ಯದಲ್ಲಿ ಬಳಸಿಕೊಳ್ಳುತ್ತಾನೆ ಎಂದರೆ ಆ ಭಾಷೆಯ ಪ್ರಾವೀಣ್ಯತೆ ಮತ್ತು ಪ್ರಬುದ್ಧತೆ ಬೇಕು. ಅಲ್ಲದೆ ಅವನು ಪ್ರಾಂತೀಯ ಭಾಷೆಯ ಪ್ರದೇಶದಲ್ಲಿ ಬಹುಕಾಲ ಒಡನಾಡಿರಬೇಕು. ಹಾಗೆ ಬಹುಕಾಲದ ಒಡನಾಡಿದ ವ್ಯಕ್ತಿ ಆ ಭಾಷೆಯ ನಾಡಿಮಿಡಿತವನ್ನು ಅರಿಯಲು ಸಾಧ್ಯ. ಪಂಪ ಪುಲಿಗೆರೆ ಕನ್ನಡವನ್ನು ಸಮರ್ಥವಾಗಿ ಬಳಸಿರುವುದರಿಂದ ಅವನು ಸಾಕಷ್ಟು ಕಾಲ ಈ ಪರಿಸರದಲ್ಲಿ ಇದ್ದಿರಲೇಬೇಕು. ಕೇವಲ ಬಾಲ್ಯಮಾತ್ರವನ್ನು ತನ್ನ ತಾಯಿ ತವರುಮನೆಯಲ್ಲಿ ಕಳೆದ ಮಾತ್ರಕ್ಕೆ ಅಲ್ಲಿಯ ಜನಭಾಷೆಯ ಪ್ರಬುದ್ಧತೆ ಗಳಿಸಲು ಸಾಧ್ಯವೇ ಇಲ್ಲ. ಆದ್ದರಿಂದ ಪಂಪ ಅಣ್ಣಿಗೇರೆಯವನೆ ಅವನ ತಂದೆ ಊರು ಅಣ್ಣಿಗೇರೆಯೇ ಆಗಿದೆ. ಪಂಪನ ಪೂರ್ವಿಕರು ಆಂಧ್ರದ ವೆಂಗಿಪಳುವಿನದವರಾದರೂ ಅವರು ಮೂಲ ಅಣ್ಣಿಗೇರೆಯವರೆ. "ಆಂಧ್ರದ ವೆಂಗಿಮಂಡಲವನ್ನು ಕ್ರಿ.ಶ. ೬೩೪-೩೫ರಲ್ಲಿ ಗೆದ್ದ ಇಮ್ಮಡಿ ಪುಲಕೇಶಿಯು ಆ ಪ್ರದೇಶವನ್ನಾಳಲು ತನ್ನ ತಮ್ಮ ಕುಬ್ಜ ವಿಷ್ಣುವರ್ಧನನನ್ನು ನೇಮಿಸಿದ. ಅವನ ವಂಶವೇ ಪೂರ್ವ ಅಥವಾ ವೆಂಗಿ ಚಾಳುಕ್ಯರು ಅಣ್ಣಿಗೇರೆ ಪ್ರದೇಶದಿಂದ ಕರೆಯಿಸಿಕೊಂಡ ಬ್ರಾಹ್ಮಣ ಕುಟುಂಬ ಮಾಧವ ಸೋಮಯಾಜಿಯದು. ಮುಂದೆ ಯಾವಾಗಲೋ ಆ ವಂಶಸ್ಥರ ಕುಟುಂಬವು ಕರ್ನಾಟಕಕ್ಕೆ, ಎಂದರೆ ಸ್ವಂತ ಊರು ಅಣ್ಣಿಗೇರೆಗೆ ಬಂದು ನೆಲೆಸಿತು. ಪಂಪನ ವಂಶಸ್ಥರು ಅಗ್ರಹಾರಗಳಿಗೆ ಒಡೆಯರಾಗಿದ್ದರಿಂಗ ಸಹಜವಾಗಿಯೇ ಶ್ರೀಮಂತರಾಗಿದ್ದರು. ಭೀಮಪ್ಪಯ್ಯನೂ ಒಬ್ಬ ಶ್ರೀಮಂತ ಬ್ರಾಹ್ಮಣ: ಅವನಿಗೆ ಅದೇ ಅಣ್ಣಿಗೇರೆಯ (ಶ್ರೀಮಂತ) ಜೋಯಿಸ ಸಿಂಘಣ ಮೊಮ್ಮಗಳಾದ ಅಬ್ಬಣಬ್ಬೆಯ ಜೊತೆ ವಿವಾಹ ಸಂಬಂಧ ಏರ್ಪಟ್ಟಿತು. ಅವರಿಗೆ ಕ್ರಿ.ಶ. ೯೦೨ರಲ್ಲಿ ಪಂಪ ಮೊದಲನೆಯ ಮಗನಾಗಿ ಜನಿಸಿದ"[೩೩] ಅಂತೆಯೇ ಅವನು ಅಣ್ಣಿಗೇರೆಯಲ್ಲಿಯೇ ಬೆಳೆದು ದೊಡ್ಡವನಾದ.

ಪಂಪ ಒಬ್ಬ ಪಾಂಡಿತ್ಯಪೂರ್ಣ ಕವಿ. ಅವನು ತನ್ನ ಆದಿಪುರಾಣವನ್ನು ತನ್ನ ಸ್ವಂತ ಊರಾದ ಅಣ್ಣಿಗೇರೆಯಲ್ಲಿಯೇ ಬರೆದು ಮುಗಿಸಿದಂತೆ ಕಾಣುತ್ತದೆ. ಇವನ ಪಾಂಡಿತ್ಯ ಮೆಚ್ಚಿಕೊಂಡ ಚಾಳುಕ್ಯ ಚಕ್ರವರ್ತಿ ಅರಿಕೆಸರಿಯು ತನ್ನ ಆಸ್ಥಾನಕ್ಕೆ ಕರೆಯಿಸಿಕೊಂಡ. ಅಲ್ಲದೆ ಅವನಿಗೆ ಕವಿತಾಗುಣಾರ್ಣವ ಎಂಬ ಬಿರುದುಕೊಟ್ಟು, ಈಗ ಬೊಮ್ಮಲಗುಟ್ಟ ಎಂದು ಕರೆಯಲ್ಪಡುವ ಬೆಟ್ಟದ ಪಕ್ಕ ಇರುವ ಧರ್ಮಪುರ ಎಂಬ ಅಗ್ರಹಾರವನ್ನು ದತ್ತಿ ಇತ್ತ.

> ದೆಸೆ ಮುಖಧೂಮದಿಂ ದ್ವಿಜರ ಹೋಮದಿನೊಳ್ಗೇಯೆ ಹಂಸ ಕೋಕ ಸಾ
> ರಸ ಕಳನಾದದಿಂಬೊಳಗೆ ವೇದ ನೀನಾದದಿನೆತ್ತಮೆಯ್ದೆ ಶೋ
> ಭಿಸೆ ಸುರುಮಥ್ಯಮಾನ ವನಧಿಕ್ಷು ಭಿತಾರ್ಣವ ಘೋಷದಂತೆ ಘೂ
> ರ್ಣಿಸುತಿರಲೀ ಗುಣಾರ್ಣವನ ಧರ್ಮದ ಧರ್ಮಪುರಂ ಮನೋಹರಂ॥[೩೪]

ಪಂಪನ ನೆಲೆ ಅಣ್ಣಿಗೇರೆಯಾದರೂ ರಾಜಮನ್ನಣೆಗೆ ಬೆಲೆಕೊಟ್ಟು ವೆಂಗಿಮಂಡಲಕ್ಕೆ ವಲಸೆಹೋದಂತೆ ಕಂಡುಬರುತ್ತದೆ. ಆದರೆ ಅವನ ವಂಶಸ್ಥರು ಅಣ್ಣಿಗೇರೆಯಲ್ಲಿ ಇದ್ದಂತೆ ಕಾಣುತ್ತದೆ. ಮೇಲಾಗಿ ಪಂಪ ಮತ್ತು ಅವನ ತಮ್ಮ ಜಿನವಲ್ಲಭ ಮರಳಿ ಅಣ್ಣಿಗೇರೆಗೆ ಬಂದ ಸಾಧ್ಯತೆಗಳೂ ಹೆಚ್ಚಿವೆ. ಅಣ್ಣಿಗೇರೆ ದೇಶಪಾಂಡೆ ವಾಡೆಯ ವಂಶಾವಳಿಯ ಮೊದಲ ವ್ಯಕ್ತಿ ನಾಗರಸ್ಯಯ್ಯನಿಗೂ ಮೊದಲ ವ್ಯಕ್ತಿಗಳೂ, ಮತ್ತು ಪಂಪನ ನಂತರದ ವ್ಯಕ್ತಿಗಳ ಕೊಂಡಿ ಕಳಚಿಹೋಗಿದೆ. ಈ ಕುರಿತಾಗಿ ಯಾವ ಆಧಾರಗಳು ಲಭ್ಯವಾಗಿಲ್ಲ. ಪಂಪನಿಗೆ ಮತ್ತು ಅವರ ಮನೆತನದ ಮೂಲ ಸಂಪತ್ತಿನಿಂದ ಅವರು ಸಿರಿವಂತರಾಗಿಯೇ ಇದ್ದರು. ಅಂತೆಯೇ ಅಣ್ಣಿಗೇರೆಯಲ್ಲಿ ಭವ್ಯ ಮನೆಯನ್ನು ಕಟ್ಟಿಸಿದ್ದರು. ಅದು ಮಾರ್ಪಾಡಾಗುತ್ತ ಬಂದು ಆದಿಲ್‌ಷಾಹಿ ಕಾಲದಲ್ಲಿ ವಾಡೆಯಾಗಿ ಇನ್ನೂ ಹಾಗೆ ಉಳಿದು ಬಂದಿದೆ.

ಸನ್ ಸಾವಿರದ ೧೮೪೪ರಲ್ಲಿ ಅಣ್ಣಿಗೇರೆ ದೇಶಪಾಂಡೆ ವಾಡೆಯ ಒಂಭತ್ತನೆಯ ತಲೆಮಾರಿನ ಚಂದಪ್ಪಯ್ಯನ ಹೆಂಡತಿ ಆನಂದಿಬಾಯಿಯವರು ಪೂನಾದ ಪತ್ರಾಗಾರ ಇಲಾಖೆಯಿಂದ ತೆಗೆಯಿಸಿದ ವಂಶಾವಳಿ ದಾಖಲೆಯಿಂದ 'ನಾಗರಸಯ್ಯ' ಎಂಬುವನು ಅಣ್ಣಿಗೇರೆ ದೇಶಪಾಂಡೆ ವಾಡೆಯ ಮೂಲ ಪುರುಷ. ಡಾ. ಅಪ್ಪಣ್ಣ ಹಂಜೆಯವರು 'ಧರ್ಮರಸ್ಯಯ್ಯ' ಎಂಬಾತನು ಕಂದಾಯ ದಾಖಲೆಗಳು ಮತ್ತು ಹೆಳವರ ದಾಖಲೆಗಳ ಪ್ರಕಾರ ಅಣ್ಣಿಗೇರೆ ದೇಶಪಾಂಡೆ ವಾಡೆಯ ಮೊದಲ ವ್ಯಕ್ತಿಯಾಗುತ್ತಾನೆ ಮತ್ತು ಇವನು ಪಂಪನ ತಮ್ಮ ಜಿನವಲ್ಲಭನ ಮೊಮ್ಮಗ ಅಥವಾ ಮರಿಮೊಮ್ಮಗ ಎನ್ನುತ್ತಾರೆ.[೨೫] ನನಗೆ ದೊರೆತ ದಾಖಲೆಯ ಪ್ರಕಾರ ಧರ್ಮರಸಯ್ಯನ ಹಿಂದೆ ರಾಮರಸಯ್ಯ, ನಾಗರಸಯ್ಯ ಎಂಬ ವ್ಯಕ್ತಿಗಳಿದ್ದರು. ಮೂಲ ಪುರುಷ ನಾಗರಸಯ್ಯ ಜಿನವಲ್ಲಭನ ಮಗನೇ, ಮೊಮ್ಮಗನೆ, ಮರಿಮೊಮ್ಮಗನೇ ಎಂಬುದಕ್ಕೆ ಆಧಾರಗಳು ಲಭ್ಯವಿಲ್ಲ.

ನಾಗರಸಯ್ಯನ ಕಾಲದ ಉಲ್ಲೇಖ ದೊರೆಯುವುದಿಲ್ಲ. ಇವನಿಗೆ ರಾಮರಸ್ಯ ಎಂಬ ಮಗನಿದ್ದ. ಈ ರಾಮರಸಯ್ಯನಿಗೆ ಧರ್ಮರಸ್ಯ ಎಂಬ ಮಗನು ಇವನಲ್ಲಿ ರಾಮರಸಯ್ಯ ಮತ್ತು ಚಾಮರಸ್ಯ ಎಂಬ ಎರಡು ಮಕ್ಕಳು ಹಿರಿಯವನಾದ ರಾಮರಸಯ್ಯ ವಾಡೆಯ ಅಧಿಕಾರಿಯಾದ. ಈ ಅಧಿಕಾರ ಹಿರಿಯ ಮಕ್ಕಳಿಗೆ ಸೀಮಿತವಾಗಿದ್ದರಿಂದ ಸಹಜವಾಗಿಯೇ ರಾಮರಸಯ್ಯನಿಗೆ ವಾಡೆಯ ಅಧಿಕಾರ ಒಲಿದು ಬಂತು. ಈ ರಾಮರಸಯ್ಯನ ನಂತರ ವಾಡೆ ಅಧಿಕಾರ ಅವನ ಮಗನಾದ ಚಂದಪ್ಪಯ್ಯ, ಇವನ ಮಗನಾದ ನಾಗಪ್ಪಯ್ಯನಿಗೆ ಒಲಿದುಬಂತು.

ನಾಗಪ್ಪಯ್ಯನಿಗೆ ಹಿರೇನಾಗಪ್ಪಯ್ಯ ಎಂಬ ಹೆಸರೂ ಇತ್ತು: ಇವನು ಅನ್ಯಧರ್ಮ ಸಹಿಷ್ಣು ಆಗಿದ್ದನು. ತನ್ನ ವಂಶ ಅಭಿವೃದ್ಧಿ ಆಗಲೆಂದು ಕ್ರಿ.ಶ. ೧೭೧೬ರಲ್ಲಿ ಗದುಗಿನ ತೋಂಟದಾರ್ಯ ಮಠದ ಆಗಿನ ರಾಜೇಶ್ರೀ ಸ್ವಾಮಿಗಳಿಗೆ ಕೊಂಡಿಕೊಪ್ಪದ ಸೀಮೆಯಲ್ಲಿ ಕ್ಲರ್ಸ್ಟಭೂಮಿ, ಮೂವತ್ತಾರ ಭಿಗೆ (೧ ಭಿಗೆಕ್ಕೆ ೨೦ ಚದುರ)ದ ಹುಲ್ಲುಪಾರು ೧ ಮಾರು ಕಾಳು ಭೂಮಿಯನ್ನು ಧಾರಾಪೂರ್ವಕವಾಗಿ ದೇಶಕುಲಕರಣೀಯಾದ ನಾಗಪ್ಪಯ್ಯ ಕೊಟ್ಟನು.[೨೬] ಈ ದಾನಪಾತ್ರನಲ್ಲಿ ಜೈನನಾದ ನಾಗಪ್ಪಯ್ಯ ಜಿನನನ್ನು ಸ್ತುತಿಸದೆ 'ನಮೋಸ್ತುಂಗ ಶಿರಃಶ್ಚುಂಬಿ ಚಂದ್ರಚಾಮರ ಚಾರವೆ

। ತ್ರಯಲೋಕ್ಯನಗರಾರಂಭ ಮೂಲಸ್ತಂಭಾಯ ಶಂಭವೆ । ಎಂಬ ಶಿವಸ್ತುತಿಯನ್ನು, ಶ್ರೀ ಗಣೇಶಾಯ ನಮ: ಎಂಬ ಗಣೇಶ ಸ್ತುತಿಯನ್ನು ಸ್ಮರಿಸಿದ್ದಾನೆ. ಇದು ನಾಗಪ್ಪಯ್ಯನಿಗಿರುವ ಪರಧರ್ಮ ಸಹಿಷ್ಣುತಾ ಮನೋಭಾವವೇ ಸರಿ.

ದೇಶಕುಲಕರಣಿ ಹಿರೇನಾಗಪ್ಪಯ ಅಥವಾ ನಾಗಪ್ಪಯ್ಯನಿಗೆ ರಾಮರಸಯ್ಯ ಎಂಬ ಪುತ್ರ ಇದ್ದ. ಇವನನ್ನು ಡಾ. ಅಪ್ಪಣ ಹಂಜೆಯವರು ಬಾಳಪ್ಪಯ್ಯ ಎಂದು ಕರೆದಿದ್ದಾರೆ.[೩೭] ಈ ಬಾಳಪ್ಪಯ್ಯ ನಾಗಪ್ಪಯ್ಯನ ಮೊಮ್ಮಗ, ರಾಮರಸಯ್ಯನ ಪುತ್ರ. ಬಾಳಪ್ಪಯ್ಯ ದೇಶಕುಲಕರಣಿಯು ವಾಡೆಯ ಎಂಟನೆಯ ತಲೆಮಾರಿನ ವ್ಯಕ್ತಿ. ಇವನಿಗೆ ಚಂದಪ್ಪಯ್ಯ ಎಂಬ ಮಗನು ಬಾಳಪ್ಪಯ್ಯ ಎಂಬ ಮೊಮ್ಮಗನು ಇದ್ದರು. ಬಾಳಪ್ಪಯ್ಯನಿಗೆ ಸಂತಾನ ಇರದ ಕಾರಣ ಇವನು ಶೂಗಪ್ಪ ಎಂಬ ವ್ಯಕ್ತಿಯನ್ನು ದತ್ತು ತೆಗೆದುಕೊಂಡ ಇವನಿಗೆ ನಾರಪ್ಪಯ್ಯ ಎಂಬ ಇನ್ನೊಂದು ಹೆಸರೂ ಇತ್ತು.

ಶೂಗಪ್ಪ ಪೇಶ್ವೆ ಮತ್ತು ಬ್ರಿಟಿಷರ ಆಳ್ವಿಕೆಯ ಕಾಲದಲ್ಲಿ ಅಣ್ಣಿಗೇರೆ ಸೀಮೆಯ ದೇಶಕುಲಕರಣಿಯಾಗಿ ಕಾರ್ಯನಿರ್ವಹಿಸುತ್ತಿದ್ದನು. ಕೊಲ್ಲಾಪುರ ಸ್ವಸ್ತಿಶ್ರೀ ಲಕ್ಷ್ಮಿಸೇನ ಭಟ್ಟಾರಕ ಪಟ್ಟಾಚಾರ್ಯ ಮಹಾಸ್ವಾಮೀಜಿಯವರ ಪರಮ ಶಿಷ್ಯನಾಗಿದ್ದನು. ಅವರ ಸ್ಫೂರ್ತಿ-ಪ್ರೇರಣೆಯಿಂದ ವಿವಿಧ ಧಾರ್ಮಿಕ ಮತ್ತು ಸಾಮಾಜಿಕ ಚಟುವಟಿಕೆಗಳನ್ನು ಕೈಗೊಂಡಿದ್ದಾನೆ. ಕ್ರಿ.ಶ. ೧೮೪೩ರಲ್ಲಿ ಗದುಗಿನ ತೋಂಟದಾರ್ಯ ಮಠಕ್ಕೆ ಭೂದಾನ ಮಾಡಿದ್ದಾನೆ. ಕ್ರಿ.ಶ. ೧೮೪೫ರಲ್ಲಿ ಅಣ್ಣಿಗೇರೆಯ ಶಾಂತಿನಾಥ ಬಸದಿಯನ್ನು ಜೀರ್ಣೋದ್ಧಾರ ಮಾಡಿಸಿದ್ದಾನೆ.

೧ ॥ ಶ್ರೀಮತ್ಪರಮಗಂಭಿರ ಶ್ಯಾದ್ವಾದಮೋಘಲಾಂಛನಂ ಜಿಯಾ
೨ ॥ ತ್ರೈಲೋಕ್ಯನಾಥಸ್ಯ ಶಾಸನಂ ಜಿನಶಾಸನಂ ॥ ಸ್ವಸ್ತಿಶ್ರೀ ನ್ರ
೩ ॥ ಪ ಶಾಲಿವಾಹನ ಶಕೆ ೧೭೬೭ ॥ ೨ ಶ್ವಾ .. ನಂ ॥ ದಲ್ಲಿ ಅಂನ
೪ ॥ ಗಿರಿಪುರದ ಶ್ರೀ ಶಾಂತಿನಾಥ ಸ್ವಾಮಿ ಚೈತ್ಯಾಲಯ
೫ ॥ ದ ದೆಶಕುಲಕರ್ಣಿಗಳಾದ ನನಾಡಕರ್ಣಿ ಶೂಗಪ್ಪನವರು ಜೀರ್ಣೋ
೬ ॥ ದ್ಧಾರ ಮಾಡಿಶಿದರು[೩೮]

ಶೂಗಪ್ಪನವರು ಮಹಾಧರ್ಮಿಷ್ಠ ಮತ್ತು ಜನಾನುರಾಗಿಯಾಗಿದ್ದರು ಎಂದು ಬಸದಿಯ ಪಂಡಿತರಾದ ಸಾತಪ್ಪ ಬಸ್ತಿಯವರು ಹೇಳುತ್ತಾರೆ.[೩೯] ಶೂಗಪ್ಪನವರಿಗೆ ಬಾಳಪ್ಪಯ್ಯ ಮತ್ತು ಚಂದಪ್ಪಯ್ಯ ಎಂಬಿಬ್ಬರು ಮಕ್ಕಳು. ಬಾಳಪ್ಪಯ್ಯನಿಗೆ ನಾರಪ್ಪಯ್ಯ ಎಂಬ ಮಗನಿದ್ದ. ಚಂದಪ್ಪಯ್ಯನಿಗೆ ಭೀಮಪ್ಪಯ್ಯ ಎಂಬ ಮಗನಿದ್ದ ನಾರಪ್ಪಯ್ಯನಿಗೆ ಮಕ್ಕಳಿರಲಿಲ್ಲ ಇವನ ಅಕಾಲಿಕ ಮರಣದಿಂದ ಭೀಮಪ್ಪಯ್ಯ ಅಧಿಕಾರಕ್ಕೆ ಬಂದ.

ಭೀಮಪ್ಪಯ್ಯ ಚಂದಪ್ಪಯ್ಯನವರ ಮೂರನೆಯ ಹೆಂಡತಿಯ ಮಗ. ಪುತ್ರನ ಜನನಕ್ಕಾಗಿ ಚಂದಪ್ಪಯ್ಯ ಭಾಗುಬಾಯಿ, ಪದ್ಮಾಬಾಯಿ, ರಂಗೂಬಾಯಿಯವರನ್ನು ಮದುವೆಯಾಗಿದ್ದರು. ಭಾಗುಬಾಯಿಯಲ್ಲಿ ಚಲ್ಲುಬಾಯಿ, ಪದ್ಮಾಬಾಯಿಯಲ್ಲಿ ಲಕ್ಷ್ಮೀಬಾಯಿ ಎಂಬ ಹೆಣ್ಣು ಮಕ್ಕಳನ್ನು

ಪಡೆದ ಚಂದಪ್ಪಯ್ಯ ರಂಗೂಬಾಯಿಯವರಲ್ಲಿ ಭೀಮಪ್ಪಯ್ಯನನ್ನು ಪಡೆದರು. ಭೀಮಪ್ಪಯ್ಯ ಈ ವಂಶದ ೧೫ನೆಯ ದೇಶಕುಲಕರ್ಣಿಯಾಗಿದ್ದ.

ಭೀಮಪ್ಪಯ್ಯ ಮೃದು ಸ್ವಭಾವದ ಸಂಯಮಿ. ಜಿನಭಕ್ತ, ಜಿನಾಚಾರದಂತೆ ಚತುರ್ವಿಧ ದಾನಗಳಾದ ಆಹಾರ, ಅಭಯ, ಔಷಧ, ಶಾಸ್ತ್ರ ದಾನಾದಿಗಳನ್ನು ಮಾಡುವುದು ಒಂದು ಕಾಯಕದಂತೆ ಮಾಡುತ್ತಿದ್ದರು. ಇಲ್ಲಿರುವ ಶಾಂತಿನಾಥ ಬಸದಿಗೆ ಅಲಿಖಿತ ಧಾನಧರ್ಮಗಳನ್ನು ಬಿಟ್ಟಿದ್ದಾರೆ. ಅಲ್ಲದೇ ಕಾಲಕಾಲಕ್ಕೆ ಬಸದಿಯನ್ನು ಜೀರ್ಣೋದ್ಧಾರಗೊಳಿಸುತ್ತ ಅಲ್ಲಿ ನಡೆಯುವ ಪೂಜಾ ಕೈಕುಂಕುರ್ಯ್ಯಗಳಲ್ಲಿ ಪಾಲ್ಗೊಳ್ಳುತ್ತಿದ್ದರು. ರೈತರಿಂದ ಬರುವ ಕಂದಾಯವನ್ನು ಪ್ರಾಮಾಣಿಕವಾಗಿ ಮೇಲಾಧಿಕಾರಿಗಳಿಗೆ ಸಲ್ಲಿಸುತ್ತಿದ್ದರು. ಬಡರೈತರ ಕಂದಾಯವನ್ನು ಮತ್ತು ಬೆಳೆಹಾನಿ ಕಂಡು ರೈತರ ಕಂದಾಯವನ್ನು ತಾವೇ ಭರಿಸುತ್ತಿದ್ದರಂತೆ ಎಂದು ವಾಡೆಯ ಈಗಿನ ಹಿರಿಯರಾದ ಸುನಂದಾಬಾಯಿಯವರು ಹೇಳುತ್ತಾರೆ. ಸದ್ಯ ಬಸದಿಯಲ್ಲಿರುವ ಸಿದ್ಧಚಕ್ರವನ್ನು ನೋಂಪಿ ನಿಮಿತ್ತವಾಗಿ ಭೀಮಪ್ಪಯ್ಯನವರೇ ಮಾಡಿಸಿಕೊಟ್ಟಿರಬಹುದು. ಸಾಮಾನ್ಯವಾಗಿ ಸಿದ್ಧಚಕ್ರವನ್ನು ವಂಶ ಅಭಿವೃದ್ಧಿಯಾಗಲೆಂದು ಮಾಡಿಸಲಾಗುತ್ತೆ. ಆದರೂ ಭೀಮಪ್ಪಯ್ಯನವರಿಗೆ ಮಕ್ಕಳಾಗಲಿಲ್ಲ.

ಭೀಮಪ್ಪಯ್ಯನವರಿಗೆ ಸುಂದ್ರಾಬಾಯಿ, ಚಂದ್ರಾಬಾಯಿ, ಪುಷ್ಪಾವತಿ ಎಂಬ ಮೂರು ಜನ ಹೆಂಡತಿಯರು. ಇವರಲ್ಲಿ ಸುಂದ್ರಾಬಾಯಿಯವರು ಕೊಲ್ಲಾಪುರದ ಹಾತಕಣಗಲಾ ತಾಲ್ಲೂಕಿನ ಪೇಠವಡಗಾವದವರು, ಚಂದ್ರಾಬಾಯಿ ಚಿಕ್ಕೋಡಿಯವರು ಇವರಿಬ್ಬರಲ್ಲೂ ಮಕ್ಕಳನ್ನು ಕಾಣದ ಭೀಮಪ್ಪಯ್ಯನವರು ಕೊಲ್ಲಾಪುರದ ಹಾತಕಣಗಲಾ ತಾಲೂಕಿನ ರಂಗೋಳಿಯ ಪುಷ್ಪಾವತಿ ಬಾಯಿಯವರನ್ನು ೧೯೨೩ರಲ್ಲಿ ಮದುವೆಯಾದರು. ಆಗ ಪುಷ್ಪಾವತಿಯಬಾಯಿಯವರಿಗೆ ೨೨ವರ್ಷ ಇವರಲ್ಲಿಯೂ ಮಕ್ಕಳನ್ನು ಭೀಮಪ್ಪಯ್ಯ ಕಾಣದಾದರು.

ಭೀಮಪ್ಪಯ್ಯನವರ ಮೂರನೆಯ ಹೆಂಡತಿ ಪುಷ್ಪಾವತಿಬಾಯಿಯವರು ಮಕ್ಕಳನ್ನು ಕಾಣದೇ ಹೋದರೂ ಧಾರ್ಮಿಕ ಕೆಲಸಗಳಲ್ಲಿ ಹಿಂದಿರಲಿಲ್ಲ. ಅಣ್ಣಿಗೇರೆಯ ಶಾಂತಿನಾಥ ಬಸದಿಯಲ್ಲಿದ್ದ ಭಿನ್ನ ಮೂರ್ತಿಯ ಬದಲಾಗಿ ಅದೇ ಆವರಣದಲ್ಲಿ ೧೯೪೧ರಲ್ಲಿ ದೊರೆತ ಭವ್ಯ ಪಾರ್ಶ್ವನಾಥ ಮೂರ್ತಿಯನ್ನು ಪಂಚಕಲ್ಯಾಣ ಪೂರ್ವಕವಾಗಿ ಪ್ರತಿಷ್ಠಾಪಿಸಿದರು. ಈ ಕುರಿತಾದ ಶಾಸನವೂ ಬಸದಿಯಲ್ಲಿದೆ.

೧. ಅಂಣೇಗೇರಿ ಶ್ರೀ ೧೦೦೮ ಶಾಂತಿನಾಥ ತೀರ್ಥ
೨. ಕರ ಚೈತ್ಯಾಲಯದಲ್ಲಿ ಶ್ರೀ ೧೦೦೮ ಶ್ರೀ ಪಾರ್ಶ್ವನಾಥ ತೀರ್ಥ
೩. ಂಕರ ಪ್ರಾಚೀನ ಜಿನಬಿಂಬವನ್ನು ಜೀರ್ಣೋದ್ಧಾರ ಮಾಡಿ ಕೊಲ್ಲಾ
೪. ಪೂರ ಶ್ರೀ ಲಕ್ಷ್ಮೀಸೇನ ಭಟ್ಟಾರಕ ಪಟ್ಟಾಚಾರ್ಯ ಸ್ವಾಮಿಯವರ
೫. ಹಸ್ತದಿಂದ ಶ್ರೀಮಂತ ಭೀಮಪ್ಪಯ್ಯ ದೇಶಪಾಂಡೆಯವರ
೬. ತ್ರತಿಯಾ ಧರ್ಮಪತ್ನಿಯಾದ ಶ್ರೀ ಪುಷ್ಪಾವತೀಬಾಯಿ ದೇ

೭. ಶಪಾಂಡೆ ಅಂಣೀಗೇರಿ ಇವರು ಶಕೆ ೧೮೬೭ನೇ ಪಾರ್ಥಿವನಾಮ
೮. ಸಂವತ್ಸರದ ಮಾರ್ಗಶಿರ ॥ ಶುದ್ಧ ॥ ದಶಮಿ ॥ ಶುಕ್ರವಾರ ದಿವಸ
೯. ಪಂಚಕಲ್ಯಾಣ ಪೂರ್ವಕ, ಪ್ರತಿಷ್ಠಾ ಮಾಡಿಸಿದರು.[೪೦]

ದಾನ-ದತ್ತಿ, ಜಿನಪೂಜ್ಯೋತ್ಸವ, ನೋಂಪಿ ವ್ರತಾಚರಣೆ, ಬಸದಿಗಳ ನಿರ್ಮಾಣ, ಜೀರ್ಣೋದ್ಧಾರ, ಪಂಚಕಲ್ಯಾಣ ಮಹೋತ್ಸವ, ಮಕ್ಕಳಿಗೆ ಧಾರ್ಮಿಕ ಜ್ಞಾನ ಮುಂತಾದ ಸಮಾಜ ಕಾರ್ಯಗಳಲ್ಲಿ ತೊಡಗಿಸಿಕೊಂಡ ಪುಷ್ಪಾವತಿಬಾಯಿಯವರು ಜನಪದರಲ್ಲಿ ಅಭಿನವ ದಾನಚಿಂತಾಮಣಿಯಾಗಿದ್ದಾರೆ. ಇವರ ಸಮಾಜೋ-ಧಾರ್ಮಿಕ ಚಟುವಟಿಕೆಗಳನ್ನು ಈ ರೀತಿ ಗುರುತಿಸಬಹುದು.

೧. ಅಣ್ಣಿಗೇರೆ ಶಾಂತಿನಾಥ ಬಸದಿಯ ಜೀರ್ಣೋದ್ಧಾರ (೧೯೪೫)
೨. ಅಣ್ಣಿಗೇರೆ ಶಾಂತಿನಾಥ ಬಸದಿಯ ಆವರಣದಲ್ಲಿ ದೊರೆತ ಪ್ರಾಚೀನ ಜಿನಬಿಂಬಗಳನ್ನು ವಜ್ರಲೇಪನ ಮಾಡಿಸಿ, ಅದರಲ್ಲಿ ಭವ್ಯವಾದ ಪಾರ್ಶ್ವನಾಥ ಮೂರ್ತಿಯನ್ನು ಶಾಂತಿನಾಥ ಬಸದಿಯಲ್ಲಿ ಸ್ಥಾಪಿಸಿ ಈ ಬಸದಿಗೆ ಪಾರ್ಶ್ವನಾಥ ಬಸದಿ ಎಂದು ನಾಮಕರಣ ಮಾಡಿ ಪಂಚಕಲ್ಯಾಣ ಉತ್ಸವ ಮಾಡಿಸಿದ್ದು.
೩. ಮಾನಕಾಪುರ (ಚಿಕ್ಕೋಡಿ ತಾ)ದಲ್ಲಿ ಬಸದಿ ನಿರ್ಮಾಣ ಮತ್ತು ಪಂಚಕಲ್ಯಾಣ ಮಹೋತ್ಸವ ನಡೆಸಿದ್ದು.
೪. ಅಣ್ಣಿಗೇರೆಯಲ್ಲಿ ಧಾರ್ಮಿಕ ಪಾಠಶಾಲೆ ಪ್ರಾರಂಭ.
೫. ಕುಂಭೋಜದಲ್ಲಿ ಮುನಿನಿವಾಸ ನಿರ್ಮಾಣ.
೬. ಹುಬ್ಬಳ್ಳಿ ಜೈನಬೋರ್ಡಿಂಗ್‌ನಲ್ಲಿ ವಿದ್ಯಾರ್ಥಿಗಳ ಅನುಕೂಲಕ್ಕಾಗಿ ಒಂದು ಕೋಣೆಯ ನಿರ್ಮಾಣ.
೭. ರಂಗೋಳಿಯಲ್ಲಿ ಬಸದಿ ನಿರ್ಮಿಸಿ ಪಂಚಕಲ್ಯಾಣ ಮಹೋತ್ಸವ ನಿರ್ವಹಣೆ.
೮. ಅಬ್ದುಲಲಾಟ ಎಂಬ ಊರಲ್ಲಿ ಸಾರ್ವಜನಿಕರ ಉಪಯೋಗಕ್ಕೆ ಕೆರೆ ನಿರ್ಮಾಣ.
೯. ಶಾಸನಗಳ ನಿರ್ಮಾಣ.
೧೦. ಮುನಿಗಳಿಗೆ ವಾಡೆಯಲ್ಲಿ ಆಹಾರ ದಾನ.
೧೧. ಭೀಮಪ್ಪಯ್ಯ ಅವರ ಸ್ಮರಣಾರ್ಥವಾಗಿ ಅಣ್ಣಿಗೇರೆ ಬಸದಿಗೆ ಗಂಟೆ ದಾನ.

ಮುನಿಸೇವೆ, ಆರ್ಯಿಕೆಯರ ಸೇವೆ, ನೋಂಪಿ ವ್ರತಾಚರಣೆ, ಉಪನ್ಯಾಸ ಕಾರ್ಯಕ್ರಮದ ಆಯೋಜನೆ ಹೀಗೆ ಹತ್ತು ಹಲವಾರು ಸಮಾಜೋ-ಧಾರ್ಮಿಕ ಕ್ರಿಯೆಯಲ್ಲಿ ತೊಡಗಿಕೊಂಡಿದ್ದ ಪುಷ್ಪಾವತಿಬಾಯಿಯವರಿಗೆ ಕ್ರಿ.ಶ. ೧೯೪೩ರಲ್ಲಿ ಜಿನಮುನಿ ಶ್ರೀ ಪಾಯಸಾಗರ ಮಹಾರಾಜರು 'ಮುನಿಸಂಘ ಸೇವಾಶಕ್ತಿ' ಎಂಬ ಬಿರುದನ್ನು ನೀಡಿದರು. ಇಷ್ಟೆಲ್ಲಾ ಗೌರವಗಳಿಗೆ ಪಾತ್ರವಾದ ಅಭಿನವ ದಾನಚಿಂತಾಮಣಿ ಪುಷ್ಪಾವತಿಬಾಯಿಯವರು ೧೯೬೧ರಲ್ಲಿ ಕೊನೆಯುಸಿರೆಳೆಯುತ್ತಾರೆ.

ಭೀಮಪ್ಪಯ್ಯ ತಮ್ಮ ಮೂವರು ಹೆಂಡತಿಯರಲ್ಲಿ ಮಕ್ಕಳು ಕಾಣದಾಗಿ ಚಿಂತಾಕ್ರಾಂತರಾಗಿ ವಾಡೆಯ ಮುಂದಿನ ಗತಿ ಬಗ್ಗೆ ಆಗಾಗ್ಗೆ ಚಿಂತಿಸುತ್ತಿದ್ದರು. ಒಮ್ಮೆ ಅವರು ದತ್ತು ತೆಗೆದುಕೊಳ್ಳುವ ನಿರ್ಧಾರ ಮಾಡಿ ಹೆಂಡತಿಯರಲ್ಲಿ ಸಮಾಲೋಚಿಸಿ, ಎರಡನೆಯ ಹೆಂಡತಿ ಚಂದ್ರಾಬಾಯಿಯ ತಮ್ಮ ಬಾಳಾಸಾಹೇಬ ಉರ್ಫ್ ಅಜ್ಜಪ್ಪನನ್ನು ದತ್ತು ತೆಗೆದುಕೊಂಡರು. ವಾಡೆಯ ಅಧಿಕಾರಿಯಾದ ಬಾಳಾಸಾಹೇಬ ಚಂದಪ್ಪಯ್ಯ ಎಂಬ ನಾಮದಿಂದ ಅಧಿಕಾರ ನಡೆಯಿಸತೊಡಗಿದ. ಇವನಿಗೆ ಚಿತ್ರಾಬಾಯಿ ಎಂಬ ಹೆಂಡತಿಯಿದ್ದರು.

ಹದಿನಾರನೆಯ ತಲೆಮಾರಿನ ದೇಶಪಾಂಡೆ ಚಂದಪ್ಪಯ್ಯ ಮತ್ತು ಚಿತ್ರಾಬಾಯಿ ದಂಪತಿಗಳಿಗೆ ಭೀಮಪ್ಪಯ್ಯ ಎಂಬ ಮಗನಿದ್ದ. ಇವರು ವಾಡೆಯ ಹದಿನೇಳನೆಯ ತಲೆ. ಅಲ್ಲದೆ ಇವರಿಗೆ ಸರೋಜಿನಿ ಎಂಬ ಅಕ್ಕ, ಶೀಲಪ್ರಭಾ ಎಂಬ ತಂಗಿ ಇದ್ದರು. ಭೀಮಪ್ಪಯ್ಯನವರಿಗೆ ಸಾಂಗಲಿ ಮೂಲದ ಸುನಂದಾಬಾಯಿಯವರನ್ನು ತಂದು ಮದುವೆ ಮಾಡಲಾಯಿತು. ಅಧಿಕಾರ ರಹಿತ ವಾಡೆಯನ್ನು ಜೋಪಾನವಾಗಿ ನೋಡಿಕೊಂಡ ಇವರು ಪ್ರಮುಖವಾಗಿ ಕೃಷಿಯನ್ನೆ ಅವಲಂಬಿಸಿದ್ದರು. ಊರ ರಾಜಕೀಯದಲ್ಲಿ ಇವರು ಸಕ್ರಿಯರಾಗಿದ್ದರು. ಭೀಮಪ್ಪಯ್ಯ ಮತ್ತು ಸುನಂದಾ ದಂಪತಿಗಳಿಗೆ ನಾಗಪ್ಪಯ್ಯ (ರಾವ್‌ಸಾಹೇಬ್) ರಾಜೇಂದ್ರ, ನರೇಂದ್ರ, ಧರ್ಮೇಂದ್ರ, ಪುಷ್ಪಲತಾ ಎಂಬ ಐದು ಜನ ಮಕ್ಕಳು. ಸದ್ಯದ ವಾಡೆಯ ಮಾಲೀಕರು ನಾಗಪ್ಪಯ್ಯ ಭೀಮಪ್ಪಯ್ಯ ದೇಶಪಾಂಡೆಯವರು. ಈಗ ವಾಡೆಯ ಉಸ್ತುವಾರಿ ರಾಜೇಂದ್ರ ಭೀಮಪ್ಪಯ್ಯ ದೇಶಪಾಂಡೆಯವರು ನೋಡಿಕೊಳ್ಳುತ್ತಾರೆ. ಸದ್ಯಕ್ಕೆ ವಾಡೆಯಲ್ಲಿ ಯಾರೂ ವಾಸವಿಲ್ಲ. ಎಲ್ಲರೂ ಕೊಲ್ಲಾಪುರದಲ್ಲಿ ನೆಲೆಸಿದ್ದಾರೆ. ಶುಭ ಸಂದರ್ಭದಲ್ಲಿ, ಹಬ್ಬಗಳಲ್ಲಿ, ಕೃಷಿ ಚಟುವಟಿಕೆಗಳ ಕೆಲಸಕ್ಕೆ ಕೊಲ್ಲಾಪುರದಿಂದ ಬಂದು ಹೋಗಿ ಮಾಡುತ್ತಾರೆ.

### ಪಂಪನ ವಂಶಸ್ಥರು ಇಂದು

ಒಂದು ಕಾಲಕ್ಕೆ ಚಿಕ್ಕ ಗ್ರಾಮವೇ ಎಂಬಂತ್ತಿದ್ದ ಅಣ್ಣಿಗೇರಿ ದೇಶಪಾಂಡೆ ವಾಡೆ ಈಗ ಮಾಲೀಕ ಪರಿವಾರದವರಿಲ್ಲದೆ ಅರಣ್ಯರೋಧನಾವಸ್ಥೆಯಲ್ಲಿದೆ. ಕುಟುಂಬದವರಿದ್ದಾಗಿನ ವೈಭವ ವಾಡೆಯಲ್ಲಿ ಈಗಿಲ್ಲ. ಸದ್ಯ ಕುಟುಂಬವು ಮಹಾರಾಷ್ಟ್ರದ ಕೊಲ್ಲಾಪುರದಲ್ಲಿ ವಾಸವಾಗಿದೆ. ೧೫ದಿನ, ತಿಂಗಳಿಗೆ, ಜರೂರು ಕೆಲಸಕಾರ್ಯಗಳಿದ್ದಾಗ, ಹಬ್ಬ ಹರಿದಿನಗಳಿಗೆ ಈ ಕುಟುಂಬದವರು ವಾಡೆಗೆ ಬಂದು ಹೋಗುತ್ತಾರೆ.

ಈ ಕುಟುಂಬ ಕೊಲ್ಲಾಪುರದಲ್ಲಿ ನೆಲೆಸಲು ತಳಪಾಯ ಹಾಕಿದವರು ವಾಡೆಯ ೧೫ನೆಯ ತಲೆಮಾರಿನ ಪ್ರಮುಖ ಭೀಮಪಯ್ಯ. ಭೀಮಪಯ್ಯ ವಧು ಅನ್ವೇಷಣೆಗೆ ಕೊಲ್ಲಾಪುರಕ್ಕೆ ಹೋಗುವ ಸಂದರ್ಭದಲ್ಲಿ, ಕೊಲ್ಲಾಪುರದ ರಾಜ ರಾಜೇಶ್ರೀ ಶಾಹು ಮಹಾರಾಜ (ಕ್ರಿ.ಶ. ೧೮೮೬-೧೯೨೨)ನ ಕುದುರೆ ಗಾಡಿಯನ್ನು ಹಿಂದೆ ಹಾಕಿ ಶರವೇಗದಲ್ಲಿ ಭೀಮಪಯ್ಯನ ಕುದುರೆಗಳು ನುಗ್ಗಿದವು. ಇದನ್ನು ಗಮನಿಸಿದ ಶಾಹು ಮಹಾರಾಜ ಚಾರರ ಮೂಲಕ ಭೀಮಪಯ್ಯನನ್ನು ಅರಮನೆಗೆ ಕರೆಯಿಸಿಕೊಂಡು ಅವರ ಕುದುರೆಗಳನ್ನು ತನಗೆ ಕೊಡಲು

ಕೇಳಿದರಂತೆ. ಒಂದು ಮಾತೂ ಆಡದೆ ಭೀಮಪಯ್ಯ ತನ್ನ ಕುದುರೆಗಳನ್ನು ಮಹಾರಾಜರಿಗೆ ಕೊಟ್ಟರು.

ಕುದುರೆಗಳನ್ನು ಕೊಟ್ಟ ಸ್ಮರಣೆಗಾಗಿ ಶಾಹು ಮಹಾರಾಜರು ಭೀಮಪಯ್ಯನವರಿಗೆ ಕೊಲ್ಲಾಪುರದಲ್ಲಿ ನಾಲ್ಕೂವರೆ ಎಕರೆ ಜಾಗೆಯನ್ನು ಇನಾಂ ಆಗಿ ಕೊಟ್ಟರು. ಆ ಜಾಗೆಯಲ್ಲಿ ಒಂದು ಸಣ್ಣ ಮನೆ ಮತ್ತು ೨೦-೨೫ ಕುದುರೆ ಸಾಕುವ ಒಂದು ಲಾಯ ಕಟ್ಟಿದರು. ಕುದುರೆಗಳೆಂದರೆ ಅಪರೂಪದ ಪ್ರೀತಿ ಭೀಮಪಯ್ಯನವರಿಗೆ. ಈಗಲೂ ಲಾಯದಲ್ಲಿ ಕೆಲಸಮಾಡುತ್ತಿದ್ದ ಕೆಲಸಗಾರರು ಕೊಲ್ಲಾಪುರದಲ್ಲಿದ್ದಾರೆ.

ಭೀಮಪಯ್ಯ ಇವರ ನಂತರ ಮಗ ಚಂದಪಯ್ಯ ಕೊಲ್ಲಾಪುರ, ಅಣ್ಣಿಗೇರಿ ಎರಡೂ ಕಡೆಯ ಜವಾಬ್ದಾರಿಯನ್ನು ನೋಡತೊಡಗಿದರು. ಇವರು ಕೊಲ್ಲಾಪುರದಲ್ಲಿ ಹೆಂಡತಿ ಚಿತ್ರಾಬಾಯಿ ನೆನಪಿಗೋಸ್ಕರ 'ಚಿತ್ರಕುಂಜ' ಎಂಬ ಹೆಸರಿನ ಮನೆಯೊಂದನ್ನು ಕಟ್ಟಿಸಿದರು. ಇವರ ಮಗ ಭೀಮಪಯ್ಯ ಕ್ರಿ.ಶ. ೧೯೫೨ ಅಜ್ಜಿಯ ಹೆಸರಲ್ಲಿ 'ಪುಷ್ಪಕುಂಜ' ಎಂಬ ಮನೆಯನ್ನು ಕಟ್ಟಿಸಿದರು. ಈ ಕಾಲಕ್ಕೆ ಇವರ ನಾಲ್ಕೂ ಮಕ್ಕಳು ಮತ್ತು ಹೆಂಡತಿ ಸುನಂದಾಬಾಯಿ ಪುಷ್ಪಕುಂಜದಲ್ಲಿ ವಾಸಿಸತೊಡಗಿದ್ದರು. ಭೀಮಪಯ್ಯ ಅಣ್ಣಿಗೇರೆಯಲ್ಲಿಯೇ ಒಕ್ಕಲುತನ ಮಾಡಿಕೊಂಡು ಇದ್ದು, ಕೊಲ್ಲಾಪುರಕ್ಕೆ ಹೋಗಿ ಬಂದು ಮಾಡುತ್ತಿದ್ದರು. ಇವರಿಗೆ ಐದು ಮಕ್ಕಳು ನಾಗಪಯ್ಯ, ರಾಜೇಂದ್ರ, ನರೇಂದ್ರ, ಧರ್ಮೇಂದ್ರ, ಪುಷ್ಪಲತಾ ಇವರೆಲ್ಲರ ವಿದ್ಯಾಭ್ಯಾಸ ಕೊಲ್ಲಾಪುರದಲ್ಲಿಯೇ ಮುಗಿದಿದೆ.

೧೯೭೭ರಲ್ಲಿ ವಿದ್ಯಾಭ್ಯಾಸ ಮುಗಿಸಿದ ಭೀಮಪಯ್ಯನವರ ದೊಡ್ಡಮಗ ನಾಗಪಯ್ಯ (ಉರ್ಫ ರಾವಸಾಹೇಬ್) ಅಣ್ಣಿಗೇರೆಗೆ ಕಮತ (ಒಕ್ಕಲುತನ)ಕ್ಕೆ ತಂದೆಗೆ ಸಹಾಯಕರಾಗಿ ಬಂದರು. ಇವರು ಕ್ರಿ.ಶ. ೧೯೯೪ರಲ್ಲಿ (ಪುರಸಭೆ) ಮುನಿಸಿಪಾಲಿಟಿ ಅಧ್ಯಕ್ಷರೂ ಆಗಿದ್ದರು. ಭೀಮಪಯ್ಯ ೧೯೮೫ರಲ್ಲಿ ಸ್ವರ್ಗಸ್ಥರಾದ್ದರಿಂದ ಇವರ ಎರಡನೇ ಮಗ ರಾಜೇಂದ್ರ ಅಣ್ಣ ನಾಗಪಯ್ಯನವರ ಜೊತೆಗೆ ಒಕ್ಕಲುತನ ಮಾಡಿಕೊಂಡು ಅಣ್ಣಿಗೇರೆಯಲ್ಲಿಯೇ ಉಳಿದುಕೊಂಡರು.

ಅಣ್ಣಿಗೇರಿಯಲ್ಲಿ ೧೦೦ ಎಕರೆ ಹೊಲ ಮಾರಿ, ತಂದೆಯ ನೀಲನಕ್ಷೆಯಂತೆ ನಾಗಪಯ್ಯನವರು ಕೊಲ್ಲಾಪುರದಲ್ಲಿ ೧೯೮೭ರಲ್ಲಿ ಹೋಟೆಲ್ ಒಂದನ್ನು ಕಟ್ಟಿಸಿದರು. ಇದಕ್ಕೆ ತಮ್ಮ ಪೂರ್ವಿಕ ಪಂಪನ ಆಶ್ರಯದಾತರಾದ ವೆಂಗಿಚಾಲುಕ್ಯರ ಸ್ಮರಣೆಗಾಗಿ ಅವರ ಹೆಸರನ್ನೇ ಇಟ್ಟಿದ್ದಾರೆ. 'ಹೋಟೆಲ್ ಚಾಲುಕ್ಯ' ಹೋಟೆಲ್ ಉದ್ಯಮ ಅಣ್ಣಿಗೇರೆಯ ಒಕ್ಕುತನ ನೋಡಿಕೊಳ್ಳುತ್ತಿದ್ದ ನಾಗಪಯ್ಯ ೨೦೦೭ರಲ್ಲಿ ಒಕ್ಕುಲುತನ ನಿಲ್ಲಿಸಿ ಸಂಪೂರ್ಣ ಕುಟುಂಬದೊಂದಿಗೆ ಕೊಲ್ಲಾಪುರಕ್ಕೆ ಹೋಗಿ ವಾಸಮಾಡತೊಡಗಿದರು. ಸದ್ಯ ಇರುವ ೧೬೦ ಎಕರೆ ಭೂಮಿಯನ್ನು ರೈತರ ಕೈಯಲ್ಲಿ ಮಾಡಿಸುತ್ತಾರೆ.

ಪ್ರಸ್ತುತ ೧೭ ಜನ ಸದಸ್ಯರಿರುವ ದೇಶಪಾಂಡೆ ಕುಟುಂಬದವರ ಹಿರಿಯ ತಲೆ ಸುನಂದಾಬಾಯಿಯವರು. ಇವರು ಇವರ ಮಕ್ಕಳು ಸೊಸೆಯಂದಿರು ಕನ್ನಡದಲ್ಲಿಯೇ ಮಾತನಾಡುತ್ತಾರೆ. ಇವರ ಮಾತೃ ಭಾಷೆ ಕನ್ನಡವೇ ಆಗಿದೆ.

## ೪.೫) ಮುಳುಗುಂದ ದೇಶಪಾಂಡೆ ವಾಡೆಯ ಪರಿಸರ ಮತ್ತು ಇತಿಹಾಸ

ಕರ್ನಾಟಕದ ಪ್ರಾಚೀನ ಆಡಳಿತದ ವಿಭಾಗಗಳಲ್ಲಿ ಬೆಳ್ವಲ-೩೦೦ ಒಂದು ಭಾಗ. ಇದರಲ್ಲಿ ಮುಳುಗುಂದ-೧೨ ಉಪಘಟಕ ಆಡಳಿತದ ವಿಭಾಗವಾಗಿತ್ತು. ಈ ಘಟಕದಲ್ಲಿ ಹೊಸೂರು, ಕಣವಿ, ಕುರ್ತುಕೋಟೆ, ಎಲಶಿರೂರು, ಎಲೆಹೊಸೂರು, ಶಿರೂರು, ಕಲ್ಲೂರು, ವೆಂಕಟಪುರ, ಎಳವತ್ತಿ, ನೀಲಗುಂದ, ಹರ್ತಿ ಮುಳಗುಂದವೂ ಸೇರಿ ಹನ್ನೆರಡು ಗ್ರಾಮಗಳಿದ್ದುವು. ಬಾದಾಮಿ ಚಾಲುಕ್ಯರು, ರಾಷ್ಟ್ರಕೂಟರು, ಗಂಗರು, ಕಲ್ಯಾಣ ಚಾಲುಕ್ಯರು, ಕಲಚೂರಿಗಳು, ಹೊಯ್ಸಳರು, ಸೇವುಣರು, ವಿಜಯನಗರ ಅರಸರು, ಪೇಶ್ವೆಗಳು, ಸಾಂಗಲಿ ಪಟವರ್ಧನರು, ಬ್ರಿಟೀಷರು ಮುಳುಗುಂದ-೧೨ನ್ನು ಆಳ್ವಿಕೆ ಮಾಡಿದ್ದಾರೆ. ಈ ಪರಿಸರದಲ್ಲಿ ಜೈನ, ಶೈವ, ವೈಷ್ಣವ ಧರ್ಮಗಳು ಆಳರಸರ ಕಾಲದಲ್ಲಿ ಉನ್ನತಸ್ಥಾನ ಗಳಿಸಿಕೊಂಡು ತಮ್ಮ ಸಂಸ್ಕೃತಿಯ ಛಾಪನ್ನು ಒಡಮೂಡಿಸಿದವು.

ಮುಳುಗುಂದ ಎಂಬ ಗ್ರಾಮನಾಮ ಜೈನಮುನಿಗಳು ಇಲ್ಲಿ ಹೆಚ್ಚಾಗಿ ವಾಸಮಾಡುತ್ತಿದುದರಿಂದ ಬಂದಿದೆ ಎಂದು ಜನಪದರು ಹೇಳುತ್ತಾರೆ. ಕುಂದ > ಗುಂದ. ಗುಂದ ಎಂದರೆ ಗುಡ್ಡ, ಎತ್ತರವಾದ ಪ್ರದೇಶ, ಬೆಟ್ಟ ಎಂದಾಗುತ್ತದೆ. ಜಿನಮುನಿಗಳ ತಪಸ್ಸು ಸ್ವಾಧ್ಯಾಯ, ಧ್ಯಾನಾದಿಗಳ ಸಾಧನೆಗೆ ಪ್ರಶಸ್ತವಾದ ಸ್ಥಳ ಬೆಟ್ಟ. ಮುಳುಗುಂದ ಬೆಟ್ಟ ಈ ಸಾಧನೆಗೆ ಪ್ರಶಸ್ತವಾದ ಸ್ಥಳವಾದ್ದರಿಂದ ಅವರು ಅಲ್ಲಿ ಹೆಚ್ಚು ವಾಸಸಿತೊಡಗಿದರು. ಅಂದಿನಿಂದ ಇದಕ್ಕೆ ಮುನಿಕುಂದ > ಮುನಿಗುಂದ ಎಂದು ಹೆಸರು ರೂಢಿಯಾಯ್ತು.

ಡಾ. ಧನವಂತ ಹಾಜವಗೋಳ ಇವರು ತಮ್ಮ 'ಮುಳುಗುಂದ ನಾಡು' ಕೃತಿಯಲ್ಲಿ ಮುಳುಗುಂದ ಗ್ರಾಮನಾಮ ನಿಷ್ಪತ್ತಿಯು ಬಗ್ಗೆ ಚರ್ಚಿಸುತ್ತ ಮುಳು + ಕುಂದ = ಮುಳುಗುಂದ > ಮುಳುಗುಂದವಾಯ್ತು ಎಂದಿದ್ದಾರೆ. ಮುಳುಗುಂದ ಗುಡ್ಡ ಭೌಗೋಳಿಕವಾಗಿ ಮುಳ್ಳುಕಂಟಿಗಳಿಂದ ಕೂಡಿದ ಬಂಡೆಗಲ್ಲುಗಳ ಬೆಟ್ಟವಾಗಿದ್ದು, ನೈಸರ್ಗಿಕ ಕಾರಣದಿಂದ ಈ ಗ್ರಾಮಕ್ಕೆ ಮುಳುಗುಂದ ಎಂಬ ಹೆಸರು ಬಂದಿದೆ ಎಂದು ಊಹಿಸಿದ್ದಾರೆ. ಈ ವಾದವನ್ನು ಅವರು ಒಪ್ಪದೆ ಜೈನರ ಮೂಲ ಸಂಘದ ಪ್ರಭಾವದಿಂದ ಮೂಲಗುಂದ > ಮುಳಗುಂದವಾಯ್ತು ಎಂದು ಸ್ಪಷ್ಟಪಡಿಸುತ್ತಾರೆ.[೪೧] ಈ ಚರ್ಚೆಯಿಂದ ಜಿನಮುನಿಗಳ ಮೂಲಸಂಘದಿಂದ ಊರಿಗೆ ಹೆಸರು ಬಂದಿರುವುದು ದಿಟ. ಈ ಅಂಶ ಜನಪದರು ಮತ್ತು ವಿದ್ವಾಂಸರ ವಲಯದಲ್ಲಿ ಒಂದೇ ತೆರನಾಗಿದೆ.

ಮೂಲ > ಮುಲ > ಮುಳ + ಗುಂದ = ಮುಳಗುಂದ. ಇಲ್ಲಿ ಮುಲ > ಮುಳವಾಗಿದೆ. ಇದು ಸಹಜಕ್ರಿಯೆ. 'ಲ' ಕಾರ 'ಳ' ಕಾರವಾಗುವ, 'ಳ' ಕಾರ 'ಲ' ಕಾರವಾಗುವ ಸಂದರ್ಭವನ್ನು ಕೇಶಿರಾಜ ವೈಯಾಕರಣಿ ತನ್ನ 'ಶಬ್ದಮಣಿದರ್ಪಣ'ದ ವ್ಯಾಕರಣ ಕೃತಿಯಲ್ಲಿ ಚರ್ಚಿಸಿದ್ದಾನೆ. ಸಂಧಿ ಪ್ರಕರಣದ ಐದನೆಯ ಸೂತ್ರದಲ್ಲಿ ಮತ್ತು ವೃತ್ತಿಯಲ್ಲಿ ಇದು ಚರ್ಚಿತವಾಗಿದೆ.[೪೨] ಸಂಸ್ಕೃತದಲ್ಲಿ ಈ ಕ್ರಿಯೆಗೆ 'ಲಳಯೋರಭೇದ' ಎನ್ನುತ್ತಾರೆ. ಕೇಶಿರಾಜ ಈ ಸೂತ್ರವನ್ನು ರಳ, ಕುಳ, ಕ್ಷಳದ ವಿಚಾರವಾಗಿ ಹೇಳಿದ್ದರೂ 'ಲ' ಕಾರ ಸ್ಥಾನದಲ್ಲಿ ಕ್ಷಳ ಅಂದರೆ

'ಳ' ಬರುವುದು ಎಂದು ಚರ್ಚಿಸುತ್ತಾನೆ. ಮರಲು > ಮರಳು, ಬೆರಲು > ಬೆರಳು, ಕೊರಲು > ಕೊರಳು ಅದಂತೆ ಮುಲಗುಂದ ಮುಳಗುಂದವಾಗಿದೆ. ಈ ಚರ್ಚೆಯಿಂದ ಜಿನಮುನಿಗಳ ವಾಸದಿಂದಲೆ ಮುಳುಗುಂದ ಎಂಬ ಗ್ರಾಮನಾಮ ಬಂದಿರುವುದು ಸ್ಪಷ್ಟ.

ರಾಷ್ಟ್ರಕೂಟರ ಕಾಲಾವಧಿಯಲ್ಲಿಯೇ ಮುಳುಗುಂದ ಒಂದು ಪ್ರಬಲ ಜೈನ ಕೇಂದ್ರ. ಈ ಕಾಲಕ್ಕಾಗಲೇ ಇಲ್ಲಿ ಚಂದ್ರನಾಥ ಬಸದಿಯೊಂದಿತ್ತು. ಹದಿನಾರನೆಯ ಶತಮಾನದಲ್ಲಿ ಇಲ್ಲಿ ಮತ್ತೊಂದು ಪಾರ್ಶ್ವನಾಥ ಬಸದಿ ನಿರ್ಮಾಣವಾಯ್ತು. ಬೆಟ್ಟದ ಮೇಲೆ ಇರುವ ಈ ಎರಡೂ ಬಸದಿಗಳು ಅನೇಕ ಜೈನಮುನಿಗಳನ್ನು ಆಕರ್ಷಿಸಿವೆ. ಅಂತೆಯೇ ಇಲ್ಲಿ ಸಾಕಷ್ಟು ಜಿನಮುನಿಗಳು ಭೇಟಿಯಿತ್ತು, ತಂಗಿ ಹೋಗಿದ್ದಾರೆ. ಅವರಲ್ಲಿ ಪ್ರಮುಖರೆಂದರೆ, ಕುಮಾರಸೇನ (೮೬೦), ವೀರಸೇನ (೮೮೦), ಚಂದ್ರತೇಜ ಭಟ್ಟಾರ (೯೦೬), ಮಲ್ಲಿಕಾರ್ಜುನ ಭಟ್ಟಾರ (೯೦೬), ಕನಕಸೇನ (೯೩೦), ಆರ್ಯಸೇನ (೯೩೦), ಅಜಿತಸೇನ (೯೬೦), ಕನಕಸೇನ (೯೯೦), ಜಿನಸೇನ (೧೦೨೦), ನರೇಂದ್ರಸೇನ (೧೦೨೦), ನಾಗಚಂದ್ರಸಿದ್ಧಾಂತಿ (೧೦೨೯), ನಯಸೇನ (೧೦೫೦), ಮಲ್ಲಿಷೇಣ (೧೦೫೦), ಸಿದ್ಧಸೇನ (೧೦೫೦), ನರೇಂದ್ರಸೇನ (೧೦೮೦), ನಯಸೇನ (೧೧೧೨), ಆರ್ಯಸೇನ (೧೨ನೇ ಶತಮಾನ), ನಾಗಸೇನ (೧೨ನೇ ಶತಮಾನ), ವೀರಸೇನ (೧೩ನೇ ಶತಮಾನ), ಹೇಮಸೇನ (೧೪೨೦), ಸಹಸ್ರಕೀರ್ತಿಯತಿಗಳು (೧೬ನೇ ಶತಮಾನ), ಧರ್ಮಸೇನ.[೪೩] ಹೀಗೆ ೩೩ಕ್ಕೂ ಹೆಚ್ಚು ಜಿನಮುನಿಗಳು ಮುಳುಗುಂದ ಗುಡ್ಡದಲ್ಲಿ ಸ್ವಾಧ್ಯಾಯ, ಜಪ-ತಪ ಧ್ಯಾನಾಧಿಗಳನ್ನು ಪೂರೈಸಿಕೊಂಡು ಹೋಗಿದ್ದಾರೆ. ಆದ್ದರಿಂದಲೇ ಈ ಊರಿಗೆ ಮುನಿಗುಂದ ಎಂಬ ಹೆಸರು ಬಂದಿದೆ. ಈ ಮುನಿಗಳಲ್ಲಿ ನಯಸೇನ ಸೂರಿ 'ವ್ಯಾಕರಣ ಶಾಸ್ತ್ರ', ಮಲ್ಲಿಷೇಣಮುನಿ 'ಮಹಾಪುರಾಣ', 'ನಾಗಕುಮಾರ ಕಾವ್ಯ', 'ಭೈರವ ಪದ್ಮಾವತಿ ಕಲ್ಪ', 'ಸರಸ್ವತಿಮಂತ್ರ ಕಲ್ಪ', 'ಜ್ವಾಲಿನೀಕಲ್ಪ', ನಯಸೇನ 'ಧರ್ಮಾಮೃತ' ಕೃತಿಗಳನ್ನು ರಚಿಸಿದರು. ನಯಸೇನನ ಧರ್ಮಾಮೃತ ಒಂದು ಪ್ರಸಿದ್ಧ ಜೈನಕೃತಿ.

### ಮುಳುಗುಂದ ಪರಿಸರದ ಬಸದಿಗಳು

ಗುಡ್ಡಗಳು, ಬೆಟ್ಟಗಳು ಪ್ರಶಾಂತ ಸ್ಥಳಗಳಾಗಿದ್ದರಿಂದ ಸಹಜವಾಗಿಯೇ ಜಿನಮುನಿಗಳು ತಮ್ಮ ಧ್ಯಾನಕ್ಕಾಗಿ ಇವುಗಳನ್ನು ಆಯ್ದುಕೊಂಡರು. ಕಾಲಕ್ರಮೇಣ ಜೈನ ಶ್ರಾವಕರು, ವರ್ತಕರು, ದಂಡನಾಯಕರು, ರಾಜ-ರಾಣಿಯರು ಮುನಿಗಳಿಗೆ ಅನುಕೂಲತೆಗೆ ಮತ್ತು ವಸತಿಗೆ ಬಸದಿಗಳನ್ನು ನಿರ್ಮಾಣ ಮಾಡತೊಡಗಿದರು. ಅಲ್ಲದೇ ಮುನಿಗಳು ತಂಗಿದ ಸ್ಥಳವು ಪವಿತ್ರವಾದ್ದರಿಂದ ಆ ಸ್ಥಳದಲ್ಲಿ ಬಸದಿಗಳನ್ನು ನಿರ್ಮಾಣ ಮಾಡತೊಡಗಿದರು. ಶ್ರವಣಬೆಳಗೊಳದ ಚಂದ್ರಗಿರಿ-ಇಂದ್ರಗಿರಿ, ಮಲೆಯೂರಿನ ಕನಕಗಿರಿ, ಹಾಡುವಳ್ಳಿಯ ಬೆಟ್ಟಗಳು, ತುಮಕೂರು ಹತ್ತಿರದ ಪಂಡಿತನ ಹಳ್ಳಿಯ ಮಂದರಗಿರಿ ಬೆಟ್ಟಗಳು ಈ ಕ್ರಿಯೆಗೆ ಸ್ಪಷ್ಟ ಉದಾಹರಣೆ. ಈ ಅಂಶಕ್ಕೆ ಮುಳುಗುಂದವೂ ಹೊರತಾಗಿಲ್ಲ. ಇಲ್ಲಿನ ಬೆಟ್ಟದಲ್ಲಿ ಚಂದ್ರನಾಥ ಮತ್ತು ಪಾರ್ಶ್ವನಾಥ ತೀರ್ಥಂಕರರ ಬಸದಿಗಳು ನಿರ್ಮಾಣವಾದವು.

## ಚಂದ್ರನಾಥ ಬಸದಿ

ಮುಳುಗುಂದ ಬೆಟ್ಟದ ಪ್ರಾರಂಭದಲ್ಲಿ ಒಂದು ಸುಂದರವಾದ ಪ್ರವೇಶದ್ವಾರವಿದೆ. ಈ ದ್ವಾರದ ಎದುರಿಗೆ ಇರುವುದೇ ಚಂದ್ರನಾಥ ಬಸದಿ. ಈ ಬಸದಿಯನ್ನು ಮುಳುಗುಂದದ ವೈಶ್ಯನಾದ ಶ್ರೀಕಾರ್ಯಚೀಕರ ಎಂಬುವನು ಕ್ರಿ.ಶ.೯೦೨ರಲ್ಲಿ ನಿರ್ಮಾಣ ಮಾಡಿದನು.[೪೪] ತ್ರಿಕೂಟ ಮಾದರಿಯ ಈ ಬಸದಿಯು ಮುಖಮಂಟಪ ನವರಂಗ, ಗರ್ಭಗೃಹವನ್ನು ಹೊಂದಿದೆ. ಗರ್ಭಗೃಹದಲ್ಲಿ ಚಂದ್ರನಾಥ ತೀರ್ಥಂಕರ ಮೂರ್ತಿ ಇಲ್ಲ. ಇತ್ತೀಚೆಗೆ ಬಸದಿಯ ಗೋಡೆಯಲ್ಲಿ ಕಮಠೋಪಸರ್ಗದ ಒಂದು ಮೂರ್ತಿ ದೊರೆತಿದೆ. ಬಹುಶ: ಇದೇ ಮೂಲ ಮೂರ್ತಿಯಾಗಿರಬೇಕು. ಹಿಂಬದಿಯಲ್ಲಿ ಶಾಸನವಿರುವುದು ಮೂರ್ತಿಯ ವಿಶೇಷ. ತೀರ್ಥಂಕರ ಮೇಲೆ ಸತ್ತಿಗೆ ಇರುವುದು ಮೂರ್ತಿಯ ಇನ್ನೊಂದು ವಿಶೇಷ. ಇದೇ ರೀತಿಯ ಮೂರ್ತಿಯನ್ನು ಹೊಸದಾಗಿ ಮಾಡಿಸಿ ಪ್ರತಿಷ್ಠಾಪಿಸುವ ಕಾರ್ಯವೂ ನಡೆಯುತ್ತಿದೆ. ಕಮಠೋಪಸರ್ಗದ ಮೂರ್ತಿಯನ್ನು ಅನ್ಯ ಧರ್ಮಿಯರ ದಾಳಿಯ ಭೀತಿಯಿಂದ ರಕ್ಷಿಸಲು ಗೋಡೆಯಲ್ಲಿ ಮುಚ್ಚಿಡಲಾಗಿತ್ತೆಂದು ಸ್ಥಳೀಯರು ಹೇಳುತ್ತಾರೆ. ಬಸದಿಯ ಗರ್ಭಗೃಹದ ಸುತ್ತಲೂ ಮೂರು ಐರಾವತಗಳಿವೆ. ಐರಾವತದ ಶಿರ ಹೊರ ಬಂದಂತೆ ಶಿಲ್ಪವನ್ನು ಕೆತ್ತಲಾಗಿದೆ. ಇಲ್ಲಿ ಐರಾವತಕ್ಕೆ ಐದು ಸೊಂಡಿಲಿರದೆ ಒಂದೇ ಸೊಂಡಿಲಿದೆ. ಇದರ ಮೇಲೆ ಮಂಟಪವಿದ್ದು, ಇಂದ್ರ-ಇಂದ್ರಾಣಿಯರು ಕುಳಿತಿದ್ದಾರೆ. ಮೇಲೆ ಕೀರ್ತಿಮುಖ ಮತ್ತು ಜಿನಬಿಂಬವಿದೆ. ಕಲಾವಿದನ ಕೈಯಲ್ಲಿ ನಾಜೂಕಾಗಿ ಕೆತ್ತನೆಯಾಗಿರುವ ಐರಾವತಗಳು ಈ ಬಸದಿಯ ಪ್ರಮುಖ ಆಕರ್ಷಣೆ. ಇತ್ತೀಚಿಗೆ ಈ ಬಸದಿಯ ಜೀರ್ಣೋದ್ಧಾರ ಕ್ರಿಯೆ ನಡೆಯುತ್ತಿದೆ.

## ಪಾರ್ಶ್ವನಾಥ ಬಸದಿ

ಮುಳುಗುಂದ ಬೆಟ್ಟದಲ್ಲಿ ಇರುವ ಇನ್ನೊಂದು ಬಸದಿ ಪಾರ್ಶ್ವನಾಥ ಬಸದಿ. ಇಲ್ಲಿಯೂ ಮೂಲಮೂರ್ತಿ ಇಲ್ಲ. ಮುಖಮಂಟಪ, ಗರ್ಭಗುಡಿ, ಸಭಾಮಂಟಪಗಳನ್ನು ಇಲ್ಲಿ ಕಾಣಬಹುದು. ಮುಖಮಂಟಪದಲ್ಲಿ ಸುಂದರ ಕೆತ್ತನೆಯ ಕಂಬಗಳಿದ್ದು ಒಂದು ಕಂಬದ ಬೋಧಿಗೆ ತಿರುಗುತ್ತದೆ. ಇತ್ತೀಚೆಗೆ ಇದನ್ನು ಹಾಳುಮಾಡಿದ್ದಾರೆ. ಮುಖಮಂಟಪದ ದ್ವಾರದಲ್ಲಿ ೨೪ ತೀರ್ಥಂಕರರ ಬಿಂಬಗಳನ್ನು ಕೆತ್ತಲಾಗಿದೆ. ಮುಖಮಂಟಪದಲ್ಲಿ ಮೂವತ್ತೆರಡು ಕಂಬಗಳಿದ್ದು, ಗರ್ಭಗೃಹ ಎತ್ತರದಲ್ಲಿದೆ. ಇತ್ತೀಚಿಗೆ ಇದು ಜೀರ್ಣೋದ್ಧಾರವಾಗುತ್ತಿದೆ. ಗರ್ಭಗೃಹವನ್ನು ಕೆಡವಿ ಹೊಸದಾಗಿ ನಿರ್ಮಿಸುತ್ತಿದ್ದಾರೆ. ಇದರ ಹಿಂಬದಿಯಲ್ಲಿ ಒಂದು ದೊಡ್ಡ ಬಂಡೆಯಲ್ಲಿ ಅಪೂರ್ಣ ಬಾಹುಬಲಿಯ ಶಿಲ್ಪವಿದೆ. ಈ ಬಂಡೆಯ ಸುತ್ತಲೂ ೫೦ಕ್ಕೂ ಹೆಚ್ಚು ಸಣ್ಣ ಸಣ್ಣ ಶಾಸನಗಳಿವೆ. ಈ ಬಸದಿಯ ಹಿಂದೆ ಇನ್ನೊಂದು ಬಸದಿಯ ತಳಪಾಯ ಇದೆ. ಒಟ್ಟು ಮೂರು ಬಸದಿಗಳು ಮುಳುಗುಂದ ಬೆಟ್ಟದಲ್ಲಿ ಇದ್ದವು.

## ಛಾಯಾ ಚಂದ್ರನಾಥ

ಮುಳುಗುಂದ ಸಮೀಪದಲ್ಲಿ ಚಿಂಚಲಿ ಗ್ರಾಮವೊಂದಿದ್ದು, ಈ ಗ್ರಾಮಕ್ಕೆ ಹೋಗುವ ರಸ್ತೆಯ ಪಕ್ಕ ಒಂದು ಗುಡ್ಡವಿದೆ. ಇಲ್ಲಿ ಬಂಡೆಗಳ ನೆರಳು ತೀರ್ಥಂಕರ ವಿನ್ಯಾಸದಲ್ಲಿ ಬೀಳುತ್ತದೆ. ಈ ನೆರಳಿಗೆ ಸ್ಥಳೀಕರು ಛಾಯಾಚಂದ್ರನಾಥ ಎಂದು ಕರೆಯುತ್ತಾರೆ. ಸೂರ್ಯೋದಯದಲ್ಲಿ ಮಾತ್ರ ಈ ಛಾಯೆ ಕಂಡುಬರುತ್ತದೆ. ಬಂಡೆಗಳ ವಿನ್ಯಾಸದಿಂದ ಈ ಛಾಯೆ ಬೀಳುತ್ತದೆ. ಇದು ಪ್ರಕೃತ್ತಿದತ್ತವೋ, ಶಿಲ್ಪಿಯ ಕೈಚಳಕವೋ ತಿಳಿಯದಾಗಿದೆ. ಒಟ್ಟಿನಲ್ಲಿ ಈ ಸೋಜಿಗವನ್ನು ನೋಡಲು ಸ್ಥಳೀಯ, ದೇಶ, ವಿದೇಶದಿಂದ ಜನರು ಬರುತ್ತಾರೆ. ಜೈನ ಪ್ರಸಿದ್ಧ ಕವಿ ನಯಸೇನ ಇಲ್ಲಿದ್ದ ಚಂದ್ರನಾಥ ಬಸದಿಯಲ್ಲಿದ್ದ, ಈಗ ಈ ಬಸದಿ ಹಾಳಾಗಿದೆ. ಈ ಬಸದಿಯಲ್ಲಿಯೇ ನಯಸೇನ ತನ್ನ ಜೀವಿತದ ಬಹುಕಾಲವನ್ನು ಕಳೆದ ಅಲ್ಲದೇ ತನ್ನ ಪ್ರಸಿದ್ಧ ಕೃತಿ 'ಧರ್ಮಾಮೃತ'ವನ್ನು ಇಲ್ಲಿಯೇ ರಚಿಸಿದ ಎಂಬ ಐತಿಹ್ಯಗಳಿವೆ.

## ಹೊಸೂರಿನ ಯಾಪನೀಯ ಮಠ

ಜೈನ ದಿಗಂಬರ ಮತ್ತು ಶ್ವೇತಾಂಬರ ಪಂಥಗಳ ಕೆಲವೊಂದು ತತ್ವಗಳನ್ನು ಅನುಸಂಧಾನಿಸಿಕೊಂಡು ಹುಟ್ಟಿದ್ದೇ ಯಾಪನೀಯ ಪಂಥ. ಉತ್ತರ ಕರ್ನಾಟಕದಲ್ಲಿ ಪ್ರಚಲಿತವಿದ್ದ ಈ ಪಂಥ ಈಗ ಇಲ್ಲವಾಗಿದೆ. ಆದರೆ ಅವರ ಸಾಕಷ್ಟು ಉಲ್ಲೇಖಗಳು, ಮಠ, ಬಸದಿ ಇನ್ನೂ ನಮ್ಮೊಂದಿಗಿವೆ. ಇವರು ಸ್ಥಾಪಿಸಿದ್ದರೆನ್ನಲಾದ ಒಂದು ಮಠ ಮುಳುಗುಂದ-೧೨ ಗ್ರಾಮಗಳಲ್ಲಿ ಒಂದಾದ ಹೊಸೂರಿನಲ್ಲಿದೆ. ಈ ಮಠವನ್ನು ನಾಡೋಜ ಹಂಪನಾರವರು ಶೋಧಿಸಿದ್ದಾರೆ. ಹಾಲಿ ಹೊಸೂರ ಊರ ಹೊರಗಿರುವ ಶಿವಾಲಯ ಮೊದಲು ಬಸದಿಯಾಗಿತ್ತು ಎಂದು ಕಟ್ಟಡದ ಪ್ರತಿಮಾಲಕ್ಷಣಗಳು ಮತ್ತು ಗರ್ಭಗೃಹದ ಸಿಂಹಪೀಠ ದೃಢಪಡಿಸುತ್ತವೆ. "ಈ ಪ್ರಾಚೀನ ಬಸದಿಯ ಬಲಗಡೆ ಬಸದಿಯ ಎರಡರಷ್ಟು ದೊಡ್ಡದಾದ ಹಳೆಯ ಕಟ್ಟಡವಿದೆ. ಅದರ ವಾಸ್ತು ವಿನ್ಯಾಸವೂ ಸುಂದರವಾಗಿದೆ. ಮುಂಭಾಗದ ಭಿತ್ತಿ ಎರಡೂ ಕಡೆ ಜಾಲಂದರಗಳಿವೆ. ಒಳಗಡೆ ನಡುಮನೆಯಿದೆ. ದೇವಾಲಯಕ್ಕಿರುವ ಗರ್ಭಗೃಹವಿದೆ. ಗರ್ಭಗೃಹದಲ್ಲಿ ಪೂಜಾ ವಿಗ್ರಹವಿಲ್ಲ ಮೂಲ ಸಿಂಹಪೀಠವಿದೆ. ಈ ಪ್ರಾಚೀನ ಸಿಂಹಪೀಠದಲ್ಲಿ ಚಕ್ರವಾಕ ಪಕ್ಷಿಯ ಹಾಗೆ ಕಾಣುವ ಲಾಂಛನವಿದೆ. ಅದು ಕುಕ್ಕುಟ ಸರ್ಪದ ಲಾಂಛನವಾಗಿರಲೂಬಹುದು. ಒಂದು ವೇಳೆ ಚಕ್ರವಾಕ ಪಕ್ಷಿಯ ಲಾಂಛನವಾಗಿದ್ದಲ್ಲಿ ಅಲ್ಲಿಯ ಮೂಲ ನಾಯಕ ಮಲ್ಲಿನಾಥ ತೀರ್ಥಂಕರರೆಂದು ತಿಳಿಯಬಹುದು. ಹಾಗಲ್ಲದೆ ಅದು ಕುಕ್ಕುಟ ಸರ್ಪದ ಲಾಂಛನವಾಗಿದ್ದಲ್ಲಿ ಪದ್ಮಾವತೀ ದೇವಿಯ ಮೂರ್ತಿಯನ್ನು ಅಲ್ಲಿ ಪ್ರತಿಷ್ಠಾಪಿಸಲಾಗಿತ್ತೆಂದು ತಿಳಿಯಬಹುದು."[೪೫]

ಮುಖ್ಯವಾದ ಮತ್ತು ಅತಿ ಮಹತ್ವದ ಮಾತೆಂದರೆ ಈ ವಿಶಾಲವಾದ ಕಟ್ಟಡವು ಯಾಪನೀಯ ಮುನಿಗಳ ಮಠವಾಗಿತ್ತು ಎಂಬುದು. ಈ ಮಠದೊಳಗೊ ಒಂದು ಜಿನಾಲಯವಿತ್ತು; ಹೊರಗಡೆಯ ಬಸದಿ ಎಲ್ಲ ಜನರಿಗಾಗಿ ಇತ್ತು. ಯಾಪನೀಯ ಸಂಘಕ್ಕೆ

ಸೇರಿದ ಹಲವಾರು ಬಸದಿಗಳೂ ಮಠಗಳೂ ಕರ್ನಾಟಕದಲ್ಲಿ ಇದ್ದವು. ಅವುಗಳಲ್ಲಿ ಕೆಲವು ಬಸದಿಗಳು ಸಾಧಾರಣ ಸ್ಥಿತಿಯಲ್ಲಿ ಉಳಿದುಕೊಂಡಿವೆ. ಆದರೆ ಈಗಲೂ ಉಳಿದುಬಂದಿರುವ ಏಕೈಕ ಯಾಪನೀಯರ ಮಠವೆಂದರೆ ಹೊಸೂರಿನದು ಎಂಬುದು ಮಹತ್ವದ್ದಾಗಿದೆ.[೪೬]

## ಮುಳುಗುಂದ ದೇಶಪಾಂಡೆ ವಾಡೆಯ ಇತಿಹಾಸ

ಮುಳುಗುಂದ ಮತ್ತು ಅದರ ಸುತ್ತಮುತ್ತ ಪ್ರದೇಶದಲ್ಲಿ ಜೈನರ ಪ್ರಾಬಲ್ಯ ಮತ್ತು ಜೈನ ಸಂಸ್ಕೃತಿಯ ಪ್ರಭಾವದಿಂದ ಸಹಜವಾಗಿಯೇ ಮುಳುಗುಂದ ೧೨ರ ಆಡಳಿತ ೧೭ನೆಯ ಶತಮಾನದ ಹೊತ್ತಿಗೆ ಜೈನರಿಗೆ ಒಲಿದು ಬಂತು. ಈ ಆಡಳಿತದ ಜವಾಬ್ದಾರಿ ಸದ್ಯದ ಮುಳುಗುಂದ ದೇಶಪಾಂಡೆ ವಾಡೆಯ ಪೂರ್ವಿಕರು ನಿಭಾಯಿಸಿದರು. ಈ ವಾಡೆಯ ಆಡಳಿತದ ಇತಿಹಾಸವನ್ನು ಇಲ್ಲಿ ಕಾಣಬಹುದು.

ಒದಗಿರುವ ದಾಖಲೆಗಳ ಪ್ರಕಾರ ಮುಳುಗುಂದ ದೇಶಪಾಂಡೆ ವಾಡೆಯ ಇತಿಹಾಸವನ್ನು ೩೩೩-೪೦ ವರ್ಷಗಳ ಹಿಂದಕ್ಕೆ ಕೊಂಡೊಯ್ಯಬಹುದು. ಈ ವಾಡೆಯ ಪೂರ್ವ ಇತಿಹಾಸವನ್ನು ತಿಳಿಯುವಲ್ಲಿ ಮೌಖಿಕ ಆಧಾರಗಳ ಕೊರತೆ ಇದ್ದು, ಲಿಖಿತ ಆಕರಗಳು ಪ್ರಮಾಣವಾಗಿ ನಿಲ್ಲುತ್ತವೆ. ಜೈನರ ಪವಿತ್ರ ಕ್ಷೇತ್ರವಾದ ಶ್ರವಣಬೆಳಗೊಳದ ಇಂದ್ರಗಿರಿ (ದೊಡ್ಡ ಬೆಟ್ಟ)ಯಲ್ಲಿರುವ ಒದೆಗಲ್ಲು ಬಸದಿಯ ಪಶ್ಚಿಮದಲ್ಲಿ ಬಂಡೆಯ ಮೇಲೆ ಒಂದು ಶಾಸನವಿದೆ. ಈ ಶಾಸನವು ಮುಳುಗುಂದ ದೇಶಪಾಂಡೆ ವಾಡೆಯ ವಂಶಾವಳಿಯನ್ನು ಕೊಟ್ಟ ಪ್ರಥಮ ಲಿಖಿತ ಆಕರವೂ ಹೌದು. "ಶ್ರೀಮತು ಶಾಳಿವಾಹನ ಶಕವರುಷ ೧೬೦೨ ಸಿದ್ಧಾರ್ಥಿ ಸಂವತ್ಸರದ ಮಾಘ ಬಹುಳ ೧೦ಯಲ್ಲು ಮುನಿಗುಂದದ ಸೀಮೆಯ ದೇಶಕುಲಕರಣಿಯರ ಮಕ್ಕಳು ವಾಂಕಹೊನ್ನಪ್ಪೈಯ್ಯನ ಅನುಜ ವೆಂಕ್ಯಪ್ಪೈಯನ ಪುತ್ರ ಸಿದ್ದಪ್ಪೈಯನ ಅನುಜ ನಾಗಪ್ಪೈಯ್ಯನ ಪುಣ್ಯಸ್ತ್ರೀಯರಾದ ಬನದಾಂಬಿಕೆಯರು ಬಂದು ದರುಶನವಾದರು".[೪೭] ಮುಳುಗುಂದ ದೇಶಪಾಂಡೆ ವಾಡೆಯ ಸೊಸೆಯಾದ ಬನದಾಂಬಿಕೆ ಶ್ರವಣಬೆಳಗೊಳದ ಬಾಹುಬಲಿಯ ದರ್ಶನ ಪಡೆದ ನಿಮಿತ್ತ ಹಾಕಿಸಿದ ಶಾಸನವಿದು. ನಾಲ್ಕು ತಲೆಮಾರುಗಳ ವಂಶಾವಳಿಯನ್ನು ದಾಖಲಿಸಿರುವ ಈ ಶಾಸನ ಮಹತ್ವದ್ದೂ ಹೌದು.

### ಮುನಿಗುಂದ ಸೀಮೆಯ ದೇಶಕುಲಕರಣಿ

**ವಾಂಕಹೊನ್ನಪ್ಪೈಯ್ಯ (ವೆಂಕಹೊನ್ನಪ್ಪಯ್ಯ)** — **ಸಹೋದರ** — **ವೆಂಕ್ಯಪ್ಪೈಯ (ವೆಂಕಪ್ಪಯ್ಯ)**

**ಸಿದ್ದಪ್ಪೈಯ (ಸಿದ್ದಪ್ಪಯ್ಯ)**

**ನಾಗಪ್ಪೈಯ್ಯ (ನಾಗಪ್ಪಯ್ಯ)**

**ಬನದಾಂಬಿಕೆ (ಹೆಂಡತಿ)**

ಶಾಸನದ ಪ್ರಕಾರ ಮುಳುಗುಂದ ದೇಶಪಾಂಡೆ ವಾಡೆಯ ಮೂಲಪುರುಷ ವಾಂಕಹೊನ್ನಪ್ಪೈಯ್ಯ ಬಹುಶ: ಇವನ ಹೆಸರು ವೆಂಕಹೊನ್ನಪ್ಪಯ್ಯ ಇರಬಹುದು. ಇವನ ಹಿಂದಿನವರ ವಂಶಾವಳಿ ಅಲಭ್ಯ. ವೆಂಕಹೊನ್ನಪ್ಪಯ್ಯನ ಸಹೋದರ ವೆಂಕಪ್ಪಯ್ಯ ಈ ವೆಂಕಪ್ಪಯ್ಯನಿಗೆ ಸಿದ್ದಪ್ಪಯ್ಯ ಮತ್ತು ನಾಗಪ್ಪಯ್ಯ ಎಂಬ ಎರಡು ಮಕ್ಕಳು ಸಿದ್ದಪ್ಪಯ್ಯನ ಪೂರ್ವಾಪರ ವಿವರಗಳು ದೊರೆಯುವುದಿಲ್ಲ. ನಾಗಪ್ಪಯ್ಯ ಶಾಸನ ಹಾಕಿಸಿದ ಕಾಲಕ್ಕೆ ಮುಳುಗುಂದ ಸೀಮೆಯ ದೇಶಕುಲಕರಣಿಯಾಗಿದ್ದ, ಮುಳುಗುಂದ ಸೀಮೆಯೆಂದರೆ ಮುಳುಗುಂದ ೧೨ ಆಡಳಿತ ಪ್ರದೇಶವೆಂದೇ ಅರ್ಥೈಯಿಸಿಕೊಳ್ಳಬೇಕಾಗುತ್ತದೆ. ನಾಗಪ್ಪಯ್ಯ ಕ್ರಿ.ಶ. ೧೬೭೫-೮೦ರ ಹೊತ್ತಿಗೆ ಮುಳುಗುಂದದ ದೇಶಕುಲಕರಣಿಯಾಗಿದ್ದ ಎಂಬುದು ಶ್ರವಣಬೆಳಗೊಳದ ಬನದಾಂಬಿಕೆ ಶಾಸನ ಮತ್ತು ಮುಳುಗುಂದದ ಚಂದ್ರನಾಥ ಬಸದಿಯಲ್ಲಿರುವ ಬನದಾಂಬಿಕೆ ಶಾಸನ ಸ್ಪಷ್ಟಪಡಿಸುತ್ತದೆ. ಮುಳುಗುಂದದ ಶಾಸನದಲ್ಲಿ ನಾಗಪ್ಪಯ್ಯನನ್ನು 'ನಾಗಭೂಪ' ಎಂದು ಸಂಭೋಧಿಸಲಾಗಿದೆ. 'ಭೂಪ' ಎಂಬ ಪದವನ್ನು ಶಾಸನಕವಿ ತನ್ನ ಒಡೆಯನ ಗುಣಗಾನ ಮಾಡುವ ಸಂದರ್ಭದಲ್ಲಿ ಬಳಸಿದ್ದಾನೆ. 'ಭೂಪ' ಎಂದರೆ ಒಡೆಯ, ರಾಜ, ದೊರೆ ಎಂಬಿತ್ಯಾದಿ ಅರ್ಥಗಳುಂಟು. ನಾಗಪ್ಪಯ್ಯ ದೇಶ ಕುಲಕರಣಿಯಾಗಿದ್ದರಿಂದ 'ಭೂಪ' ಎಂಬ ವಿಶೇಷಣ ಬಳಕೆಯಾಗಿದೆ. ನಾಗಪ್ಪಯ್ಯ ದೇಶ ಕುಲಕರಣಿಯಾಗಿದ್ದರಿಂದ ಸಹಜವಾಗಿಯೇ ಅವನು ಆ ಪ್ರದೇಶದ ದೊರೆಯೇ ಆಗಿದ್ದ. ಜೊತೆಗೆ ಆ ಪ್ರದೇಶದ ವತನದಾರಿಕೆಯೂ ಆದಿಲ್‌ಶಾಹಿಗಳಿಂದ ದಕ್ಕಿದ್ದರಿಂದ ಈ ಗೌರವ ವ್ಯಕ್ತವಾದಂತೆ ತೋರುತ್ತದೆ. ಮುಳುಗುಂದ ಬನದಾಂಬಿಕೆಯ ಶಾಸನದಲ್ಲಿ[೮೮] ಕುಲಕರಣಿ ಎಂಬ ಆಡಳಿತ ಪದ ನಾಗಪ್ಪಯ್ಯನಿಗೆ ವ್ಯಕ್ತವಾಗಿದ್ದು, ಹಿಂದಿನ ಎರಡಕ್ಷರಗಳನ್ನು 'ದೇಶ' ಎಂದು ಮಾಡಿಕೊಳ್ಳಬಹುದು. ಈ ಎರಡು ಪದಗಳು ಸೇರಿದಾಗ ದೇಶಕುಲಕರಣಿ ಎಂದು ವ್ಯಕ್ತವಾಗುತ್ತದೆ. ನಾಗಪ್ಪಯ್ಯ ಎಂಬ ಪದ ಇವರ ವಂಶಾವಳಿಯ ಹಲವು ವ್ಯಕ್ತಿಗಳಿಗಿದ್ದು, ಅಣ್ಣಿಗೇರಿ ದೇಶಪಾಂಡೆ ವಾಡೆಯ ವಂಶಾವಳಿಯಲ್ಲಿರುವ ವ್ಯಕ್ತಿಗಳಿಗೂ ಹೊಂದಿಕೆಯಾಗುತ್ತದೆ. ಈ ಕುರಿತಾಗಿ ಮುಂದೆ ಚರ್ಚಿಸಲಾಗಿದೆ.

ಮುಳುಗುಂದ ದೇಶಪಾಂಡೆ ವಾಡೆಯ ಸೊಸೆ ಬನದಾಂಬಿಕೆ ಪರಮ ಜಿನಭಕ್ತೆ, ಐತಿಹಾಸಿಕ ಪ್ರಜ್ಞೆ ಇರುವ ಸ್ತ್ರೀ. ಇವಳು ಮುಳುಗುಂದದ ಚಂದ್ರನಾಥ ಬಸದಿ ತುರುಕರ ದಾಳಿಗೆ ಒಳಪಟ್ಟು ಹಾಳಾದಾಗ ಅದನ್ನು ಜೀರ್ಣೋದ್ಧಾರ ಮಾಡಿ ಅಲ್ಲಿ ಆದಿನಾಥನನ್ನು ಪ್ರತಿಷ್ಠಾಪಿಸಿದಳು. ಅಲ್ಲದೆ ಪಂಚಕಲ್ಯಾಣ, ನೋಂಪಿ ನಿಮಿತ್ತವಾಗಿ ರಥೋತ್ಸವ ಮತ್ತು ಲಕ್ಷದೀಪೋತ್ಸವ ಮಾಡಿಸಿ ಒಂದು ಶಾಸನವನ್ನು ಹಾಕಿಸಿದಳು.[೮೯] ಇದೇ ಬನದಾಂಬಿಕೆ ಶ್ರವಣಬೆಳಗೊಳ ಕ್ಷೇತ್ರದ ದರ್ಶನಕ್ಕೆ ಹೋದಾಗ ಅಲ್ಲಿಯೂ ಒಂದು ಶಾಸನ ಹಾಕಿಸಿದಳು.[೯೦] ಬನದಾಂಬಿಕೆ ಮುಳುಗುಂದದ ದೇಶಕುಲಕರಣಿ ನಾಗಪ್ಪಯ್ಯನವರ ಪತ್ನಿ ಎಂಬುದು ಮೇಲೆ ಉಲ್ಲೇಖಿಸಿದ ಶಾಸನಗಳಿಂದ ತಿಳಿದು ಬರುತ್ತದೆ. ಎರಡೂ ಶಾಸನಗಳಲ್ಲಿ ಬನದಾಂಬಿಕೆಯ ಗುರುಗಳಾದ ಸಾಗರವರ್ನ್ನಿಯ ಹೆಸರು ವ್ಯಕ್ತವಾಗಿದೆ.

ನಾಗಪ್ಪಯ್ಯ (ನಾಗಭೂಪ)ನ ನಂತರ ಕ್ರಿ.ಶ.೧೮೫೦ ಅಂದರೆ ಸುಮಾರು ೧೭೫ ವರ್ಷಗಳ ಕಾಲದ ಈ ಕುಟುಂಬದ ವಂಶಾವಳಿ ಮತ್ತು ಇತಿಹಾಸ ಅಲಭ್ಯ. ಕ್ರಿ.ಶ. ೧೮೫೦ರ ಹೊತ್ತಿಗೆ ನಾಗಪ್ಪಯ್ಯ-೨ ಮುಳುಗುಂದದ ೧೨ರ ದೇಶಕುಲಕರಣಿಯಾದ. ನಂತರ ಇವನ ಮಗ ರಂಗಪ್ಪಯ್ಯ ಅಧಿಕಾರ ನಡೆಸಿದ. ಇವರಿಬ್ಬರ ವಿವರಗಳು ಅಲಭ್ಯ. ರಂಗಪ್ಪಯ್ಯನ ನಂತರ ಇವನ ಮಗ ನಾಗಪ್ಪಯ-೩ ಅಧಿಕಾರ ವಹಿಸಿಕೊಂಡರು.

೩ನೆಯ ನಾಗಪ್ಪಯ್ಯ ಒಬ್ಬ ದಕ್ಷ ಪ್ರಾಮಾಣಿಕ ಅಧಿಕಾರಿ. ಸಾಂಗಲಿಯ ಪಟವರ್ಧನರು, ಬ್ರಿಟೀಷರ ಕಾಲಾವಧಿಯಲ್ಲಿ ವಾಡೆಯ ಕಾರುಭಾರು ನಡೆಸಿದ ಇವರು ಜನಗಳ ಸಂಕಷ್ಟಕ್ಕೆ ಮಿಡಿಯು ಸಹೃದಯಿಯಾಗಿದ್ದರು ಎಂದು ಸದ್ಯದ ರಂಗಪ್ಪಯ್ಯನವರು ಹೇಳುತ್ತಾರೆ. ೩ನೆಯ ನಾಗಪ್ಪಯ್ಯನವರಿಗೆ ಗಂಗಾಬಾಯಿ ಮತ್ತು ರೋಜಾಬಾಯಿ ಎಂಬ ಇಬ್ಬರು ಹೆಂಡಿರು. ಗಂಗಾಬಾಯಿಯವರಲ್ಲಿ ಮಕ್ಕಳನ್ನು ಕಾಣದ ೩ನೆಯ ನಾಗಪ್ಪಯ್ಯನವರು ಬೆಂಗಳೂರಿನ ರೋಜಾಬಾಯಿಯವರ ಜೊತೆ ಎರಡನೆಯ ಮದುವೆಯಾದರು. ರೋಜಾಬಾಯಿಯವರಲ್ಲಿ ಅರುಣಾದೇವಿ ಎಂಬ ಹೆಣ್ಣು ಮಗು ಜನಿಸಿತು. ಗಂಡು ಸಂತಾನವಿಲ್ಲದ ಕಾರಣ ೩ನೆಯ ನಾಗಪ್ಪಯ್ಯನವರು ವ್ಯಾಕುಲಗೊಂಡರು.

ಗಂಡು ಸಂತಾನವಿಲ್ಲದೆ ಪರಿತಪಿಸುತ್ತಿದ್ದ ನಾಗಪ್ಪಯ್ಯ ವಾಡೆಯ ಮುಂದಿನ ಉತ್ತರಾಧಿಕಾರತ್ವದ ಬಗ್ಗೆ ಗಂಭೀರವಾಗಿ ಚಿಂತಿಸಿ ಒಂದು ದೃಢ ಸಂಕಲ್ಪ ಮಾಡಿದರು. ಆ ಸಂಕಲ್ಪ ಒಂದು ದತ್ತು ಮಗುವನ್ನು ತೆಗೆದುಕೊಳ್ಳುವುದಾಗಿತ್ತು. ಈ ವಿಚಾರವನ್ನು ತಮ್ಮ ಹೆಂಡತಿಯರಲ್ಲಿ ವ್ಯಕ್ತವಡಿಸಿ ಯಾರನ್ನು ದತ್ತು ತೆಗೆದುಕೊಳ್ಳೋಣ ಎಂಬ ಅಭಿಪ್ರಾಯ ಕೇಳಿದರು. ಗಂಗಾಬಾಯಿ ತನ್ನ ತವರುಮನೆಯಿಂದ ದತ್ತು ತರೋಣ ಎಂದರೆ, ರೋಜಾಬಾಯಿ ತನ್ನ ಮಗಳ ಮಕ್ಕಳಲ್ಲಿ (ಮೊಮ್ಮಕ್ಕಳು) ಒಬ್ಬರನ್ನು ದತ್ತು ತರೋಣ ಎಂದರು. ೨ನೆಯ ನಾಗಪ್ಪಯ್ಯ ಮತ್ತು ರೋಜಾಬಾಯಿಯವರ ಮಗಳಾದ ಅರುಣಾದೇವಿಯನ್ನು ಸಾಂಗ್ಲಿಯ ಮಾಮ್ಲೇದಾರ ಶ್ರೀ ಭೀಮ್‌ಗೊಂಡಾ ಪಾಟೀಲ್ ಅವರಿಗೆ ಮದುವೆ ಮಾಡಿಕೊಡಲಾಗಿತ್ತು. ಇವರಿಗೆ ನಿರ್ಮಲಾದೇವಿ, ಆನಂದ, ಪ್ರೇಮಾ, ವಸಂತ, ವಿನೋದ ಎಂಬ (ಇಬ್ಬರು ಹೆಣ್ಣು, ಮೂರು ಗಂಡು, ಒಟ್ಟು ಐದು) ಮಕ್ಕಳಿದ್ದರು. ಇವರಲ್ಲಿ ಆನಂದ ಎಂಬುವರನ್ನು ರೋಜಾಬಾಯಿಯವರು ದತ್ತು ತೆಗೆದುಕೊಳ್ಳೋಣ ಎಂದು ನಾಗಪ್ಪಯ್ಯನವರಿಗೆ ಹೇಳಿದರು. ಆದರೆ ಗಂಗಾಬಾಯಿ ಇದಕ್ಕೆ ಒಪ್ಪದೆ ತನ್ನ ತವರಿನ ವ್ಯಕ್ತಿಗಳನ್ನೇ ದತ್ತು ತೆಗೆದುಕೊಳ್ಳೋಣ ಎಂದು ಹಠ ಹಿಡಿದರು. ಈ ಸಮಸ್ಯೆ ನಾಗಪ್ಪಯ್ಯನವರಿಗೆ ಕಗ್ಗಂಟಾಯಿತು.

ಶಾಂತಿ ಸುಖ ಸಮೃದ್ಧಿಯಿಂದ ಇದ್ದ ಕುಟುಂಬ ದತ್ತು ಪುತ್ರ ಸ್ವೀಕಾರದಲ್ಲಿ ಎಲ್ಲವನ್ನು ಕಳೆದುಕೊಂಡಿತು. ದಿನನಿತ್ಯ ಗಂಗಾಬಾಯಿ ರೋಜಾಬಾಯಿಯವರಲ್ಲಿ ಮನಸ್ತಾಪಗಳು, ವಾಗ್ಯುದ್ಧಗಳು, ಮುನಿಸುಗಳು ಶುರುವಾದುವು. ಕೆಲವೊಂದು ಸಾರಿ ಮಾತುಗಳು ತಾರಕಕ್ಕೆ ಏರಿ ಕಲಹಗಳು ಆದುವು. ವಾಡೆಯಲ್ಲಿ ಇವರಿಬ್ಬರ ಜಗಳ ನೋಡಿ ನೋಡಿ ಬೆಸತ್ತ ೩ನೆಯ ನಾಗಪ್ಪಯ್ಯನವರು ಸ್ವಲ್ಪದಿನ ಇವರಿಬ್ಬರನ್ನು ಬೇರೆ ಬೇರೆ ಇಡುವ ವಿಚಾರ ಮಾಡಿ,

ಗಂಗೂಬಾಯಿ ಸಮೇತ ತಮ್ಮ ಆಡಳಿತದ ಚಾವರಾತ್ ಹಳ್ಳಿಯಾದ ಯಳವಟ್ಟಿಗೆ ಹೋಗಿ ನೆಲೆಸಿದರು.

ಇನೆಯ ನಾಗಪ್ಪಯ್ಯನವರಿಗೆ ಕಿರಿಯ ಹೆಂಡತಿ ರೋಜಾಬಾಯಿಯವರಲ್ಲಿ ವಿಶೇಷ ಪ್ರೀತಿ ಇದ್ದಿತು. ಅಂತೆಯೇ ಅವರು ಆಗ್ಗಾಗ್ಗೆ ಪತ್ರಮುಖೇನ ರೋಜಾಬಾಯಿಯವರ ಕುಶಲೋಪರಿ ವಿಚಾರಿಸುತ್ತಿದ್ದರು. ಒಂದು ಪತ್ರದಲ್ಲಿ ನಾಗಪ್ಪಯ್ಯ ರೋಜಾಬಾಯಿಯವರಿಗೆ 'ನಿನಗೆ ಇಷ್ಟವಾದವರನ್ನು ವಾಡೆಗೆ ದತ್ತು ತಗೋ' ಎಂದು ಬರೆದಿರುತ್ತಾರೆ. ಹೀಗೆ ಪತ್ರ ಬರೆದ ಮೂರನೆಯ ನಾಗಪ್ಪಯ್ಯನವರು ಮೂರು ತಿಂಗಳಿಗೆ ತೀರಿಹೋಗುತ್ತಾರೆ. ಆಗ ಗಂಗಾಬಾಯಿಯವರು ಮತ್ತೆ ಮುಳುಗುಂದ ವಾಡೆಗೆ ಬಂದು ವಾಸಿಸತೊಡಗಿದರು.

ಗಂಗೂಬಾಯಿಯವರು ಮುಳುಗುಂದ ವಾಡೆಗೆ ಬಂದ ನಂತರ ರೋಜಾಬಾಯಿಯವರ ಜೊತೆಗೂಡಿ ಸ್ವಲ್ಪದಿನಗಳ ಕಾಲ ಒಟ್ಟಿಗೆ ವಾಡೆಯ ಆಡಳಿತ ನೋಡಿಕೊಳ್ಳುತ್ತಾರೆ. ಯಾವುದೋ ಒಂದು ಸಂದರ್ಭಕ್ಕೆ ಇಬ್ಬರಿಗೂ ಮನಸ್ತಾಪಗಳಾಗಿ ಮತ್ತೆ ದತ್ತು ಪುತ್ರನನ್ನು ತೆಗೆದುಕೊಳ್ಳುವ ವಿಚಾರ ಭುಗಿಲೇಳುತ್ತದೆ. ಗಂಗಾಬಾಯಿಯವರು "ಧಣಿಯವರು ವಾಡೆಗೆ ಗಂಡು ಸಂತಾನ ಬೇಕು ನಿನ್ನ ತಮ್ಮನ್ನ ದತ್ತು ತಗೊ ಅಂತ, ನನಗೆ ಹೇಳಿ ಸತ್ತಾರ" ಎಂದು ರೋಜಾಬಾಯಿಯವರಿಗೆ ಹೇಳಿದಾಗ, ರೋಜಾಬಾಯಿ ಈ ಮಾತನ್ನು ಒಪ್ಪದೇ ನಾನು ಹೇಳಿದವರೆ ವಾಡೆಗೆ ದತ್ತು ಬರಬೇಕು ಎಂದು ಹಠಹಿಡಿಯುತ್ತಾರೆ. ಆಗ ಗಂಗಾಬಾಯಿಯವರು ಈ ವ್ಯಾಜ್ಯ ಬಗೆಹರಿಸಿಕೊಳ್ಳ ದತ್ತುಪುತ್ರನ ಆಯ್ಕೆ ಸ್ವಾತಂತ್ರದ ವಿಷಯವಾಗಿ ಬಾಂಬೆ ಹೈಕೋರ್ಟಿನಲ್ಲಿ ದಾವೆ ಹೂಡುತ್ತಾರೆ. ಗಂಗೂಬಾಯಿಯವರು ಕೋರ್ಟ್ ಮೆಟ್ಟಿಲೇರಿದ್ದರಿಂದ ರೋಜಾಬಾಯಿಯವರಿಗೂ ಕೋರ್ಟಿಗೆ ಹೋಗುವ ಅನಿವಾರ್ಯತೆ ಉಂಟಾಗುತ್ತದೆ. ಕೋರ್ಟಿಗೆ ಹೋಗುವಾಗ ರೋಜಾಬಾಯಿಯವರಿಗೆ ಥಟ್ಟನೆ ಹೊಳದದ್ದು ತನ್ನ ಪತಿ ನಾಗಪ್ಪಯ್ಯನವರು ಬರೆದ ಪತ್ರಗಳು. ಇನೆಯ ನಾಗಪ್ಪಯ್ಯನವರ ಬರೆದ ಪತ್ರಗಳನ್ನು ರೋಜಾಬಾಯಿ ಜೋಪಾನವಾಗಿರಿಸಿದ್ದರು. ಅದರಲ್ಲಿ ನಾಗಪ್ಪಯ್ಯನವರು ಬರೆದ 'ನಿನಗೆ ಇಷ್ಟವಾದವರನ್ನು ವಾಡೆಗೆ ದತ್ತು ತಗೋ' ಎಂಬ ಸಾಲಿರುವ ಪತ್ರವನ್ನು ರೋಜಾಬಾಯಿಯವರು ಕಾರಕೂನನಾದ ಹನುಮಂತರಾಯನ ಜೊತೆಗೂಡಿ ಕೋರ್ಟಿಗೆ ಹಾಜರುಪಡಿಸುತ್ತಾರೆ. ಸ್ವತಃ ಇನೆಯ ನಾಗಪ್ಪಯ್ಯನವರೇ ರೋಜಾಬಾಯಿಯವರಿಗೆ ದತ್ತು ಪುತ್ರನನ್ನು ಆಯ್ಕೆಮಾಡುವ ಅಧಿಕಾರವನ್ನು ಲಿಖಿತ ರೂಪದಲ್ಲಿ ಕೊಟ್ಟಿದ್ದರಿಂದ ಗಂಗಾಬಾಯಿಯವರ ಮೌಖಿಕ ಹೇಳಿಕೆಯನ್ನು ಕೋರ್ಟು ತಿರಸ್ಕರಿಸಿತು. ರೋಜಾಬಾಯಿಯವರ ಸಾಕ್ಷಿ ಕೋರ್ಟ್‌ನಲ್ಲಿ ಮಾನ್ಯವಾಗಿ ನ್ಯಾಯ ತೀರ್ಮಾನ ಅವರಂತೆಯೇ ಆಗುತ್ತದೆ.

ನ್ಯಾಯಾಲಯದ ಆದೇಶ ರೋಜಾಬಾಯಿಯವರಿಗೆ ದತ್ತು ಪುತ್ರನನ್ನು ಆಯ್ಕೆ ಮಾಡುವ ಅಧಿಕಾರವನ್ನು ಕೊಟ್ಟ ನಂತರ ಗಂಗಾಬಾಯಿಯವರು ಮುಳುಗುಂದ ವಾಡೆ ಬಿಟ್ಟು ಯಳವಟ್ಟಿಯಲ್ಲಿರುವ ಚಿಕ್ಕದಾದ ವಾಡೆಗೆ ಸ್ಥಳಾಂತರವಾದರು. ಇತ್ತ ರೋಜಾಬಾಯಿಯವರು ತಮ್ಮ ಇಚ್ಛೆಯಂತೆ ದತ್ತು ತೆಗೆದುಕೊಳ್ಳುವ ಎಲ್ಲ ಸಿದ್ಧತೆಯನ್ನು ನಡೆಸಿದರು. ಆಗಲೇ ಹೇಳಿದಂತೆ

ರೋಜಾಬಾಯಿಯವರು ತನ್ನ ಮಗಳಾದ ಅರುಣಾದೇವಿಯ ಮಕ್ಕಳಲ್ಲಿ ಒಬ್ಬನನ್ನು ದತ್ತು ತೆಗೆದುಕೊಳ್ಳುವ ಇಂಗಿತವಿರುತ್ತದೆ. ಅರುಣಾದೇವಿಯವರಿಗೆ ಮೂರು ಗಂಡು ಮಕ್ಕಳು ಎರಡು ಹೆಣ್ಣು ಮಕ್ಕಳಿರುತ್ತಾರೆ. ಆನಂದ, ವಸಂತ, ವಿನೋದ ಎಂಬ ಮೂರು ಗಂಡು ಮಕ್ಕಳಲ್ಲಿ ದತ್ತು ಪುತ್ರ ನಿಯಮದಂತೆ ಹಿರಿಯವನಾದ ಆನಂದನನ್ನು ಕ್ರಿ.ಶ.೧೯೫೬ರಲ್ಲಿ ದತ್ತು ಸ್ವೀಕರಿಸಲಾಗುತ್ತದೆ. ಅಂದಿನಿಂದ ಮೊಮ್ಮಗನಾದ ಆನಂದ ರೋಜಾಬಾಯಿಯವರ ಮಗನಾದ. ಆನಂದ ದತ್ತುವಾಗಿ ಮುಳುಗುಂದ ದೇಶಪಾಂಡೆ ವಾಡೆಗೆ ಬಂದನಂತರ ಹೆಸರನ್ನು ರೋಜಾಬಾಯಿಯವರು ಬದಲಾಯಿಸುತ್ತಾರೆ. ಇನೆಯ ನಾಗಪ್ಪಯ್ಯನ ತಂದೆ ರಂಗಪ್ಪಯ್ಯ ಎಂಬ ಹೆಸರನ್ನು ಆನಂದನಿಗೆ ಇಡಲಾಗುತ್ತದೆ. ಅಂದಿನಿಂದ ಆನಂದ ರಂಗಪ್ಪಯ್ಯ ಆದರು. ಇವರೆ ಈಗಿನ ವಾಡೆಯ ಮುಖ್ಯಸ್ಥರು.

ರಂಗಪ್ಪಯ್ಯ ನಾಗಪ್ಪಯ್ಯ ದೇಶಪಾಂಡೆಯವರು ಸಾಂಗಲಿಯ ಅರುಣಾದೇವಿ ಎಂಬುವರನ್ನು ಕ್ರಿ.ಶ. ೧೯೭೩ರಲ್ಲಿ ಮದುವೆಯಾದರು ಈ ದಂಪತಿಗಳಿಗೆ ನಾಗಪ್ಪಯ್ಯ (ನಾಗರಾಜ) ಮತ್ತು ಸಂತೋಷ ಎಂಬ ಇಬ್ಬರು ಗಂಡುಮಕ್ಕಳು. ನಾಗರಾಜ ಅವರ ಹೆಂಡತಿ ಕೊಗನಳ್ಳಿ ಮೂಲದ ಹರ್ಷಲ್ ಅವರು. ಈ ದಂಪತಿಗಳಿಗೆ ಸಿದ್ಧಾಂತ ಮತ್ತು ವಿರೇನ್ ಎಂಬ ಮಕ್ಕಳಿದ್ದಾರೆ. ಎರಡನೆಯ ಮಗ ಸಂತೋಷ ಅವರಿಗೆ ಕೊಲ್ಲಾಪುರ ಮೂಲದ ತೃಪ್ತಿಯವರನ್ನು ಮದುವೆ ಮಾಡಲಾಗಿದ್ದು, ಮಿಥಿಲ್ ಮಯಾಂಕ್ ಎಂಬ ಎರಡು ಮಕ್ಕಳಿದ್ದಾರೆ. ರಂಗಪಯ್ಯನವರ ಪತ್ನಿ ೨೦೧೩ರಲ್ಲಿ ತೀರಿಕೊಂಡ ನಂತರ ವಾಡೆಯ ಉಸ್ತುವಾರಿಯನ್ನು ಅವರ ಹಿರಿಯ ಮಗ ನಾಗಪ್ಪಯ್ಯ (ನಾಗರಾಜ)ನವರು ನೋಡಿಕೊಳ್ಳುತ್ತಿದ್ದಾರೆ. ಈ ವಾಡೆಯ ರಂಗಪ್ಪಯ್ಯನವರು ಮಹಾಧರ್ಮಿಗಳು ಸಾಕಷ್ಟು ಬಸದಿಗಳ ನಿರ್ಮಾಣಕ್ಕೆ ಅಲಿಖಿತ ದಾನ ಮಾಡಿದ್ದಾರೆ. ಈ ಪರಂಪರೆಯ ದಾನದ ವಿವರಗಳನ್ನು 'ದಾನ' ವಿಭಾಗದಲ್ಲಿ ಚರ್ಚಿಸಲಾಗಿದೆ.

**ಮುಳುಗುಂದ ದೇಶಪಾಂಡೆ ವಾಡೆಯ ಇನ್ನೊಂದು ಕವಲು.**

ಮುಳುಗುಂದ ದೇಶಪಾಂಡೆ ವಾಡೆಯ ಇತಿಹಾಸ ತಿಳಿಯಲು ಸದ್ಯದ ವಾಡೆಯ ಹಿರಿಯರಾದ ರಂಗಪ್ಪಯ್ಯ ನಾಗಪ್ಪಯ್ಯ ದೇಶಪಾಂಡೆಯವರನ್ನು ಸಂದರ್ಶಿಸಿದಾಗ ರೋಜಾಬಾಯಿಯವರ ಕಾಲದಿಂದ ಇತ್ತೀಚಿನ ಅಪೂರ್ವ ಮಾಹಿತಿಗಳನ್ನು ಕೊಟ್ಟರು. ರೋಜಾಬಾಯಿಯವರ ಹಿರಿಯರ ಇತಿಹಾಸ ಇವರಿಗೆ ಗೊತ್ತಿಲ್ಲ. ರಂಗಪ್ಪಯ್ಯನವರು ತಮ್ಮ ಮನೆತನದ ವಿವರ ಹೇಳುವಾಗ "ಕುಂದಗೋಳ ತಾಲ್ಲೂಕು ಕುಬಿಹಾಳ ಸರಹದ್ದನಲ್ಲಿ ನಮಗೆ ಸಂಬಂಧಪಟ್ಟ ಜಮೀನಿತ್ತಂತೆ, ಮತ್ತು ಆ ಜಮೀನನ್ನು ನಮ್ಮ ವಾಡೆಯ ವಂಶಾವಳಿಯವರೆ ನೋಡಿಕೊಳ್ಳುತ್ತಿದ್ದರಂತೆ" ಎಂದು ಹೇಳಿದರು. ಈ ಮಾಹಿತಿಯನ್ನು ಆಧರಿಸಿ ಕುಬಿಹಾಳಕ್ಕೆ ಹೋಗಿ ವಿಚಾರಿಸಿದಾಗ ಅಲ್ಲಿ ದೇಶಪಾಂಡೆ ಮನೆತನದವರಾರೂ ಇಲ್ಲದ್ದು ತಿಳಿದುಬಂತು. ಕುಬಿಹಾಳದ ಸರಹದ್ದಿಗೆ ಹೊಂದಿಕೊಂಡ ಬುಳ್ಳಪ್ಪನಕೊಪ್ಪ ಗ್ರಾಮದಲ್ಲಿ ದೇಶಪಾಂಡೆ ವಂಶಸ್ಥರು ಇರುವುದು ಕಂಡುಬಂತು. ಒಂದೇ ಮೂಲದ ಎರಡು ದೇಶಪಾಂಡೆ ಕುಟುಂಬಗಳು ಈ

ಊರಲ್ಲಿವೆ. ಶ್ರೀ ಆದಪ್ಪ ಮಾಸ್ತರ ದೇಶಪಾಂಡೆ ಮತ್ತು ಶ್ರೀ ಹನುಮಂತರಾಯ ಮಾಸ್ತರ ದೇಶಪಾಂಡೆ ಎಂಬುವವರವು ಆ ಕುಟುಂಬಗಳು. ಈ ಎರಡೂ ಕುಟುಂಗಳು ತಾವು ಮುಳುಗುಂದ ವಾಡೆಯ ವಂಶಸ್ಥರೆಂದೇ ಹೇಳಿಕೊಳ್ಳುತ್ತಾರೆ. ಮೌಖಿಕ ಆಧಾರ ಹೊರತುಪಡಿಸಿ ಲಿಖಿತ ಆಧಾರಗಳಾವುವು ದೊರೆಯಲಿಲ್ಲ.

ಬುಳ್ಳಪ್ಪಳಕೊಪ್ಪದ ದೇಶಪಾಂಡೆಯವರು ಮುಳುಗುಂದ ವಾಡೆಯ ವಂಶಸ್ಥರೇ ಎಂಬುದಕ್ಕೆ ಇನ್ನೊಂದು ಪ್ರಬಲ ಮೌಖಿಕ ಆಧಾರ ಹೆಳವರ (ಹೇಳುವರು). ಇವರ ದಾಖಲೆಯ ಪ್ರಕಾರ ಬುಳ್ಳಪ್ಪನಕೊಪ್ಪದ ದೇಶಪಾಂಡೆಯವರು ಮುಳುಗುಂದ ವಾಡೆಯಿಂದ ಬಂದವರು. ಜೊತೆಗೆ ಇವರಿಬ್ಬರೂ ಅಣ್ಣತಮ್ಮಂದಿರು ಎಂಬ ಅಂಶ ಸ್ಪಷ್ಟವಾಗುತ್ತದೆ. ಬಹುಶ: ವಾಡೆಯ ಉತ್ತರಾಧಿಕಾರತ್ವ ಜೇಷ್ಠಪುತ್ರನಿಗೆ ಮಾತ್ರ ಸಲ್ಲುತ್ತಿದ್ದು, ಅವನ ಸಹೋದರರಿಗೆ ಇಂತಿಷ್ಟು ಹೊಲ-ನೆಲಗಳನ್ನು ಕೊಟ್ಟು ಅದನ್ನು ನೋಡಿಕೊಳ್ಳಲು ಹೊಲ ಇರುವ ಸೀಮೆಗೆ ಕಳುಹಿಸುತ್ತಿದ್ದರು. ಹಾಗೆ ಬಂದವರೆ ಬುಳ್ಳಪ್ಪನ ಕೊಪ್ಪದ ದೇಶಪಾಂಡೆಯವರು.

ಹೇಳುವವರ (ಹೇಳುವರು) ದಾಖಲೆಯ ಪ್ರಕಾರ ಬುಳ್ಳಪ್ಪನ ಕೊಪ್ಪದ ದೇಶಪಾಂಡೆಯವರು ಮೂಲದಲ್ಲಿ ಲಿಂಗದಾಳದವರು. ದೆಹಲಿ ಬಾದಶಹ ಅಪಾರ ಕಪ್ಪ ಕಾಣಿಕೆಯನ್ನು ಇವರಲ್ಲಿ ಬೇಡಿದಾಗ, ಇವರು ಅಷ್ಟೊಂದು ಪ್ರಮಾಣದ ಕಾಣಿಕೆ ಕೊಡಲು ನಿರಾಕರಿಸಿದರು. ಬಾದಶಹನ ಮುತಾಲಿಕ ಈ ಮನೆತನದ ಸುಂದರ ಕುಮಾರಿ ಪದ್ಮಾವತಿಯನ್ನು ಕಪ್ಪಕಾಣಿಕೆ ಬದಲಾಗಿ ಬಾದಶಹನಿಗೆ ಕೊಡಿ ಎಂದ. ಆಗ ದೊಡ್ಡ ವೆಂಕಪ್ಪ ಮತ್ತು ಸಣ್ಣವೆಂಕಪ್ಪ ಮುತಾಲಿಕ್ ಮತ್ತು ಅವನ ದಂಡನ್ನು ಹೊಡೆದು ಊರು ಬಿಟ್ಟರು. ಈ ಅವಮಾನ ತಿಳಿದು ಬಾದಶಹ ಇವರ ಬೆನ್ನುಹತ್ತಿದ. ಮೈದುಂಬಿ ಹರಿಯುತ್ತಿದ್ದ ಹಿರೇಹೊಳಿ (ಕೃಷ್ಣಾನದಿ) ದಾಟಿ ದೊಡ್ಡ ವೆಂಕಪ್ಪ ಅವರ ಪರಿವಾರ ದಾಟಿ ಬಂತು. ಈ ಹಿರೇಹೊಳಿ ದಾಟಲಾಗದ ಬಾದಶಹನ ದಂಡು ಮರಳಿ ಹೋಯಿತು. ಇತ್ತ ದೊಡ್ಡವೆಂಕಪ್ಪ ಮತ್ತು ಕುಟುಂಬ ಮುಳುಗುಂದಕ್ಕೆ ಬಂದು ನೆಲೆಸಿತು. ಈ ಊರಲ್ಲಿ ಇವರು ದೇಸಾಯಿಕೆ ಪಡೆದುಕೊಂಡು ವಾಡೆ ನಿರ್ಮಾಣ ಮಾಡಿದರು. ನಂತರ ಇವರು ಯಳವಟ್ಟಿ, ನೆಲಗುಡ್ಡ, ತರ್ಲಘಟ್ಟದ ಹತ್ತಿರವಿರುವ ಬುಕೊಪ್ಪ (ಬುಳ್ಳಪ್ಪನಕೊಪ್ಪ) ಗ್ರಾಮದಲ್ಲಿ ಬಂದು ನೆಲೆಸಿದರು. ಇವರ ಮೂಲ ವಂಶಾವಳಿ ಎಂತೆಂದರೆ



ಮೂಲ ವಂಶಾವಳಿ ಹೇಳುವ ಹೆಳವರು ದೊಡ್ಡವೆಂಕಪ್ಪ ದೇಸಾಯಿ, ಸಣ್ಣವೆಂಕಪ್ಪ ದೇಸಾಯಿಯವರ ಮಕ್ಕಳ ಹೆಸರು ಹೇಳುವುದಿಲ್ಲ. ಅವರ ಹೆಸರು ಹೇಳಿ ಹನುಮಂತರಾಯನಿಂದ ವಂಶಾವಳಿ ಪ್ರಾರಂಭವಾಗುತ್ತದೆ. ನಂತರ ವೆಂಕಪ್ಪ, ಚಳ್ಳಪ್ಪ, ವೆಂಕಪ್ಪ ಹೀಗೆ ಏಳು ತಲೆಮಾರುಗಳ ವಂಶಾವಳಿ ಹೇಳುತ್ತಾರೆ. ಹೆಳವರ ದಾಖಲೆಯ ಪ್ರಕಾರ ಕೊಪ್ಪದ ದೇಶಪಾಂಡೆಯವರು ಮುಳುಗುಂದ ವಾಡೆಯಿಂದ ಬಂದದ್ದು ಸ್ಪಷ್ಟ. ಹನುಮಂತರಾಯ ಇಲ್ಲಿ ವಲಸೆ ಬಂದಹಾಗೆ ಕಾಣುತ್ತದೆ. ಹೇಳುವವರ ದಾಖಲೆಯಲ್ಲಿ ಬರುವ ದೆಹಲಿಯ ಬಾದಶಹ ಉತ್ಪ್ರೇಕ್ಷೆಗೆ ಸೇರಿರಬಹುದು. ಅಥವಾ ವಂಶದ ಹಿರಿಮೆ ಸಾರಲು ಅವರದೆ ಒಂದು ಕಥಾಹಂದರ ಸೃಷ್ಟಿಸಿರಬಹುದು. ಆದರೆ ವಂಶಾವಳಿ ಮಾತ್ರ ಕರಾರುವಕ್ಕಾಗಿಯೇ ಬಂದಿದೆ.

ಮುಳುಗುಂದ ವಾಡೆಯ ಮೂಲಪುರುಷರು ವೆಂಕಹೊನ್ನಪ್ಪಯ್ಯ, ವೆಂಕಪ್ಪಯ್ಯ ಇಬ್ಬರು ಸಹೋದರರನ್ನು ಹೆಳವರು ದೊಡ್ಡವೆಂಕಪ್ಪ, ಸಣ್ಣವೆಂಕಪ್ಪ ಎಂದು ಕರೆದಿದ್ದಾರೆ. ಕೊಪ್ಪದ ದೇಶಪಾಂಡೆಯವರ ಮತ್ತು ಮುಳುಗುಂದ ದೇಶಪಾಂಡೆಯವರ ಮೂಲ ಪುರುಷರು ಹೊಂದಾಣಿಕೆಯಾಗುತ್ತಾರೆ. ವೆಂಕಪ್ಪ ಅನ್ನುವ ನಾಮಾವಳಿ ಬುಳ್ಳಪ್ಪನ ಕೊಪ್ಪದ ದೇಶಪಾಂಡೆಯವರಲ್ಲಿ ಪುನರಾವರ್ತನೆಯಾಗಿದೆ. ಹಾಗೆ ಮುಳುಗುಂದದ ವೆಂಕಪ್ಪಯ್ಯನ ಮಗ ನಾಗಪ್ಪಯ್ಯನ ಹೆಸರು ಆ ವಂಶದಲ್ಲಿ ಪುನರಾವರ್ತನೆಯಾಗಿದ್ದು, ಕೊಪ್ಪದ ದೇಶಪಾಂಡೆ ಆದಪ್ಪಮಾಸ್ತರ ಮಗನಿಗೆ ಪುನರಾವರ್ತನೆಯಾಗಿದೆ. ಇದೆ ಆದಪ್ಪಮಾಸ್ತರರ ಸಹೋದರಿ ರತ್ನವ್ವ ಅವರ ಮಗಳಿಗೆ ರೋಜಾಬಾಯಿ ಎಂಬ ಹೆಸರು ಇಟ್ಟಿದ್ದಾರೆ. ಈ ಹೆಸರು ಮುಳುಗುಂದದ ೨ನೆಯ ನಾಗಪ್ಪಯ್ಯನ ಪತ್ನಿ (ರೋಜಾಬಾಯಿ)ಯವರದ್ದು ಆಗಿತ್ತು. ಮತ್ತು ವಂಶಪಾರಂಪರ್ಯ

ಹೆಸರುಗಳು ಪುನರಾವರ್ತನೆಯಿಂದ ಬುಳ್ಳಪ್ಪನಕೊಪ್ಪದ ದೇಶಪಾಂಡೆಯವರು ಮತ್ತು ಮುಳುಗುಂದ ವಾಡೆಯ ದೇಶಪಾಂಡೆಯವರು ಸಹೋದರರೆಂಬುದು ಖಚಿತವಾಗಿದೆ.

## ಮುಳುಗುಂದ ದೇಶಪಾಂಡೆಯವರು ಮೂಲ ಅಣ್ಣಿಗೇರಿಯೆ?

ದೇಶಪಾಂಡೆ ಎಂಬ ಜೈನ ಮನೆತನ ಮುಳುಗುಂದ, ಬುಳ್ಳಪ್ಪನಕೊಪ್ಪದಲ್ಲಿ ಇರುವುದಲ್ಲದೇ ಅಣ್ಣಿಗೇರಿಯಲ್ಲೂ ಇದೆ. ಅಣ್ಣಿಗೇರೆ ದೇಶಪಾಂಡೆಯವರದ್ದು ಹಳೆಯದಾದ ವಾಡೆ ಇದೆ. ಇವರ ವಂಶದ ಪೂರ್ವಿಕರಲ್ಲಿ ಆದಿಕವಿ ಪಂಪನೂ ಒಬ್ಬ ಎಂಬುದು ಜನಮಾನಸದಲ್ಲಿ ನಿಂತಿದೆ. ಮುಳುಗುಂದ ದೇಶಪಾಂಡೆ ವಾಡೆಗೂ ಮತ್ತು ಅಣ್ಣಿಗೇರೆ ದೇಶಪಾಂಡೆ ವಾಡೆಗು ಸಂಬಂಧವಿದೆಯೇ ಎಂಬ ಪ್ರಶ್ನೆಗೆ ಮುಳುಗುಂದ ವಾಡೆಯ ರೋಜಾಬಾಯಿಯವರ ಮೊಮ್ಮಗಳು, ರಂಗಪ್ಪಯ್ಯ ನಾಗಪ್ಪಯ್ಯ ದೇಶಪಾಂಡೆಯವರ ಸಹೋದರಿಯೂ ಆದ ಶ್ರೀಮತಿ ನಿರ್ಮಲಾದೇವಿ ಹೊಂಬಣ್ಣನವರು ಹೌದು ಎನ್ನುತ್ತಾರೆ. ನಮ್ಮ ಪೂರ್ವಿಕರ ಅಣ್ಣಿಗೇರಿ ವಾಡೆಯಿಂದ ಮುಳುಗುಂದ ವಾಡೆಗೆ ಯಾವಾಗ ಬಂದರೋ ತಿಳಿಯದು ಆದರೆ ಅವರು ನಾವು ಸಂಬಂಧಿಕರು ಎಂದು ನಮ್ಮ ಅಜ್ಜಿ ರೋಜಾಬಾಯಿಯವರು ಹೇಳುತ್ತಿದ್ದರು ಎಂದು ನಿರ್ಮಲಾದೇವಿಯವರು ಹೇಳುತ್ತಾರೆ. ಇದೇ ರೀತಿಯ ಅಭಿಪ್ರಾಯವನ್ನು ಅಣ್ಣಿಗೇರಿ ವಾಡೆಯ ಭೀಮಪ್ಪಯ್ಯನವರ ಪತ್ನಿ ಶ್ರೀಮತಿ ಸುನಂದಾಬಾಯಿಯವರು ವ್ಯಕ್ತಪಡಿಸುತ್ತಾರೆ. ಮುಳುಗುಂದ ದೇಶಪಾಂಡೆಯವರು ನಮ್ಮ ಸಂಬಂಧಿಕರೆ ಆದರೆ ಮೂಲಕುಟುಂಬದಿಂದ ಅವರು ಯಾವಾಗ ವಲಸೆ ಹೋದರೋ ತಿಳಿಯದು ಎನ್ನುತ್ತಾರೆ. ಬಹುಶ: ಈ ವಲಸೆ ಕ್ರಿಯೆ ಅಣ್ಣಿಗೇರಿ ದೇಶಪಾಂಡೆ ವಂಶಾವಳಿಯ ೪ನೆಯ ತಲೆಮಾರಿನ ಚಾಮರಸ್ಯರ ಕಾಲಕ್ಕೆ ಅಥವಾ ೭ನೆಯ ತಲೆಮಾರಿನ ರಾಮರಸಯ್ಯರ ಕಾಲಕ್ಕೆ ಆದಂತೆ ಕಾಣುತ್ತದೆ. ಯಾಕೆಂದರೆ ಇವರ ಹಿರಿಯರ ಹೆಸರು ನಾಗರಸಯ್ಯ, ನಾಗಪ್ಪಯ್ಯ ಎಂದಿರುವುದೇ ಈ ಹೇಳಿಕಗೆ ಮೂಲ. ಕ್ರಿ.ಶ.೧೬೭೫ರಲ್ಲಿ ಮುಳುಗುಂದದ ವಂಶಾವಳಿಯಲ್ಲಿ ನಾಗಪ್ಪಯ್ಯ ಎಂಬ ವ್ಯಕ್ತಿ ಕಂಡುಬರುವುದರಿಂದ ರಾಮರಸಯ್ಯ, ಚಾಮರಸಯ್ಯ, ರಾಮರಸ್ಯಯ ಇವರಲ್ಲಿ ಒಬ್ಬರು ಅಥವಾ ಈ ವಂಶಾವಳಿಯ ವ್ಯಕ್ತಿಯೊಬ್ಬರು ನಾಗಪ್ಪಯ್ಯನ ಅಜ್ಜನೋ ಮುತ್ತಜ್ಜನೋ ಆಗಿರಬೇಕು. ಈ ಮುತ್ತಜ್ಜನ ಅಪ್ಪನ ಹೆಸರು ನಾಗರಸಯ್ಯ ಅಥವಾ ನಾಗಪ್ಪಯ್ಯನ ಹೆಸರು ಮುಳುಗುಂದ ನಾಗಪ್ಪಯ್ಯನಿಗೂ ಬಂದಿದೆ. ಉತ್ತರ ಕರ್ನಾಟಕದಲ್ಲಿ ಅಜ್ಜ, ಮುತ್ತಜ್ಜನ ಹೆಸರನ್ನು ಮಕ್ಕಳಿಗೆ ಇಡುವುದು ರೂಢಿಯಾಗಿ ಬಂದಿದೆ. ಹಿರಿಯರ ಹೆಸರು ಮಕ್ಕಳಿಗೆ ಇಡುವುದು ಅವರಿಗೆ ತೋರುವ ಗೌರವ ಸಂಕೇತವೂ ಹೌದು.

ನಾಗಪ್ಪಯ್ಯ ಎಂಬ ಹೆಸರು ಮುಳುಗುಂದ ವಾಡೆಯಲ್ಲಿ ಒಟ್ಟು ನಾಲ್ಕು ಜನಕ್ಕಿದೆ. ಬನದಾಂಬಿಕೆಯ ಪತಿ ೧ನೆಯ ನಾಗಪಯ್ಯ (ಕ್ರಿ.ಶ. ೧೬೭೫), ರಂಗಪ್ಪಯ್ಯನವರ ತಂದೆ ೨ನೆಯ ನಾಗಪ್ಪಯ್ಯ (ಕ್ರಿ.ಶ. ೧೮೫೦), ಅದೇ ರಂಗಪ್ಪಯ್ಯನವರ ಮಗ ೩ನೆಯ ನಾಗಪ್ಪಯ್ಯ (ರೋಜಾಬಾಯಿಯವರ ಪತಿ) ಮತ್ತು ಸದ್ಯದ ರಂಗಪ್ಪಯ್ಯರ ಮಗ ೪ನೆಯ ನಾಗಪ್ಪಯ್ಯ

(ನಾಗರಾಜ) ನವರೆ ನಾಲ್ಕು ನಾಗಪ್ಪಯ್ಯಂದಿರು. ನಾಗಪ್ಪಯ ಎಂಬ ಹೆಸರು ಸದ್ಯದ ಅಣ್ಣಿಗೇರಿ ದೇಶಪಾಂಡೆ ವಾಡೆಯ ಮುಖ್ಯಸ್ಥರದ್ದು ಹೌದು. ಇದೇ ಹೆಸರು ಬುಳ್ಳಪ್ಪನಕೊಪ್ಪದ ದೇಶಪಾಂಡೆ ಆದಪ್ಪ ಮಾಸ್ತರ ಹಿರಿಯ ಮಗನಿಗೂ (ನಾಗರಾಜ) ಮತ್ತು ಅವರ ಮಗಳ ಎರಡನೆಯ ಮಗನಿಗೆ ಇಡಲಾಗಿದೆ. ನಾಗರರಸಯ್ಯ, ನಾಗಪ್ಪಯ್ಯ, ನಾಗರಾಜ ಎಂಬ ಹೆಸರುಗಳು ಬಹುಶ: ನಾಗಾರಾಧನೆಯಿಂದ ಬಂದಂತಿದೆ. ಈ ಹೆಸರುಗಳು ಅಣ್ಣಿಗೇರೆ, ಮುಳುಗುಂದ, ಬುಳ್ಳಪ್ಪನಕೊಪ್ಪದ ದೇಶಪಾಂಡೆಯವರ ವಂಶಗಳಲ್ಲಿ ಕಂಡುಬರುತ್ತಿದ್ದು ಈ ಮೂರು ವಂಶಗಳು ಮೂಲದಲ್ಲಿ ಒಂದೇ ಆಗಿದ್ದವು. ಪ್ರಸ್ತುತ ಐದು ಜೈನ ವಾಡೆಗಳ ಮನೆತನಗಳು ಅಧಿಕಾರ ಹಿಡಿಯುವಲ್ಲಿ ಪ್ರಾದೇಶಿಕ ಪರಿಸರದ ಪ್ರಭಾವ, ಧರ್ಮ ಪ್ರಭಾವ, ಮನೆತನದ ಹಿರಿಯರ ಶ್ರಮದ ಫಲ ಇದೆ. ಹಿರಿಯರು ಪಡೆದುಕೊಟ್ಟ ಅಧಿಕಾರವನ್ನು ಸಮರ್ಥವಾಗಿ ನಿಭಾಹಿಸಿ ಈಗಲೂ ಅಧಿಕಾರದ ಕೇಂದ್ರವಾದ ವಾಡೆಯನ್ನು ಕಾಪಿಟ್ಟುಕೊಂಡು ಕೀರ್ತಿ ಸದ್ಯದ ವಾಡೆಯ ಸದಸ್ಯರಿಗೆ ಸಲ್ಲುತ್ತದೆ.

**ಅಡಿಟಿಪ್ಪಣಿಗಳು**

೧. ಕರ್ನಾಟಕ ಇನ್‌ಸ್ಕ್ರಿಪ್ಶನ್ ಸಂಪುಟ-೫, ಸಂಖ್ಯೆ-೨೧, ಕ್ರಿ.ಶ. ೧೧೨೫, ತೇರದಾಳ [(ಜಮಖಂಡಿ ತಾಲ್ಲೂಕು ಬಿಜಾಪುರ ಜಿಲ್ಲೆ) ಈಗ ತೇರದಾಳ ತಾಲ್ಲೂಕು ಬಾಗಲಕೋಟೆ ಜಿಲ್ಲೆ)] ಪುಟ ೭೫-೮೩.

೨. ಕರ್ನಾಟಕ ರಾಜ್ಯ ಗ್ಯಾಸೆಟಿಯರ್ - ವಿಜಾಪುರ ಜಿಲ್ಲೆ (ಬಾಗಲಕೋಟೆ ಜಿಲ್ಲೆಯೂ ಸೇರಿದಂತೆ) ಪರಿಷ್ಕೃತ ಆವೃತ್ತಿ ೧೯೯೯, ಪುಟ-೧೦೯೧.

೩. ಸುಧೀರ ಹುಲ್ಲೋಳಿ. ಕೊಣ್ಣೂರು. ಗೋಕಾಕ ತಾಲ್ಲೂಕು, ಬೆಳಗಾವಿ ಜಿಲ್ಲೆ, ವಯಸ್ಸು-೪೦, ಸಂದರ್ಶನ ದಿನಾಂಕ: ೧೫-೦೧-೨೦೧೫.

೪. ಪಂಚಪದ = ಜೈನರ ಪವಿತ್ರ ಮಂತ್ರ. ಈ ಮಂತ್ರದಲ್ಲಿ ಅರಹಂತ, ಸಿದ್ಧ, ಆಚಾರ್ಯರು ಉಪಾಧ್ಯಾಯರು, ಸರ್ವಸಾಧುಗಳನ್ನು ಸ್ಮರಿಸಲಾಗುತ್ತದೆ.

ಓಂ ಣಮೋ ಅರಹಂತಾಣಂ
ಣಮೋ ಸಿದ್ಧಾಣಂ
ಣಮೋ ಆಯಿರಿಯಾಣಂ
ಣಮೋ ಉವಝ್ಝಾಯಾಣಂ
ಣಮೋ ಲೋಏ ಸವ್ವಸಾಹೂಣಂ ॥

೫. ಕರ್ನಾಟಕ ಇನ್‌ಸ್ಕ್ರಿಪ್ಶನ್ ಸಂಪುಟ-೫, ಸಂಖ್ಯೆ-೨೧, ಕ್ರಿ.ಶ. ೧೧೨೫, ತೇರದಾಳ [(ಜಮಖಂಡಿ ತಾಲ್ಲೂಕು ಬಿಜಾಪುರ ಜಿಲ್ಲೆ) ಈಗ ತೇರದಾಳ ತಾಲ್ಲೂಕು ಬಾಗಲಕೋಟೆ ಜಿಲ್ಲೆ)] ಪುಟ-೭೯.

೬. ಅದೇ ಪುಟ-೮೨.

೭. ಅದೇ ಸಂಖ್ಯೆ-೧೩೪, ಕ್ರಿ.ಶ. ೧೭೪೮, ತೇರದಾಳ [(ಜಮಖಂಡಿ ತಾಲ್ಲೂಕು ಬಿಜಾಪುರ ಜಿಲ್ಲೆ) ಈಗ ತೇರದಾಳ ತಾಲ್ಲೂಕು ಬಾಗಲಕೋಟೆ ಜಿಲ್ಲೆ)] ಪುಟ-೩೩೨.

೮. PUNE ARCHIVES, PUNE ಇಲ್ಲಿಂದ ಕೊಡಮಾಡಲ್ಪಟ್ಟ ಹನಗಂಡಿ ದೇಸಾಯಿ ಮತ್ತು ತೇರದಾಳ ನಾಡಗೌಡರ ವಂಶಾವಳಿ.

೯. ಅದೇ ವಂಶಾವಳಿ.

೧೦. ಅದೇ ವಂಶಾವಳಿ.

೧೧. ಸಂಕ್ಷಿಪ್ತ ಕನ್ನಡ ನಿಘಂಟು (ಪರಿಷ್ಕೃತ) ಕನ್ನಡ ಸಾಹಿತ್ಯ ಪರಿಷತ್ತು. ೨೦೦೧ ಪು-೩೪೭.

೧೨. ಅಲಗೌಡ ಸಿ ಪಾಟೀಲ - ಹನಗಂಡಿ ದೇಸಗತಿ [(ಅಪ್ರಕಟಿತ ಎಂ.ಫಿಲ್ ಪ್ರಬಂಧ), ಕನ್ನಡ ವಿಶ್ವವಿದ್ಯಾಲಯ ಹಂಪಿ)] ೨೦೦೯ ಪುಟ ೧೪-೧೫.

೧೩. ಶ್ರೀ ಕೃಷ್ಣಗೌಡ ಅಲ್ಲಪ್ಪ ದೇಸಾಯಿ, ವಯಸ್ಸು-೪೦, ಸಂದರ್ಶನದ ದಿನಾಂಕ: ೧೩-೧೨-೨೦೧೪, ಹನಗಂಡಿ.

೧೪. ಶ್ರೀಮತಿ ಜಯಶ್ರೀ ಅಮ್ಮ ಪಾರ್ಶ್ವನಾಥ ನಾಡಗೌಡ್ರ, ವಯಸ್ಸು-೭೦, ದಿನಾಂಕ: ೧೪-೧೨-೨೦೧೪, ತೇರದಾಳ.

೧೫. ಬುದ್ಧಯ್ಯ ಸ್ವಾಮಿ ಪುರಾಣಿ, ಶ್ರೀಮದನಾದಿ ಶ್ರೀ ಅಲ್ಲಮಪ್ರಭು, ದ್ವಿತೀಯ ಮುದ್ರಣ ೨೦೦೮ ಪುಟ-೫೧.

೧೬. ಕರ್ನಾಟಕ ಇನ್‌ಸ್ಕ್ರಿಪ್ಶನ್ ಸಂಪುಟ ೫ ಸಂಖ್ಯೆ – ೧೨೪, ಕ್ರಿ.ಶ. ೧೭೪೮ ತೇರದಾಳ [(ಜಮಖಂಡಿ ತಾಲ್ಲೂಕು ಬಿಜಾಪುರ ಜಿಲ್ಲೆ) ಈಗ ಬಾಗಲಕೋಟೆ ಜಿಲ್ಲೆ)] ಪುಟ ೩೩೨

೧೭. PUNE ARCHIVES, PUNE ಪತ್ರಗಾರ ಇಲಾಖೆಯಿಂದ ತೆಗೆಯಿಸಿದ ಹನಗಂಡಿ ದೇಸಾಯಿ ಮತ್ತು ತೇರದಾಳ ನಾಡಗೌಡರ ವಂಶಾವಳಿ ದಾಖಲೆ. ಪ್ರಬಂಧದ ಕೊನೆಗೆ ಅಂಟಿಸಲಾಗಿದೆ.

೧೮. ಕುಂಚ ಅಥವಾ ಪಿಂಛಿ + ನವಿಲು ಗರಿಗಳಿಂದ ಮಾಡಿದ ಸಾಧನ. ಈ ಗರಿಗಳು ನವಿಲಿನಿಂದ ತಾವಾಗಿಯೇ ಉದುರಿರಬೇಕು. ಜಿನಮುನಿಗಳು ತಾವು ಕುಳಿತುಕೊಳ್ಳುವ ಜಾಗವನ್ನು ಇದರಿಂದ ಸ್ವಚ್ಛಮಾಡಿ ಕುಳಿತುಕೊಳ್ಳುತ್ತಾರೆ. ಯಾಕೆಂದರೆ ಆ ಜಾಗೆಯಲ್ಲಿ ಸೂಕ್ಷ್ಮ ಕ್ರಿಮಿ ಅಥವಾ ಕೀಟಗಳಿದ್ದು ಕುಳಿತಾಗ ಅವು ಸತ್ತರೆ ಹಿಂಸೆಯಾಗುತ್ತದೆ. ನವಿಲು ಗರಿ ಮೃದುವಾಗಿರುವುದರಿಂದ ಅದರಿಂದ ಶುಚಿಗೊಳಿಸಿದಾಗ ಕ್ರಿಮಿ ಕೀಟಗಳು ಸಾಯುವುದಿಲ್ಲ.

೧೯. ಜಿನಿಮುನಿಗಳ ಕೇಶಲೋಚನ (ತಮ್ಮ ತಲೆಗೂದಲು, ಮೀಸೆ, ಗಡ್ಡಗಳನ್ನು ಬೆರಳ ಹದಡದಿಂದ ಕೀಳುವುದು)ದ ಸಂದರ್ಭದಲ್ಲಿ ಅವರ ಕಮಂಡಲ (ಮಗಿ) ಮತ್ತು ಪಿಂಛಿಗಳನ್ನು ಹರಾಜು ಹಾಕುವ ಪ್ರಕ್ರಿಯೆ ಇಂದಿಗೂ ನಡೆಯುತ್ತದೆ. ಇಷ್ಟಪಟ್ಟ ಶ್ರಾವಕರು ತಮಗೆ ಬೇಕಾದ ಮಗಿಯನ್ನೋ, ಪಿಂಛಿಯನ್ನೋ ಕೊಂಡುಕೊಂಡು ಮನೆಯಲ್ಲಿ ಪೂಜೆ ಮಾಡುವ ಪರಿಪಾಠ ಈಗಲೂ ನಡೆದುಕೊಂಡು ಬರುತ್ತಿದೆ. ಹನಗಂಡಿ ದೇಸಾಯಿಗಳು ಮುನಿಗಳ ಕೇಶಲೋಚನ ಸಂದರ್ಭದಲ್ಲಿ ಮಗಿಯನ್ನು ಕೊಂಡುಕೊಂಡಿರಬಹುದು.

೨೦. ನೋಡಿ ತೇರದಾಳ ನಾಡಗೌಡ ವಾಡೆಯ ಪರಿಸರ ಮತ್ತ ಇತಿಹಾಸ

೨೧. ಕರ್ನಾಟಕ ಇನ್‌ಸ್ಕ್ರಿಪ್ಶನ್ ಸಂಪುಟ ೫ ಸಂಖ್ಯೆ ೯೮, ಕ್ರಿ.ಶ. ೧೧೮೪ ತೇರದಾಳ [(ಜಮಖಂಡಿ ತಾಲ್ಲೂಕು ಬಿಜಾಪುರ ಜಿಲ್ಲೆ) ಈಗ ಬಾಗಲಕೋಟೆ ಜಿಲ್ಲೆ)] ೨೬೬ ಸಾಲು ೯ ರಿಂದ ೧೨.

೨೨. ಅದೇ ಸಂಖ್ಯೆ – ೧೨೪ ಕ್ರಿ.ಶ. ೧೭೪೮ ತೇರದಾಳ [(ಜಮಖಂಡಿ ತಾಲ್ಲೂಕು ಬಿಜಾಪುರ ಜಿಲ್ಲೆ) ಈಗ ಬಾಗಲಕೋಟೆ ಜಿಲ್ಲೆ)] ಪುಟ-೩೩೨.

೨೩. ಶ್ರೀ ರಾಹುಲ ಸುಭಾಸ್ ನಾಯಕ, ದರೂರ. ವಯಸ್ಸು-೩೫. ಸಂದರ್ಶನ ದಿನಾಂಕ: ೨೨-೧೧-೨೦೧೨.

೨೪. PUNE ARCHIVES, PUNE ಪತ್ರಾಗಾರ ಇಲಾಖೆಯಿಂದ ತೆಗೆಯಿಸಿದ ಹನಗಂಡಿ ದೇಸಾಯಿ ಮತ್ತು ತೇರದಾಳ ನಾಡಗೌಡರ ವಂಶಾವಳಿ.

೨೫. ಬುದ್ಧಯ್ಯ ಸ್ವಾಮಿ ಪುರಾಣಿಕ – ಶ್ರೀಮದನಾದಿ ಶ್ರೀ ಅಲ್ಲಮಪ್ರಭು, ದ್ವಿತೀಯ ಮುದ್ರಣ ೨೦೦೮. ಪುಟ–೫೧.

೨೬. ನಾಡೋಜ ಪ್ರೊ. ಹಂಪನಾ – ಅರಸೀಕೆರೆ ಸಹಸ್ರಕೂಟ ಜಿನಾಲಯ, ೨೦೧೪. ಪುಟ–೪೭.

೨೭. ಡಾ. ಅಪ್ಪಣ್ಣ ಎನ್ ಹಂಜೆ – ಅಣ್ಣಿಗೇರಿಯ ಜೈನ ದೇಸಗತಿ ಮನೆತನ (ಆದಿಕವಿ ಪಂಪನ ವಂಶಸ್ಥರು). ಶೋಧ ಸಂಪುಟ–೩ ಸಂಚಿಕೆ–೧ ಜುಲೈ–೨೦೧೩. ಪುಟ–೩೩.

೨೮. ಪಿ.ಜಿ. ಕೆಂಪಣ್ಣವರ, ಟಿ.ಆರ್. ಜೋಡಟ್ಟಿ (ಸಂ) – ಜೈನ ಕ್ಷೇತ್ರಗಳ ಐತಿಹ್ಯ. ೧೯೯೦. ಪುಟ–೨೪–೨೫.

೨೯. ಹಂಪ ನಾಗರಾಜ್ಯ – ದಾನ ಚಿಂತಾಮಣಿ ಅತ್ತಿಮಬ್ಬೆ, ೨೦೧೦, ಪುಟ–೧೧.

೩೦. ಡಾ॥ ಎಂ.ಎಂ. ಕಲಬುರ್ಗಿ – ಮಾರ್ಗ ಸಂಪುಟ–೩. ಪರಿಷ್ಕೃತ ಮುದ್ರಣ – ೨೦೧೦. ಪುಟ–೩೬೮.

೩೧. ಡಾ॥ ಎಂ.ಎಂ. ಕಲಬುರ್ಗಿ – ಕರ್ನಾಟಕದ ಅಂದಿನ ಶ್ರೇಷ್ಠ ಇಂದಿನ ವಂಶಸ್ಥರು ಮತ್ತು ಕುರುಹುಗಳು ೨೦೧೩. ಪುಟ–೧೦.

೩೨.

೩೩. ಡಾ. ಎಂ. ಚಿದಾನಂದ ಮೂರ್ತಿ, ಪೂರ್ವೋಕ್ತ ಪುಟ–೬–೭.

೩೪. ಡಾ. ಎಂ.ಎಂ. ಕಲಬುರ್ಗಿ – ಮಾರ್ಗ ಸಂಪುಟ–೧, ೧೯೯೫. ಪುಟ–೩೭.

೩೫. ಡಾ. ಅಪ್ಪಣ್ಣ ಎನ್ ಹಂಜೆ, ಪೂರ್ವೋಕ್ತ, ಪುಟ–೮೨.

೩೬. ಡಾ. ಎಂ.ಎಂ. ಕಲಬುರ್ಗಿ, ಡಾ.ಪಿ.ಕೆ. ರಾಠೋಡ (ಸಂ) – ಶ್ರೀ ಜಗದ್ಗುರು ತೋಂಟದಾರ್ಯ ಸಂಸ್ಥಾನ ಮಠದ ದಾಖಲು ಸಾಹಿತ್ಯ ಸಂಪುಟ: ಒಂದು. ಪುಟ–೮೩–೮೪.

೩೭. ಡಾ. ಅಪ್ಪಣ್ಣ ಎನ್ ಹಂಜೆ ಪೂರ್ವೋಕ್ತ ಪುಟ–೮೨–೪೩.

೩೮. ಅಪ್ಪಣ್ಣ ಎನ್ ಹಂಜೆ – ಅಣ್ಣೀಗೆರಿಯ ಎರಡು ಜೈನ ಶಿಲಾಫಲಕ ಶಾಸನಗಳು, ಪುಟ–೫೭.

೩೯. ಶ್ರೀ ಸಾತಪ್ಪ ಚಂದ್ರಪ್ಪ ಬಸ್ತಿ, ಅಣ್ಣಿಗೇರಿ, ವಯಸ್ಸು–೮೦. ಸಂದರ್ಶನ ದಿನಾಂಕ: ೨೩–೧೧–೨೦೧೩.

೪೦. ಅಪ್ಪಣ್ಣ ಎನ್ ಹಂಜೆ ಪೂರ್ವೋಕ್ತ ಪುಟ–೫೮.

೪೧. ಡಾ. ಧನವಂತ ಹಾಜವಗೋಳ – ಮುಗುಗುಂದ ನಾಡು ಒಂದು ಅಧ್ಯಯನ. ೨೦೦೪. ಪುಟ–೧೨–೧೩.

೪೨. ತ.ಸು. ಶಾಮರಾಯ, ಹೆಚ್ ನಂಜೇಗೌಡ (ಸಂ) ಕೇಶಿರಾಜ ವಿರಚಿತ ಶಬ್ದಮಣಿದರ್ಪಣಂ ೧೯೯೯. ಪುಟ–೯–೧೦.

೪೩. ಡಾ. ಧನವಂತ ಹಾಜವಗೋಳ, ಪೂರ್ವೋಕ್ತ, ಪುಟ೪೨೧–೪೨೨.

೪೪. ಹಂಪ ನಾಗರಾಜಯ್ಯ, ಅರವಂಟಿಕೆ, ಸಂಪುಟ–೧, ಸಂಚಿಕೆ–೨, ೧೯೯೯. ಡಾ. ಧನವಂತ ಹಾಜವಗೋಳ ಪೂರ್ವೋಕ್ತ, ಪುಟ ೩೭೦–೩೭೧.

೪೫. ಹಂಪ ನಾಗರಾಜಯ್ಯ ಯಾಪನೀಯ ಸಂಘ ೧೯೯೯. ಪುಟ–೮೦.

೪೬. ಅದೇ ಪುಟ–೮೦.

೪೭. ಎಪಿಗ್ರಾಫಿಯ ಕರ್ನಾಟಿಕ ಸಂಪುಟ ಎರಡು ೪೨೧–೩೧೨, ೧೯೭೩. ಪುಟ–೨೬೦–೭೧.

೪೮. ಸೌಥ್ ಇಂಡಿಯನ್ ಇನ್‌ಸ್ಕ್ರಿಪ್ಶ್ಯನ್ ಸಂ

೪೯. ಅದೇ

೫೦. ಎಪಿಗ್ರಾಫಿಯ ಕರ್ನಾಟಿಕ ಸಂಪುಟ ಎರಡು ೪೨೧ (೩೧೨) ೧೯೭೩. ಪುಟ–೨೬೦–೬೩.

ಅಧ್ಯಾಯ-ಐದು

# ವಾಡೆಯ ಸಂಸ್ಕೃತಿ

೫.೧ ರಾಜಕೀಯ ವ್ಯವಸ್ಥೆ.

೫.೨ ಸಾಮಾಜಿಕ ವ್ಯವಸ್ಥೆ.

೫.೩ ಆರ್ಥಿಕ ವ್ಯವಸ್ಥೆ.

೫.೪ ಸಾಂಸ್ಕೃತಿಕತೆ.

## ಅಧ್ಯಾಯ – ಐದು

# ವಾಡೆಯ ಸಂಸ್ಕೃತಿ

ಸಂಸ್ಕೃತಿ ಎನ್ನುವುದು ಒಂದು ಸಂಕೀರ್ಣ ವ್ಯವಸ್ಥೆ. ಸಂಸ್ಕೃತಿ ಪದದ ವಿಸ್ತಾರತೆ ಅಧ್ಯಯನಕ್ಕೆ ಒಳಪಡಿಸಿದ ವಿಷಯದ ಮೇಲೆ ಅವಲಂಬಿತವಾಗಿರುತ್ತದೆ. 'ಬುಡಕಟ್ಟು', 'ಹರಿಜನ', 'ಗಿರಿಜನ', 'ನಾಗರೀಕ' ವ್ಯವಸ್ಥೆಗಳು, ಗ್ರಾಮ ಅಧ್ಯಯನಗಳು ಸಂಸ್ಕೃತಿಯ ಭಾಗವೇ ಆಗಿವೆ. ಈ ಕುರಿತಾದ ಅಧ್ಯಯನವು ಸಂಸ್ಕೃತಿಯೇ ಆಗುತ್ತದೆ. ಮನುಷ್ಯನ ಬುದ್ಧಿವಿಕಾಸದ ಭೌತಿಕ ರೂಪವೇ ಸಂಸ್ಕೃತಿ. ಬುದ್ಧಿ ವಿಕಾಸ; ಮಾನಸಿಕವಾದ ಪಕ್ವತೆ, ಒಂದು ದೇಶದ ಅಥವಾ ಜನಾಂಗದ ಮಾನಸಿಕವಾದ ಸಾಧನೆ. ನಾಗರೀಕತೆ ಎಂಬರ್ಥಗಳನ್ನು ನಿಘಂಟು ಅರ್ಥೈಯಿಸುತ್ತದೆ.[೧] ಒಟ್ಟಾರೆಯಾಗಿ ಮನುಷ್ಯ ಜನಾಗಂದ ಸಾಮಾಜಿಕ ಜೀವನದ ಅಧ್ಯಯನ ವಿಧಾನವೆ ಸಂಸ್ಕೃತಿ.

ಪ್ರಸ್ತುತ ಅಧ್ಯಯನ ವಾಡೆಯ ಸಂಸ್ಕೃತಿಯದ್ದಾಗಿದ್ದು. ಆ ಕುರಿತಾದ ಸಂಸ್ಕೃತಿಯ ವಿಚಾರವನ್ನು ಇಲ್ಲಿ ಗಮನಿಸಲಾಗಿದೆ. ವಾಡೆಯ ಸಂಸ್ಕೃತಿ ಎಂದರೆ ಅಲ್ಲಿರುವ ರಾಜಕೀಯ, ಸಾಮಾಜಿಕ, ಆರ್ಥಿಕ, ಸಾಂಸ್ಕೃತಿಕ ಅಧ್ಯಯನವೆಂದೇ ಅರ್ಥ. ಇಲ್ಲಿರುವ ಪರಗಣದ ಆಳ್ವಿಕೆ, ರಾಜರ ಜೊತೆಗಿನ ಸಂಬಂಧ, ಆಡಳಿತ ಸಹಾಯ, ವಾಡೆಯ ಅಧಿಕಾರಿಯ ಕರ್ತವ್ಯ, ನ್ಯಾಯ ಪದ್ಧತಿ, ಶಿಕ್ಷಣ, ಪ್ರಜೆಗಳ ಜೊತೆಗಿನ ಸಂಬಂಧ, ಕೃಷಿ ಸಂಬಂಧಿತ, ವೃತ್ತಿ ಸಂಬಂಧಿತ ತೆರಿಗೆಗಳು, ದಾನದತ್ತಿಗಳ, ಸಂಪ್ರದಾಯಗಳ ಸಂಸ್ಕೃತಿಯ ಚರ್ಚೆ ಈ ಅಧ್ಯಾಯದಲ್ಲಿ ಕಾಣಬಹುದು.

### ೫.೧ ರಾಜಕೀಯ ವ್ಯವಸ್ಥೆ.

ಉತ್ತರ ಕರ್ನಾಟಕದ ಮಧ್ಯಕಾಲೀನ ಉತ್ತರಾರ್ಧ ರಾಜಕೀಯ ಆಡಳಿತದಲ್ಲಿ 'ವಾಡೆ'ಗಳ ಕಾರ್ಯಚಟುವಟಿಕೆಯ ಪಾತ್ರ ಅನನ್ಯ. ವಾಡೆಯ ಆಡಳಿತ ವ್ಯವಸ್ಥೆಯನ್ನು ಪರಿಚಯಿಸಿದವರು ಬಿಜಾಪುರದ ಆದಿಲ್‌ಷಾಹಿಗಳು. ಈ ಕಲ್ಪನೆಯ ಮೂಲ ಬೇರುಗಳು ರಾಷ್ಟ್ರಕೂಟರ ಕಾಲಕ್ಕೇ ಭದ್ರಗೊಂಡಿದ್ದವು. ರಾಷ್ಟ್ರಕೂಟರ ನಾಳ್ಗಾವುಂಡ (ನಾಡಗೌಡ)ನ ಆಡಳಿತದ ಸಂಸ್ಕೃತಿಕರಣದ ರೂಪವೇ ವಾಡೆ. ಆಡಳಿತ ವಿಕೇಂದ್ರಿಕರಣದ ಕಲ್ಪನೆ ಬ್ರಿಟೀಷರದ್ದು ಎಂಬ ಹೇಳಿಕೆಗಳು ಅಲ್ಲಲ್ಲಿ ಕಂಡರೂ ಅದರ ಮೂಲ ಸೆಲೆ ನಮ್ಮಲ್ಲಿನ ರಾಜರುಗಳಲ್ಲೆ ಇತ್ತು. ರಾಷ್ಟ್ರಕೂಟರು, ಚಾಲುಕ್ಯರು, ಹೊಯ್ಸಳರು, ವಿಜಯನಗರದ ಅರಸರು ವಿಕೇಂದ್ರಿಕರಣ ಆಡಳಿತ ನಡೆಸಿದ್ದರು. ಆದಿಲ್‌ಷಾಹಿಗಳು ಈ ಕ್ರಮವನ್ನು ಇನ್ನಷ್ಟು ಸುಧಾರಿಸಿ ವ್ಯವಸ್ಥಿತವಾಗಿ ಮಾಡಿದರು. ಇವರು ತಮ್ಮ ಸಾಮ್ರಾಜ್ಯವನ್ನು ಇಡಿಯಾಗಿ ಆಳದೇ; ಬಿಡಿ ಬಿಡಿಯಾಗಿ ಆಳಿದರು. ಬಿಡಿ ಬಿಡಿಯಾಗಿ ಆಡಳಿತದಿಂದ ಇಡಿಯಾದ ಸಾಮ್ರಾಜ್ಯದ ಪ್ರಗತಿ ಸಾಧಿಸಿದರು.

ವಾಡೆ ಬಿಡಿ ಆಡಳಿತ ವ್ಯವಸ್ಥೆಯ ಭಾಗ. ಇದಕೊಬ್ಬ ಅಧಿಕಾರಿ ಇರುತ್ತಿದ್ದ. ಇವನ ಮೂಲಕ ರಾಜ್ಯಕ್ಕೆ ಸಂದಾಯವಾಗಬೇಕಿದ್ದ ಕಂದಾಯ ಸುಲಭವಾಗಿ ವಸೂಲಾಗುತ್ತಿತ್ತು. ಜೊತೆಗೆ

ಇವನಿಗೆ ಒಂದಷ್ಟು ಅಧಿಕಾರಗಳನ್ನು ಕೊಟ್ಟು ಸದಾ ತಮಗೆ ವಿಧೇಯಕರಾಗಿರುವಂತೆ ಆದಿಲ್‌ಷಾಹಿಗಳು ನಿಗಾವಹಿಸುತ್ತಿದ್ದರು. ವಾಡೆಯ ಅಧಿಕಾರಿಯು ತಮ್ಮ ಅಂಕೆಯಲ್ಲಿಯೇ ಇರುವುದರಿಂದ ದಕ್ಷ ಸಾಮ್ರಾಜ್ಯವನ್ನು ಕಟ್ಟಲು ಆದಿಲ್‌ಷಾಹಿಗಳು ಸಮರ್ಥರಾದರು.

**ಪರಗಣ ಅಥವಾ ಜಿಲ್ಲಾದ ಆಳ್ವಿಕೆ.**

ಆದಿಲ್‌ಷಾಹಿಗಳು ಸುಲಭವಾದ ಆಡಳಿತ ದೃಷ್ಟಿಯಿಂದ ರಾಜ್ಯವನ್ನು ೧೨ 'ತರಫ್'ಗಳಾಗಿ ವಿಂಗಡಿಸಿದ್ದರು. ತರಫ್ ಎಂದರೆ ಪ್ರಾಂತ್ಯ ಎಂದರ್ಥ. ವಲಯ (ZONE) ಎಂದಲೂ ಅರ್ಥೈಯಿಸಿಕೊಳ್ಳಬಹುದು. ಈ ತರಫ್‌ಗಳನ್ನು ತರಫ್‌ದಾರನು ನೋಡಿಕೊಳ್ಳುತ್ತಿದ್ದ. "ರಾಜ್ಯ ತೀರ ವಿಸ್ತಾರದ ಕಾಲದಲ್ಲಿ ೧೨ ತರಫ್‌ಗಳಿದ್ದು ಅವುಗಳನ್ನು ಎನ್.ಕೆ. ಸಿಂಹ ಹೀಗೆ ಎಣಿಕೆ ಹಾಕಿದ್ದಾರೆ.

೧. ಬಿಜಾಪುರ
೨. ಬೆಳಗಾವಿ
೩. ಸೊಲ್ಲಾಪುರ
೪. ರಾಯಚೂರು
೫. ಮೀರಜ್
೬. ಬಂಕಾಪುರ
೭. ನಲದುರ್ಗ
೮. ಬೀದರ್
೯. ಗುಲ್ಬರ್ಗ
೧೦. ಬೆಂಗಳೂರು
೧೧. ಮದುರೈ
೧೨. ತಂಜಾವೂರು

ತರಫ್ ಅನ್ನು ಪರಗಣಾ (ಜಿಲ್ಲಾ)ಗಳಾಗಿ ವಿಭಾಗಿಸಿದ್ದು ಅವುಗಳ ಕೆಳಗೆ ಹಲವು ಗ್ರಾಮಗಳ ಸರ್ಕಾರ್ ಎಂಬ ಕಿರುಭಾಗವೊಂದಿತ್ತು".[೨] ಈ ಪದ್ಧತಿಯನ್ನು ಆದಿಲ್‌ಷಾಹಿಗಳು ಬಹಮನಿ ಷಾಹಿಗಳಿಂದ ಪಡೆದರು.

ಪರಗಣ ಎಂಬುದು ಒಂದು ಪರ್ಶಿಯನ್ ಪದ. ಇದರ ಅರ್ಥ ಜಿಲ್ಲೆ. ಗ್ರಾಮ ಸಮುದಾಯ ಎಂದಾಗುತ್ತದೆ. ಪರಗಣ, ಪರಗಣಾ ಜಿಲ್ಲೆ ಆಡಳಿತ ಸೂಚಿ ಪದಗಳು. ಈ ಪ್ರದೇಶಕ್ಕೆ 'ದೇಸಗತಿ' ಎಂಬ ಜನಬಳಕೆಯ ಪದವು ಇದೆ. ಸಾಮಾನ್ಯವಾಗಿ ಪರಗಣವು ೫೦ ರಿಂದ ೨೦೦ ಹಳ್ಳಿಗಳನ್ನು ಒಳಗೊಂಡ ಒಂದು ಆಡಳಿತ ಘಟಕದ ಗುಚ್ಛ. ಕೆಲವೊಂದು ಸಾರಿ

೩೩ ಹಳ್ಳಿಗಳಿದ್ದರೂ ಪರಗಣದ ಸ್ಥಾನ ಕೆಲವು ವಾಡೆಗೆ ಲಭಿಸಿವೆ. ಹನಗಂಡಿ ಮತ್ತು ತೇರದಾಳ ವಾಡೆಗಳು ತಲಾ ಮೂವತ್ಮೂರು ಹಳ್ಳಿಗಳನ್ನು ಹೊಂದಿದ್ದುವು. ಇಂಥ ಹಳ್ಳಿಗಳಿಗೆ 'ಚಾವರಾತ್' ಹಳ್ಳಿಗಳೆಂದು ಕರೆಯಲಾಗುತ್ತದೆ.

ಪರಗಣದ ಅಧಿಕಾರ ವಾಡೆಯ ಮುಖ್ಯಸ್ಥನದ್ದಾಗಿತ್ತು. ಇವನು ತನ್ನ ಪರಗಣದ ಎಲ್ಲಾ ಚಾವರಾತ್ ಹಳ್ಳಿಗಳ ಮುಖ್ಯಸ್ಥನು ಹೌದು. ಆದಿಲ್‌ಷಾಹಿಗಳು, ಕಂದಾಯ ವಸೂಲಿ, ಶಾಂತಿ ಸುಭೀಕ್ಷೆ ಕಾಪಾಡುವ, ಶಿಸ್ತುಬದ್ಧ ಆಡಳಿತದ ಎಲ್ಲ ಅಧಿಕಾರಗಳನ್ನು ಇವನಿಗೆ ಕೊಟ್ಟಿದ್ದರು. ಇವನು ಮೇಲಿನ ಎಲ್ಲ ಚಟುವಟಿಕೆಗಳಲ್ಲಿ ಸಮರ್ಥತೆಯನ್ನು ತೋರಿಸಿ ಬಾದಶಾಹರಿಗೆ ನಿಷ್ಠನಾಗಿರುತ್ತಿದ್ದ.

ಸಾಮಾನ್ಯವಾಗಿ ಪರಗಣದಲ್ಲಿ ಒಂದು ಪ್ರಮುಖ ಪಟ್ಟಣವಿರುತ್ತಿತ್ತು. ವಾಡೆಯ ಮುಖ್ಯಸ್ಥ ಇಲ್ಲಿಂದಲೇ ಆಡಳಿತ ನಡೆಸುತ್ತಿದ್ದ. ಅಂತೆಯೇ ಪರಗಣಕ್ಕೆ ಆ ಪಟ್ಟಣದ ಹೆಸರೆ ಅನುಮೊದಿತವಾಗುತ್ತಿತ್ತು. ಉದಾ: ತೇರದಾಳ ಪರಗಣ,[೩] ಇದೇ ಮಾದರಿ ಆಧುನಿಕ ಜಿಲ್ಲಾ ಆಡಳಿತದಲ್ಲಿ ಕಂಡು ಬರುತ್ತದೆ. ಜಿಲ್ಲೆಯ ಮುಖ್ಯ ಕೇಂದ್ರದ ಹೆಸರು ಜಿಲ್ಲೆಗೂ ಅಂಟಿಕೊಂಡಿರುತ್ತದೆ. ಉದಾ: ಧಾರವಾಡ ಜಿಲ್ಲೆ, ಮೈಸೂರು ಜಿಲ್ಲೆ, ಬೀದರ್ ಜಿಲ್ಲೆ, ಮಂಗಳೂರು ಜಿಲ್ಲೆ ಇತ್ಯಾದಿ.

ಪರಗಣದಲ್ಲಿ ದೇಸಾಯಿಯೇ ಪ್ರಮುಖ.[೪] ದೇಸಾಯಿ ಕುಟುಂಬದಲ್ಲಿ ತೋರಿದ ಭಿನ್ನಾಭಿಪ್ರಾಯಗಳು, ಕಲಹಗಳು, ಮನಸ್ಥಾಪಗಳಿಂದ ಪರಗಣದ ಕೆಲವು ಹಳ್ಳಿಗಳನ್ನು ಕುಟುಂಬದ ಸದಸ್ಯರಿಗೆ ಬಿಟ್ಟುಕೊಡುತ್ತಾನೆ. ಹೀಗೆ ಬಿಟ್ಟುಕೊಟ್ಟ ಅಥವಾ ಪಡೆದುಕೊಂಡ ಆಡಳಿತದ ಪ್ರದೇಶಕ್ಕೆ 'ಸಮ್ಮತ್' ಎಂದು ಕರೆಯಲಾಗುತ್ತದೆ. ಕೆಲವೊಂದು ಸಾರಿ "ಪರಗಣವನ್ನು ಕೇಂದ್ರ ಸರ್ಕಾರವೂ ಕೂಡ ವಿಭಜನೆ ಮಾಡಿದ್ದರಿಂದ ಅಲ್ಲಿ ಹೊಸದಾಗಿ ದೇಸಾಯಿಯನ್ನು ನೇಮಕಗೊಳಿಸಿದ್ದರಿಂದ ರಾಜಸ್ವವನ್ನು ನೀಡಿದ್ದರಿಂದ ಇಂಥ ಸಣ್ಣ ವಿಭಜನೆಗಳು ಕಾಣುತ್ತವೆ".[೫]

'ಸಮ್ಮತ್' ಆಡಳಿತ ಪ್ರದೇಶಕ್ಕೆ ಪ್ರತ್ಯೇಕ ರಾಜಸ್ವ, ವತನದಾರಿಕೆಯನ್ನು ನೀಡಲಾಗುತ್ತಿತ್ತು. ಆದ್ದರಿಂದ ಸಮ್ಮತ್‌ಗಳು ಕೆಲವೊಂದು ಸಾರಿ ಪರಗಣದಂತೆಯೂ ಭಾಸವಾಗತೊಡಗಿದವು. ಇದರಿಂದ 'ಸಮತ್ ಪರಗಣ' ಎಂಬ ಪರ್ಯಾಯ ಪದವೂ ಹುಟ್ಟಿಕೊಂಡಿತು. "ಒಂದು ಸಮ್ಮತ್ ಎಂದರೆ ಕನಿಷ್ಟ ಐದರಿಂದ ಹತ್ತು ಹಳ್ಳಿಗಳಿರುತ್ತಿದ್ದವು. ಸಮ್ಮತ್ ಒಂದು ಸೇರಿ ಮೂವತ್ತಕ್ಕಿಂತ ಹೆಚ್ಚು ಗ್ರಾಮಗಳು ಕಂಡುಬರುತ್ತಿದ್ದವು.[೬]

ದರೂರು ವತನದಾರಿಕೆ, ಸಪ್ತಸಾಗರ ವತನದಾರಿಕೆ, ತೀರ್ಥ ವತನದಾರಿಕೆಗಳು ಸಮ್ಮತ್ ಎನಿಸುತ್ತವೆ. ಇವು ಮೊದಲು ತೇರದಾಳ ಪರಗಣಿಯಲ್ಲಿದ್ದು ಕೌಟುಂಬಿಕ ಕಾರಣದಿಂದ ಸಮ್ಮತ್‌ಗಳಾಗಿ ಮಾರ್ಪಟ್ಟವು. ಹಾಗೆ ನೋಡಿದರೆ ಹನಗಂಡಿಯ ವತನದಾರಿಕೆಯೂ ಒಂದು ಸಮ್ಮತ್ ಎನಿಸುತ್ತದೆ. ಮೂಲದಲ್ಲಿ ಇದು ತೇರದಾಳ ಪರಗಣದಲ್ಲಿ ಇದ್ದು ಕ್ರಿ.ಶ. ೧೫೭೨ರಲ್ಲಿ ಪ್ರತ್ಯೇಕ ವತನದಾರಿಕೆಯನ್ನು ಸಂಪಾದಿಸಿತು.

ತೇರದಾಳ ಪರಗಣದ ಜಿನಗೌಡ ಮತ್ತು ಕಲಗೌಡ ಆದಿಲ್‌ಷಾಹಿಗಳಿಗೆ ಯುದ್ಧದಲ್ಲಿ ಸಹಾಯಮಾಡಿ ಶೂರತ್ವ ಮೆರೆದು ಜಯಕ್ಕೆ ಕಾರಣದಾರರಾದರು. ಇವರ ಪರಾಕ್ರಮಕ್ಕೆ ಮೆಚ್ಚಿದ ಬಾದಶಾಹ ಇಬ್ಬರಿಗೂ ರಾಜಸ್ವದ ನೆಲೆಗಳನ್ನು ಗುರುತು ಮಾಡಿಕೊಟ್ಟು, ಜಿನಗೌಡನಿಗೆ ನೇತೃತ್ವದಲ್ಲಿ ನಾಡಗೌಡಕಿಯನ್ನೂ, ಕಲಗೌಡನ ನೇತೃತ್ವದಲ್ಲಿ ದೇಸಾಯಿಕೆಯನ್ನು ಹನಗಂಡಿಯಲ್ಲಿ ನಡೆಸಲು ಆಜ್ಞಾಪಿಸಿದ. ತೇರದಾಳ ಪರಗಣದಿಂದ ಪ್ರತ್ಯೇಕವಾದ ಹನಗಂಡಿ ವತನದಾರಿಕೆ ಸಮ್ಮತ್ ಎನಿಸುತ್ತದೆ. ಹನಗಂಡಿ ಸಮ್ಮತ್ ಅದುವೇ ಒಂದು ಪರಗಣ; ತೇರದಾಳವೇ ಅದರ ಸಮ್ಮತ್ ಎಂಬಂತಾಯಿತು. ಆಡಳಿತದ ದೃಷ್ಟಿಯಿಂದ ಅದು ತೇರದಾಳ ಪರಗಣಕ್ಕೆ ಒಳಪಡುತ್ತಿತ್ತು. ದಾಖಲೆ ಪತ್ರಗಳಲ್ಲಿ ಹನಗಂಡಿ ಠಾಣೆ ತೇರದಾಳ ಪರಗಣ ಎಂದೇ ಬಳಸಲಾಗಿದೆ. "ಸಮ್ಮತ್ ಪರಗಣದಿಂದ ಹೊರಗೆ ಇರುತ್ತದೆ"[೭] ಎಂಬ ಅಭಿಪ್ರಾಯವನ್ನು ಶ್ರೀ ಸಂಗಪ್ಪ ಚ.ಕಲ್ಯಾಣಿಯವರು ತಮ್ಮ ಮಹಾಪ್ರಬಂಧದಲ್ಲಿ ವ್ಯಕ್ತಪಡಿಸಿದ್ದಾರೆ. ವತನದಾರಿಕೆಯು ಒಂದು ಸಮ್ಮತ್ ಎನಿಸಿ ಅದು ತೇರದಾಳ ಪರಗಣದ ವ್ಯಾಪ್ತಿಯಲ್ಲಿ ಬರುತ್ತದೆ. ಈ ವಿಷಯ ಹನಗಂಡಿ ದೇಸಾಯಿಗಳು ತೋರಿಸಿದ ದಾಖಲೆಗಳಿಂದ ತಿಳಿದು ಬರುತ್ತದೆ. ಹನಗಂಡಿ ವಾಡೆ, ದರೂರು ವಾಡೆ, ಸಪ್ತಸಾಗರ, ತೀರ್ಥ ಎಲ್ಲವೂ ಸ್ವತಂತ್ರವಾದರೂ ಅವು ತೇರದಾಳ ಪರಗಣ ಎಂಬ ಆಡಳಿತದ ಪದದಿಂದಲೇ ವತನದಾರಿಕೆಯನ್ನು ನಡೆಸುತ್ತಿದ್ದವು.

ವಾಡೆಯ ಕೆಲವೊಂದು ವತನದಾರಿಕೆ 'ಕಸಬಾ' ಎಂಬ ವಿಭಾಗಕ್ಕೆ ಸೇರುತ್ತಿದ್ದವು. "ಕಸಬಾ > ಕಸಬೆ ಅಂದರೆ ಕಸಬು ಎಂಬುದರ ವಿಸ್ತೃತ ರೂಪ. ಕಸಬು ಎಂದರೆ ಕೆಲಸ ಉದ್ಯೋಗ, ವೈಶ್ಯಾವೃತ್ತಿ ವ್ಯಾಪಾರ ಮುಂತಾಗಿ ತಿಳಿದುಬರುತ್ತದೆ". ನಿಘಂಟಿನಲ್ಲಿ ಕಸಬೆ ಎಂದರೆ ೧. ತಾಲ್ಲೂಕಿನ ಅಥವಾ ಅದರ ಭಾಗದ ಮುಖ್ಯ ಸ್ಥಳ, ೨. ಸೂಳೆ[೮] ಎಂಬರ್ಥಗಳಿವೆ. ಕಸಬೆಯು ಪ್ರಮುಖ ಪಟ್ಟಣವೂ ಆಗಿದ್ದರಿಂದ ಇಲ್ಲಿ ವ್ಯಾಪಾರ ಜೋರಾಗಿಯೇ ಇರುತ್ತಿತ್ತು. ವ್ಯಾಪಾರದಿಂದ ರಾಜ್ಯ ಬೊಕ್ಕಸಕೆ ಕಂದಾಯವೂ ಹೆಚ್ಚು ಸಂದಾಯವಾಗುತ್ತಿತ್ತು. ಸಾಮಾನ್ಯವಾಗಿ ಒಂದು ಕಸಬಾಕ್ಕೆ ೧೦ ರಿಂದ ೨೦ ಗ್ರಾಮಗಳಿರುತ್ತಿದ್ದುವು. ಅಣ್ಣಿಗೇರಿ ದೇಶಪಾಂಡೆ ವತನದಾರಿಕೆಯು, ಮುಳಗುಂದ ದೇಶಪಾಂಡೆ ವತನದಾರಿಕೆಯು ಕಸಬಾ ಆಡಳಿತ ಪದ್ಧತಿಗೆ ಸೇರಿದುವು.

೧೮೮೮ರಲ್ಲಿ ಅಣ್ಣಿಗೇರಿ ದೇಶಪಾಂಡೆ ವಾಡೆಯ ವತನದಾರಿಕೆಯ ವಂಶಾವಳಿಯಲ್ಲಿ ಅಣ್ಣಿಗೇರಿಯನ್ನು 'ಕಸಬೆ' ಎಂದೇ ಗುರುತಿಸಲಾಗಿದೆ. "ಅಣಂದಿಬಾಯಿ ಕೋಮ್ ಚಂದಪ್ಪೆಯಾ ದೇಶಪಾಂಡೆ ಕಸಬೆ ಅಣಿಗೇರಿ ತಾಲ್ಲೂಕೆ ನವಲಗುಂದ ಯಾಣಿ ತಾರೀಖ ೧ ಮಾಹೆ ಫೆಬ್ರವರಿ ಸನ್ ೧೮೮೮ ಇಸವಿ ರೋಜಿ."[೯] ಎನ್ನುವಲ್ಲಿ ಅಣ್ಣಿಗೇರಿ ಕಸಬೆಯಾಗಿತ್ತು ಸ್ಪಷ್ಟವಾಗುತ್ತದೆ.

ಸಮರ್ಥವಾಗಿ ಕಂದಾಯ ವಸೂಲಿ ಮಾಡಲು ಆಡಳಿತ ಚುರುಕುಗೊಳಿಸಿ ಸುಗಮವಾಗಿಸಲು ಆದಿಲ್‌ಷಾಹಿಗಳು ಆಡಳಿತದ ಘಟಕಗಳನ್ನು ವಿಕೇಂದ್ರಿಕರಣಗೊಳಿಸಿ ಚಿಕ್ಕ ಚಿಕ್ಕ ವಿಭಾಗಗಳನ್ನಾಗಿ ಮಾಡಿದರು ಅದುವೇ ಪರಗಣ, ಸಮತ್ ಪರಗಣ, ಕಸಬೆ ಎಂದು ಮೇಲಿನ ಚರ್ಚೆಯಿಂದ ಸ್ಪಷ್ಟವಾಗುತ್ತದೆ.

"ಆದಿಲ್‌ಷಾಹಿ ಮತ್ತು ನೈಜಾಂಷಾಹಿ ವಂಶಗಳ ಆಳ್ವಿಕೆಯಲ್ಲಿ ಮಹಾರಾಷ್ಟ್ರ ದೇಶವನ್ನು ಕಂದಾಯ ಹಾಗೂ ಆಡಳಿತ ಉದ್ದೇಶಗಳಿಗಾಗಿ ಪರಗಣಗಳು, 'ಸರ್ಕಾರ'ಗಳು ಮತ್ತು 'ಸುಭಾ'ಗಳೆಂದು ವಿಭಾಗ ಮಾಡಲಾಗಿತ್ತು. ಆದರೆ ಶಿವಾಜಿಯು ತನ್ನ ರಾಷ್ಟ್ರೀಯತಾ ಧೋರಣೆಗನುಗುಣವಾಗಿ ತನ್ನ ರಾಜ್ಯವನ್ನು ಮೌಜಾ (Mouja) ತರ್ಫ್ (Tarf) ಮತ್ತು ಸುಭಾ (Subha) ಗಳೆಂದು ವರ್ಗೀಕರಿಸಿದನು. ಅವನ ಕಾಲದಲ್ಲಿ ತರ್ಫ್‌ನ ಅಧಿಕಾರಿಗೆ ಹವಾಲ್ದಾರ ಎಂಬ ಹೆಸರಿತ್ತು. ಸುಭಾದ ಅಧಿಕಾರಿಯನ್ನು ಸುಭೆದಾರ ಅಥವಾ ಮುಖ್ಯ ದೇಶಾಧಿಕಾರಿ ಎನ್ನುತ್ತಿದ್ದರು. ಆದರೆ ಪೇಷ್ವಾಯುಗದಲ್ಲಿ ಈ ತರ್ಫ್, ಪರಗಣ, ಸರ್ಕಾರ, ಸುಭಾ ಶಬ್ದಗಳನ್ನೆಲ್ಲ ವಿವೇಚನೆಯೇ ಇಲ್ಲದೆ ಉಪಯೋಗಿಸಿರುವುದನ್ನು ನೋಡುತ್ತೇವೆ. ಸುಭಾವನ್ನು ಪ್ರಾಂತ (Prant) ಮತ್ತು ತರ್ಫ್ ಎಂದೂ ಕರೆಯಲಾಗುತ್ತಿತ್ತು. ಪರಗಣಗಳನ್ನು ಮಹಲು (Mahal) ಗಳೆಂದೂ ಕರೆಯತೊಡಗಿದ್ದರು. ಸಣ್ಣ ವಿಭಾಗಗಳ ಅಧಿಕಾರಿಗಳಾಗಿ ಕಮವೀಸದಾರರಿದ್ದರು. ದೊಡ್ಡ ವಿಭಾಗಗಳ ಅಧಿಕಾರ ಮಾಮ್ಲತ್‌ದಾರರದಾಗಿತ್ತು. ಮಾಮ್ಲತ್‌ದಾರರು ನೇರವಾಗಿ ಕೇಂದ್ರ ಸರಕಾರದ ಅಧೀನರಾಗಿ ಕೆಲಸ ಮಾಡುತ್ತಿದ್ದರು. ಇದಕ್ಕೆ ಖಾಂದೇಶ, ಗುಜರಾತ್ ಮತ್ತು ಕರ್ನಾಟಕ ಈ ಮೂರು ಪ್ರಾಂತಗಳು ಮಾತ್ರ ಹೊರತಾಗಿದ್ದುವು"[೧೦] ಕರ್ನಾಟಕದಲ್ಲಿ ಈ ಪದಗಳ ಅಥವಾ ವರ್ಗೀಕರಣ ಹೊರತಾದರೂ ಪ್ರಭಾವ ಆದ ಉದಾಹರಣೆಗಳಿವೆ.

ಆಡಳಿತದ ದೊಡ್ಡ ವಿಭಾಗಗಳ ಅಧಿಕಾರಿಗಳನ್ನು ಮಾಮ್ಲತ್‌ದಾರ ಎಂದು ಕರೆಯುತ್ತಿದ್ದಾರೆಂಬುದು ಮೇಲಿನ ಚರ್ಚೆಯಿಂದ ದೃಢಪಟ್ಟಿದೆ. ಈ ಪದ ಕರ್ನಾಟಕದಲ್ಲಿ ಅಂಥದ್ದೇ ವಿಭಾಗಕ್ಕೆ ಮಾಮಲೇದಾರ ಎನ್ನುವ ಪದ ಬಳಕೆಯಾಗಿದೆ. ವಾಡೆಯ ದೇಸಾಯಿ, ದೇಶಮುಖ, ನಾಯಕ, ನಾಡಗೌಡ ದೇಶಪಾಂಡೆಯವರಿಗೆ ಜನರು ಮಾಮಲೇದಾರ ಅಥವಾ ಧಣಿ ಎಂದೇ ಕರೆಯುವ ರೂಢಿ ಇಟ್ಟುಕೊಂಡಿದ್ದರು. ಬಹುಶ: ಪೇಶ್ವೆಗಳ ಕಾಲಕ್ಕೆ ಈ ಪದ ಚಾಲ್ತಿಗೆ ಬಂದಿತು. ಹಾಗೆ ಬಂದ ಪದಗಳಲ್ಲಿ ದೇಶಪಾಂಡೆಯೂ ಒಂದು.

ಅಣ್ಣಿಗೇರಿ ವಾಡೆಯ ಅಧಿಕಾರಿಗಳಿಗೆ ದೇಶಪಾಂಡೆ ಎಂಬ ಆಡಳಿತ ಸೂಚಕ ಪದ ಬಹುಶ: ಮಹಾರಾಷ್ಟ್ರದಿಂದಲೇ ಬಂದಿದೆ. ಪೂನೆಯಿಂದ ಕೊಡಮಾಡಲ್ಪಟ್ಟ (Alienation Record Press) ಅಣ್ಣಿಗೇರಿ ಜೈನ ವತನದಾರರಿಗೆ ದೇಶಪಾಂಡೆ ಎಂದೇ ಸಂಬೋಧಿಸಲಾಗಿದೆ. ದೇಶಪಾಂಡೆ ಎಂಬ ಪದ ಪೇಶ್ವೆಗಳ ಆಡಳಿತದಲ್ಲಿತ್ತು. ಅಂತೆಯೇ ಅದು ಕರ್ನಾಟಕದ ಕೆಲವು ವಾಡೆಯ ಅಧಿಕಾರಿಗಳ ಮೇಲೆ ಪ್ರಯೋಗಗೊಂಡಿದೆ. ಅಣ್ಣಿಗೇರಿ ವಾಡೆ ಮತ್ತು ಮುಳುಗುಂದ ವಾಡೆಯ ಅಧಿಕಾರಿಗಳಿಗೆ ಈ ಪದಗಳು ಬಳಕೆಯಾಗಿದ್ದನ್ನು ಕಾಣಬಹುದು.

ಮೇಲಿನ ಚರ್ಚೆಯಿಂದ ಸ್ಪಷ್ಟವಾಗಿ ತಿಳಿದುಬರುವ ವಿಷಯವೆಂದರೆ ಆದಿಲ್‌ಷಾಹಿಗಳು, ಮರಾಠರು, ಪೇಶ್ವೆಗಳು (ಸಾಂಗಲಿಯ ಪಟವರ್ಧನರು) ಆಡಳಿತದ ಮತ್ತು ಕಂದಾಯ ಸುಗಮತೆಗೆ ಆಡಳಿತ ಚಿಕ್ಕ ಚಿಕ್ಕ ಘಟಕಗಳಾಗಿ ವಿಕೇಂದ್ರಿಕರಿಸಿದ್ದರು. ಮುಂದಿನ ದಿನಮಾನಗಳಲ್ಲಿ ಅಂದರೆ ಬ್ರಿಟೀಷ್ ಕಾಲಾವಧಿಯಲ್ಲಿ ಇದೇ ಮಾದರಿ ನವೀಕರಣಗೊಂಡು ಜಿಲ್ಲೆ, ತಾಲೂಕು

(ಇವೂ ಕೂಡ ಹಳೆಯ ಪದಗಳೆ) ವ್ಯಾಪ್ತಿಯಲ್ಲಿ ಆಡಳಿತ ನಡೆಯತೊಡಗಿತು. ಪರಗಣ, ಸಮತ್ ಪರಗಣ ಕಸಬೆ ಎಲ್ಲವೂ ಜಿಲ್ಲಾ ವ್ಯಾಪ್ತಿಗೆ ಬಂದು ಆಯಾ ಪದಗಳೂ ಮಾತ್ರ ಹಾಗೆ ಉಳಿದುಕೊಂಡು ಬಂದುವು. ಬ್ರಿಟೀಷ್ ಸರಕಾರ ಕೊಡಮಾಡಲ್ಪಟ್ಟ ದಾಖಲೆಗಳಲ್ಲಿ ತೇರದಾಳವನ್ನು ಪರಗಣ ಎಂದೂ, ಅಣ್ಣಿಗೇರಿಯನ್ನು ಕಸಬೆ ಎಂದೇ ಸಂಭೋಧಿಸಲಾಗಿದೆ.[೧೧] ಸ್ವಾತಂತ್ರೋತ್ತರ ಭಾರತದಲ್ಲಿ ಈ ಎಲ್ಲ ಆಡಳಿತದ ವಿಭಾಗದ ಪದ್ಧತಿಗೆ ವಿಮುಕ್ತಿಯಾದುವು. ಈಗಲೂ ವಾಡೆಗಳ ದಾಖಲೆಗಳನ್ನು ಪೂನಾದ 'ಆರ್ಕೈವ್ ವಿಭಾಗದಲ್ಲಿ' ತೆಗೆಯಿಸಲು ಹೋದರೆ ಅವರು ತೇರದಾಳ ಪರಗಣ, ಅಣ್ಣಿಗೇರಿ ಕಸಬೆ ಎಂಬುದಾಗಿಯೇ ನಮೂದಿಸಿಕೊಡುತ್ತಾರೆ.

**ವತನದಾರ ಅಥವಾ ವಾಡೆಯ ಮುಖ್ಯಸ್ಥ**

ವತನದಾರ, ದೇಸಾಯಿ, ದೇಶಮುಖ ಎಂಬ ಆಡಳಿತ ಸೂಚಿ ಪದಗಳು ವಾಡೆಯ ಅಧಿಕಾರಿಗೆ ಇದ್ದ ವಿವಿಧ ಹೆಸರುಗಳು. ಇವಷ್ಟೇ ಅಲ್ಲದೇ ನಾಡಗೌಡ (ತೇರದಾಳ ವಾಡೆ), ನಾಯಕ (ದರೂರು ವಾಡೆ), ದೇಶಪಾಂಡೆ (ಅಣ್ಣಿಗೇರಿ ಮತ್ತು ಮುಳಗುಂದ ವಾಡೆ) ಎಂಬ ಪದಗಳೂ ಬಳಕೆಯಾಗಿವೆ. ಈ ಪದಗಳ ಚಾಕ್ಷುಕ ಮತ್ತು ಶ್ರವಣ ರೂಪ ಬೇರೆ ಬೇರೆಯಾದರೂ ನಿರ್ವಹಿಸುವ ಕಾರ್ಯ ಒಂದೇ ತೆರನಾಗಿತ್ತು. ಅದು ತನ್ನ ಸುಪರ್ಧಿಗೆ ಬರುವ ವತನದಾರಿಕೆಯನ್ನು ಸಮರ್ಥವಾಗಿ ನಿರ್ವಹಿಸುವುದು.

ಎಲ್ಲ ಜೈನ ವಾಡೆಗಳ ವತನದಾರಿಕೆಯ ಒಟ್ಟು ಹಳ್ಳಿಗಳ ಪ್ರಮಾಣವನ್ನು ಪರಿಶೀಲಿಸಿ ನೋಡಿದಾಗ ಮೇಲಿನ ಆಡಳಿತ ಪದಗಳು ಚಾವರಾತ್ ಹಳ್ಳಿಗಳ ಪ್ರಮಾಣದಿಂದ ಬಂದಿರುತ್ತದೆ ಎಂಬುದು ಸ್ಪಷ್ಟವಾಗುತ್ತದೆ.




ದೇಶಮುಖ, ದೇಸಾಯಿ, ನಾಡಗೌಡನಿಗೆ ಎಷ್ಟೇ ಹಳ್ಳಿಗಳಿದ್ದರೂ ಅವರ ಪರಗಣದ ಅಧಿಕಾರಿಗಳಾಗಿಯೇ ಇರುತ್ತಿದ್ದರು. ಇವರ ನಂತರ ಬರುವವನು ದೇಶಪಾಂಡೆ ಮತ್ತು ನಾಯಕ.

ಇವರು ಎಲ್ಲರಿಗೂ ಸಮಾನ ಅಧಿಕಾರಗಳಿದ್ದುವು. ಹಳ್ಳಿಗಳ ಹೆಚ್ಚು ಕಡಿಮೆಯಾದರೂ ಅವರು ಪಾಲಿಸಬೇಕಾದ ಕರ್ತವ್ಯಗಳು ಒಂದೇ ತೆರನಾಗಿದ್ದುವು. ಇವರಿಗೆ ಆದಿಲ್‌ಷಾಹಿಗಳ ಕಾಲದಲ್ಲಿ ಸಾಕಷ್ಟು ಇನಾಂ ಭೂಮಿ ಸಿಗುತ್ತಿತ್ತು. ಈ ಭೂ ಸಂಪತ್ತು ಮತ್ತು ಕಂದಾಯ ಸಂಪತ್ತಿನಿಂದ ಇವರು ಒಬ್ಬ ಸ್ಥಳೀಯ ರಾಜನಂತೆಯೇ ಭಾಸವಾಗತೊಡಗಿದರು. ಐಶಾರಾಮಿ ಮನೆಯನ್ನೂ ಕಟ್ಟಿಕೊಂಡರು. ಇದಕ್ಕೆ ವಾಡೆ ಎಂತಲೂ ಕರೆಯುತ್ತಾರೆ.

**ಆದಿಲ್ ಷಾಹಿಗಳಿಂದ ದೊರೆತ ಇನಾಂ ಭೂಮಿ**

| | | |
|---|---|---|
| ತೇರದಾಳ ವಾಡೆ | – | ೫೫೦೦ ಎಕರೆ |
| ಹನಗಂಡಿ ವಾಡೆ | – | ೧೬೦೦ ಎಕರೆ |
| ಅಣ್ಣಿಗೇರಿ ವಾಡೆ | – | ೫೨೦೦ ಎಕರೆ |
| ಮುಳಗುಂದ ವಾಡೆ | – | ౭೦೦ ಎಕರೆ |
| ದರೂರು ವಾಡೆ | – | ౭೦೦ ಎಕರೆ |

ಮರಾಠ ಮತ್ತು ಪೇಶ್ವೆಗಳ ಕಾಲದಲ್ಲಿ ಇಷ್ಟೊಂದು ಪ್ರಮಾಣದ ಇನಾಂ ಭೂಮಿಗಳು ವಾಡೆಯ ಅಧಿಕಾರಿಗಳಿಗೆ ದೊರೆಯಲಿಲ್ಲ. ಕೆಲವೊಂದ ಸಾಹಸ, ಶೌರ್‍ಯ, ಆಡಳಿತದ ಚಾಣಾಕ್ಷತನಕ್ಕೆ ಭಕ್ಷಿಸುಗಳು ದೊರೆಯುತ್ತಿದ್ದವು. ಅಣ್ಣಿಗೇರಿಯ ಭೀಮಪಯ್ಯ ದೇಶಪಾಂಡೆಯವರಿಗೆ ಶಾಹುಮಹಾರಾಜ ಕೊಲ್ಹಾಪುರದಲ್ಲಿ ೪ ಎಕರೆ ಜಾಗೆ ಕೊಟ್ಟಿದ್ದಾಗಿ ತಿಳಿದುಬರುತ್ತದೆ.

## ವಾಡೆಯ ಅಧಿಕಾರಿಗಳ ಪ್ರಮುಖ ಕರ್ತವ್ಯಗಳು

೧. **ತನ್ನ ವ್ಯಾಪ್ತಿಗೆ ಬರುವ ಕೃಷಿ ಭೂಮಿಯನ್ನು ಸಂಮೃದ್ಧಿಗೊಳಿಸುವುದು.** ಕೇಂದ್ರ ರಾಜಸ್ವದ ಪ್ರಮುಖ ಆದಾಯ ಕೃಷಿ ಭೂಮಿಯಿಂದ ಬರುವ ಕಂದಾಯವೇ ಪ್ರಮುಖವಾಗಿತ್ತು. ಆದ್ದರಿಂದ ವಾಡೆಯ ಅಧಿಕಾರಿಯು ತನ್ನ ವ್ಯಾಪ್ತಿಗೆ ಬರುವ ಎಲ್ಲ ಕೃಷಿ ಭೂಮಿಯಲ್ಲಿಯೂ ಬಿತ್ತನೆಯಾಗುವಂತೆ ನೋಡಿಕೊಂಡು ಹೆಚ್ಚಿನ ಬೆಳೆ ಬರುವಂತೆ ಮಾಡಬೇಕಿತ್ತು. ಇದರಿಂದ ರಾಜಸ್ವಕ್ಕೆ ಹೆಚ್ಚಿನ ಕಂದಾಯವೂ ಸಂದಾಯವಾಗುತ್ತಿತ್ತು.

೨. **ವತನದಾರಿಕೆಯ ಅಥವಾ ಆಡಳಿತ ಭಾಗದ ರಕ್ಷಣೆ.**

ವತನದಾರಿಕೆ ಪ್ರದೇಶದ ಜನ ನೆಮ್ಮದಿ ಜೀವನ ನಡೆಸಲು ಸ್ಥಳೀಯ ಸೈನ್ಯವನ್ನು (ಕಾಲ್ದಳ) ವಾಡೆಯ ಮುಖ್ಯಸ್ಥ ಕಟ್ಟಿಕೊಂಡಿರುತ್ತಿದ್ದ, ಗಲಭೆ, ದಂಗೆ, ಜಗಳಗಳು ಉಂಟಾದಾಗ ಈ ಸೈನವು ಅವುಗಳನ್ನು ಹತ್ತಿಕ್ಕುತ್ತಿತ್ತು. ಪ್ರತಿ ಹಳ್ಳಿಗಳಿಗೆ 'ತಳವಾರ' ಎಂಬ ರಕ್ಷಕ ವರ್ಗವೂ ಇತ್ತು. ಕೆಲವೊಂದು ಸಾರಿ ಅವಶ್ಯಬಿದ್ದಾಗ ವಾಡೆಯ ಸೈನ್ಯ ರಾಜ್ಯಕ್ಕೆ ವೈರಿಗಳು ದಾಳಿ ಮಾಡಿದಾಗ ಅಥವಾ ಯುದ್ಧದ ಸಂದರ್ಭದಲ್ಲಿ ಅಂಥ ಯುದ್ಧಗಳಲ್ಲಿ

ಮುಖ್ಯ ಸೈನ್ಯದೊಂದಿಗೆ ಪಾಲ್ಗೊಳ್ಳಬೇಕಿತ್ತು. ತೇರದಾಳ ಮತ್ತು ಹನಗಂಡಿ ವಾಡೆಗಳಲ್ಲಿ ಸ್ಥಳೀಯ ಸೈನ್ಯ ಇದ್ದುದಾಗಿ ತಿಳಿದುಬರುತ್ತದೆ. ಅದು ಎಷ್ಟು ಪ್ರಮಾಣದ ಸೈನ್ಯ ವೀರರನ್ನು ಹೊಂದಿತ್ತು ಎಂಬ ಮಾಹಿತಿಗಳು ತಿಳಿದು ಬರುವುದಿಲ್ಲ.

**೩. ಸಮರ್ಥವಾದ ನ್ಯಾಯ ತೀರ್ಮಾನಿಸುವಿಕೆ.**

ರೈತರ ದಂಗೆಗಳು, ಗುಂಪು ಘರ್ಷಣೆಗಳು, ದೊಂಬಿ ಗಲಾಟೆಗಳು, ಭೂ ವ್ಯಾಜ್ಯಗಳು, ಇತರೇ ಯಾವುದೇ ವ್ಯಾಜ್ಯಗಳನ್ನು ವಾಡೆ ಅಧಿಕಾರಿಗಳೇ ಸಮರ್ಥವಾಗಿ ಬಗೆಹರಿಸಬೇಕಾಗಿತ್ತು. ಯಾವುದೇ ಕಾರಣಕ್ಕೂ ಸ್ಥಳೀಯ ವ್ಯಾಜ್ಯಗಳು ಕೇಂದ್ರಕ್ಕೆ ಹೋಗದಂತೆ ನೋಡಿಕೊಳ್ಳಬೇಕಾಗಿತ್ತು.

ಸಮರ್ಥ ನ್ಯಾಯ ತೀರ್ಮಾನದಿಂದ ವ್ಯಾಜ್ಯಗಳನ್ನು ಬೆಗೆಹರಿಸಿ ಅಪರಾಧಿಗಳಿಗೆ ಅಪರಾಧಗಳ ಪ್ರಮಾಣದ ಮೇಲೆ ಶಿಕ್ಷೆಯನ್ನು ವಿಧಿಸಬಹುದು. ಯಾವುದೇ ಕಾರಣಕ್ಕೂ ಮರಣ ದಂಡನೆಯನ್ನು ವಾಡೆಯ ಅಧಿಕ್ಾರಿ ಕೊಡುವ ಹಾಗಿರಲಿಲ್ಲ. ಅಂಥ ಪ್ರಮೇಯಗಳು ಎದುರಾದಲ್ಲಿ ಅದನ್ನು ಕೇಂದ್ರಕ್ಕೆ ವರ್ಗಾಯಿಸಬೇಕು.

ಗ್ರಾಮ ಮಟ್ಟದಲ್ಲಿ ನ್ಯಾಯ ತೀರ್ಮಾನದ ವ್ಯವಸ್ಥೆಯನ್ನು ಗೌಡ ಅಥವಾ ಪಾಟೀಲನಿಗೆ ವಹಿಸಿ ನಿಗಾವಹಿಸಬೇಕಾಗಿತ್ತು. ಗೌಡ ಮತ್ತು ಪಾಟೀಲ ಸಾಮಾನ್ಯ ಶಿಕ್ಷೆಯನ್ನು ಕೊಡಲು ಅರ್ಹರಾಗಿದ್ದು, ಕೊಲೆ, ಸುಲಿಗೆಯಂಥ ಅಪರಾಧಗಳನ್ನು ವಾಡೆಯ ಅಧಿಕಾರಿಗೆ ವರ್ಗಾವಣೆ ಮಾಡಬೇಕಿತ್ತು.

**೪. ಕಂದಾಯ ವಸೂಲಿ ಮಾಡುವುದು**

ವಾಡೆಯ ಅಧಿಕಾರಿ ತನ್ನ ವ್ಯಾಪ್ತಿಗೆ ಬರುವ ಕೃಷಿ ಭೂಮಿಯ ರೈತರಿಂದ, ವ್ಯಾಪಾರಸ್ಥರಿಂದ ಮತ್ತು ಇತರೆ ಮೂಲಗಳಿಂದ ಬರುವ ತೆರಿಗೆಯನ್ನು ಪ್ರತಿ ವರ್ಷ ರಾಜನಿಗೆ ಸಲ್ಲಿಸಬೇಕಾಗಿತ್ತು. ಪೇಶ್ವೆಗಳ ಕಾಲದಲ್ಲಿಯಂತೂ "ಪ್ರತಿಯೊಬ್ಬನೂ ಅವನವನ ವರಮಾನಕ್ಕೆ ಅನುಗುಣವಾಗಿ ತೆರಿಗೆ ನೀಡಬೇಕು ಒಂದು ಕಾಸು ಹೆಚ್ಚಲ್ಲ, ಒಂದು ಕಾಸು ಕಡಿಮೆಯಲ್ಲ"[೨೨] ಎಂಬ ಠರಾವು ಹೊರಡಿಸಲಾಗಿತ್ತು. ಅಂತೆಯೆ ವಾಡೆಯ ಅಧಿಕಾರಿ ಕೇಂದ್ರದ ನಿರ್ದೇಶನವನ್ನು ಕಟ್ಟುನಿಟ್ಟಾಗಿ ಪಾಲಿಸಿ, ಪ್ರಜೆಗಳ ಮೇಲೆ ಜಾರಿ ತರುತ್ತಿದ್ದ. ಈ ಕ್ರಮದಿಂದ ವಾಡೆಯ ಅಧಿಕಾರಿ ಜನರ ದೃಷ್ಟಿಯಲ್ಲಿ ಕಠೋರ ವ್ಯಕ್ತಿಯಾಗಿ ಕಂಡು ಬರುತ್ತಿದ್ದ. ಈ ಕಠೋರತೆಗೆ ಗುಣ ಅವನಿಗೆ ಮೇಲಾಜ್ಞೆ ಪಾಲಿಸಲು ಅನಿವಾರ್ಯವಾಗಿತ್ತು. (ಕಂದಾಯ ದರಗಳನ್ನು 'ಕಂದಾಯ ಪದ್ಧತಿ' ಶೀರ್ಷಿಕೆಯಡಿ ಚರ್ಚಿಸಲಾಗಿದೆ)

೫. ನಜರಾನ ಸಲ್ಲಿಸುವುದು.

ಈ ಪದ್ಧತಿ ಆದಿಲ್‌ಷಾಹಿಗಳ ಕಾಲದಲ್ಲಿ ಇತ್ತು. ಅದು ಮುಂದುವರೆದು ಮರಾಠರು, ಪೇಶ್ವೆಗಳು, ಸಾಂಗಲಿ ಪಟವರ್ಧನರ ಕಾಲದಲ್ಲಿಯೂ ಜಾರಿಯಲ್ಲಿತ್ತು ಎಂದು ತೋರುತ್ತದೆ. ಆಧುನಿಕ ಪರಿಭಾಷೆಯಲ್ಲಿ ಪರಿಭಾವಿಸುವುದಾದರೆ ಇದಕ್ಕೆ 'ಲಂಚ' ಎಂದೇ ಹೇಳಬಹುದು.

'ನಜರ್' ಎಂದರೆ ದೃಷ್ಟಿ, ನೋಡುವುದು 'ಆನ' ಬರುವುದು, ನೀಡುವುದು, ಕೊಡುವುದು ಎಂದಾಗುತ್ತದೆ. ಅಂದರೆ ನೋಡಿದುದಕ್ಕೆ ನೀಡುವುದು ಎಂದರ್ಥೈಯಿಸಬಹುದು.[೧೩] ವಾಡೆಯ ಅಧಿಕಾರಿಗಳು ರಾಜನನ್ನು ನೋಡಲು ಹೋದಾಗ ನಜರಾನವನ್ನು ಕೊಂಡೊಯ್ಯುವುದು ರೂಢಿಯಾಗಿತ್ತು. ಹಾಗೆ ತಂದ ನಜರಾನವನ್ನು ಬಾದಶಾಹನಿಗೆ ಕೊಟ್ಟು ತಮ್ಮ ಕೆಲಸಗಳನ್ನು ಅವನಿಂದ ಮಾಡಿಸಿಕೊಳ್ಳುತ್ತಿದ್ದರು. ಅಥವಾ ಅತ್ಯಮೂಲ್ಯ ಬೆಲೆಬಾಳುವ ವಸ್ತುಗಳನ್ನು ನಜರಾನ ರೂಪದಲ್ಲಿ ನೀಡಿ ಅವನಿಂದ ಇನಾಂ ಪಡೆಯುತ್ತಿದ್ದರು. ಅಥವಾ ಆಗದ ವೈರಿಗಳನ್ನು ಸದೆಬಡಿಯಲೂ ಕೋರುತ್ತಿದ್ದರು. ನಜರಾನ ನೀಡುವುದು ಕಡ್ಡಾಯವಲ್ಲದಿದ್ದರೂ ಸಂಪ್ರದಾಯ ಎನ್ನುವಂತೆ ಚಾಲ್ತಿಯಲ್ಲಿತ್ತು.

ಹನಗಂಡಿ ಹಿರಿಯ ದೇಸಾಯಿಗಳಾದ ಶ್ರೀ ಕೃಷ್ಣಗೌಡ ಜಕ್ಕಪ್ಪಾ ದೇಸಾಯಿಯವರು ತಮ್ಮ ಪೂರ್ವಿಕ ಹೇಳಿದ ನಜರಾನ ಕೊಡುವ ಸಂಭ್ರಮದ ಯಾತ್ರೆ ಬಗ್ಗೆ ನೆನಸಿಕೊಳ್ಳುತ್ತಾರೆ. ತಮ್ಮ ವಾಡೆಯ ಪೂರ್ವಜರು ಬಾದಶಾಹನಿಗೆ ನಜರಾನ ಕೊಡುವುದಕ್ಕೆ ವಿಜಾಪುರ (ವಿಜಯಪುರ)ಕ್ಕೆ ಹೋಗುವಾಗ ತಿಂಗಳುಗಟ್ಟಲೇ ಪ್ರಯಾಣ ಬೆಳೆಸುತ್ತಿದ್ದರಂತೆ.

ದೇಸಾಯಿ ನಜರಾನ ಕೊಡಲು ಹೋಗುವಾಗ ಒಂದು ಸಣ್ಣ ಅರಸೊತ್ತಿಗೆ ಹೋದಂತೆ ಹೋಗುತ್ತಿದ್ದ. ದೇಸಾಯಿ ಮೇಣಿ (ಮೇನೆ)ಯಲ್ಲಿ ನಜರಾನದ ಅಮೂಲ್ಯ ವಸ್ತುಗಳಾದ ವಜ್ರ, ವೈಡೂರ್ಯ, ಬಂಗಾರ, ಬೆಳ್ಳಿ, ರತ್ನ ಖಚಿತವಾದ ಹಾರಗಳು ಕೆಲವೊಂದು ಸಾರಿ ಕುಸುರಿ ಕೆತ್ತನೆಯ ವಸ್ತುಗಳು ಇನ್ನೂ ಮುಂತಾದ ವಸ್ತುಗಳ ಜೊತೆಗೆ ಸುಖಾಸೀನವಾಗಿ ಕೂರುತ್ತಿದ್ದ. ಈ ಮೇಣಿಯನ್ನು ನಾಲ್ಕರಿಂದ ಎಂಟು ಜನ ಹೊತ್ತಿರುತ್ತಿದ್ದರು. ಮೇಣಿಯ ಮುಂದೆ ಖಡ್ಗಧಾರಿಗಳಾದ ಕುದುರೆ ಸವಾರರು ಕಾಲ್ದಳ ಇರುತ್ತಿತ್ತು. ಈ ವ್ಯವಸ್ಥೆ ಮೇಣಿಯ ಹಿಂದೆಯೂ ಇರುತ್ತಿತ್ತು. ಅದರ ಹಿಂದೆ ಪ್ರಯಾಣಕ್ಕೆ ಬೇಕಾದ ಸಾಮಾನು ಸರಂಜಾಮುಗಳನ್ನು ಹೊತ್ತ ಕುದುರೆಗಳು, ಅಡುಗೆಯವರು, ಮನರಂಜನಾಕಾರರು ಇರುತ್ತಿದ್ದರು.

ರಾಜಧಾನಿ ತಲುಪಿದ ನಂತರ ದೇಸಾಯಿಯು ಅರಸನನ್ನು ಭೇಟಿಯಾಗಿ ಕುಶಲೋಪರಿ ವಿಚಾರಿಸಿ ತಾನು ತಂದ ನಜರಾನೆ ಅವನಿಗೆ ಒಪ್ಪಿಸುತ್ತಿದ್ದ. ಮತ್ತು ತನ್ನ ವ್ಯಾಪ್ತಿ ಆಡಳಿತ ಪ್ರದೇಶದಲ್ಲಿ ಬರುವ ಕುಂದುಕೊರತೆಗಳನ್ನು ಅರಹುತ್ತಿದ್ದು. ಅವುಗಳಿಗೆ

ರಾಜಾಜ್ಞೆಯಂತೆ ಪರಿಹಾರ ಕಂಡುಕೊಂಡು ಜೊತೆಗೆ ಹೊಸ ರಾಜಾಜ್ಞೆಗಳು (ನಿಯಮಗಳು) ಏನಾದರು ಇದ್ದಲ್ಲಿ ಅವುಗಳನ್ನು ಕೇಳಿಕೊಂಡು ಶಿರಸಾವಹಿಸಿ ಕೇಳುತ್ತಿದ್ದ. ದೇಸಾಯಿಯ ನಜರಾನೆಯಿಂದ ಮತ್ತು ಅವನ ರಾಜನಿಷ್ಠೆಯಿಂದ ಅರಸ ಸಂತೃಪ್ತನಾಗಿದ್ದರೆ ದೇಸಾಯಿಗೆ 'ಇನಾಂ' ಭೂಮಿ ಮತ್ತು ಗ್ರಾಮಗಳು ದೊರೆಯುತ್ತಿದ್ದವು.

ಒಟ್ಟಾರೆ ಇನಾಂ ಎಂಬುದು ವಾಡೆಯ ಅಧಿಕಾರಿಯ ಅರಸನಿಗೆ ನೀಡುವ ಉಡುಗೊರೆ, ಕಪ್ಪಕಾಣಿಕೆ, ಭೇಟಿಯಾಗಿದ್ದಕ್ಕೆ ಕೊಡುವ ನಿಧಿ ಎಂದೇ ಹೇಳಬಹುದು. ಇದು ಸ್ವಹಿತಾಸಕ್ತಿಗೆ, ಪ್ರಜೆಗಳು ಹಿತಾಸಕ್ತಿಗೆ, ವೈರಿಗಳ ಸದೆಬಡಿಯುವ ಉದ್ದೇಶಕ್ಕೆ, ಅಧಿಕಾರವನ್ನು ಉಳಿಸಿಕೊಳ್ಳುವುದಕ್ಕಾಗಿ ಸೃಷ್ಟಿಯಾದಂತೆ ತೋರುತ್ತದೆ.

**೬. ವಿಧೇಯತೆ.**

ವಾಡೆಯ ಅಧಿಕಾರ ರಾಜನಿಗೆ ವಿಧೇಯ ತೋರಬೇಕು. ಅವನು ರಾಜನ ಆಡಳಿತದ ಒಂದು ಭಾಗವಷ್ಟೆ. ಇನಾಂ ಭೂಮಿಯ ಸಂಪತ್ತು, ಕಂದಾಯದ ಸಂಪತ್ತು, ಇತರೆ ತೆರಿಗೆಗಳ ಸಂಪತ್ತಿನಿಂದ ವಾಡೆ ಅಧಿಕಾರಿ ಸ್ಥಳೀಯವಾಗಿ ಬಲಾಢ್ಯನಾಗಿರುತ್ತಿದ್ದ. ಹಾಗೆ ಸಂಪತ್ತಿನ ಅಮಲು ತಲೆಗೇರಿ ರಾಜಾಜ್ಞೆಗಳನ್ನು, ನಿಯಮಗಳನ್ನು ಮೀರಬಾರದಾಗಿತ್ತು. ಒಂದು ವೇಳೆ ಮೀರಿದರೆ ಅರಸನಾದವನು ವಾಡೆಯ ಅಧಿಕಾರಿಯ ಅಧಿಕಾರವನ್ನೇ ಕಸಿದುಕೊಳ್ಳುತ್ತಿದ್ದ. ಅವಿಧೇಯತೆ ತೋರಿದ್ದಕ್ಕಾಗಿ ಶಿಕ್ಷೆಗೆ ಗುರುಯಾಗುವಂಥ ಪ್ರಮೇಯವು ಒಂದು ಸಾರಿ 'ತೇರದಾಳ ದೇಸಾಯಿ'ಗೆ ಬಂದೊದಗಿತ್ತು. ವಾಡೆಯ ಪರಿವಾರದವರು ರಾಜನಲ್ಲಿ ಕ್ಷಮೆ ಕೇಳಿದಾಗ ಮತ್ತೇ ವತನದಾರಿಕೆ ಮರಳಿಬಂತು.

ವಾಡೆಯ ಅಧಿಕಾರಿ ರಾಜನಿಗಷ್ಟೇ ಅಲ್ಲದೇ ಪ್ರಜೆಗಳಿಗೂ ವಿಧೇಯತೆಯ ಗುಣವನ್ನು ತೋರಬೇಕಿತ್ತು. ಅಧಿಕಾರ ಇದ್ದ ಮಾತ್ರಕ್ಕೆ ಪ್ರಜೆಗಳ ಜೊತೆಗೆ ನಿರ್ದಯೆಯಿಂದ, ದರ್ಪದಿಂದ ನಡೆದುಕೊಳ್ಳುವ ಹಾಗಿರಲಿಲ್ಲ. ಸಾಂದರ್ಭಿಕವಾಗಿ ಅನಿವಾರ್ಯ ಎಂದಾದಲ್ಲಿ ಮಾತ್ರ ಈ ಗುಣಗಳನ್ನು ತೋರಬಹುದಾಗಿತ್ತು. ಬರಗಾಲ, ಬೆಳೆ ಹಾನಿಯಾದಾಗ ರೈತರಿಂದ ಕಂದಾಯಕ್ಕೆ ಒತ್ತಾಯ ಮಾಡದೇ ಆ ವರ್ಷ ವಿನಾಯಿತಿ ಕೊಡಬೇಕು. ಪೇಶ್ವೆಗಳಂತೂ ಇಂಥ ಸಂದರ್ಭದಲ್ಲಿ ನೇರವಾದ ಕಂದಾಯ ವಿನಾಯಿತಿ ಕೊಡಬೇಕೆಂದು ವಾಡೆಯಾಧಿಕಾರಿಗೆ ಆದೇಶಿಸುತ್ತಿದ್ದರು. "ಬಂಜರು ನೆಲದ ಬೇಸಾಯಕ್ಕೆ ಅಷ್ಟೊಂದು ತೀವ್ರವಾದ ಗಮನಕೊಟ್ಟಿದ್ದ ಪೇಶ್ವೆಗಳು ಆಗಲೇ ಬೇಸಾಯದಲ್ಲಿದ್ದ ನೆಲವನ್ನಾಗಲಿ, ಅವುಗಳನ್ನು ನಿರ್ವಹಿಸುತ್ತಿದ್ದ ರೈತರನ್ನಾಗಲಿ ಎಷ್ಟು ಮಾತ್ರಕ್ಕೂ ಅಲಕ್ಷಿಸಿರಲಿಲ್ಲ. ಕ್ಷಾಮ ಬಂದರೆ, ಗ್ರಾಮವು ಯಾವುದಾದರೂ ಲೂಟಿಗೆ ಒಳಗಾದರೆ, ಮಳೆ ಕಡಿಮೆಯಾದರೆ, ಇನ್ನಾವುದಾದರೂ ಕಾರಣದಿಂದ ಬೆಳೆ ಬರದೆ ಹೋದರೆ ಪೇಷ್ವಾ ಸರಕಾರವು ಭಾಗಶ: ಆಗಲಿ ಪೂರ್ಣವಾಗಿಯಾಗಲಿ ಕಂದಾಯವನ್ನು

ವಿನಾಯಿತಿಗೊಳಿಸಲು ಹಿಂದೆ ಮುಂದೆ ನೋಡುತ್ತಿರಲಿಲ್ಲ."[೧೪] ಕೇಂದ್ರದಿಂದ ಈ ರೀತಿ ಆದೇಶವಿದ್ದಾಗ್ಯೂ ವಾಡೆಯ ಅಧಿಕಾರಿ ಕಂದಾಯ ವಸೂಲಿ ಮಾಡಿ ರಾಜಾಜ್ಞೆಗೆ ಅವಿಧೇಯತೆಯನ್ನು ತೋರಬಾರದಾಗಿತ್ತು.

ಹನಗಂಡಿಯ ಜಕ್ಕಪ್ಪ ದೇಸಾಯಿ, ತೇರದಾಳದ ಸುಗುಣಪ್ಪ ನಾಡಗೌಡ್ರ ಅಣ್ಣಿಗೇರಿಯ ಭೀಮಪಯ್ಯ ದೇಶಪಾಂಡೆಯವರುಗಳು ಪ್ರಜೆಗಳ ಕಷ್ಟಕಾಲದಲ್ಲಿ ಕಂದಾಯ ವಸೂಲಿ ಮಾಡದೇ ಅವರಿಗೆ ಧವಸ-ಧಾನ್ಯಾದಿಗಳನ್ನು ಕರ್ಜಿಗೆ ಪುಡಿಗಾಸನ್ನು ಕೊಟ್ಟು ಮಾನವೀಯ ಗುಣವನ್ನು ತೋರುತ್ತಿದ್ದುದು ಒಬ್ಬ ಅಧಿಕಾರಿ ತನ್ನ ಪ್ರಜೆಗಳ ಬಗ್ಗೆ ಹೊಂದಿದ ಕಳಕಳಿಯೇ ಆಗಿದೆ.

## ವಾಡೆಯ ಅಧಿಕಾರಿಗಳ ಬಿರುದು ಮತ್ತು ಗೌರವ ಸಂಬೋಧನೆಗಳು

ದಾನಧರ್ಮ, ಶೌರ್ಯ-ಸಾಹಸ, ಪ್ರೀತಿ-ವಿಶ್ವಾಸ, ಸಹಾಯ-ಸಹಕಾರ ಗುಣಗಳಿಂದ ವಾಡೆಯ ಅಧಿಕಾರಿ ಪ್ರಸಿದ್ಧನಾದಾಗ ಪ್ರಜೆಗಳು ರಾಜರು ಅವರಿಗೆ ವಿಶೇಷ ಬಿರುದು ಮತ್ತು ಗೌರವ ಸಂಬೋಧನೆಯಿಂದ ಕರೆಯುವುದು ರೂಢಿಯಲ್ಲಿತ್ತು. ಇದು ವಾಡೆಯ ಅಧಿಕಾರಿಯು ತಾನು ಮಾಡಿದ ಸತ್ಕಾರ್ಯ ಗುಣದ ಧನ್ಯತೆಯ ಸಂಕೇತ. ಕೆಲವೊಂದು ಸಾರಿ ವಾಡೆಯ ಅಧಿಕಾರಿಯ ಮನೆಯವರು (ಹೆಂಡತಿ) ದೇವಾಲಯ, ಬಸದಿ, ಕಟ್ಟಿಸಿದಾಗ, ಜೀರ್ಣೋದ್ಧಾರಗೊಳಿಸಿದಾಗ ಅವರ ಗುಣವನ್ನು ಮೆಚ್ಚುವ ಉಕ್ತಿಗಳು ಶಾಸನಗಳಲ್ಲಿ ದಾಖಲಿತವಾಗಿವೆ.

೧. ಪಾಗಲ್ ಘೋಡಾ ಖಾನ್ (ಹುಚ್ಚು ಕುದುರೆ ಸರದಾರ): ತೇರದಾಳ ಮತ್ತು ಹನಗಂಡಿ ವಾಡೆಯ ಮೂಲ ಪುರುಷ ಕೃಷ್ಣಗೌಡ ದೇಸಾಯಿಗಿದ್ದ ಬಿರುದು ಇದು. ಹುಚ್ಚು ಕುದುರೆಯನ್ನು ಸವಾರಿ ಮಾಡಿ ಅದನ್ನು ನಿಯಂತ್ರಿಸಿದಾಗ ಆದಿಲ್‌ಷಾಹಿ ಕೊಟ್ಟ ಬಿರುದು ಇದು.

೨. ರಾವ್ ಸಾಹೇಬ್: ಬ್ರಿಟೀಷ್ ಅಧಿಕಾರಿಗಳು ಅಣ್ಣಿಗೇರಿ ದೇಶಪಾಂಡೆ ವಾಡೆಯವರಿಗೆ ಕೊಟ್ಟ ಬಿರುದು.

೩. ಸಕಲಗುಣ ಸವಾಸ ಪರಿಪೂರ್ಣ ರಾಜಮಾನ್ಯೆ ರಾಜಶ್ರೀ: ಇದು ಹನಗಂಡಿಯ ಶ್ರೀ ಪಾಸಪ್ಪ ಮುಗಿಯಪ್ಪ ದೇಸಾಯಿಯವರಿಗಿದ್ದ ಬಿರುದು. ಇವರು ಪ್ರಜೆಗಳ ಸಂಕಷ್ಟಕ್ಕೆ ಮಿಡಿಯುವ ಮಾನವೀಯ ಮೌಲ್ಯಗಳನ್ನು ಹೊಂದಿದ್ದರಿಂದ ಈ ಬಿರುದು ಪ್ರಾಪ್ತವಾಗಿದೆ.

೪. ಮೊಹಬತ ಶಾರಿ ಮುಖತಾ ಅದುಬಾ: ಲಕ್ಷ್ಮವ್ವಾ ದೇಸಾಇಣಿ ಮತ್ತು ಮೋಫೇಗೌಡ ವಲದ ಕೃಷ್ಣಗೌಡ ದೇಸಾಯಿ. (ಹನಗಂಡಿ ದೇಸಾಯಿಗಳಿಗಿದ್ದ ಗೌರವ ಸಂಬೋಧನೆ).[೧೫]

೫. ಕೌಲನಾಮಾದ ಜಬದತುಲ ಇಕರಾನ ಪಾಸಪ್ಪ ದೇಶಮುಖ ಮತ್ತು ಪಾಯಗೌಡ ನಾಡಗೌಡ್ರ[೧೬] (ತೇರದಾಳ ವಾಡೆ).

೬. ನಜಾರಣೆಯ ಒಡೆಯ [(ಬೆಳ್ಳಿ ನಾಣ್ಯಗಳನ್ನು ತಟ್ಟೆಯಲ್ಲಿ ತುಂಬ ತೆಗೆದುಕೊಂಡು ಹೋಗುವುದು) (ತೇರದಾಳದ ಸುಗುಣಪ್ಪ ನಾಡಗೌಡರಿಗೆ ಇದ್ದ ಗೌರವ ಸಂಬೋಧನೆ)].

೭. ತರುಣಿ ಹರಿಣ ಸುಲೋಚನೆ । ಗುರುಕುಚ ಮರಿದುಂಬೆಗುರಳ ನೋಂತಳ್ಪುಖದಿಂ ಲಕ್ಷದೀಪರಥ ಉತ್ಸವ ಮಾಡಿಸಿದರು.[೧೭] ಮುಳಗುಂದ ವಾಡೆಯ ನಾಡಕುಲಕರಣಿ ನಾಗಭೂಪನ ಮನೋವಲ್ಲಭೆ ಬನದಾಂಬಿಕೆಯು ತುರುಕರು ಮುಳಗುಂದದ ಜಿನಾಲಯವನ್ನು ಹಾಳುಮಾಡಿ ಹೋಗಿದ್ದನ್ನು ಜೀರ್ಣೋದ್ಧಾರಗೊಳಿಸಿ ಪುಷ್ಪಾಂಜಲಿ ನೋಂಪಿಯನ್ನು ಲಕ್ಷದೀಪರತೋತ್ಸವವನ್ನು ಕೈಗೊಂಡಳು. ಅವಳ ಭಕ್ತಿಯನ್ನು ಕವಿ ವರ್ಣಿಸುವಾಗ ಮೇಲಿನ ಪ್ರಶಂಸೆ ಬಂದಿದೆ.

೮. ಸಮ್ಯಕ್ತ್ವ ಚೂಡಾಮಣಿಗಳು[೧೮] ತೇರದಾಳದ ಗೊಂಕ ಜಿನಾಲಯದ ಮೂಲ ಮೂರ್ತಿ ಭಗ್ನವಾದಾಗ ಅಲ್ಲಿ ನೂತನ ನೇಮಿನಾಥ ತೀರ್ಥಂಕರ ಬಿಂಬವನ್ನು ಕ್ರಿ.ಶ. ೧೭೪೮ರಲ್ಲಿ ತೇರದಾಳದ ದೇಸಾಯಿನಿ ಸತ್ಯವ್ವ ಮತ್ತು ಅವರ ಪುತ್ರ ಜಕ್ಕಪ್ಪ ದೇಸಾಯಿಗಳು ಕೂಡಿ ಪ್ರತಿಷ್ಠಾಪಿಸಿದರು. ಈ ಕಾರ್ಯ ಧಾರ್ಮಿಕವನ್ನು ಮೆಚ್ಚಿ ಶಾಸನಕವಿ ಅವರಿಗೆ ಸಮ್ಯಕ್ತ್ವ ಚೂಡಾಮಣಿಗಳು ಎಂದಿದ್ದಾನೆ.

೯. ಶ್ರೀಮಂತ:[೧೯] ಅಣ್ಣಿಗೇರಿ ದೇಶಪಾಂಡೆ ವಾಡೆಯ ಶ್ರೀ ಭೀಮಪ್ಪಯ್ಯ ದೇಶಪಾಂಡೆಯವರಿಗಿದ್ದ ಸಂಬೋಧನೆ. ಸಾಮಾನ್ಯವಾಗಿ ಎಲ್ಲ ವಾಡೆ ಅಧಿಕಾರಿಗಳು ಶ್ರೀಮಂತರಾಗಿದ್ದರಿಂದ ಅದರ ಅನ್ವರ್ಥವಾಗಿ 'ಶ್ರೀಮಂತ' ಎಂಬ ಪದ ಬಳಕೆಯಾಗಿದೆ.

೧೦. 'ಮುನಿಸಂಘ ಸೇವಾಶಕ್ತಿ'[೨೦] ಅಭಿನವ ದಾನ ಚಿಂತಾಮಣಿ: ಈ ಬಿರುದುಗಳು ಅಣ್ಣಿಗೇರಿ ೨ನೇ ಭೀಮಪ್ಪಯ ಚಂದಪ್ಪಯ್ಯ ದೇಶಪಾಂಡೆಯವರ ಪತ್ನಿಯಾದ ಶ್ರೀಮತಿ ಪುಷ್ಪಾವತಿಬಾಯಿ ಭೀಮಪ್ಪಯ್ಯ ದೇಶಪಾಂಡೆಯವರಿಗಿದ್ದ ಬಿರುದುಗಳಿವು. ಇವರ ಧಾರ್ಮಿಕ ಚಟುವಟಿಕೆಗಳಿಗೆ ಮೆಚ್ಚಿ ಅಂದಿನ ಜೈನ ಸಮುದಾಯವು 'ಮುನಿ ಸಂಘ ಸೇವಾಶಕ್ತಿ' ಎಂಬ ಬಿರುದು ನೀಡಿದರು. ಅವರಲ್ಲಿದ್ದ ಅಪಾರ ದಾನಗುಣವನ್ನು ಮೆಚ್ಚಿ ಜನರೆ ಅವರಿಗೆ 'ಅಭಿನವದಾನ ಚಿಂತಾಮಣಿ' ಎಂಬ ಅಭಿದಾನವನ್ನಿತ್ತಿದ್ದರು.

೧೧. ಜಿನಕುಲವೃದ್ಧವ:[೨೧] ಅಣ್ಣಿಗೇರಿ ದೇಶಕುಲ್ಲಕರಣಿಯಾದ ಹಿರಿಯ ನಾಗಪಯ್ಯ ಚಂದಪ್ಪಯಾ ದೇಶಪಾಂಡೆಯವರು ಗದುಗಿನ ಶ್ರೀ ಆನಂದಾನಿಮಠ ಭೂದಾನ ಮಾಡಿ ಕೊಟ್ಟ ಪತ್ರದಲ್ಲಿ ಈ ಅಭಿದಾನದ ದಾಖಲೆಯಿದೆ.

### ೫.೨ ಸಾಮಾಜಿಕ ವ್ಯವಸ್ಥೆ

ಉತ್ತರ ಕರ್ನಾಟಕದ ಜೈನವಾಡೆಗಳ ಅಧಿಕಾರಿಗಳು ಸರಳ ಜೀವಿಗಳು. ಪ್ರಜೆಗಳ ಬಗ್ಗೆ ಅಪಾರ ಪ್ರೀತಿಯನ್ನು ಹೊಂದಿದ್ದರು. ಅವರು ಹಾಕಿ ಕೊಟ್ಟ ಉಂಬಳಿ (ಭೂದಾನ)ಯ ದಾಖಲೆಗಳು ಈ ಅಂಶವನ್ನು ಬಿತ್ತರಿಸುತ್ತವೆ. ಪ್ರಜೆಗಳೇ ನಮ್ಮ ಆಸ್ತಿ ಎಂಬುದು ಅರಿತಿದ್ದ

ವಾಡೆಯ ಅಧಿಕಾರಿಗಳು ಅವರನ್ನು ಪ್ರೀತಿ ವಿಶ್ವಾಸಕ್ಕೆ ತೆಗೆದುಕೊಂಡೆ ಆಡಳಿತ ನಡೆಸುತ್ತಿದ್ದರು. ಅಂತೆಯೇ ಪ್ರಜೆಗಳ ಜೊತೆಗೆ ಬೆರೆಯುವುದು, ಹಬ್ಬ ಹರಿದಿನಗಳಲ್ಲಿ ಮನರಂಜನಾ ಕಾರ್ಯಕ್ರಮಗಳನ್ನು ಏರ್ಪಡಿಸುವುದು. ಬರಗಾಲದಲ್ಲಿ ಮತ್ತು ಬೆಳೆನಷ್ಟದಲ್ಲಿ ಕಂದಾಯ ಕಟ್ಟುವುದಕ್ಕೆ ಆ ವರ್ಷ ವಿನಾಯಿತಿ ಕೊಡುವುದು. ವ್ಯಾಜ್ಯಗಳನ್ನು ಸ್ಥಳೀಯ ಮಟ್ಟದಲ್ಲಿಯೇ ಬಗೆಹರಿಸುವುದು ದೇವಾಲಯಗಳನ್ನು ಕಟ್ಟಿಸುವುದು, ಮುಂತಾದ ಚಟುವಟಿಕೆಗಳನ್ನು ಪ್ರಜೆಗಳ ಹಿತಕ್ಕಾಗಿಯೇ ವಾಡೆಯ ಮುಖ್ಯಸ್ಥರು ಕೈಗೊಂಡರು.

## ಪ್ರಜೆಗಳ ಜೊತೆಗಿನ ಸಂಬಂಧ

ಜೈನ ವಾಡೆಗಳು ಎಲ್ಲ ಅಧಿಕಾರಿಗಳು ಪ್ರಜೆಗಳ ಕಷ್ಟಕ್ಕೆ ಕಾಲಕಾಲಕ್ಕೆ ಸ್ಪಂದಿಸುತ್ತಲೆ ಬಂದಿದ್ದಾರೆ. ತೇರದಾಳದ ನಾಡಗೌಡರಾದ ಸುಗುಣಪ್ಪ ನಾಡಗೌಡರು ಪ್ರಜೆಗಳು ಕಷ್ಟಕಾಲದಲ್ಲಿ ಸಹಾಯ ಬೇಡಿ ಬಂದಾಗ ಹಣ ಮತ್ತು ಧವಸ-ದಾನ್ಯಗಳನ್ನು ಕೊಡುತ್ತಿದ್ದರು. 'ಕೊಡುಗೈ ದಾನಿ' ಎಂದೇ ಸುಗುಣಪ್ಪ ನಾಡಗೌಡರು ಪ್ರಸಿದ್ಧರಾಗಿದ್ದರು. ಸಾಕಷ್ಟು ಮದುವೆ ಮುಂಜಿಗಳಲ್ಲಿ ಮುಂದಾಳತ್ವ ವಹಿಸಿ ವಧು-ವರ ಮತ್ತು ವಟುಗಳ ವಸ್ತ್ರ, ತಾಳಿ, ಹಣ ಸಹಾಯ ಮಾಡುತ್ತಿದ್ದರು. ಬಡವರನ್ನು ತುಂಬಾ ಅಂತ:ಕರಣದಿಂದ ನೋಡುವ ವ್ಯಕ್ತಿ ಇವರಾಗಿದ್ದರು ಒಬ್ಬ ನಾಡಗೌಡನಿಗೆ ಇರಬೇಕಾದ 'ದಯಾಗುಣ' ಸುಗುಣಪ್ಪ ಅವರಲ್ಲಿ ಎದ್ದು ಕಾಣುತ್ತಿತ್ತು.

ಹನಗಂಡಿ ದೇಸಾಯಿಗಳೂ ಕೂಡ ಪ್ರಜೆಗಳೊಂದಿಗೆ ನಿಕಟ ಸಂಬಂಧ ಇಟ್ಟುಕೊಂಡು ಅವರ ನೋವು-ನಲಿವುಗಳಲ್ಲಿ ಪಾಲ್ಗೊಳ್ಳುತ್ತಿದ್ದರು ಇವರೂ ಸಹ ಬಡವರಿಗೆ ಆರ್ಥಿಕ ಸಹಾಯದ ಜೊತೆಗೆ ಮದುವೆಯ ಉಸ್ತುವಾರಿ ನೋಡಿಕೊಳ್ಳುತ್ತಿದ್ದರು. ಜಕ್ಕಪ್ಪ ದೇಸಾಯಿ, ಅಲ್ಲಪ್ಪ ದೇಸಾಯಿ, ಮಗೆಪ್ಪ ದೇಸಾಯಿ, ಪ್ರಮುಖರು. ಈಗಲೂ ಈ ಮನೆತನದವರು ಬಸದಿ, ದೇವಾಲಯ ನಿರ್ಮಾಣಕ್ಕೆ, ಸಾಹಿತ್ಯ ಸಮಾರಂಭಕ್ಕೆ, ಉರುಸು ಜಾತ್ರೆಗಳಿಗೆ ಧನ ಸಹಾಯ ಮಾಡುತ್ತಾರೆ. ಇಂತಹ ಕಾರ್ಯ ಚಟುವಟಿಕೆಗಳಿಗೆ ಅಣ್ಣಿಗೇರಿ ಮತ್ತು ಮುಳುಗುಂದ ದೇಶಪಾಂಡೆಯವರು, ದರೂರು ನಾಯಕರು ಭಿನ್ನರಲ್ಲ.

## ಶಿಕ್ಷಣ

ಶಿಕ್ಷಣ ಕೇವಲ ಮೇಲ್ವರ್ಗದ ಹಕ್ಕು ಎಂಬಂತೆ ಇದ್ದ ಸಂದರ್ಭದಲ್ಲಿ ಅಣ್ಣಿಗೇರಿ ದೇಶಪಾಂಡೆ ವಾಡೆಯ ಭೀಮಪ್ಪಯ್ಯ ಅವರ ಪತ್ನಿ ಶ್ರೀಮತಿ ಪುಷ್ಪಾವತಿಬಾಯಿಯವರು ಸಾಮಾನ್ಯರಿಗೆ ಶಿಕ್ಷಣ ದೊರಕಲೆಂದು ಅಲ್ಲಲ್ಲಿ ಧಾರ್ಮಿಕ ಪಾಠಶಾಲೆಗಳನ್ನು ಪ್ರಾರಂಭಿಸಿದರು. ಈ ಶಿಕ್ಷಣ ಈಗಿನಂತೆ ಸಾಂಪ್ರದಾಯಿಕ ಶಿಕ್ಷಣವಾಗಿರದೆ ಧಾರ್ಮಿಕ ಶಿಕ್ಷಣವಾಗಿತ್ತು. ಯಾವ ರೀತಿಯ ಶಿಕ್ಷಣವೇ ಜನಸಾಮಾನ್ಯನಿಗೆ ತಲುಪದ ಸಂದರ್ಭದಲ್ಲಿ ಈ ರೀತಿಯಾದ ಧಾರ್ಮಿಕ ಶಿಕ್ಷಣವನ್ನು ಕೊಟ್ಟ ಕೀರ್ತಿ ಪುಷ್ಪಾವತಿಬಾಯಿಯವರದ್ದು. ಇವರು "ಜೈನ-ಜೈನೇತರರಿಗೆ ಜೈನ ತತ್ವ-ಸಿದ್ಧಾಂತ, ಶಾಸ್ತ್ರ-ದರ್ಶನ, ಕೃತಿ-ಕಾವ್ಯ, ಆಚಾರ-ವಿಚಾರ, ನಂಬುಗೆ-ಸಂಪ್ರದಾಯ, ಹಬ್ಬ-

ಹರಿದಿನ, ತೀರ್ಥಂಕರರು, ಮುನಿಧರ್ಮ, ಶ್ರಾವಕಧರ್ಮ, ಕವಿಗಳು ಮೊದಲಾದ ವಿಷಯಗಳನ್ನು ಪರಿಚಯಿಸುವ ವ್ಯವಸ್ಥೆ ಮಾಡಿದ್ದರು. ಜೊತೆಗೆ ದಶಲಕ್ಷಣ ಪರ್ವ, ನೋಂಪಿ, ಮಹಾವೀರ ಜಯಂತಿ ಇತ್ಯಾದಿ ಜೈನ ಹಬ್ಬ-ಹರಿದಿನಗಳಂದು ಸುತ್ತಮುತ್ತಲಿನ ಗ್ರಾಮಗಳಲ್ಲಿ ಉಪನ್ಯಾಸಗಳನ್ನು ಮಾಡುವುದರ ಮೂಲಕ ಸಮಾಜವನ್ನು ಜಾಗೃತಗೊಳಿಸುತ್ತಿದ್ದರು.[೨೨]

ವಿದ್ಯಾರ್ಥಿಗಳ ಅನುಕೂಲಕ್ಕೋಸ್ಕರ ಕೊಲ್ಲಾಪುರದ ಜೈನ ಬೋರ್ಡಿಂಗ್‌ನಲ್ಲಿ ಮತ್ತು ಹುಬ್ಬಳ್ಳಿಯ ಜೈನಬೋರ್ಡಿಂಗ್‌ನಲ್ಲಿ ಕೋಣೆಗಳನ್ನು ಕಟ್ಟಿಕೊಟ್ಟಿದ್ದಾರೆ. ಇವರ ಕಾರ್ಯಚಟುವಟಿಕೆಗಳನ್ನು ಮೆಚ್ಚಿ 'ಮುನಿಸಂಘ ಸೇವಾಶಕ್ತಿ' ಮತ್ತು 'ಅಭಿನವ ದಾನಚಿಂತಾಮಣಿ' ಎಂಬ ಬಿರುದುಗಳನ್ನು ಜನರೇ ಕೊಟ್ಟರು.

ಸಾಂಪ್ರದಾಯಿಕ ಶಿಕ್ಷಣ ವ್ಯವಸ್ಥೆಯನ್ನು ಪ್ರಜೆಗಳಿಗೆ ತಲುಪಿಸುವಲ್ಲಿ ತೇರದಾಳ ನಾಡಗೌಡರು ಬಹುದೊಡ್ಡ ಪಾತ್ರ. ಊರಲ್ಲಿ ಸರ್ಕಾರಿ ಪ್ರಾಥಮಿಕ ಶಾಲೆ ಪ್ರಾರಂಭಿಸಲು ಪ್ರಯತ್ನಿಸಿದ ಇವರು ಅದು ಪ್ರಾರಂಭವಾಗುವಂತೆಯೂ ನೋಡಿಕೊಂಡು, ಶಾಲೆಯನ್ನು ಕಟ್ಟಲು ಧನ ಸಹಾಯ ಮತ್ತು ಮೂರು ಎಕರೆ ಜಾಗವನ್ನು ಕೊಡುತ್ತಾರೆ. ಬಡವರು ಶ್ರೀಮಂತರು ದಲಿತರಿಗೆ ಎಲ್ಲ ಮಕ್ಕಳಿಗೂ ಇಲ್ಲಿ ಶಿಕ್ಷಣ ದೊರೆಯುವಂತೆ ಮಾಡಿದರು ಎಂದು ಶ್ರೀಮತಿ ಜಯಶ್ರೀ ನಾಡಗೌಡರು ಹೇಳುತ್ತಾರೆ.[೨೩] ಮುಳುಗುಂದ ದೇಶಪಾಂಡೆ ವಾಡೆಯ ರಂಗಪಯ್ಯ ನಾಗಪಯ್ಯ ದೇಶಪಾಂಡೆಯವರು ಇತ್ತೀಚಿಗೆ ಸರ್ಕಾರಿ ಪದವಿ ಪೂರ್ವ ಕಾಲೇಜಿಗೆ ೭ ಎಕರೆ ಭೂಮಿಯನ್ನು ಮತ್ತು ಯಳವಟ್ಟಿ ಶಾಲೆಗೆ ೭ ಎಕರೆ ಭೂಮಿಯನ್ನು ಉಚಿತವಾಗಿ ಕೊಟ್ಟು ವಿದ್ಯಾರ್ಥಿಗಳಿಗೆ ಪದವಿ ಪೂರ್ವ ಶಿಕ್ಷಣ ಸ್ಥಳೀಯ ಮಟ್ಟದಲ್ಲಿಯೇ ದೊರಕುವಂತೆ ಮಾಡಿ ತಮಗಿರುವ ಶೈಕ್ಷಣಿಕ ಕಳಕಳಿಯನ್ನು ಮೆರೆದಿದ್ದಾರೆ. ಇವರಂತೆ ಅಣ್ಣಿಗೇರಿ ದೇಶಪಾಂಡೆಗಳು ಪ್ರಾಥಮಿಕ ಶಾಲೆಗೆ ಭೂಮಿಯನ್ನು ಕೊಟ್ಟಿದ್ದಾರೆ.

ಇವಷ್ಟೇ ಅಲ್ಲದೇ ರಾಷ್ಟ್ರೀಯ ಹಬ್ಬಗಳಾದ ಗಣರಾಜ್ಯೋತ್ಸವ ಸ್ವಾತಂತ್ರ್ಯೋತ್ಸವದ ದಿನಗಳಂದು ಪ್ರತಿಭಾವಂತ ವಿದ್ಯಾರ್ಥಿಗಳಿಗೆ ಸನ್ಮಾನ, ಪುಸ್ತಕ ರೂಪದ, ಹಣದ ರೂಪದ ಬಹುಮಾನಗಳನ್ನು, ಶಾಲಾ ಕಾಲೇಜುಗಳ ವಿವಿಧ ಕಾರ್ಯಕ್ರಮಗಳಿಗೆ ಹಣ ಮತ್ತು ಬಹುಮಾನಗಳನ್ನು ಅಥವಾ ಶಾಲಾ ಬೇಡಿಕೆಗಳನ್ನು ಪೂರೈಸುತ್ತ ತಮ್ಮ ಶಿಕ್ಷಣ ಪ್ರೇಮವನ್ನು ಎಲ್ಲ ಜೈನ ವಾಡೆಗಳ ಅಧಿಕಾರಿಗಳು ಮೆರೆದಿದ್ದಾರೆ.

## ಚಾವರತ ಹಳ್ಳಿಗಳ ಸಂಬಂಧ

ಸುಮಾರು ೧೦ ರಿಂದ ೨೦ ಅಥವಾ ೪೦ (ಕೆಲವೊಂದು ಸಾರಿ ಇದಕ್ಕೂ ಮೇಲ್ಪಟ್ಟು) ಹಳ್ಳಿಗಳು ಸೇರಿ ಒಂದು ಪರಗಣವಾಗಿರುತ್ತಿತ್ತು. ಈ ವ್ಯವಸ್ಥೆ ಆದಿಲ್‌ಷಾಹಿ, ಪೇಶ್ವೆ, ಸಾಂಗಲಿಯ ಪಟವರ್ಧನರ ಕಾಲಾವಧಿಗಳಲ್ಲಿ ಕಂಡುಬರುತ್ತದೆ. ಬ್ರಿಟೀಷರ ಕಾಲಾವಧಿಯಲ್ಲೂ ಈ ವ್ಯವಸ್ಥೆ ಮುಂದುವರೆದಂತೆ ತೋರುತ್ತದೆ. ಪರಗಣದಲ್ಲಿರುವ ಹಳ್ಳಿಗಳನ್ನು ಚಾವರತ ಹಳ್ಳಿಗಳೆಂದು ಕರೆಯುವ ರೂಢಿಯೂ ಇತ್ತು. ಈ ರೀತಿಯ ಹಳ್ಳಿಗಳು ಆದಿಲ್‌ಷಾಹಿಯ ಕಾಲದಲ್ಲಿ ವಾಡೆಯ

ಅಧಿಕಾರಿಗಳಿಗೆ ಇನಾಂ ಆಗಿ ದೊರೆತವು. ಈ ಎಲ್ಲ ಹಳ್ಳಿಗಳ ಕಂದಾಯ ವಸೂಲಿ ಮೇಲುಸ್ತುವಾರಿ ವಾಡೆಯ ಮುಖ್ಯಸ್ಥನದ್ದೇ ಆಗಿರುತ್ತಿತ್ತು. ಕಾಲಕಾಲಕ್ಕೆ ಕಂದಾಯ ಸಂದಾಯವಾಗಲೆಂದು ಈ ಅಧಿಕಾರಿಯು ಪ್ರಜೆಗಳ ಜೊತೆಗೆ ಸಾಕಷ್ಟು ವಿಶ್ವಾಸದಿಂದಲೇ ಇರುತ್ತಿದ್ದ ಅಂತೆಯೇ ಚಾವರತ್ ಹಳ್ಳಿಗಳ ಜನರು ವಾಡೆಯ ಮುಖ್ಯಸ್ಥನಿಗೆ ಸಕಲ ಗೌರವಾದರಗಳಿಂದಲೇ ಕಾಣುತ್ತಿದ್ದರು.

ಚಾವರಾತ್ ಹಳ್ಳಿಗಳಲ್ಲಿ ಯಾವುದೇ ಕಾರ್ಯಕ್ರಮ ಜಾತ್ರೆ, ಉತ್ಸವ, ಉರುಸುಗಳಲ್ಲಿ ವಾಡೆಯ ಮುಖ್ಯಸ್ಥರ ಮುಂದಾಳತ್ವ ವಹಿಸುತ್ತಿದ್ದರು. ಈ ಕಾರ್ಯಕ್ರಮಗಳಿಗೆ ತಮ್ಮ ಬೊಕ್ಕಸದಿಂದ ಧನವನ್ನೂ ನೀಡುತ್ತಿದ್ದರು. ಇದು ಒಂದು ಆಡಳಿದ ತಂತ್ರವಾದರೂ ಜನರು ಮಾತ್ರ ವಾಡೆಗೆ ಮುಖ್ಯಸ್ಥ ತಮ್ಮೂರ ಕಾರ್ಯಕ್ರಮಗಳಲ್ಲಿ ಭಾಗವಹಿಸಿದ್ದಕ್ಕೆ ಪುನೀತರಾಗುತ್ತಿದ್ದರು.

ವಾಡೆಯ ಅಧಿಕಾರಿಗಳು ಚಾವರತ್ ಹಳ್ಳಿಗಳ ಕಾರ್ಯಕ್ರಮಗಳಿಗಷ್ಟೇ ಭಾಗವಹಿಸದೆ ಇಲ್ಲಿ ದೇವಾಲಯ, ದರ್ಗಾ, ಬಸದಿಗಳ ನಿರ್ಮಾಣ ಮಾಡಿ ಜನರ ಕಣ್ಣಲ್ಲಿ ದೇವರುಗಳೇ ಆಗಿರುತ್ತಿದ್ದರು. ಹನಗಂಡಿ ದೇಸಾಯಿಗಳು ಹಳ್ಳಿಂಗಳಿಯಲ್ಲಿ ಒಂದು ಬಸದಿ, ತಮದಡ್ಡಿಯಲ್ಲಿ ಒಂದು ಬಸದಿ, ತೇರದಾಳದ ಪ್ರಭುಸ್ವಾಮಿ ಮಠ ನಿರ್ಮಾಣದಲ್ಲಿ, ಜಿನಗಿ ಅಬಾಖಾನ ದರ್ಗಾ ನಿರ್ಮಾಣಕ್ಕೆ ಭೂಮಿ–ಹಣ ಸಹಾಯ, ಮದಲಮಟ್ಟಿಯಲ್ಲಿ ಹನುಮಂತನ ದೇವಾಲಯ, ಮೂಡಲಗಿಯಲ್ಲಿ ಬ್ರಾಹ್ಮಣ ಮಠ ನಿರ್ಮಾಣಮಾಡಿ ಕಾಲಕಾಲಕ್ಕೆ ದತ್ತಿಗಳನ್ನು ಸಲ್ಲಿಸಿ ಉತ್ಸವದಲ್ಲಿ ಭಾಗಿಯಾಗುತ್ತಿದ್ದರು. ತೇರದಾಳದ ನಾಡಗೌಡರು ಪ್ರಭುಸ್ವಾಮಿ ಮಠ ಮತ್ತು ಜಿನಗಿ ಅಬಾಖಾನ ದರ್ಗಾ ನಿರ್ಮಾಣ ಹಂತದಲ್ಲಿ, ದತ್ತಾತ್ರೇಯ ಗುಡಿಯ ನಿರ್ಮಾಣ ಹಂತದಲ್ಲಿ ಧನ ಸಹಾಯ ಮತ್ತು ಸಾಕಷ್ಟು ಚಾವರತ್ ಹಳ್ಳಿಗಳಲ್ಲಿ ದೇವಾಲಯಗಳನ್ನು ಕಟ್ಟಿಸಿದ್ದಾರೆ ಎಂದು ಶ್ರೀಮತಿ ಜಯಶ್ರೀ ಅಮ್ಮನವರು ಹೇಳುತ್ತಾರೆ.[೨೪]

ಅಣ್ಣಿಗೇರಿ ದೇಶಪಾಂಡೆಯವರು ಜನರಿಗೋಸ್ಕರ ಸಾಕಷ್ಟು ಲೋಕೋಪಯೋಗಿ ಕೆಲಸಗಳನ್ನು ಮಾಡುವಲ್ಲಿ ಹಿಂದುಳಿದಿಲ್ಲ. ಈ ವಾಡೆಯ ಶ್ರೀಮತಿ ಪುಷ್ಪಾವತಿಬಾಯಿ ಭೀಮಪ್ಪಯ್ಯ ದೇಶಪಾಂಡೆಯವರು ಮಾನಕಾಪುರದಲ್ಲಿ ಒಂದು ಬಸದಿ, ಅಣ್ಣಿಗೇರಿ ಶಾಂತಿನಾಥ ಬಸದಿಯ ಜೀರ್ಣೋದ್ಧಾರ, ಮೂರ್ತಿ ಪ್ರತಿಷ್ಠಾಪನೆ ಅಲ್ಲಲ್ಲಿ ಪಂಚಕಲ್ಯಾಣಗಳು, ಬಸಾಪುರದ ಹನುಮಂತ ದೇವಾಲಯ ನಿರ್ಮಾಣ, ಅಣ್ಣಿಗೇರಿಯ ಹನುಮಂತ ದೇವಾಲಯದ ನವೀಕರಣ, ಭೂದಾನ, ಪಂಚಕಲ್ಯಾಣದಂತ ಕಾರ್ಯಕ್ರಮಗಳನ್ನು ಹಮ್ಮಿಕೊಂಡಿದ್ದು ಪ್ರಜೆಗಳ ಹಿತಕ್ಕಾಗಿಯೆ, ಶ್ರೀ ನಾಗಪ್ಪಯ್ಯ ಭೀಮಪ್ಪಯ್ಯ ಮುನಿಸಿಪಾಲಟಿಯ ಅಧ್ಯಕ್ಷರಾಗಿದ್ದಾಗ ಊರ ಕೆಲಸಗಳನ್ನು ತಮ್ಮ ಸ್ವಂತ ಹಣದಿಂದ ಖರ್ಚು ಮಾಡುತ್ತಿದ್ದರು ಎಂಬುದು ಜನರ ಆಡಂಬೋಲ ಇದೇ ಮನೆತನದ ನಾಗಪ್ಪಯ್ಯ ಚಂದಪ್ಪಯ್ಯ ದೇಶಪಾಂಡೆಯವರು ಕ್ರಿ.ಶ. ೧೯೧೨ರಲ್ಲಿ ಗದಗದ ಆನಂದಾನಿ ಮಠಕ್ಕೆ ಸಾಕಷ್ಟು ಪ್ರಮಾಣದ ಭೂಮಿಯನ್ನು ಕೊಟ್ಟು ಪರಧರ್ಮದ ಪ್ರಜೆಗಳ ವಿಶ್ವಾಸಕ್ಕೂ ಪಾತ್ರರಾದರು.[೨೫] ಒಟ್ಟಾರೆಯಾಗಿ ಎಲ್ಲಾ ಜೈನವಾಡೆಯ ಅಧಿಕಾರಿಗಳು ಪರಧರ್ಮ

ಸಹಿಷ್ಣುಗಳಾಗಿದ್ದರು. ಅಂತೆಯೇ ಚಾವರತ್ ಹಳ್ಳಿಗಳ ಜನರು ತಮ್ಮ ವಾಡೆಯ ಮುಖ್ಯಸ್ಥನ ಉದಾರ ನೀತಿಗೆ ಮೆಚ್ಚಿ ಸಂತೃಪ್ತರಾಗಿದ್ದರು.

ವಾಡೆಯಲ್ಲಿ ಏನಾದರೂ ಶುಭಸಂದರ್ಭ ದಿನಗಳು ಬಂದಾಗ ಚಾವರಾತ್ ಹಳ್ಳಿಗಳು ಸ್ವಯಂಪ್ರೇರಣೆಯಿಂದ ಬಂದು ಕೆಲಸಗಳಲ್ಲಿ ತೊಡಗಿಕೊಳ್ಳುತ್ತಿದ್ದರು. ಮದುವೆ-ಮುಂಜಿ (ಮೌಂಜಿ)ಗಳಲ್ಲಿ ಈ ವಾತಾವರಣ ಸೃಷ್ಟಿಯಾಗುತ್ತಿದ್ದಿತು ಈ ಸಂದರ್ಭದಲ್ಲಿ ಪ್ರಜೆಗಳಿಗೆ ಮೃಷ್ಟಾನ್ನವು ಸಂತರ್ಪಣೆಯಾಗುತ್ತಿತ್ತು.

## ನ್ಯಾಯ ಪದ್ಧತಿ

ನ್ಯಾಯ ಪದ್ಧತಿ ಭಾರತದಲ್ಲಿರುವ ಒಂದು ವಿಶೇಷ ವ್ಯವಸ್ಥೆ. ಈಗಿನ ಹಾಗೆ ನ್ಯಾಯಾಲಯದಲ್ಲಿ ವಾದ-ವಿವಾದಗಳನ್ನು ಮಂಡಿಸಿ ನ್ಯಾಯ ಪಡೆಯುವ ಪದ್ಧತಿ ನಮ್ಮ ಭಾರತೀಯ ಸಮಾಜದಲ್ಲಿರಲಿಲ್ಲ. ಹಾಗೇ ನೋಡಿದರೆ ನ್ಯಾಯಾಲಯ (ಕೋರ್ಟ್)ಪದ್ಧತಿಯೂ ನಮ್ಮ ಸಂಸ್ಕೃತಿಯ ಒಂದು ಭಾಗ. ವಿಶ್ವಕರ್ಮನಾದ 'ಮನುವಿನ' ನ್ಯಾಯಪದ್ಧತಿಯ ಸಂಸ್ಕೃತಿಕರಣದ ರೂಪವೇ ಇಂದಿನ ಕೋರ್ಟ್ (ನ್ಯಾಯಾಲಯ) ವ್ಯವಸ್ಥೆ. ಇದು ಬ್ರಿಟೀಷರಿಂದ ಬಂದಿದ್ದು ಎಂದು ನಂಬಿದ್ದೇವೆ. ಕೋರ್ಟಿನಲ್ಲಿ ಬಳಸುವ ಕಪ್ಪು ಗೌನು (ಕೋಟ್) ಸುತ್ತಿಗೆ ಇತ್ಯಾದಿಗಳು ಮನು ಬಳಸುತ್ತಿದ್ದ ಸುತ್ತಿಗೆ ಮತ್ತು ಕಪ್ಪು ಅಂಗಿಯ ಸಂಕೇತ. ಮನುವು ನ್ಯಾಯ ತೀರ್ಮಾನ ಮಾಡುವ ಒಂದು ಕಾಲದಲ್ಲಿ ತನ್ನನ್ನು ತೊಡಗಿಸಿಕೊಂಡಿದ್ದು. ಅವನು ಮೂಲತ: ಕಮ್ಮಾರನಾಗಿದ್ದರಿಂದ ಅವನ ಕಮ್ಮಾರಸಾಲೆಯೇ ನ್ಯಾಯಾಲಯವಾಗಿತ್ತು. ಊರ ಜನ ತಮ್ಮ ವ್ಯಾಜ್ಯಗಳನ್ನು ಇವನ ಬಳಿಯೇ ಬಗೆಹರಿಸಿಕೊಳ್ಳಲು ಬರುತ್ತಿದ್ದರು. ಅವನು ಎರಡು ಕಡೆಯ ಅಹವಾಲುಗಳನ್ನು ಆಲಿಸುತ್ತ ಇದ್ದಾಗ, ಮಾತುಗಳು ಜೋರಾದಾಗ, ಅವರನ್ನು ಸಮಾಧಾನ ಮಾಡುತ್ತಿದ್ದ. ಮಾತಿಗೆ ಬಗ್ಗದಿದ್ದಾಗ ಸುತ್ತಿಗೆಯನ್ನು ಕುಟ್ಟಿ ಸದ್ದು ಮಾಡಿ ಎರಡು ಕಡೆಯ ಜನರನ್ನು ಸುಮ್ಮನಿರಿಸುತ್ತಿದ್ದ. ಕೊನೆಗೆ ನ್ಯಾಯ ತೀರ್ಮಾನ ಮಾಡುತ್ತಿದ್ದ. ಕಮ್ಮಾರ ಸಾಲೆಯಲ್ಲಿ ಕೆಲಸ ಮಾಡುವಾಗ ಬಟ್ಟೆ ಹೊಲಸಾಗದಿರಲೆಂದು ಮೇಲು ಅಂಗಿ ಧರಿಸುತ್ತಿದ್ದ ಮನು. ಅದು ದಿನಬಳಕೆಯಾಗಿ ಬಳಕೆಯಾಗುತ್ತ ಆಗುತ್ತ ಕಪ್ಪಾಗಿ, ಕಪ್ಪು ಮೇಲಂಗಿಯಾಗಿ ಬಿಟ್ಟಿತು. ಅವನ ಸುತ್ತಿಗೆ ಇಂದು ಕಟ್ಟಿಗೆಯ ಸುತ್ತಿಗೆಯಾಗಿ ಕುಳಿತಿದೆ ಎಂಬ ಮಾತನ್ನು ಶ್ರೀ ದಿನೇಶ್ ಆಚಾರ್[೨೦]ರವರು ಹೇಳುತ್ತಾರೆ. ಈ ವಿಷಯ ಮೇಲ್ನೋಟಕ್ಕೆ ಹೊಂದಿಕೆಯಾಗುತ್ತಿದ್ದರೂ ಸತ್ಯವೆನ್ನಲು ಆಧಾರಗಳು ಅಲಭ್ಯ. ಮನು ನ್ಯಾಯ ತೀರ್ಮಾನಿಸುತ್ತಿದ್ದ ಎಂಬುದು ಅವನ ಸ್ಮೃತಿಗಳಿಂದಲೇ ತಿಳಿಯುತ್ತದೆ. ಮನುವಿನ ನಂತರ ಸ್ಥಳೀಯ ಮಟ್ಟದ ವ್ಯಾಜ್ಯಗಳೂ ಊರ ಪಂಚರ (ಸರಪಂಚ್) ಸಮ್ಮುಖದಲ್ಲಿ (ಪಂಚಾಯಿತಿ ಕಟ್ಟೆ) ಬಗೆ ಹರಿಸಿಕೊಳ್ಳುವುದು ಬಹು ಹಿಂದಿನ ವ್ಯವಸ್ಥೆ.

ವಾಡೆಯ ವ್ಯಾಪ್ತಿಯಲ್ಲಿ ನಡೆಯುವ ವ್ಯಾಜ್ಯಗಳು ವಾಡೆಯ ಅಧಿಕಾರಿ ಸಮ್ಮುಖದಲ್ಲೇ ಬಗೆಹರಿಯುತ್ತಿದ್ದವು. ಚಾವರಾತ್ ಹಳ್ಳಿಗಳಲ್ಲಿ ಈ ಅಧಿಕಾರವನ್ನು ಊರ ಗೌಡನಿಗೆ

ಕೊಡಲಾಗಿತ್ತು. ಅವನು ಬಗೆ ಹರಿಸದ ಸಮಸ್ಯೆಗಳು ವಾಡೆಯ ಆವರಣಕ್ಕೆ ಬರುತ್ತಿದ್ದವು. ಕಂದಾಯ ಕಟ್ಟದ, ಕಳ್ಳರ, ಬಂಡುಕೋರರ, ಅತಿರೇಕದ ಕುಟುಂಬ ಕಲಹಗಳು, ಕೊಲೆ-ಸುಲಿಗೆಯ ವ್ಯಕ್ತಿಗಳ ಬಗ್ಗೆ ನ್ಯಾಯ ತೀರ್ಮಾನಿಸುವವನು ವಾಡೆಯ ಮುಖ್ಯಸ್ಥನೇ ಆಗಿದ್ದ. ಈ ವ್ಯಾಜ್ಯಗಳ ಸಂವಾದವು 'ಸದರ ಕಟ್ಟೆ' ಅಥವಾ ಪಂಚರಕಟ್ಟೆಯಲ್ಲಿ ತೀರ್ಮಾನವಾಗುತ್ತಿದ್ದವು.

ಸದರ ಕಟ್ಟೆ ಎಂಬುದು ವಾಡೆಯ ಅಧಿಕಾರಿ ಕೂರುವ ಸ್ಥಳ. ಇತರೆ ವಾಡೆಯ ಅಧಿಕಾರಿಗಳು, ಕಾರಕೂನ, ಗೌಡ, ಪುರುಜನರು ವಾಡೆಯ ಮುಖ್ಯಸ್ಥನನ್ನು ಇಲ್ಲಿಯೇ ಭೇಟಿಯಾಗಿ ಕಾರ್ಯಕಲಾಪಗಳನ್ನು ನಡೆಸುತ್ತಿದ್ದರು. ತೇರದಾಳ, ಮುಳಗುಂದ, ಅಣ್ಣಿಗೇರಿ ವಾಡೆಯಲ್ಲಿ ನ್ಯಾಯ ತೀರ್ಮಾನಗಳೂ ಇಲ್ಲಿಯೇ ನಡೆಯುತ್ತಿದ್ದುವು. ಕ್ಷೇತ್ರಕಾರ್ಯಕ್ಕೆ ಹೋದಾಗ ಹನಗಂಡಿ ವಾಡೆಯ ಬಸದಿ (ಪಾರ್ಶ್ವನಾಥ) ಮುಂದುಗಡೆ ಒಂದು ಬಂದುಬಸ್ತಾದ ಕಟ್ಟೆ ಕಂಡಿತು ಕುತೂಹಲದಿಂದ ಶ್ರೀ ಪ್ರಸನ್ನಕುಮಾರ ಶಂಕ್ರಗೌಡ ದೇಸಾಯಿಯವರನ್ನು ಕೇಳಿದಾಗ 'ಇದು ಪಂಚರ ಕಟ್ಟರೀ' ಎಂದರು. ಹಿಂದೆ ನಮ್ಮ ಹಿರ್‍ಯಾರು ೩೩ ಹಳ್ಳಿಯ ನ್ಯಾಯ ತೀರ್ಮಾನ ಇಲ್ಲೇ ಮಾಡುತ್ತಿದ್ದರೀ, ಇತ್ತಿತ್ತಲಾಗಿ ಕೋರ್ಟು ಕಛೇರಿ ಬಂದ ನಂತರ ಪಂಚರ ಕಟ್ಟೇಯಲ್ಲಿ ನ್ಯಾಯ ತೀರ್ಮಾನ ಮಾಡಕೊಳ್ಳೋದು ಮರೆತು ಬಿಟ್ವಾರ್ರೀ.[೨೭] ಎನ್ನುತ್ತಾರೆ.

೨೦ x ೨೦ ಅಡಿಗಳ ಪಂಚರ ಕಟ್ಟೆ ಒಂದೊಮ್ಮೆ ಪವಿತ್ರ ಸ್ಥಾನವಾಗಿತ್ತು. ತನ್ನ ವ್ಯಾಪ್ತಿಗೆ ಬರುವ ಎಲ್ಲಾ ಹಳ್ಳಿಗಳ ವ್ಯಾಜ್ಯಗಳನ್ನು ಹನಗಂಡಿ ವಾಡೆಯ ಮುಖ್ಯಸ್ಥರ ಪಂಚರ ಸಮ್ಮುಖದಲ್ಲಿ ಇಲ್ಲಿಯೇ ಬಗೆ ಹರಿಸುತ್ತಿದ್ದ. ಹನಗಂಡಿ ದೇಸಾಯಿ ಮತ್ತು ಉಳಿದ ಜೈನವಾಡೆಗಳ ಸದರಗಟ್ಟೆಗೆ ಬರುವಾಗ ಜಳಕಾ ಮಾಡಿಕೊಂಡೆ ಬರುತ್ತಿದ್ದರು. ಮೊದಲು ಕಟ್ಟೆಗೆ ನಮಸ್ಕರಿಸಿ, ದೇವರನ್ನು ನೆನೆಯುತ್ತ ನೆರೆದ ಜನರಿಗೆ ಕೈಮುಗಿದು ಕುಳಿತುಕೊಳ್ಳುತ್ತಿದ್ದರು. ಬಂದಿರುವ ದೂರುದಾರರು ಸತ್ಯವನ್ನೇ ಹೇಳುತ್ತೇನೆ ಎಂದು ನೆರೆದ ಪಂಚರಲ್ಲಿ ಮತ್ತು ಕಟ್ಟೆಯನ್ನು ಮುಟ್ಟಿ ಪ್ರಮಾಣ ಮಾಡುತ್ತಿದ್ದರು. ಇಂಥ ಪ್ರಮಾಣಗಳು ಕಟ್ಟೆಗಿದ್ದ ಘನತೆಯನ್ನು ಎತ್ತಿತೋರಿಸುತ್ತವೆ.

ನ್ಯಾಯ ತೀರ್ಮಾನ ಮಾಡುವಲ್ಲಿ ವಾಡೆಯ ಮುಖ್ಯಸ್ಥನ (ದೇಸಾಯಿ, ನಾಡಗೌಡ, ದೇಶಪಾಂಡೆ, ನಾಯಕ) ಪ್ರಮುಖ ಪಾತ್ರವಹಿಸುತ್ತಿದ್ದರು. ಗ್ರಾಮೀಣ ಮಟ್ಟದಲ್ಲಿ ಬಗೆಹರಿಯದ ವ್ಯಾಜ್ಯಗಳು ಇವರ ಹತ್ತಿರ ಬರುತ್ತಿದ್ದುವು. ಸಾಮಾನ್ಯವಾಗಿ ವಾಡೆಯ ಮುಖ್ಯಸ್ಥನ ಜೊತೆಗೆ ನಾಲ್ವರು ಊರ ಪ್ರಮುಖರು ನ್ಯಾಯ ತೀರ್ಮಾನ ಮಾಡಲು ಕುಳಿತಿರುತ್ತಿದ್ದರು. ಗ್ರಾಮೀಣ ಮಟ್ಟದಲ್ಲಿ ಗೌಡ ಮತ್ತು ಪಂಚರು ಈ ನ್ಯಾಯ ಬಗೆ ಹರಿಸುತ್ತಿದ್ದರು.

### ೧. ಪಂಚರು

ವಾಡೆಯ ವ್ಯಾಪ್ತಿಯಲ್ಲಿ ಬರುವ ಪಾಟೀಲ, ಗೌಡ, ಊರಿನ ಹಿರಿಯ ಅನುಭವಸ್ಥರು 'ಪಂಚರು' ಆಗಿರುತ್ತಿದ್ದರು. ಇವರು ದೂರುದಾರ ಮತ್ತು ಪ್ರತಿದೂರುದಾರ (ಆರೋಪಿ), ಕೆಲವೊಂದು ಸಾರಿ ಆರೋಪಿ ಮಾತ್ರದ ವ್ಯಕ್ತಿಗಳ ದೂರನ್ನು ಕೂಲಂಕಶವಾಗಿ ಅವಲೋಕಿಸಿ ಸತ್ಯಾಸತ್ಯತೆಯನ್ನು ಬಯಲಿಗೆಳೆಯುತ್ತಿದ್ದರು. ಈ ಸತ್ಯಾಸತ್ಯತೆಯನ್ನು ಅಲ್ಲಿಯೇ ಇರುವ ವಾಡೆಯ

ಮುಖ್ಯಸ್ಥ (ವತನದಾರ ಅಥವಾ ದೇಶಮುಖ) ಅವಲೋಕಿಸುತ್ತಿದ್ದ ವಿಚಾರಣೆಯ ಬಳಿಕ ತೀರ್ಪನ್ನು ಇವನೇ ಕೊಡುತ್ತಿದ್ದ. ಶಿಕ್ಷೆ ಅಪರಾಧಕ್ಕೆ ತಕ್ಕ ತೆರನಾಗಿರುತ್ತಿತ್ತು.

**೨. ವಾಡೆಯ ಮುಖ್ಯಸ್ಥ**

ದೇಸಾಯಿ, ನಾಡಗೌಡ, ದೇಶಪಾಂಡೆ, ನಾಯಕ ಎಂದೆಲ್ಲ ಕರೆಯಲ್ಪಡುವ ವಾಡೆಯ ಮುಖ್ಯಸ್ಥ. ಪಂಚರ ಸಮ್ಮುಖದಲ್ಲಿ ಕೊನೇ ತೀರ್ಪನ್ನು ಹೇಳುತ್ತಿದ್ದ. ಇದು ಅವನಿಗಿದ್ದ ವಿಶೇಷ ಅಧಿಕಾರವೂ ಕೂಡಾ ಆಗಿತ್ತು. ಇದು ಅವನಿಗೆ ಆದಿಲ್‌ಷಾಹಿಗಳೇ ದಯಪಾಲಿಸಿದ ಅಧಿಕಾರವೂ ಕೂಡಾ "ದೇಸಾಯಿಯು ಸ್ವತಂತ್ರನಾಗಿದ್ದರೂ ಅರಸನ ಸಾಮಂತನಾಗಿರಬೇಕಾಗಿತ್ತೆಂಬುದು ಕೆಲವು ದಾಖಲೆಗಳಿಂದ ತಿಳಿದುಬರುತ್ತದೆ. ಅವುಗಳೆಂದರೆ:

೧. ಕೇಂದ್ರ ಸರಕಾರದಿಂದ ಯಾವುದೇ ಆದೇಶವಿಲ್ಲದೆ ದೇಸಾಯಿಯು ತನ್ನ ಪ್ರದೇಶದಲ್ಲಿನ ದಂಗೆಯನ್ನು ಹತ್ತಿಕ್ಕುವ ಮತ್ತು ವ್ಯಾಜ್ಯಗಳನ್ನು ಬಗೆಹರಿಸುವ ಅಧಿಕಾರ ಹೊಂದಿದ್ದನು.
೨. ಪ್ರಜೆಗಳಿಗೆ ಕಿರುಕುಳ ನೀಡಿ ಓಡಿಹೋದವರನ್ನು ಕರೆತಂದು, ಅವರಿಗೆ ಕಿರುಕುಳ ನೀಡದಂತೆ ಒಪ್ಪಿಗೆ ಪತ್ರವನ್ನು ಕೇಂದ್ರ ಸರಕಾರಕ್ಕೆ ಒಪ್ಪಿಸಬೇಕು.
೩. ವ್ಯಾಜ್ಯಗಳನ್ನು ಬಗೆಹರಿಸದೇ ಕರ್ತವ್ಯಲೋಪವೆಸಗಿದ್ದಾನೆಂದು ಸರಕಾರಕ್ಕೆ ಮಾಹಿತಿ ಸಿಕ್ಕಲ್ಲಿ ಅಥವಾ ದಂಗೆನಿರತ ಪಾಟೀಲರನ್ನು ಮತ್ತು ಇನ್ನುಳಿದ ಸ್ಥಾನಿಕ ಒಡೆಯರನ್ನು ಹತ್ತಿಕ್ಕುವಂತೆ ಸರಕಾರದಿಂದ ಅಲ್ಲಿರುವ ಪ್ರಮುಖ ದೇಸಾಯಿಗೆ ಆದೇಶವಿರುವುದು (ತೇರದಾಳ ನಾಡಗೌಡರಿಗೆ ಪ್ರತಿಸಿದ ಲೇಖನಗಳಿಂದ ಇದು ತಿಳಿದುಬರುತ್ತದೆ.
೪. ದೇಸಾಯಿಯು ನೀಡುವ ಶಿಕ್ಷೆ ಸಾಮಾನ್ಯವಾಗಿತ್ತು. ಆದರೆ ಮರಣದಂಡನೆ ನೀಡುವ ಅಧಿಕಾರವಿರಲಿಲ್ಲ. ಒಂದು ವೇಳೆ ಮರಣದಂಡನೆ ಶಿಕ್ಷೆ ವಿಧಿಸಿದರೆ, ದೇಸಾಯಿಯೇ ಸರಕಾರದ ಅನುಮತಿ ಮೀರಿ ನಡೆದಿದ್ದರಿಂದ, ಇಡೀ ದೇಸಗತಿ ಖಾಲಸಾತ ಆಗಿರುವುದು ಕೂಡಾ ಇದರಿಂದ ತಿಳಿದು ಬರುತ್ತದೆ.[೨೮]

ಮೇಲಿನ ಅಂಶಗಳಿಂದ ತಿಳಿಯುವುದೆಂದರೆ ಸ್ಥಳೀಯ ಒಡೆತನವು ವೈಯಕ್ತಿಕ ಹಿತಾಸಕ್ತಿದಾಗಿರಲಿಲ್ಲ. ಅರಸ ದೇಸಾಯಿಯನ್ನು ನಿಯಂತ್ರಣದಲ್ಲಿಟ್ಟು ಕೆಲವೊಂದು ಅಧಿಕಾರಗಳನ್ನು ಮಾತ್ರ ಕೊಡುತ್ತಿದ್ದ. ಇದು ರಾಜ್ಯದಲ್ಲಿ ಶಾಂತಿಪಾಲನೆ ಮಾಡುವ ಚಾಣಾಕ್ಷತನ.

ವಾಡೆಯ ಅಧಿಕಾರಿಗೆ ನ್ಯಾಯ ತೀರ್ಮಾನದಲ್ಲಿ ಸಂಪೂರ್ಣ ಅಧಿಕಾರವಿತ್ತು. ಹಾಗೆಂದ ಮಾತ್ರಕ್ಕೆ ಜನರನ್ನು ಘನಘೋರವಾಗಿ ಶಿಕ್ಷಿಸುತ್ತಿರಲಿಲ್ಲ. ಹೆಚ್ಚಿನ ಶಿಕ್ಷೆ ಎಂದರೆ ಜೈಲಿಗೆ ಹಾಕುವುದು. ಅದು ಒಂದೆರಡು ದಿನಗಳಿಂದ ತಿಂಗಳಿಗೂ ಮುಟ್ಟಿರುತ್ತಿತ್ತು. ತೇರದಾಳ ಮತ್ತು ಹನಗಂಡಿ ವಾಡೆಯ ದ್ವಾರದಲ್ಲಿಯೇ ಜೈಲುಗಳನ್ನು ಕಾಣಬಹುದು. ಕೆಲವೊಂದು ಸಾರಿ 'ಚಾಟಿ ಏಟು' ಕೊಡುವುದು ಶಿಕ್ಷೆಯ ಒಂದು ಭಾಗವಾಗಿರುತ್ತಿತ್ತು. ದೇಸಾಯಿಯ ಇಂಥ ಸಮಯದಲ್ಲಿ

ನೋವುಂಡವರಿಗೆ ಅರಿಶಿನ, ಎಣ್ಣೆ ಕೊಟ್ಟು ಆರೈಕೆ ಮಾಡಿಸುತ್ತಿದ್ದರು. ಮನೆಯ ಯಜಮಾನನೇ ತಪ್ಪಿತಸ್ಥನಾಗಿದ್ದಲ್ಲಿ ಪ್ರತಿದಿನ ಅಂದರೆ ಅವನ ಆರೋಗ್ಯ ಸುಧಾರಿಸುವವರೆಗೆ ೪ ಸೇರು ಜೋಳ, ಜೋಳದ ನುಚ್ಚು, ಎಣ್ಣೆ, ಜೀರಿಗೆ, ಸಾಸಿವೆಗಳನ್ನು ಸೆರಗಿನಲ್ಲಿಯೇ ಕಟ್ಟಿಕೊಂಡು ಹೋಗುವ ಪರಂಪರೆ ಹಾಕಿಕೊಟ್ಟಿದ್ದರು. ಇದು ದೇಸಾಯಿಗಳ ನೈತಿಕ ಹೊಣೆಗಾರಿಕೆಯೂ ಆಗಿತ್ತೆಂದು ತಿಳಿದು ಬರುತ್ತದೆ. ದೇಸಾಯಿಯು ಕೊಡುವ ಶಿಕ್ಷೆಗಳು ಕ್ರಮೇಣ ಕಡಿಮೆ ಆಗಿದ್ದರಿಂದ ೧೮೭೪ರ ವತನ ಕಾಯಿದೆಯಿಂದ ವ್ಯಾಪಕವಾದ ನಿಯಮಗಳು ರಚಿಸಲ್ಪಟ್ಟು ಅವನ ಅಧಿಕಾರದ ಮೇಲೆ ಮಿತಿ ಹೇರಲ್ಪಟ್ಟಿತು"[೨೯]

### ನ್ಯಾಯ ವಿಚಾರಣೆ

ಸ್ಥಳೀಯ ವ್ಯಾಜ್ಯಗಳನ್ನು ಬಗೆಹರಿಸಿಕೊಳ್ಳುವ ಫಿರ್ಯಾದುದಾರ ಮುಂಚಿತವಾಗಿಯೇ ವಾಡೆಯ ಮುಖ್ಯಸ್ಥರಿಗೆ ದೂರು ಸಲ್ಲಿಸಬೇಕಾಗಿತ್ತು. ಫಿರ್ಯಾದನ್ನು ನೇರವಾಗಿ ವಾಡೆಯ ಮುಖ್ಯಸ್ಥರಿಗೆ ಸಲ್ಲಿಸುವುದೆಂದರೆ ಅಲ್ಲಿರುವ ಶಾನಭೋಗರಿಗೆ ಸಲ್ಲಿಸುವುದಾಗಿತ್ತು. ಅವನು ವಾಡೆಯ ಮುಖ್ಯಸ್ಥನ ಅನುಮತಿಯೊಂದಿಗೆ ದೂರುದಾರನಿಗೆ ಒಂದು ದಿನಾಂಕ ನಿಗದಿ ಮಾಡಿ 'ಪಂಚರ ಕಟ್ಟೆ' ಅಥವಾ 'ಸದರ ಕಟ್ಟೆ'ಗೆ ಬರಹೇಳುತ್ತಿದ್ದ. ಇವನಿಂದ ಫಿರ್ಯಾದುದಾರ ಆರೋಪಿಸಿದ ವ್ಯಕ್ತಿಗೆ ಸೂಚನೆ (ನೋಟೀಸ್) ತಳವಾರನ ಮೂಲಕ ಹೋಗುತ್ತಿತ್ತು. ನಿಗಧಿಯಾದ ದಿನಾಂಕದಂದು ಪುರುಜನರು ಪಂಚರ ಸಮ್ಮುಖದಲ್ಲಿ ಪರಾಪರ ವಿಚಾರಣೆ ನಡೆದ ನಂತರ ನ್ಯಾಯ ತೀರ್ಮಾನಿಸುತ್ತಿದ್ದರು. ಕಲಾಪದ ಕೊನೆಗೆ ವಾಡೆಯ ಮುಖ್ಯಸ್ಥ ನ್ಯಾಯದ ತೀರ್ಪನ್ನು ಕೊಡುತ್ತಿದ್ದ. ಈ ಸಂದರ್ಭದಲ್ಲಿ ಅಪರಾಧಿಗೆ ಶಿಕ್ಷೆ ಕೊಡುವುದು ಇವನದ್ದೇ ಆಗಿತ್ತು. ಶಿಕ್ಷೆ ಅಪರಾಧಕ್ಕೆ ತಕ್ಕಂತೆ ಭಿನ್ನವಾಗಿರುತ್ತಿತ್ತು. ಸಾಮಾನ್ಯವಾಗಿ ಐದು ರೀತಿಯ ಶಿಕ್ಷೆಗಳನ್ನು ವಿಧಿಸಲಾಗುತ್ತಿತ್ತು.

೧. ಕ್ಷಮೆ (ತಿಳಿವಳಿಕೆ).
೨. ದಂಡ.
೩. ದೇಹದಂಡ.
೪. ಜೈಲು.
೫. ಬಹಿಷ್ಕಾರ.

**೧. ಕ್ಷಮೆ**

ಕ್ಷಮಿಸುವುದು ಶಿಕ್ಷೆ ಅಲ್ಲವಾದರೂ ಇದು ಒಂದು ರೀತಿಯ ಶಿಕ್ಷೆಯೇ ಆಗಿದೆ. ಕಂದಾಯ ಕಟ್ಟದ ರೈತ, ವ್ಯಕ್ತಿಗಳ ಮಧ್ಯೆ ನಡೆದ ಮಾರಾ–ಮಾರಿ, ಸತಿ–ಪತಿ ಕಲಹ ಇತ್ಯಾದಿಗಳು ಇದರ ವ್ಯಾಪ್ತಿಗೆ ಬರುತ್ತಿದ್ದವು. ಇವರೆಲ್ಲರಿಗೂ ಮುಂದಿನ ವರ್ಷ ಕಂದಾಯ ಕಟ್ಟುವಂತೆ,

ಜಗಳವಾಡದಂತೆ ಬುದ್ಧಿ ಹೇಳಲಾಗುತ್ತಿತ್ತು. ಹಾಗೆ ಬುದ್ಧಿ ಹೇಳುವಾಗ ಬೈಗುಳ ಅವಮಾನವನ್ನು ಮಾಡಲಾಗುತ್ತಿತ್ತು. ಒಂದು ವೇಳೆ ತಪ್ಪಿತಸ್ಥ ವಾದಿಸಿದರೆ ಇನ್ನೂ ಹೆಚ್ಚಿನ ತೇಜೋವಧೆ ಮಾಡಲಾಗುತ್ತಿತ್ತು. ಕೊನೆಗೆ ವಾಡೆಯ ಮುಖ್ಯಸ್ಥರು ಇವರನ್ನು ಕ್ಷಮಿಸಿ ಕಳುಹಿಸುತ್ತಿದ್ದ.

### ೨. ದಂಡ

ಒಂದು ಸಾರಿ ಕ್ಷಮೆಗೆ ಒಳಗಾದ ವ್ಯಕ್ತಿಗಳು ಪದೇ ಪದೇ ಅದೇ ತಪ್ಪನ್ನು ಮಾಡಿದರೆ ಅವರಿಗೆ ಹಣದ ಮತ್ತು ಧಾನ್ಯದ ರೂಪದ ದಂಡ ವಿಧಿಸಲಾಗುತ್ತಿತ್ತು. ದಂಡದ ಮೊತ್ತ ಏಕರೂಪವಾಗಿರದೆ ತತ್‌ಕ್ಷಣದಲ್ಲಿ ಹೊಳೆದದ್ದಾಗಿರುತ್ತಿತ್ತು. ಕಂದಾಯ ಕಟ್ಟದ ರೈತನಿಗೆ ನಿಗಧಿಯಾದ ಕಂದಾಯದ ಎರಡು ಪಟ್ಟು ಅಥವಾ ಮೂರು ಪಟ್ಟು ಎಂದೂ, ಹಣದ ರೂಪವಾದರೆ ಎರಡು ನಾಣ್ಯ, ಐದು ನಾಣ್ಯವೆಂದೋ ತೀರ್ಮಾನಿಸಲಾಗುತ್ತಿತ್ತು. ವ್ಯಾಪಾರಸ್ಥರು, ವೃತ್ತಿಗಾರರು ನಿಗಧಿಯಾದ ಕಂದಾಯ ಕಟ್ಟದಿದ್ದಾಗಲೂ ದಂಡ ವಿಧಿಸುವ ಪದ್ಧತಿ ಇತ್ತು.

### ೩. ದೇಹದಂಡ

ದಂಡ ಕಟ್ಟದ ವ್ಯಕ್ತಿಗಳಿಗೆ ಕಳ್ಳನಿಗೆ, ವ್ಯಭಿಚಾರಿಗಳಿಗೆ, ಅತ್ಯಾಚಾರಿಗಳಿಗೆ, ವ್ಯಾಪಾರದಲ್ಲಿ ಮೋಸಮಾಡಿದವರಿಗೆ, ಮಾತಿಗೆ ತಪ್ಪಿದ ವ್ಯಕ್ತಿಗಳಿಗೆ, ಕಾನೂನು ಬಾಹಿರ ಚಟುವಟಿಕೆಗಳಾದ ದೊಂಬಿ, ಗಲಾಟೆ, ದೇಸಗತಿ ವ್ಯವಸ್ಥೆ ಪ್ರತಿಭಟನೆ ಮಾಡಿದವರಿಗೆ, ತೀವ್ರ ತರದ ತಪ್ಪು ಮಾಡಿದವರಿಗೆ, ತಂದೆ–ತಾಯಿಗಳನ್ನು ನಿಂದಿಸಿದವರಿಗೆ, ಪಾಲನೆ ಮಾಡದವರಿಗೆ ಈ ರೀತಿಯ ಶಿಕ್ಷೆ ಕೊಡಲಾಗುತ್ತಿತ್ತು. ತಪ್ಪಿತಸ್ಥನಿಗೆ ಮರಕ್ಕೆ ಕಟ್ಟಿ 'ಚಾಟಿ ಏಟು' ಕೊಡಲಾಗುತ್ತಿತ್ತು. ಎಷ್ಟು ಚಾಟಿ ಏಟುಗಳೆಂದು ತಪ್ಪಿನ ಸ್ವರೂಪದ ಮೇಲೆ ನಿರ್ಧಾರವಾಗುತ್ತಿತ್ತು. ಹತ್ತು, ಇಪ್ಪತ್ತು ಚಾಟಿ ಏಟುಗಳು ಸರ್ವೇಸಾಮಾನ್ಯವಾಗಿದ್ದವು.

### ೪. ಜೈಲು

ತೀವ್ರತರದ ತಪ್ಪುಗಳಾದ ಕೊಲೆ, ಕಳ್ಳತನ, ದರೋಡೆ, ದೊಂಬಿ, ಅತ್ಯಾಚಾರಿಗಳಿಗೆ ಈ ರೀತಿ ಶಿಕ್ಷೆ ವಿಧಿಸಲಾಗುತ್ತಿತ್ತು. ಇವರಿಗೆ ಚಾಟಿ ಏಟುಗಳ ಜೊತೆಗೆ ಜೈಲಿಗೂ ಹಾಕಲಾಗುತ್ತಿತ್ತು. ಈ ಶಿಕ್ಷೆ ದಿನಗಳಿಂದ ಹಿಡಿದು ತಿಂಗಳುಗಳವರೆಗೂ ವಿಧಿಸಲಾಗುತ್ತಿತ್ತು. ತೇರದಾಳ ಮತ್ತು ಹನಗಂಡಿ ವಾಡೆಯಲ್ಲಿ ಜೈಲುಗಳನ್ನು ಕಾಣಬಹುದು. ಮುಳುಗುಂದ ಹಳೆಯ ವಾಡೆಯಲ್ಲು ಜೈಲು ಇದ್ದುದು ಪುರುಜನರ ಅಂತೆಕಂತೆ. ಹಳೆಯವಾಡೆ ಈಗಿಲ್ಲ.

## ೫. ಬಹಿಷ್ಕಾರ

ಅಕ್ರಮ ಸಂಬಂಧ, ತಂದೆ-ತಾಯಿಗಳ ಬಗ್ಗೆ ಅಸಡ್ಡೆ ತೋರಿದ ಮಕ್ಕಳನ್ನು ವ್ಯಾಜ್ಯಾ ತೀರ್ಮಾನದಲ್ಲಿ ಹಿರಿಯರಿಗೆ ಬೆಲೆಕೊಡದೆ ಅಗೌರವ ತೋರಿಸಿದವರನ್ನು ಅತ್ಯಾಚಾರಿಗಳನ್ನು ಇನ್ನೂ ಮುಂತಾದ ಅಪರಾಧಿಗಳನ್ನು ಮೇಲಿನ ಶಿಕ್ಷೆಗಳನ್ನು ಕೊಡುವುದರ ಜೊತೆಗೆ ಊರಿಂದ ಬಹಿಷ್ಕಾರ ಹಾಕಲಾಗುತ್ತಿತ್ತು. ಇದರಲ್ಲಿ ಎರಡು ವಿಧ ಒಂದು ಊರಲ್ಲಿ ಇರಿಸಿ ಬಹಿಷ್ಕಾರ ಹಾಕುವುದು. ಈ ಸಂದರ್ಭದಲ್ಲಿ ಊರ ಜನ ಯಾರೂ ಇವರ ಹತ್ತಿರ ಮಾತನಾಡುವುದಾಗಲಿ, ಸಹಾಯ ಮಾಡುವುದಾಗಲಿ, ವಸ್ತುಗಳ ಕೊಡು-ಕೊಳ್ಳುವಿಕೆಯನ್ನು ಮಾಡುವ ಹಾಗೆ ಇರಲಿಲ್ಲ. ಈ ಶಿಕ್ಷೆಯ ಪ್ರಮಾಣ ಸಾಂದರ್ಭಿಕವಾಗಿ ನಿರ್ಣಯವಾಗುತ್ತಿತ್ತು. ಸಾಮಾನ್ಯವಾಗಿ ಒಂದು ವರ್ಷದ ಮೇಲ್ಪಟ್ಟು ಈ ಶಿಕ್ಷೆ ಜಾರಿ ಮಾಡುತ್ತಿರಲಿಲ್ಲ. ಎರಡು ಸಂಪೂರ್ಣವಾಗಿ ಊರಿಂದ ಹೊರಗೆ ಹೋಗುವುದು. ಬಹಿಷ್ಕಾರಕ್ಕೆ ಒಳಗಾದ ವ್ಯಕ್ತಿಗಳು, ಕುಟುಂಬ ಕನಿಷ್ಠ ಒಂದು ವರ್ಷ, ಗರಿಷ್ಠ ಎರಡು ವರ್ಷಗಳ ಕಾಲ ಊರು ಬಿಟ್ಟು ದೇಶಾಂತರ ಹೋಗಬೇಕಿತ್ತು.

ಈ ರೀತಿಯಾದ ಬಹಿಷ್ಕಾರ ಹಾಕುವ ಉದ್ದೇಶ ವ್ಯಕ್ತಿಗಳು ತಾವು ಮಾಡಿದ ತಪ್ಪುಗಳನ್ನು ಅರಿತುಕೊಂಡು ವ್ಯಕ್ತಿತ್ವ ಬದಲಾಯಿಸಿಕೊಳ್ಳಲೆಂದು ಈ ರೀತಿ ಮಾಡಲಾಗುತ್ತಿತ್ತು. ಜೊತೆಗೆ ಸೌಲಭ್ಯಗಳು ದೊರಕದೇ ಇದ್ದಾಗ, ಕಷ್ಟ-ಸುಖವನ್ನು ಹಂಚಿಕೊಳ್ಳಲು ಊರ ವ್ಯಕ್ತಿಗಳು ದೂರವಾದಾಗ ಅಪರಾಧಿ ಸುಲಭವಾಗಿ ಮನಪರಿವರ್ತನೆ ಮಾಡಿಕೊಳ್ಳಬಲ್ಲ ಎಂಬುದು ವಾಡೆ ಅಧಿಕಾರಿಗೆ ಗೊತ್ತಿತ್ತು.

ಒಟ್ಟಿನಲ್ಲಿ ಹೇಳುವುದಾದರೆ ನ್ಯಾಯ ತೀರ್ಮಾನದಲ್ಲಿ ಕೊಟ್ಟ ಶಿಕ್ಷೆಗಳು ಕ್ಷಣಿಕವಾಗಿದ್ದರೂ ಅದರ ಉದ್ದೇಶ ಅಪರಾಧಿಯ ನಡತೆಯನ್ನು ತಿದ್ದುವುದೇ ಆಗಿತ್ತು. ವಾಡೆಯ ಅಧಿಕಾರಿ ಈ ಕೆಲಸವನ್ನು ನಿಷ್ಕಾಮದಿಂದ ಮಾಡುತ್ತಿದ್ದ. ಕೆಲವೊಂದು ಸಾರಿ ದರ್ಪ ತೋರಿಸಿದರೂ ಮನಸ್ಸು ಒಳ್ಳೆಯದನ್ನೇ ಬಯಸುತ್ತಿತ್ತು. ದರ್ಪ ತೋರಿಸಿದ್ದರೆ ತನ್ನ ಚಾವರಾತ್ ಹಳ್ಳಿಗಳಲ್ಲಿ ಶಾಂತಿ ಭಂಗವಾಗಿ ಕ್ಷೋಭೆ ಉಂಟಾಗುತ್ತಿತ್ತು. ಆದ್ದರಿಂದಲೇ ವಾಡೆಯ ಅಧಿಕಾರಿಗಳು ಸ್ವಲ್ಪ ದರ್ಪತೋರಿಸುವುದು ಅವಶ್ಯವಿತ್ತು.

## ೫.೩ ಆರ್ಥಿಕ ವ್ಯವಸ್ಥೆ

ಸಾಮ್ರಾಜ್ಯ ಅಥವಾ ಆಡಳಿತ ಪ್ರದೇಶವೆಂಬ ಪ್ರಾಚೀನ ಘಟಕದ ಪ್ರಗತಿ ಅದರ ಆರ್ಥಿಕ ಸ್ಥಿತಿಯ ಮೇಲೆ ಅವಲಂಬಿತವಾಗಿತ್ತು. ಇದು ಸಾರ್ವಕಾಲಿಕ ಸತ್ಯವೂ ಹೌದು. ಆಡಳಿತ ಘಟಕದ ಒಟ್ಟು ಆರ್ಥಿಕತೆಯ ತಳಹದಿ ಗಟ್ಟಿಗೊಂಡಾಗ ಸಹಜವಾಗಿ ಅದು ಬಲಿಷ್ಠಗೊಳ್ಳುತ್ತದೆ. ಅಂತೆಯೆ ರಾಜ್ಯದ ರಕ್ಷಣೆ, ವಿಸ್ತರಣೆ ಮೂಲಭೂತ ಸೌಲಭ್ಯಗಳ ವ್ಯವಸ್ಥೆಯನ್ನೂ ಸರಿಯಾಗಿ ನಿಭಾಯಿಸಲು ಸಾಧ್ಯವಾಗುತ್ತದೆ. ಪ್ರಸ್ತುತ ಕಾಲಘಟ್ಟದಲ್ಲಿಯೂ ಪ್ರತಿಯೊಂದು ದೇಶಗಳು ಆರ್ಥಿಕವಾಗಿ ಸಬಲರಾಗಲು ಏನೆಲ್ಲಾ ತಂತ್ರಗಳನ್ನು ಮಾಡುತ್ತಿವೆ ಎಂಬುದು ಗೊತ್ತಿದ್ದ ವಿಚಾರ. ಆಧುನಿಕರಣ

ಮತ್ತು ಜಾಗತೀಕರಣದ ಇವತ್ತಿನ ಸಂದರ್ಭದಲ್ಲಿ ಪ್ರತಿಯೊಂದು ದೇಶಗಳು ವಿವಿಧ ವೃತ್ತಿ ಮೂಲಗಳಿಂದ ಹಣವನ್ನು ಸಂಗ್ರಹಿಸುತ್ತಿವೆ. ಹಾಗೆ ಸಂಗ್ರಹವಾಗುವ ಹಣದ ಮೊತ್ತಕ್ಕೆ ಕಂದಾಯ, ಸುಂಕ (Tax) ಎನ್ನುವರು. ವೃತ್ತಿತೆರಿಗೆ, ಆದಾಯ ತೆರಿಗೆ, ಮಾರಾಟ ತೆರಿಗೆ, ಸೀಮಾ ಸುಂಕ ಹೀಗೆ ಇತರೆ ಸಾಕಷ್ಟು ಮೂಲಗಳಿಂದ ಸಂಗ್ರಹಿಸುವ ತೆರಿಗೆಯು ದೇಶದ ಆರ್ಥಿಕ ವ್ಯವಸ್ಥೆಯನ್ನು ಸಬಲಗೊಳಿಸುತ್ತದೆ.

ರಾಜಸತ್ತೆಯ ಕಾಲದಿಂದಲೂ ನಡೆದುಕೊಂಡು ಬಂದ ಒಂದು ವ್ಯವಸ್ಥೆ ತೆರಿಗೆ ಪದ್ಧತಿ. ಈ ಕಾಲದಲ್ಲಿ ತೆರಿಗೆ ಸಂಗ್ರಹಿಸುವ ಮುಖ್ಯ ಘಟಕ ಕೃಷಿಯಾಗಿತ್ತು. ಕಾಲಾನಂತರ ತೆರಿಗೆ ಸಂಗ್ರಹಕ್ಕೆ ವಿಸ್ತಾರವಾದ ತಳಹದಿ ಲಭಿಸಿತು. ಕೃಷಿಯೇತರ ಚಟುವಟಿಕೆಗಳಾದ ವ್ಯಾಪಾರ, ಸಾರ್ವಜನಿಕ ಸೇವೆ, ವಸ್ತುಗಳ ತಯಾರಿಕೆ, ವೃತ್ತಿ ಮುಂತಾದವುಗಳ ಮೇಲೂ ತೆರಿಗೆ ವಿಧಿಸುವುದು ರೂಢಿಗೆ ಬಂತು. ಬಿಜಾಪುರದ ಆದಿಲ್‌ಷಾಹಿಗಳು, ಮರಾಠರು, ಪೇಶ್ವೆಗಳ ಕಾಲಾವಧಿಯಲ್ಲಿದ್ದ, ವಾಡೆಯ ವ್ಯಾಪ್ತಿಗೆ ಬರುವ ತೆರಿಗೆ ಪದ್ಧತಿಯನ್ನು ಇಲ್ಲಿ ಚರ್ಚಿಸಲಾಗಿದೆ.

ಬುಡಕಟ್ಟು ಜನಾಂಗದ ಅಥವಾ ನಾಗರೀಕತೆಯ ಮೊದಲ ಹಂತದಲ್ಲಿಯೇ ತೆರಿಗೆ ಪದ್ಧತಿ ಕಂಡುಬರುತ್ತದೆ. ಕಾಡು ಜನಾಂಗಗಳಲ್ಲಿ ತೆರಿಗೆಯ ಸ್ಪಷ್ಟ ಕುರುಹುಗಳು ದೊರೆಯುತ್ತವೆ. ಒಂದು ಬುಡಕಟ್ಟು ಜನಾಂಗದ ನಾಯಕನಿಗೆ ಅಲ್ಲಿಯ ಆದಿವಾಸಿಗಳು ಹಣ್ಣು, ಜೇನು ತಾವು ಬೇಟೆಯಾಡಿದ ಪ್ರಾಣಿಗಳ ಮಾಂಸದಲ್ಲಿ ಪಾಲು ಕೊಡುತ್ತಿದ್ದರು. ಬೌದ್ಧಿಕ ಹಂತದ ತೆರಿಗೆಯ ಕಲ್ಪನೆ ಇಲ್ಲಿಲ್ಲ. ವ್ಯಕ್ತಿಯು ತನ್ನ ಆದಾಯದ ಭೌತಿಕ ವಸ್ತುಗಳನ್ನು ಇನ್ನೊಬ್ಬರಿಗೆ ಉಚಿತವಾಗಿ ಕೊಡುವುದು ತೆರಿಗೆಯೇ ಎಂದೆನಿಸುತ್ತದೆ. ಇದು ತೆರಿಗೆ ಮೊದಲ ರೂಪವೇ ಸರಿ. ಇನ್ನು ಜನಪದರಲ್ಲಿ ತೆರಿಗೆ ಕೊಡುವ-ಕೊಳ್ಳುವ ವ್ಯವಸ್ಥೆ ಅನಾದಿಕಾಲದಿಂದಲೂ ಇದ್ದಂತೆ ತೋರುತ್ತದೆ. ಬಹುಮುಖ್ಯವಾಗಿ ವರದಕ್ಷಿಣೆ ಪದ್ಧತಿಯ ವ್ಯವಸ್ಥೆಯನ್ನು ಈ ಅಂಶಕ್ಕೆ ಉದಾಹರಿಸಬಹುದು. ವಧುವನ್ನು ತರುವಾಗ ತೆಗೆದುಕೊಳ್ಳುವ ದಕ್ಷಿಣೆಯೇ ವರದಕ್ಷಿಣೆ. ವರದಕ್ಷಿಣೆಯೂ ಕೂಡಾ ತೆರಿಗೆಯ ಒಂದು ರೂಪವೇ ಸರಿ. 'ಉತ್ತರದೇವಿ' ಎಂಬ ಜನಪದ ಖಂಡ ಕಾವ್ಯದಲ್ಲಿ ತೆರ ಎಂಬ ಪದ, ಕನ್ಯಾಶುಲ್ಕ ಎಂಬರ್ಥದಲ್ಲಿ ಬಳಕೆಯಾಗಿದ್ದರೂ ಇದು ತೆರಿಗೆ ಎಂಬ ಅರ್ಥವನ್ನೇ ಸೂಚಿಸುತ್ತದೆ. ಅತ್ತೆ-ಸೊಸೆಯ ಮಧ್ಯ ಭಿನ್ನಾಭಿಪ್ರಾಯಗಳು ಒಡಮೂಡಿ, ತಾಯಿಯು ತನ್ನ ಸೊಸೆಯಾದ ಉತ್ತರದೇವಿಯನ್ನು ತನ್ನ ಮಗನಿಗೆ ಬಿಟ್ಟು ಬಿಡು ಎಂದಾಗ, ಅವನು ಹೀಗೆ ಪ್ರತಿಕ್ರಿಯಿಸುತ್ತಾನೆ.

> ಬಿಟ್ಟುಬಿಡವೊಕೆ ಎಮ್ಮೆನೆ ಕರುವೇನೆ
> ನಾಲ್ಕು ವರ ಮುಟ್ಟಿ ತೆರಮುಟ್ಟಿ ತಂದೋಳ
> ಬಿಟ್ರೋರುಂಟೇನೆ ಹಡೆದವ್ವ[೩೦]

ಕನ್ಯಾ ಶುಲ್ಕವಾಗಿ ತೆರವನ್ನು ವರ (ವರಹ = ಬಂಗಾರದ ನಾಣ್ಯ)ದ ರೂಪದಲ್ಲಿ ತೆಗೆದುಕೊಂಡ ಗಂಡನ ಮನಸ್ಸು ಹೆಂಡತಿಯನ್ನು ಬಿಡಲು ಒಪ್ಪುವುದಿಲ್ಲ. ಏನೇ ಇದ್ದರು ಇಲ್ಲಿ ಬಳಕೆಯಾಗಿರುವ ವರಹದ ರೂಪದ ತೆರ, ತೆರಿಗೆಯೇ ಆಗಿದೆ. ಹಣವನ್ನು ಬೇರೆಯವರಿಗೆ ಸ್ವಹಿತಕ್ಕೆ ಕೊಡುವುದು ತೆರಿಗೆಯೇ ಎಂದೆನಿಸುತ್ತದೆ. ಮುಸ್ಲಿಂರಲ್ಲಿ ವರನಾದವನು ವಧುವಿಗೆ ಕೊಡುವ ವಧುದಕ್ಷಿಣೆ (ಮಹರ್) ಕೂಡಾ ತೆರಿಗೆಯೇ. ತೆರಿಗೆಗೆ ನಾನಾ ಮುಖ.

ರಾಜಸತ್ತೆ ಕಾಲ ಬಂದನಂತರ ತೆರಿಗೆಯ ಸ್ಪಷ್ಟ ಪದ್ಧತಿ ಜಾರಿಯಾದಂತೆ ತೋರುತ್ತದೆ. ಅಲ್ಲಿಯವರೆಗೂ ವಸ್ತುಗಳ ರೂಪದಲ್ಲಿ ಸಂದಾಯವಾಗುತ್ತಿದ್ದ ತೆರಿಗೆ ಮೌಲ್ಯದ ರೂಪವನ್ನು ಪಡೆದುಕೊಳ್ಳುತ್ತದೆ. ಆ ಮೌಲ್ಯ ಹಣವಾಗಿ ಪರಿವರ್ತನೆಯಾಯ್ತು. ಹಣವೇ ಸಂಪೂರ್ಣವಾಗಿ ತೆರಿಗೆಯ ಕ್ರಮವನ್ನು ಆವರಿಸಲಿಲ್ಲ. ವಸ್ತುಗಳ ರೂಪದ ತೆರಿಗೆಯ ಜೊತೆ ಜೊತೆಗೆ ಇದೂ ಚಲಾವಣೆಯಾಯ್ತು. ಕೌಟಿಲ್ಯನು ತನ್ನ ಅರ್ಥಶಾಸ್ತ್ರದ 'ರಾಷ್ಟ್ರ' ಭಾಗದಲ್ಲಿ ಕಂದಾಯದ ಮೂಲಗಳ ಒಂದು ದೊಡ್ಡ ಪಟ್ಟಿಯನ್ನೇ ಕೊಡುತ್ತಾನೆ. ಅವುಗಳಲ್ಲಿ ಮುಖ್ಯವಾದವು

೧. 'ಸೀತಾ' (ರಾಜನ ಕೃಷಿ ಹುಟ್ಟುವಳಿ)
೨. 'ಭಾಗ' (ಹುಟ್ಟುವಳಿಯಲ್ಲಿ (ರಾಜನ) ಪಾಲು)
೩. 'ಬಲಿ' (ಕಾಣಿಕೆಯಿಂದ ಬರುವ ರಾಜನ ಆದಾಯ)
೪. 'ಕರ' (ನಿಯತಕಾಲಿಕ ಶುಲ್ಕ)[೩೧]

ಇವುಗಳಲ್ಲದೆ "ಅಪುತ್ರಕ ಆಸ್ತಿಗಳು, ಕೆಲವು ಸಾರಿ ರಾಜನು ಮುಟ್ಟುಗೋಲು ಹಾಕಿಕೊಳ್ಳುತ್ತಿದ್ದ ಪ್ರಜೆಗಳ ಆಸ್ತಿ ಐಶ್ವರ್ಯ ಮತ್ತು ಶತ್ರುರಾಜರನ್ನು ಆಕ್ರಮಿಸಿ ಸೋಲಿಸಿ ಸೂರೆ ಮಾಡುತ್ತಿದ್ದ ವಸ್ತು ವಾಹನ ಐಶ್ವರ್ಯಗಳು ಇವುಗಳೊಂದಿಗೆ ರಾಜನ ವೈಯಕ್ತಿಕ ಆಸ್ತಿಯಿಂದ ಬರುತ್ತಿದ್ದ ಉತ್ಪನ್ನಗಳು ಹೀಗೆ ರಾಜನಿಗೆ ಅನೇಕ ಮಾರ್ಗಗಳಲ್ಲಿ ಆದಾಯವಿರುತ್ತಿತ್ತು."[೩೨] ಇವೆಲ್ಲ ಆದಾಯಗಳಲ್ಲಿ ನಿತ್ಯ ಒರತೆ ಕೃಷಿ ಎಂಬುದು ರಾಜನಿಗೆ ಗೊತ್ತಿತ್ತು. ಎಲ್ಲ ಆದಾಯಗಳಲ್ಲಿ ಕೃಷಿಯಿಂದ ಬರುವ ಆದಾಯದ ಸಿಂಹಪಾಲನ್ನು ಸಮರ್ಥವಾಗಿ ಚಾಚುತಪ್ಪದೆ ವಸೂಲು ಮಾಡುತ್ತಿದ್ದ. ಇದಕ್ಕೆಂದೆ ಒಂದು ವ್ಯವಸ್ಥೆಯೇ ಜಾರಿಯಲ್ಲಿತ್ತು.

ರಾಜ್ಯದ ಒಟ್ಟು ಆದಾಯವನ್ನು ಸಮರ್ಥವಾಗಿ ಸಂಗ್ರಹಿಸಲು ರಾಜಸತ್ತೆಯ ಅರಸು ಮನೆತನಗಳು ಕಾಲಕಾಲಕ್ಕೆ ಸಾಕಷ್ಟು ಮಾರ್ಪಾಡುಗಳನ್ನು ಮಾಡುತ್ತಲೆ ಬಂದಿವೆ. ರಾಷ್ಟ್ರಕೂಟರು, ಚಾಲುಕ್ಯರು, ಹೊಯ್ಸಳರು, ವಿಜಯನಗರ ಅರಸರು ಇದಕ್ಕೆ ಹೊರತಲ್ಲ. ರಾಷ್ಟ್ರಕೂಟರು ರಾಜ್ಯವನ್ನು ೧೬ ಮಂಡಲಗಳನ್ನಾಗಿ ಮಾಡಿ "ಮಂಡಲವನ್ನು ರಾಷ್ಟ್ರವೆಂದೂ ಕರೆಯಲಾಗುತ್ತಿದ್ದು, ರಾಷ್ಟ್ರವನ್ನು ವಿಷಯ ಎಂಬ ಜಿಲ್ಲೆಗಳಾಗಿ ವಿಭಾಗಿಸಿತ್ತು. ವಿಷಯದ ನಂತರ ನಾಡು ಭಾಗವಿದ್ದು, ಆಡಳಿತದ ಕೊನೆಯ ಘಟಕಾಗಿ ಗ್ರಾಮವಾಗಿತ್ತು"[೩೩] ಇವರ ಕಾಲದಲ್ಲಿ ನಾಳ್ಗಾವುಂಡ, ಗಾವುಂಡ ಮುಂತಾದ ಅಧಿಕಾರಿಗಳು ನಾಡು-ಗ್ರಾಮಗಳಲ್ಲಿ ಆಡಳಿತ ನಡೆಸುತ್ತಿದ್ದರು. ಕಲ್ಯಾಣದ ಚಾಲುಕ್ಯರ

ಕಾಲದಲ್ಲಿ ಭೂಕಂದಾಯವನ್ನು ಲೆಕ್ಕಾಚಾರವನ್ನು ನೋಡಲು ಕಡಿತವರ್ಗಡೆ (ಕಡಿತ ಎಂದರೆ ಬಟ್ಟೆಯ ಮೇಲೆ ಬರೆದಿಡು ದಾಖಲೆ) ಎಂಬ ಅಧಿಕಾರಿ ಇದ್ದ[೩೪] ಈ ವ್ಯವಸ್ಥೆಯೇ ಅಲ್ಪಸ್ವಲ್ಪ ಮಾರ್ಪಾಡಿನೊಂದಿಗೆ ವಿಜಯನಗರದ ಅರಸರವರೆಗೂ ಮುಂದುವರೆದುಕೊಂಡು ಬಂತು. ಆದರೆ ಬಹುತೇಕ ಕರ್ನಾಟಕದ ಭಾಗವನ್ನು ಆಳಿದ ಬಿಜಾಪುರದ ಆದಿಲ್‌ಷಾಹಿಗಳು ರಾಜ್ಯಾದಾಯವನ್ನು ಸಮರ್ಥವಾಗಿ ವಸೂಲು ಮಾಡಲು ಒಂದು ಹೊಸ ವ್ಯವಸ್ಥೆಯನ್ನೇ ಹುಟ್ಟು ಹಾಕಿದರು ಅದುವೇ ಪರಗಣ ಪದ್ಧತಿ.

ಪರಗಣ ಎಂದರೆ ಪ್ರಾಂತ, ಜಿಲ್ಲಾ ಎಂದು ಈಗಾಗಲೆ ಚರ್ಚಿಸಲಾಗಿದೆ. ಪರಗಣಕ್ಕೆ ಒಬ್ಬ ಸಮರ್ಥನಾದ ವ್ಯಕ್ತಿಯನ್ನು ನಿಯಮಿಸಿ ಅವನಿಂದ ಸಮರ್ಥವಾಗಿ ಕಂದಾಯವನ್ನು ವಸೂಲಿ ಮಾಡುವ ಪದ್ಧತಿಯನ್ನು ಆದಿಲ್‌ಷಾಹಿಗಳು ತಂದರು. ಇಂಥ ವ್ಯಕ್ತಿಗಳು ಸ್ಥಳೀಯವಾಗಿ ಪ್ರಭಾವಿಗಳಾಗಿರಬೇಕು ಅಂದಾಗ ಮಾತ್ರ ಅವರಿಗೆ ಅಧಿಕಾರ ಲಭಿಸುತ್ತಿತ್ತು. ಜೊತೆಗೆ ರಾಜನಿಂದ ಸಾಕಷ್ಟು 'ಇನಾಂ' ಭೂಮಿಯು, ಸ್ಥಳೀಯವಾಗಿ ಎಲ್ಲ ಅಧಿಕಾರಗಳು ಲಭಿಸುತ್ತಿದ್ದವು. ಆದರೆ ಪರಮೋಚ್ಚ ಅಧಿಕಾರ ಬಾದಶಹನ ಹತ್ತಿರವೇ ಇರುತ್ತಿತ್ತು. ಆದಿಲ್‌ಷಾಹಿಗಳು ಸ್ಥಳೀಯ ಪ್ರಬಲ ವ್ಯಕ್ತಿಗಳಿಗೆ ಇಷ್ಟೆಲ್ಲಾ ಸೌಲಭ್ಯ ಒದಗಿಸಿದ್ದು ಪ್ರಶಂಸೆಗಾಗಿ ಅಲ್ಲ. ತಮ್ಮ ಆಡಳಿತ ಸುಗಮವಾಗಿ ಸಾಗಲಿ ಮತ್ತು ರಾಜ್ಯ ಬೊಕ್ಕಸಕ್ಕೆ ಬರುವ ಕಂದಾಯ ಸಮರ್ಥವಾಗಿ ವಸೂಲಿ ಆಗಲೆಂದು.

ಬಿಜಾಪುರದ ಆದಿಲ್‌ಷಾಹಿಗಳು ಸ್ಥಳೀಯ ರಾಜ್ಯಾಡಳಿತದವರನ್ನು ಆಯಾ ಪ್ರಾಂತದ ಪ್ರಬಲ ಮತ್ತು ನಿಷ್ಠಾವಂತ ವ್ಯಕ್ತಿಗಳಿಗೆ ವಹಿಸಿದ್ದರು. ಪ್ರಬಲ ವ್ಯಕ್ತಿ ಎಂದರೆ ದೈಹಿಕವಾಗಿ ಪ್ರಬಲ ಎಂದರ್ಥವಲ್ಲ. ಆರ್ಥಿಕವಾಗಿ ಸಬಲನಿದ್ದವನು ಎಂದರ್ಥ. ಆರ್ಥಿಕ ಸಬಲತೆ. ಕೆಳವರ್ಗದವರಿಗೆ ನಿಲುಕದ ನಕ್ಷತ್ರ. ಪ್ರಾಚೀನ ವರ್ಣಾಶ್ರಮದ ವ್ಯವಸ್ಥೆಯೇ ಇದಕ್ಕೆ ಕಾರಣ ಆದ್ದರಿಂದ ಸ್ಥಳೀಯವಾಗಿ ಆರ್ಥಿಕ ಪ್ರಬಲತೆ ಹೊಂದಿದವರು ಮೇಲ್ವರ್ಗದವರಾದ ಬ್ರಾಹ್ಮಣರು, ಕ್ಷತ್ರಿಯರು, ಶೈವರು, ಜೈನರಿಗೆ ಈ ಅಧಿಕಾರ ಒಲಿದು ಬಂತು. ಆದಿಲ್‌ಷಾಹಿಗಳು ಇವರಿಗೆ ಪರಗಣದ ಅಧಿಕಾರ ಕೊಟ್ಟು ಸಾಕಷ್ಟು ಇನಾಂ ಭೂಮಿಯನ್ನು ದಯಪಾಲಿಸಿದರು. ದೇಶಮುಖ, ದೇಶಪಾಂಡೆ ಎಂಬಿತ್ಯಾದಿ ಅಧಿಕಾರ ನಾಮಾವಳಿಯಿಂದ ವತನದಾರರನ್ನು ಸಂಬೋಧಿಸಲಾಗುತ್ತಿತ್ತು. ದೇಶಪಾಂಡೆ ಮತ್ತು ದೇಶಮುಖರು ಜನರಬಾಯಿಯಲ್ಲಿ ದೇಸಾಯಿಯಾದರು. ದೇಸಾಯಿ, ದೇಶಪಾಂಡೆ, ದೇಶಮುಖ ಪದಗಳಲ್ಲದೆ ಪರಗಣ ಅಧಿಕಾರಿಗಳಿಗೆ ನಾಡಗೌಡ, ನಾಯಕ, ದೇಶಕುಲಕರ್ಣಿ, ನಾಡಕುಲಕರ್ಣಿ ಎಂದೂ ಸಂಬೋಧಿಸಲಾಗುತ್ತಿತ್ತು. ತೇರದಾಳ ವಾಡೆಯಲ್ಲಿ ನಾಡಗೌಡರು, ದರೂರು ವಾಡೆಯಲ್ಲಿ ನಾಯಕರು, ಮುಳಗುಂದ ವಾಡೆಯಲ್ಲಿ ದೇಶಕುಲಕರ್ಣಿಯರು, ಹನಗಂಡಿ ವಾಡೆಯಲ್ಲಿ ದೇಸಾಯಿಗಳು, ಅಣ್ಣಿಗೇರಿ ವಾಡೆಯಲ್ಲಿ ದೇಶಪಾಂಡೆಗಳು ಆಳ್ವಿಕೆ ನಡೆಸಿದರು. ಇವರೆಲ್ಲರೂ ಜೈನ ಧರ್ಮಕ್ಕೆ ಸೇರಿದವರು. ಇಲ್ಲಿ ಬಳಸಿರುವ ಅಧಿಕಾರಯುತವಾದ ನಾಮಾವಳಿಗಳು ಬೇರೆ ಬೇರೆಯಾದರೂ ನಿರ್ವಹಿಸುವ ಕಾರ್ಯ ಒಂದೇ ಆಗಿತ್ತು. ಅದೇ ಸ್ಥಳೀಯ ಆಡಳಿತ. ಇವರಿಗೆ ಆದಿಲ್‌ಷಾಹಿಯ ಕಾಲದಲ್ಲಿ ಅಧಿಕಾರ ಸಿಗಲು ಬಹುಮುಖ್ಯ ಕಾರಣ. ಪರಂಪರೆಯಿಂದ

ನಡೆಸಿಕೊಂಡು ಬಂದ ಆಡಳಿತ. ಆದಿಲ್‌ಷಾಹಿಗಳು ಮುಸ್ಲಿಂರಾದ್ದರಿಂದ ಈ ಹಿಂದೆ ಇದ್ದ ಮುಸ್ಲಿಮೇತರ ವ್ಯಕ್ತಿಗಳಿಗೆ ಅಧಿಕಾರ ಕೊಟ್ಟರು. ಈ ಮೂಲಕ ಜನರ ವಿಶ್ವಾಸ ಮತ್ತು ಸಮರ್ಥ ಕಂದಾಯ ವಸೂಲಿಯ ತಂತ್ರಗಳು ಇದಕ್ಕೆ ಕಾರಣ. ಆದ್ದರಿಂದ ಹಿಂದೆ ಇದ್ದ ನಾಡಗೌಡ, ದೇಶಮುಖ, ದೇಶಪಾಂಡೆ, ದೇಸಾಯಿ, ನಾಡಕುಲಕರ್ಣಿಯರಿಗೆ ಅಧಿಕಾರ ಕೊಟ್ಟರು ಈ ಪದಗಳು ಮರಾಠರ, ಸಾಂಗಲಿಯ ಪಟವರ್ಧನರ ಪೇಶ್ವೆಗಳ ಕಾಲಾವಧಿಯಲ್ಲೂ ಬಳಕೆಯಲ್ಲಿದ್ದವು. ನಾಡಗೌಡ ಮಾತ್ರ ರಾಷ್ಟ್ರಕೂಟರ ಕಾಲದಿಂದಲೇ ಬಂದದ್ದು.

ನಾಡಗೌಡ, ದೇಸಾಯಿ, ನಾಯಕರು ಪರಗಣ ವ್ಯಾಪ್ತಿಯ ಅಧಿಕಾರಿಗಳಾಗಿದ್ದು, ಕಸಬೆಯ ಹಂತದಲ್ಲಿ ದೇಶಪಾಂಡೆ ದೇಶಕುಲಕರ್ಣಿಯವರು ಅಧಿಕಾರಿಗಳಾಗಿದ್ದರು. ಪರಗಣದ ಅಧಿಕಾರಿಗಳಿಗೆ 'ದೇಶಮುಖ' ಎಂಬ ಸಂಬೋಧನೆ ಆದಿಲ್‌ಷಾಹಿಗಳ ಮತ್ತು ಮರಾಠ, ಪೇಶ್ವೆಗಳ ಕಾಲದಲ್ಲಿ ಇತ್ತು. ಪರಗಣ ಮತ್ತು ಕಸಬೆಯ ಅಧಿಕಾರಿಗಳು ತಮ್ಮ ವ್ಯಾಪ್ತಿಯಲ್ಲಿ ಬರುವ ಆದಾಯವನ್ನು ಅರಸನಿಗೆ ಚಾಚುತಪ್ಪದೆ ತಲುಪಿಸುತ್ತಿದ್ದರು. ಅದು ಅವರ ಕರ್ತವ್ಯವೂ ಕೂಡ ಆಗಿತ್ತು. ಈ ಅಧಿಕಾರಿ ವಿಧಿಸುವ ತೆರಿಗೆ ವಸೂಲಿ ಮಾಡುವ ವಿಧಾನ, ರಾಜನಿಗೆ ತಲುಪಿಸುವ ರೀತಿ, ಇವನ ಕೆಳಗಿನ ಅಧಿಕಾರಿಗಳ ಕಾರ್ಯಕ್ಷಮತೆ ಇತ್ಯಾದಿ ಅಂಶಗಳ ಅಧ್ಯಯನ ಇಲ್ಲಿದೆ.

**ಭೂ ಆದಾಯ**

ಭಾರತ ಕೃಷಿ ಪ್ರಧಾನ ದೇಶ. ಅಂತೆಯೇ ಇಲ್ಲಿ ರೈತರೆ ಹೆಚ್ಚಿನ ಸಂಖ್ಯೆಯಲ್ಲಿದ್ದಾರೆ. ಭಾರತೀಯರಿಗೂ ಭೂಮಿಗೂ ಅವಿನಾಭಾವ ಸಂಬಂಧ ಪ್ರಾಚೀನ ಕಾಲದಿಂದಲೂ ಬಂದದ್ದು. ರೈತರು ಭೂಮಿಯನ್ನು 'ಭೂತಾಯಿ' ಎಂದು ಸಂಬೋಧಿಸುವುದು; ನೆಲದ ಮೇಲೆ ಅವರಿಗೆ ಇರುವ ಅನನ್ಯ ಪ್ರೀತಿಯಿಂದ. ಜನಪದರಂತೂ ಭೂಮಿಯನ್ನು ಸ್ಮರಿಸದ ದಿನಗಳಿಲ್ಲ. ಪ್ರತಿನಿತ್ಯ ಬೆಳಗಿನ ಜಾವ ಭೂಮಿ ತಾಯಿ ಸ್ಮರಿಸಿಯೆ ಮುಂದಿನ ಕೆಲಸಗಳನ್ನು ಮಾಡುವುದು ಅವರಿಗೆ ರೂಢಿಯಾಗಿತ್ತು.

> ಬೆಳಗಾಗಿ ನಾನೆದ್ದು ಯಾರ್ಯಾರ ನೆನೆಯಾಲಿ
> ಎಳ್ಳು ಜೀರಿಗೆ ಬೆಳಿಯೊ ಭೂಮಿತಾಯಿ
> ಎದ್ದೊಂದು ಗಳಿಗೆ ನೆನೆದೇನು[೩೫]

ಭೂಮಿಯನ್ನು ಮೊದಲು ನೆನೆಯುವುದು ಅತಿಶಯೋಕ್ತಿಯಲ್ಲ. ನಮಗೆಲ್ಲಾ ಆಶ್ರಯ, ಆಹಾರ ಒದಗಿಸುವುದು ಭೂಮಿ ಎಂಬುದು ರೈತ ಪ್ರಜ್ಞೆ, ಆದ್ದರಿಂದಲೇ ಅವನು ಭೂಮಿಯನ್ನು ನೆನೆಯುತ್ತಾನೆ, ಪೂಜಿಸುತ್ತಾನೆ, ಯುಗಾದಿಯಲ್ಲಿ, ಸೀಗೆ ಹುಣ್ಣಿಮೆಯಲ್ಲಿ, ದೀಪಾವಳಿ ಮುಂತಾದ ಹಬ್ಬಗಳಲ್ಲಿ ಭೂಮಿಗೆ ಪೂಜೆ ಸಲ್ಲಿಸುತ್ತಾನೆ. ಭೂಮಿ ರೈತನ ಶ್ರದ್ಧಾಕೇಂದ್ರ, ಆದ್ದರಿಂದಲೇ ಅದು ಅವನ ದೈವ ಕೂಡಾ ಆಗಿದೆ. ಭೂಮಿಯನ್ನು ಧಾರ್ಮಿಕ ಭಾವನೆಯಿಂದ ನೋಡುವುದರ ಹಿಂದೆ ಅದು ನಮಗೆ ಆದಾಯದ ಮೂಲ ಎಂಬುದನ್ನು ರೈತ ಮರೆತಿಲ್ಲ. ಭೂಮಿಯಿಂದ ಆದಾಯ

ಬರುವ ಬಗೆಯನ್ನು ರೈತನೂ ಅರಿತಿದ್ದ ಮತ್ತು ರಾಜನೂ ಅರಿತಿದ್ದ. ಕೃಷಿ ಪ್ರಧಾನ ಚಟುವಟಿಕೆಯಿಂದ ಕೂಡಿದ ನಮ್ಮ ನಾಡನ್ನು ಸಾಕಷ್ಟು ರಾಜಮಹಾರಾಜರು ಆಳಿದ್ದಾರೆ. ಇವರೆಲ್ಲರು ಕೃಷಿಯಿಂದ ಬರುವ ಆದಾಯವನ್ನು ಬಹುಮುಖ್ಯ ಆದಾಯವೆಂದೇ ಪರಿಗಣಿಸಿದ್ದರು. ಆದಿಲ್‌ಷಾಹಿ ಕಾಲದಲ್ಲಿ ಪರಗಣದ ಕೃಷಿ ಆದಾಯವನ್ನು ಸಂಗ್ರಹಿಸಲು ದೇಶಮುಖನಿದ್ದ, ಗ್ರಾಮಮಟ್ಟದಲ್ಲಿ ಗೌಡ, ಪಾಟೀಲ ಇದ್ದರು. ಇನ್ನು ಕಸಬೆ ಮಟ್ಟದಲ್ಲಿ ದೇಶಪಾಂಡೆ, ದೇಶಕುಲಕರಣಿ ಇದ್ದರು. ಇವರೆಲ್ಲರೂ ಭೂಮಿಯಿಂದ ಬರುವ ಕಂದಾಯವನ್ನು ಕಡ್ಡಾಯವಾಗಿ ರೈತರಿಂದ ವಸೂಲಿ ಮಾಡಿ ರಾಜನಿಗೆ ತಲುಪಿಸುತ್ತಿದ್ದರು.

**ಭೂ ಕಂದಾಯವನ್ನು ವಸೂಲು ಮಾಡುವ ಪದ್ಧತಿ**

ವಾಡೆಯ ಅಧಿಕಾರಿ ರಾಜಾಜ್ಞೆಯಂತೆ ಭೂಕಂದಾಯವನ್ನು ವಸೂಲಿ ಮಾಡುತ್ತಿದ್ದ. ಆದಿಲ್‌ಷಾಹಿಗಳ ಕಾಲದಲ್ಲಿ ಬೆಳೆಯ ಷಷ್ಟಾಂಷ ಭಾಗ ಅಂದರೆ ಆರನೆಯ ಒಂದು ಭಾಗವನ್ನು ಕಂದಾಯ ರೂಪದಲ್ಲಿ ಸಂಗ್ರಹಿಸಲಾಗುತ್ತಿತ್ತು. ಕಂದಾಯವನ್ನು ರೈತರು ಹಣದ ಮತ್ತು ಧಾನ್ಯದ ರೂಪದಲ್ಲಿ ಕೊಡಬೇಕಾಗಿತ್ತು. ಸಾಮಾನ್ಯವಾಗಿ ರೈತರು ಧಾನ್ಯದ ರೂಪದ ತೆರಿಗೆಯನ್ನೇ ಕೊಡುತ್ತಿದ್ದರು. ರೈತರಿಂದ ಬಂದ ಧಾನ್ಯ ತೆರಿಗೆಯನ್ನು ಸಂಗ್ರಹಿಸಲು ವಾಡೆಯಲ್ಲಿ ಸಾಕಷ್ಟು ಜಾಗೆ ಇರುತ್ತಿತ್ತು. ಅಣ್ಣಿಗೇರೆ ದೇಶಪಾಂಡೆ, ಹನಗಂಡಿ ದೇಸಾಯಿ ವಾಡೆಗಳಲ್ಲಿ ಹಗೆಗಳು, ಅಂಬಾರಿಗಳು ಎಂಬ ಧಾನ್ಯ ಸಂಗ್ರಹಿಸಲು ವ್ಯವಸ್ಥೆ ಇದ್ದದ್ದು ಈಗಲೂ ನೋಡಬಹುದು. ಧಾನ್ಯಗಳನ್ನು ಸಂಗ್ರಹಿಸಲು ನೆಲಮಾಳಿಗೆಗಳೂ ಇದ್ದುದಾಗಿ ತೇರದಾಳದ ನಾಡಗೌಡತಿಯರಾದ ಶ್ರೀಮತಿ ಜಯಶ್ರೀ ನಾಡಗೌಡ[೩೭] ಅವರು ಹೇಳುತ್ತಾರೆ.

ಧಾನ್ಯ ರೂಪದ ಮತ್ತು ಹಣದ ರೂಪದ ಕಂದಾಯವನ್ನು ವಾಡೆಯ ಅಧಿಕಾರಿ ಸ್ವೀಕರಿಸಿ, ಧಾನ್ಯ ರೂಪದ ಕಂದಾಯವನ್ನು ಹಣವಾಗಿ ಪರಿವರ್ತಿಸಿ ಒಟ್ಟು ಮೊತ್ತವನ್ನು ಹಣದ ರೂಪದಲ್ಲಿ ಅರಸನಿಗೆ ತಲುಪಿಸಬೇಕಾಗಿತ್ತು. ಇದು ಪ್ರತಿವರ್ಷವು ಚಾಚು ತಪ್ಪದೇ ನಡೆದುಕೊಂಡು ಬರುವ ಪದ್ಧತಿ. ಬಾದಶಹನ ಹುಕುಂ ಕೂಡಾ ಹೌದು. ಗ್ರಾಮೀಣ ಮಟ್ಟದಲ್ಲಿ ಕಂದಾಯವನ್ನು ಗೌಡ ಅಥವಾ ಪಾಟೀಲ ಮುಂತಾದವರು ಸಂಗ್ರಹಿಸಿ ದೇಸಾಯಿ (ವಾಡೆಯ ಅಧಿಕಾರಿ)ಗೆ ಕೊಡಬೇಕಾಗಿದ್ದು, ಎಲ್ಲವನ್ನೂ ಒಟ್ಟು ಮಾಡಿ ದೇಸಾಯಿಯು ಕೇಂದ್ರಕ್ಕೆ ತಲುಪಿಸುತ್ತಿದ್ದ.

ರೈತನ ಜಮೀನಿಗೆ ತಕ್ಕಂತೆ ಕಂದಾಯವನ್ನು ವಸೂಲಿ ಮಾಡುವ ಅಧಿಕಾರ ದೇಸಾಯಿಗಿತ್ತು. "ಪಟ್ಟೆಭೂಮಿ (ನೀರಾವರಿ ಆಧಾರಿತ), ಕುಳ್ಳಭೂಮಿ (ಸಂಪೂರ್ಣ ನೀರಾವರಿ) ಥಲ್ ಭೂಮಿ (ಬಯಲುಸೀಮೆಯ ಭೂಮಿ), ಹಕ್ಕಲ್ ಭೂಮಿ (ಒಣ ಬೇಸಾಯ), ಪಕೌಟಿ (ಎರಡು ವರ್ಷಕ್ಕೊಮ್ಮೆ ಸಾಗುವಳಿ ಮಾಡುವ ಭೂಮಿ), ಚಚರ (ಎರಡು ವರ್ಷಕ್ಕಿಂತ ಹೆಚ್ಚು ಕಾಲಿಬಿಟ್ಟು ಸಾಗುವಳಿ ಮಾಡುವ ಭೂಮಿ) ಬಂಜರು (ಸಾಗುವಳಿ ಮಾಡದೆ ಇದ್ದ ಭೂಮಿ) ಇಂಥ ಒಟ್ಟಾರೆ ಜಮೀನು ಲೆಕ್ಕವಿಲ್ಲದಷ್ಟು ದೇಸಗತಿಗೆ ಒಳಪಡುವುದರಿಂದ ತಮ್ಮ ವಿಶ್ವಾಸಿಕ

ರೈತರಿಗೆ, ಸೇತಸನದಿಗಳಿಗೆ ಚಚರ್ ಹಾಗೂ ಬಂಜರು ಭೂಮಿಯನ್ನು ಕೊಟ್ಟು ಸಾಗುಳಿ ಮಾಡಿಸಿದ್ದು ದೇಸಾಯಿಯವರು ನೀಡಿದ ಇನಾಂ ಸನದು ಪತ್ರಗಳಿಂದ ವಿಧಿತವಾಗುತ್ತದೆ. ಇಂಥ ಭೂಮಿಗಳಿಗೆ ಕೆಲವೇ ಕಂದಾಯ ನಿಗಧಿಪಡಿಸಿ ಕೆಲವು ಕಂದಾಯ ರಹಿತವೆಂದು, 'ಸರ್ವಮಾನ್ಯ'ವೆಂದು ಒಪ್ಪಗೆ ನೀಡಿದ್ದಾರೆ"[೩೭] ಸರ್ವಮಾನ್ಯವೆಂದರೆ ತೆರಿಗೆ ರಹಿತ ಭೂಮಿ ಎಂದರ್ಥ. ಇದು ಇನಾಂ ಕೊಟ್ಟ ಭೂಮಿಯೂ ಹೌದು.

ಭೂ ಕಂದಾಯ ಮತ್ತು ಇತರೆ ಮೂಲಗಳಿಂದ ಬರುವ ಆದಾಯವನ್ನು ವಾಡೆಯ ಅಧಿಕಾರಿ (ದೇಸಾಯಿ ಅಥವಾ ದೇಶಮುಖ) ಪ್ರತಿವರ್ಷವೂ ಆದಿಲ್‌ಷಾಹಿಗೆ ತಪ್ಪದೇ ಸಲ್ಲಿಸಬೇಕಾಗಿತ್ತು. ಈ ಪದ್ಧತಿಗೆ 'ನಜರಾಣಾ' ಎನ್ನುತ್ತಾರೆ. ಬರಗಾಲ ಮುಂತಾದ ಪ್ರಕೃತಿ ವಿಕೋಪಗಳು ಸಂಭವಿಸಿದಾಗ ನಜರಾಣಾಕ್ಕೆ ವಿನಾಯಿತಿ ಇದ್ದದ್ದು ದಾಖಲೆಗಳಿಂದ ತಿಳಿದು ಬರುತ್ತದೆ. ವಾಡೆಯ ಅಧಿಕಾರಿ ನಜರಾಣಾ ಸಲ್ಲಿಸಲು ಬಿಜಾಪುರಕ್ಕೆ ಹೋಗುವಾಗ ಒಂದು ಜಾತ್ರಯೇ ಹೋದಂತೆ ಆಗುತ್ತಿತ್ತಂತೆ ಎಂದು ಹನಗಂಡಿಯ ದೇಸಾಯಿಯರಾದ ಶ್ರೀ ಕೃಷ್ಣಗೌಡ ದೇಸಾಯಿ[೩೮] ತಮ್ಮ ಹಿರಿಯರು ಹೇಳಿದ್ದನ್ನು ಸ್ಮರಿಸುತ್ತಾರೆ. ದೇಸಾಯಿ ಒಂದು ಸಣ್ಣ ಅರಸೊತ್ತಿಗೆ ಹೋಗುವ ರೀತಿ ನಜರಾಣಾ ಸಲ್ಲಿಸಲು ಹೋಗುತ್ತಿದ್ದ. ತಳವಾರರು, ಪಟ್ಟೇವಾಲರು, ಕುಲಕರ್ಣಿಗಳು, ಕುದುರೆಗಳು, ಪಲ್ಲಕ್ಕಿ ಮೇಣೆ, ಅಡುಗೆಯವರು, ಸೈನಿಕರು ಇತ್ಯಾದಿಗಳ ದಂಡು ಕಟ್ಟಿಕೊಂಡು ಮೇಣೆಯಲ್ಲಿ ಕುಳಿತು ದೇಸಾಯಿ ಹೊರಡುತ್ತಿದ್ದ ಮುಂದೆ ಹಿಂದೆ ಕುದುರೆ ಸವಾರರು ಅದರ ಮುಂದೆ ಸೈನಿಕರ ಪರಿವಾರ ಇರುತ್ತಿತ್ತು.

ನಜರಾಣಾ ಸಲ್ಲಿಸಲು ಹೋಗುವಾಗ ವಾಡೆಯ ಅಧಿಕಾರಿ ಬಾದಶಹನಿಗೆ ಏನಾದರೂ ಕಾಣಿಕೆ ತೆಗೆದುಕೊಂಡು ಹೋಗುವುದು ರೂಢಿಯಾಗಿತ್ತು. ಬಾದಶಹನ ಮನಸ್ಸನ್ನು ಮುದಗೊಳಿಸಲು, ಪರಗಣದ ಅಧಿಕಾರವನ್ನು ಕಿತ್ತುಕೊಳ್ಳದೆ ಇರಲು, ಅರಿಯದೆ ಆದ ತಪ್ಪುಗಳನ್ನು ಸರಿಪಡಿಸಲು ಕಂಡುಕೊಂಡ ತಂತ್ರವಿದು. "ತೇರದಾಳದ ನಾಡಗೌಡನು ತನ್ನ ಭಾಗದ 'ಹೇರೆತ್ತು'ಗಳನ್ನು (ಒಂದು ಜೊತೆ) ಕೊಟ್ಟು ಬರುವುದಲ್ಲದೆ ಹಾಗೆ ಮುಂಗಾರು, ಹಿಂಗಾರು ಬೆಳೆ ಕೂಡಿಯೆ ಕುದುರೆ ಮೇಲೆ ಹೇರಿಕೊಂಡು ಕೊಟ್ಟು ಬರುತ್ತಿದ್ದನು. ಅದಕ್ಕೆ ಪ್ರತಿಯಾಗಿ ಅರಸುಗಳು ಬಂಗಾರದ ಘಟ್ಟಿಯನ್ನು ಕೊಟ್ಟು ಖುಷಿ ಪಡಿಸುತ್ತಿದ್ದರು. ಇದರಿಂದ ದೇಸಾಯಿಗಳು ಸಾಕಷ್ಟು ಬೆಳ್ಳಿ ಬಂಗಾರ ಹೊಂದಿದ್ದು ತಿಳಿದುಬರುತ್ತದೆ."[೩೯] ದರೂರು ನಾಯಕರ ವಾಡೆಯಲ್ಲಿ ಬೆಳ್ಳಿ-ಚಿನ್ನ ತುಂಬಲು 'ಅಂಬಾರಿ' ಎಂದು ಕರೆಯಲ್ಪಡುವ ಕಲ್ಲಿನ ಕಟ್ಟಡವೇ ಇದೆ. ಇದರಿಂದಲೇ ವಾಡೆಯ ಅಧಿಕಾರಿಗಳು ಎಷ್ಟು ಶ್ರೀಮಂತರಿರುತ್ತಿದ್ದರೆಂದು ತಿಳಿಯಬಹುದು.

ಗ್ರಾಮೀಣ ಮಟ್ಟದಲ್ಲಿ ಕಂದಾಯ ವಸೂಲಿ ಮಾಡುವ ಜವಬ್ದಾರಿ ಪಾಟೀಲನಿಗೆ ಇರುತ್ತಿತ್ತು. ಕಂದಾಯ ವಸೂಲಿಯ ದಿನವನ್ನು ಗೊತ್ತುಮಾಡಿ ತಳವಾರನಿಗೆ ತಿಳಿಸಲಾಗುತ್ತಿತ್ತು. ಆ ಸಮಯಕ್ಕೆ ತಳವಾರ ರೈತರಿಗೆ ಮೊದಲೆ ಸ್ಥಳ ಗೊತ್ತು ಮಾಡಿದ ಚಾವಡಿಗೆ ಬರಹೇಳುತ್ತಿದ್ದ. ಕುಲಕರ್ಣಿಯು ದಾಖಲೆಯಂತೆ ಕಂದಾಯ ವಸೂಲಾಗುತ್ತಿತ್ತು. ರೈತರು ಹಣಕೊಟ್ಟಿದ್ದಕ್ಕೆ

ರಸೀದಿಯನ್ನೂ ಚಾವಡಿಯಲ್ಲಯೇ ಕೊಡಲಾಗುತ್ತಿತ್ತು. ಹೀಗೆ ವಸೂಲಾದ ಕಂದಾಯವನ್ನು ಪಾಟೀಲ ದೇಶಮುಖನಿಗೆ ತಲುಪಿಸುತ್ತಿದ್ದ. ನಂತರ ದೇಶಮುಖ ರಾಜನಿಗೆ ತಲುಪಿಸುತ್ತಿದ್ದ.

**ಭೂ ಮಾಪನಗಳು**

ಪರಗಣ ಮತ್ತು ಕಸಬೆ ವ್ಯಾಪ್ತಿಯಲ್ಲಿ 'ಮಾರು' ಮತ್ತು 'ಭಿಗೇ' (ಭೀಘೇ) ಎಂಬ ಮಾಪನಗಳು ಭೂ ಅಳತೆಯಾಗಿ ಬಳಕೆಯಾಗುತ್ತಿದ್ದವು. ಮಾರು ಎಂಬುದು ಆದಿಲ್‌ಷಾಹಿಗಳ ಆಡಳಿತದಲ್ಲಿದ್ದಂತೆ ತೋರುತ್ತದೆ. ಭಿಗೇ ಮರಾಠರು ಹೆಚ್ಚು ಬಳಸುತ್ತಿದ್ದರು ಭಿಗೇದ ಜೊತೆಗೆ ಮಾರು ಕೂಡಾ ಮರಾಠರು ಪೇಶ್ವೆಗಳ ಕಾಲದಲ್ಲಿ ಬಳಕೆಯಾಗಿದೆ. ಒಂದು ಮಾರು ಎಂದರೆ ನಾಲ್ಕು ಕೂರಿಗೆ ಹೊಲಕ್ಕೆ ಸಮ ಅಂದರೆ ೧೬ ಎಕರೆ. ಒಟ್ಟು ೭೦೪೦ ಚದುರವಾಗುತ್ತದೆ. ಇನ್ನು ಒಂದು ಭಿಘಾಕ್ಕೆ ೨೦ ಚದುರವಾಗುತ್ತದೆ. ಸುಮಾರು ೨ ಗುಂಟೆ, ೨೦ ಭಿಘಾಕ್ಕೆ ಒಂದು ಎಕರೆ.

ಅಣ್ಣಿಗೇರಿ ಸೀಮೆಯ ದೇಶಕುಲಕರಣಿ (ದೇಶಪಾಂಡೆ ವಾಡೆ)ಯಾದ ನಾಗಪ್ಪಯ್ಯ ಚಂದಪ್ಪಯ್ಯ ದೇಶಪಾಂಡೆಯವರು ತೋಂಟದಾರ್ಯ ಮಠ (ಗದಗ)ಕ್ಕೆ ಕೊಟ್ಟ ಭೂ ದಾನದಲ್ಲಿ ಮಾರು ಮತ್ತು ಭೀಗೆ ಅಳತೆ ಮಾಪನಗಳು ಬಳಕೆಯಾಗಿವೆ. "ನಾಉ ನಂಮ್ಮ ವಂಶಾಭಿವೃದ್ಧಿಯಾಗಿ ಪುಂಣ್ಯ ಸಂಗ್ರಹ ನಿಮಿತ್ತತ್ಯವಾಗಿ ನಂಮ್ಮಯಿನಾಯಿತಿ ಹಿರೆಮಾಂನ್ಯೆದೊಳಗೆ ಕೊಂಡಿಕೊಪ್ಪದ ಸೀಮೆಯಲ್ಲಿ ಕ್ಲರ್ಸ್ಟ ಭೂಮಿ ಮೂವತ್ತಾರು ಭಿಗೆದ ಹುಲ್ಲು ಮಾರು ೧ । ಮಾರು ಕಾಲ್ಲು ಭೂಮಿಯನು ಧಾರಾಪೂರ್ವಕ ಕಡಿಂದಾ ಕೊಟ್ಟುಯಿಧ್ಯೆ"[೪೦] ಗದಗದ ಮಠಕ್ಕೆ ಅಣ್ಣಿಗೇರೆ ದೇಶಪಾಂಡೆಯವರು ೩೬ ಭೀಗೆ = ೭೨ ಗುಂಟೆ (೧ ಎಕರೆ ೩೨ ಗುಂಟೆ) ೧ ಮಾರು = ೧೬ ಎಕರೆ. ಒಟ್ಟು ೧೭ ಎಕರೆ ೩೨ ಗುಂಟೆ ಭೂಮಿ ದಾನ ಮಾಡಿದ್ದಾರೆ.

ದೇಸಗತಿ ಭೂ ಅಳತೆಯ ಮಾಪನಗಳಿಗೆ ಗುರುತುಗಳು ಬಳಕೆಯಾಗುತ್ತಿದ್ದವು ಅವುಗಳನ್ನು ಡಾ. ಸಂಗಪ್ಪ ಚ ಕಲ್ಯಾಣಿಯವರು ಹೀಗೆ ಗುರುತಿಸುತ್ತಾರೆ.

'6' = ಅಳಿ ಎಂದರ್ಥ
'•|•' = ನಾಲ್ಕನೇ ಭಾಗ ೪ ಜಮೀನು = ೪ ಎಕರೆ
'•||•' = ಎಂಟನೇ ಭಾಗ ೪ ಜಮೀನು = ೮ ಎಕರೆ
'|||•' = ಭಾರಾಣಿ ಭಾಗ ೨/೪ ಜಮೀನು = ೧೨ ಎಕರೆ[೪೧]

ರೈತರಿಂದ ಭೂಕಂದಾಯ ವಸೂಲಿ ಮಾಡುವಾಗ ಮೇಲೆ ಹೇಳಿದ ಅಳತೆಗಳು ದೇಸಗತಿ ವ್ಯಾಪ್ತಿಯಲ್ಲಿ ಬಳಕೆಯಾಗುತ್ತಿದ್ದವು. ಪೇಶ್ವೆಗಳು ಹೆಚ್ಚಾಗಿ ಭಿಘಾ ಅಳತೆಯನ್ನೇ ಬಳಸಿದ್ದು ಕಂಡು ಬರುತ್ತದೆ. ಇವರ ಕಾಲದಲ್ಲಿ ಭತ್ತದ ಗದ್ದೆಗಳಿಗೆ ಭಿಘಾಕ್ಕೆ ೧೦ ಮಣ, ಕಬ್ಬು ಬೆಳೆಯುವ ಗದ್ದೆಗಳಿಗೆ ಭಿಘಾಕ್ಕೆ ೫ ರೂಪಾಯಿ ತರಕಾರಿ ಬೆಳೆಯುವ ಭೂಮಿಗೆ ಭಿಘಾಕ್ಕೆ ೨ ರೂಪಾಯಿ,

ಬೇಸಿಗೆಯ ಬೆಳೆ ಬೆಳೆಯುವ ಭೂಮಿಗಳಿಗೆ ೧ ರಿಂದ ೮ ರೂಪಾಯಿ ಕಂದಾಯವನ್ನು ವಿಧಿಸಲಾಗುತ್ತಿತ್ತು ಎಂದು ವಾಡೆಗಳ ದಾಖಲಾತಿಗಳಿಂದ ತಿಳಿದುಬರುತ್ತದೆ.

**ಕಂದಾಯ ವಿನಾಯಿತಿ**

ರೈತರ ವರಮಾನಕ್ಕೆ ತಕ್ಕಂತೆ ಕಂದಾಯ ವಸೂಲಿ ಮಾಡುತ್ತಿದ್ದ ದೇಶಮುಖರು ರಾಜಾಜ್ಞೆಯಂತೆ ಒಮ್ಮೊಮ್ಮೆ ತೆರಿಗೆ ವಿನಾಯಿತಿಯನ್ನೂ ಕೊಟ್ಟಿದ್ದು ಇದೆ. ಸಾಮಾನ್ಯವಾಗಿ ಪ್ರಕೃತಿ ವಿಕೋಪ, ದಂಗೆ, ಲೂಟಿಗೆ ಒಳಗಾದ ಸಂದರ್ಭದಲ್ಲಿ ತೆರಿಗೆ ವಿನಾಯಿತಿಯನ್ನು ದೇಶಮುಖ ಅರಸರ ಗಮನಕ್ಕೆ ತಂದು ಘೋಷಿಸುತ್ತಿದ್ದ.

"ಪ್ರತಿಯೊಬ್ಬನೂ ಅವನವನ ವರಮಾನಕ್ಕೆ ಅನುಗುಣವಾಗಿ ತೆರಿಗೆ ನೀಡಬೇಕು ಒಂದು ಕಾಸು ಹೆಚ್ಚಲ್ಲ, ಒಂದು ಕಾಸು ಕಡಿಮೆಯಲ್ಲ"[೪೨], ಪೇಶ್ವೆಗಳು ಕಂದಾಯ ಅಧಿಕಾರಿಗಳಿಗೆ ಕೊಡುತ್ತಿದ್ದ ಎಚ್ಚರಿಕೆ ಇದು. ಇಂಥ ಕಠೋರ ನಿಯಮದಲ್ಲೂ ಪೇಶ್ವೆಗಳು ಪ್ರಜೆಗಳ ದು:ಖಕ್ಕೆ ಸ್ಪಂದಿಸಿ ತೆರಿಗೆ ವಿನಾಯಿತಿ ಕೊಟ್ಟಿದ್ದು ಇದೆ. ಯಾವ ಸಂದರ್ಭದಲ್ಲಿ ಕಂದಾಯ ವಿನಾಯಿತಿ ಇರುತ್ತಿತ್ತು ಎಂಬ ಅಂಶಗಳನ್ನು ಹೀಗೆ ಪಟ್ಟಿ ಮಾಡಬಹುದು.

೧. ಸಂಪೂರ್ಣವಾಗಿ ಸುಟ್ಟು, ಹಸು–ಕರುಗಳು, ಮೇವು, ದವಸಗಳನ್ನು ಕೊಳ್ಳೆ ಹೊಡೆದಿರುವ ಹಳ್ಳಿಗಳಿಗೆ ಒಂದು ವರ್ಷದ ಕಂದಾಯ ಮಾಫಿ.

೨. ಸ್ವಲ್ಪ ಭಾಗ ಸುಟ್ಟು, ಸ್ವಲ್ಪ ಭಾಗ ಲೂಟಿಗೆ ಸಿಕ್ಕಿದ ಹಳ್ಳಿಗಳಿಗೆ ಒಂದು ವರ್ಷ ಕಂದಾಯದ ಅರ್ಧ ಭಾಗ ಮಾಫಿ.

೩. ಸುಟ್ಟು ಹೋಗದೆ ಕೊಳ್ಳೆಗೀಡಾಗಿರುವ ಹಳ್ಳಿಗಳಿಗೆ ಒಂದು ವರ್ಷ ಮೂರನೆ ಒಂದು ಭಾಗದ ಕಂದಾಯವನ್ನು ವಸೂಲು ಮಾಡಬೇಕು.

೪. ಹಣವನ್ನು ಕೊಟ್ಟು ತಮ್ಮನ್ನು ಕಾಪಾಡಿಕೊಂಡ ಹಳ್ಳಿಗಳಿಗೆ ಒಂದು ವರ್ಷ ಅರ್ಧ ಕಂದಾಯವನ್ನು ವಿಧಿಸಬೇಕು.

೫. ಯಾವ ಅಪಾಯಕ್ಕೂ ಸಿಕ್ಕದೆ ಇರುವ ಹಳ್ಳಿಗಳು ಪೂರ್ಣವಾಗಿ ಕಂದಾಯ ಸಲ್ಲಿಸಬೇಕು.

೬. ಮುಂದಿನ ವರ್ಷ ಪ್ರತಿಯೊಂದು ಹಳ್ಳಿಯ ಪರಿಸ್ಥಿತಿಯನ್ನೂ ಪರಿಶೀಲಿಸಿದ ನಂತರವೇ ಕಂದಾಯ ನಿಗದಿ ಮಾಡಬೇಕು[೪೩] ಇನ್ನು ಬರಗಾಲ ಬಂದಾಗ, ಬೆಳೆ ನಷ್ಟವಾದಾಗ ಪರಿಸ್ಥಿತಿಗೆ ತಕ್ಕಂತೆ ಅಥವಾ ಹಾನಿಗೆ ಒಳಗಾದ ಭೂಮಿಗೆ ತಕ್ಕಂತೆ ಕಂದಾಯವನ್ನು ವಸೂಲಿ ಮಾಡುವುದೆ ದೇಶಮುಖನ ಸುಪರ್ದಿಗೆ ವಹಿಸಲಾಗುತ್ತಿತ್ತು ಎಂಬುದು ವಾಡೆಯಲ್ಲಿದ್ದ ಧಪ್ತರ್‌ಗಳಿಂದ ತಿಳಿದು ಬರುತ್ತದೆ. ಒಂದು ವೇಳೆ ಪ್ರವಾಹಕ್ಕೆ ಒಳಗಾಬ ಭೂಪ್ರದೇಶವಿದ್ದರೆ ಅದಕ್ಕೂ ಸಹ ಸಂದರ್ಭಕನುಸಾರ ತೆರಿಗೆ ವಸೂಲಿ ಮಾಡಿ, ನಷ್ಟವಾದ ಪ್ರದೇಶಗಳಿಗೆ ತೆರಿಗೆ ವಿನಾಯ್ತಿ ನೀಡಲಾಗುತ್ತಿತ್ತು.

ನೀರಾವರಿ ಸೌಲಭ್ಯ ಇರುವ ಪ್ರದೇಶದಲ್ಲಿ ಅಣಿಕಟ್ಟುಗಳಿದ್ದು, ಅವುಗಳ ವಿಕೋಪದಿಂದ ಬೆಳೆ ಹಾಳಾದರೆ ಆ ಸಂದರ್ಭದಲ್ಲಿಯೂ ತೆರಿಗೆ ವಿನಾಯಿತಿ ಇದೆ. ಅತೀವೃಷ್ಠಿ ಮಳೆಯಿಂದ ಅಣಿಕಟ್ಟು ಹಾಳಾದರೆ ದುರಸ್ತಿ ಮಾಡುವ ಕಾರ್ಯ ಅರಸೊತ್ತಿಗೆಯಿಂದಲೇ ಆಗುತ್ತಿತ್ತು. ಪೇಶ್ವೆಗಳ ಕಾಲದ ಕೊಪ್ಪಳ ಪರಗಣದಲ್ಲಿ ಆದ ಆಣಿಕಟ್ಟಿನ ದುರಂತಕ್ಕೆ ಸರಿಪಡಿಸಲು ಹಣವೂ ಮಂಜೂರಾದದ್ದು ಇದೆ. "ಪರಗಣದ ಭತ್ತದ ಗದ್ದೆಗಳಿಗೆ ತುಂಗಭದ್ರಾ ನದಿಯ ಕಾಲುವೆಯ ಅಣೆಕಟ್ಟಿನಿಂದ ನೀರು ಹರಿಯುತ್ತಿತ್ತು. ಮಳೆಯಿಂದಾಗಿ ಅಣೆಕಟ್ಟು ಹಾಳಾಗಿದೆ, ಅದನ್ನು ರಿಪೇರಿ ಮಾಡಲು ಎರಡು ಸಾವಿರ ಹಾನ್ ಮೊತ್ತವನ್ನು ಮಂಜೂರು ಮಾಡಲಾಗಿದೆ. ಆದ್ದರಿಂದ ಎಚ್ಚರಿಕೆಯಿಂದ ಅದನ್ನು ರಿಪೇರಿ ಮಾಡಿಸುವುದು, ಮೇಲೆ ಸೂಚಿಸಿದ ಮೊತ್ತವನ್ನು ನಿನ್ನ ಪರಗಣದ ಕಂದಾಯದಿಂದ ಮುರಿದುಕೊಳ್ಳುವುದು"[೪೪] ಎಂದು ಧಾರವಾಡ ತಾಲ್ಲೂಕಿನ ಕೊಪ್ಪಳ ಪರಗಣದ ಕಮವೀಸದಾರ ಗೋವಿಂದರಾವ್ ಯಾದವನಿಗೆ ಬರೆದ ಪತ್ರದಲ್ಲಿ ಆದೇಶ ಹೊರಡಿಸುತ್ತಾನೆ.

ಪ್ರಜೆಗಳಿಂದ ಕಂದಾಯ ವಸೂಲಿ ಮಾಡುವುದಷ್ಟೇ ರಾಜತ್ವ ಅಲ್ಲ, ಅವರ ಕಷ್ಟಗಳಿಗೆ ಸ್ಪಂದಿಸಿ ಸವಲತ್ತು ಒದಗಿಸುವುದು ನಿಜವಾದ ರಾಜತ್ವ. ಆದಿಲ್‌ಷಾಹಿಗಳು, ಮರಾಠರು, ಪೇಶ್ವೆಗಳು ರೈತರೇ ತಮ್ಮ ರಾಜ್ಯ ಎಂದು ಅರಿತಿದ್ದರು. ಅವರು ಬೆಳೆನಷ್ಟ ಅನುಭವಿಸಿದಾಗ, ಅತಿವೃಷ್ಠಿ, ಅನಾವೃಷ್ಠಿಯಾಗಿ ಕಷ್ಟದಲ್ಲಿರುವಾಗ, ದಂಗೆ, ಲೂಟಿ, ದರೋಡೆಕೋರರು ರೈತಗ್ರಾಮದ ಮೇಲೆ ದಾಳಿ ಮಾಡಿದಾಗ ತೆರಿಗೆಯನ್ನು ವಿನಾಯಿತಿಗೊಳಿಸಿದ ದಾಖಲೆಗಳು ಲಭ್ಯವಾಗುತ್ತವೆ.

**ಇತರೆ ತೆರಿಗೆಗಳು**

ಕೃಷಿಯಿಂದ ಬರುವ ತೆರಿಗೆ ರಾಜ್ಯಾದಾಯದ ಪ್ರಮುಖ ಭಾಗವಾಗಿದ್ದು, ಇದರಿಂದ ಬರುವ ತೆರಿಗೆಯ ಜೊತೆಗೆ ಇನ್ನಿತರೆ ತೆರಿಗೆಯು ಆದಾಯದ ಭಾಗವಾಗಿದ್ದುವು. ಕೃಷಿಯೇತರ ಚಟುವಟಿಕೆಗಳಾದ ವ್ಯಾಪಾರ, ಉದ್ಯೋಗ, ಅರಣ್ಯ ಉತ್ಪನ್ನಗಳು, ಕಾಣಿಕೆ, ದಂಡಗಳು, ವೃತ್ತಿಗಳ ಮೇಲಿನ ತೆರಿಗೆ ಹೀಗೆ ಸಾಕಷ್ಟು ಮೂಲಗಳಿಂದ ತೆರಿಗೆಯು ದೇಸಾಯಿ ಮೂಲಕ ಅರಸರಿಗೆ ಲಭ್ಯವಾಗುತ್ತಿತ್ತು.

**ಕಸಬಾದಲ್ಲಿ ತೆರಿಗೆ**

ಕಸಬಾ ಸಾಮಾನ್ಯವಾಗಿ ಪರಗಣದ ಮುಖ್ಯ ಪಟ್ಟಣ ಅಥವಾ ಸ್ವತಂತ್ರ ಆಡಳಿತ ಘಟಕವಾಗಿತ್ತು. ಅಣ್ಣಿಗೇರೆ ಮತ್ತು ಮುಳುಗುಂದ ಗ್ರಾಮಗಳು ಕಸಬೆಗಳಾಗಿದ್ದುವು. ಈಗಲೂ ಇವು ಮುಖ್ಯಪಟ್ಟಣದಂತಿವೆ. ಸಾಮಾನ್ಯವಾಗಿ ಕಸಬೆ ಎಂದರೆ ವಿವಿಧ ವೃತ್ತಿಗಳಾದ ಬಟ್ಟೆ ನೇಯ್ಗೆ, ಗಾಣ, ಹಗ್ಗ ತಯಾರಿಕೆ, ಕುಂಬಾರಿಕೆ, ಕೃಷಿಗೆ ಬೇಕಾದ ಸಾಮಾನುಗಳ ಮಾರಾಟ, ವಿವಿಧ ವಸ್ತುಗಳ ಮಾರಾಟ, ತರಕಾರಿ ಮಾರಾಟ ಹೀಗೆ ಸಾಕಷ್ಟು ವೃತ್ತಿಗಳು ನಡೆಯುವ ಸ್ಥಳ. ವಾರಕ್ಕೆ

ಒಮ್ಮೆ ಸಂತೆಯೂ ಕಸಬೆಯಲ್ಲಿ ನಡೆಯುತ್ತಿತ್ತು. ಸುತ್ತಮುತ್ತಲಿನ ಹಳ್ಳಿ ಜನ ತಮ್ಮ ಸಾಮಾನು-ಸರಂಜಾಮುಗಳನ್ನು ಮಾರಲು, ಕೊಳ್ಳಲು ಕಸಬೆಗೆ ಬರುತ್ತಿದ್ದರು. ಹೀಗೆ ವ್ಯಾಪಾರಕ್ಕೆ ಬಂದ ವ್ಯಾಪಾರಿಗಳಿಗೆ ಮತ್ತು ಅವರು ಮಾರುವ ವಸ್ತುಗಳ ಮೇಲೆ ತೆರಿಗೆಯನ್ನು ವಸೂಲಿ ಮಾಡಲಾಗುತ್ತಿತ್ತು. ಅಲ್ಲದೆ ನೆಲಬಾಡಿಗೆಯನ್ನೂ ಅವರು ಕೊಡಬೇಕಾಗಿತ್ತು. ಈಗಲೂ ಕಸಬೆ ಕೇಂದ್ರಗಳಲ್ಲಿ ಸಂತೆ ನಡೆಯುವಾಗ 'ಜಕಾತಿ' ಎಂಬ ಹೆಸರಿನ ನೆಲಬಾಡಿಗೆ ವಸೂಲು ಮಾಡಲಾಗುತ್ತದೆ. ಈ ಎಲ್ಲ ತೆರಿಗೆ ದೇಸಗತಿಗೆ ಲಭಿಸುತ್ತಿತ್ತು. ಒಂದು ವೇಳೆ ಸಭೆ, ಸಮಾರಂಭ, ಕಾರ್ಯ-ಕಟ್ಟಣವಿದ್ದರೆ ಪ್ರತ್ಯೇಕ ತೆರಿಗೆ ಲಭಿಸುತ್ತಿತ್ತು. ಕಸಬಾದಲ್ಲಿನ ವ್ಯಾಪಾರಿಗಳಿಗೆ ನಿಗದಿಪಡಿಸಿದ್ದ ತೆರಿಗೆಯ ವಿಧಗಳನ್ನು ಈ ರೀತಿ ಪಟ್ಟೀಕರಿಸಬಹುದು.

೧. ಗಾಣದ ಎಣ್ಣೆ ಮನೆತನದ ಮೇಲೆ ೧೫% (ಗಾಣಿಗರು ಉತ್ಪನ್ನದ ೧೫ ಭಾಗ ಕೊಡುವುದು)

೨. ಪಾನಬೀಡಿ ಅಂಗಡಿ ಪ್ರತಿದಿನ ತೆರಿಗೆ ೦.೫೦ ಸಭೆ ಸಮಾರಂಭಗಳಿಗೆ ಪುಕ್ಕಟ್ಟೆ ನೀಡುವುದು.

೩. ಗಂಜಿಯಾ ಮತ್ತು ಕಲಾಲ ಮತ್ತು ಬ್ಯುಚರ್ಸ್ ಎಲ್ಲರೂ ೧೨% ತೆರಿಗೆಯನ್ನು ಎಲ್ಲರೂ ತೆರನಾಗಿ ನೀಡುವುದು ಸಭೆ ಸಮಾರಂಭಗಳಿಗೆ ಪ್ರತ್ಯೇಕವಾಗಿ ಕುರಿಗಳನ್ನು ಕೊಡುತ್ತಿದ್ದರು.

೪. ದುಖಾನ ವಾಲಾ ಅಂದರೆ ಜಕಾತ (Excise) ಸಿಂಗೋಟಿ (ಸಿಂದಿ) ೧೫% ತೆರಿಗೆ ಇತ್ತು. ದೇಸಾಯಿಯವರಿಗೆ ಪ್ರತ್ಯೇಕವಾಗಿ 'ನೀರಾ'ವನ್ನು ಕಳುಹಿಸುತ್ತಿದ್ದರು.

೫. 'ಪಸಾರೆ' (ಫಸರೆ) ಪಸಾರೆ > ಫಸರೆ (ವ್ಯಾಪಾರಿಗಳು) ಮೇಲೆ ಕಸಬಾದಲ್ಲಿ ತೆರಿಗೆ ಇತ್ತು. ೦.೫% ಇತ್ತು ಸಭೆ ಸಮಾರಂಭಗಳಿಗೆ ಕಾಯಿಪಲ್ಲೆ ಅವಶ್ಯ ಕೊಡುತ್ತಿದ್ದರು.

೬. ಪಿಂಜಾರರ ಪ್ರತಿಮನೆಗೆ ೧೧/೨ = (೧ = ೫೦) ಪೈಸೆ ತೆರಿಗೆ ಇತ್ತು.

೭. ವಾಣಿಸ್ ಮತ್ತು ವೆಂಡರ್ಸ್ ಬಟ್ಟೆ ವ್ಯಾಪಾರಿಗಳಿಂದ ಪ್ರತಿ ಅಂಗಡಿಗೆ ೧೨ ಪೈಸೆ ತೆರಿಗೆ ಇತ್ತು.

೮. ಇತರೆ ವಸ್ತುಗಳ ಮೇಲೆ ತೆರಿಗೆ ಹೇರಿದ್ದು ತಿಳಿದುಬರುತ್ತದೆ. ದೇಸಗತಿಯ ತಳವಾರ ಮತ್ತು ಬಾರಕೇರರು ಕರ ವಸೂಲಿ ಮಾಡುತ್ತಿದ್ದರು.

೯. ಚಟ್ಟಿ, ತೇಲಿ, ಅತ್ತಾರ, ನಥಾಪ್, ಸುತಾರ, ಕುಂಬಾರ, ಸಿಂದಿ, ನಾವಲೀಗ, ಅಲ್ಲದೆ ಇತರೆಯವರ ಮೇಲೂ ಕೂಡಾ ಶೇಕಡಾ ೭ ರಷ್ಟು ತೆರಿಗೆ ಹಾಕುತ್ತಿದ್ದರು. ಹೀಗೆ ಉತ್ಪನ್ನದ ವಸ್ತುಗಳ ಮೇಲೆ ಮಾರಾಟ ತೆರಿಗೆ, ವೃತ್ತಿ ಉದ್ಯೋಗಗಳ ಮೇಲೆ ನಿಗದಿತ ಪ್ರಮಾಣದಲ್ಲಿ ಸುಂಕವನ್ನು ಆಕರ್ಷಿಸಲಾಗುತ್ತಿತ್ತು.[೪೫] ಇವಷ್ಟೇ ಅಲ್ಲದೇ ಅರಣ್ಯದ ಉತ್ಪನ್ನಗಳಾದ ಕಟ್ಟಿಗೆ, ಹುಲ್ಲು, ಜೇನು, ಹಣ್ಣು ಇತ್ಯಾದಿಗಳ ಮೇಲೆ ತೆರಿಗೆ, ಸಾರಿಗೆ, ಮರಳುಗಾರಿಕೆ, ಟಂಕ ಸಾಲೆಗಳು, ಹೊಸ ವ್ಯಾಪಾರಗಳು, ವರ್ತಕರು ಮೇಲೆಯೂ ದೇಶಮುಖ ತೆರಿಗೆ ವಿಧಿಸುತ್ತಿದ್ದ.

### ಇತರೆ ತೆರಿಗೆಗಳು

ಮರಾಠರು ಮತ್ತು ಪೇಶ್ವೆಗಳು ಕೆಲವೊಂದು ಸಂದರ್ಭಗಳಲ್ಲಿ ಹೆಚ್ಚಿನ ತೆರಿಗೆಗಳನ್ನು ದೇಸಗತಿ ಮತ್ತು ಪ್ರಜೆಗಳ ಮೇಲೆ ಹೇರಿದ್ದಿದೆ. ಇವೆಲ್ಲವು ಸಂದರ್ಭಕ್ಕೆ ಅನುಸಾರವಾಗಿ ವಿಧಿತವಾಗುತ್ತಿದ್ದುವು. ಬ್ರಿಟೀಷ್ ಅಧಿಕಾರಿ ಎಂ ಎಲ್ ಫಿನ್‌ಸ್ಟನ್ನನ ವರದಿಯಿಂದ ಸುರೇಂದ್ರನಾಥ ಸೆನ್ ಇತರೆ ತೆರಿಗೆಗಳನ್ನು ಹೀಗೆ ಪಟ್ಟಿ ಮಾಡಿದ್ದಾರೆ. ತೆರಿಗೆಯ ಹೆಸರು ಮತ್ತು ಅದರ ವಿವರವನ್ನು ಕೆಳಗಿನಂತೆ ನೋಡಬಹುದು. ತೆರಿಗೆ ಹೆಸರು ಬಹುತೇಕ ಮರಾಠಿ ಭಾಷೆಯಲ್ಲಿಯೇ ಸಂಬೋಧಿತವಾಗುತ್ತದೆ ಎಂದು ತೋರುತ್ತದೆ.

| | | |
|---|---|---|
| ೧ | ದುಹೂಕ್ ಪಟ್ಟೀ (Duhuk Putte) | ದೇಶಮುಖ ಮತ್ತು ದೇಶಪಾಂಡೆಯರ ಭೂಮಿಯ ಮೇಲೆ ವಿಧಿಸಿದ ಹತ್ತು ವರ್ಷಕ್ಕೆ ಒಂದು ವರ್ಷದ ಕಂದಾಯ. |
| ೨ | ಹಕ್ ಚೌತಾಯೀ (Huk Choutace) | ಪ್ರತಿ ವರ್ಷವೂ ವಿಧಿಸುವ ಶುಲ್ಕದ ನಾಲ್ಕನೆಯ ಒಂದು ಭಾಗ. |
| ೩ | ಮಹರ್ ಮಹಿಲ್ಲೇ (Mahr Mahillee) | ಮಹರರ ಇನಾಮುಗಳ ಮೇಲೆ ವಿಧಿಸಿದ ತೆರಿಗೆ |
| ೪ | ಮೀರಾ ಪಟ್ಟಿ (Meera Patte) | ಮಿರಾಸ್‌ದಾರರಿಗೆ ವಿಧಿಸಿದ ಮೂರು ವರ್ಷಗಳಿಗೊಮ್ಮೆ ಕೊಡಬೇಕಾದ ಹೆಚ್ಚಿನ ತೆರಿಗೆ. |
| ೫ | ಇನಾಂತಿ ಜಾಯ (Inum Tijaee) | ಇನಾಂದಾರರು ತಮ್ಮ ಭೂಮಿಯ ವರಮಾನದ ಮೇಲೆ ಶೇ ೩ ರಂತೆ ಸರಕಾರಕ್ಕೆ ಸಲ್ಲಿಸುತ್ತಿದ್ದ ಭಾಗ. |
| ೬ | ಇನಾಂ ಪಟ್ಟೀ (Inam Putte) | ಜರೂರಾದ ಸಂದರ್ಭಗಳಲ್ಲಿ ಇನಾಂದಾರರ ಮೇಲೆ ವಿಧಿಸುತ್ತಿದ್ದ ಸಾಂದರ್ಭಿಕ ತೆರಿಗೆ. |
| ೭ | ಪಂಡೀ ಗುನ್ನಾ (Pundee Gunna) | ಹನ್ನೆರಡು ವರ್ಷಗಳಿಗೊಮ್ಮೆ ಟಂಖಾ (Tankha) ಮೇಲೆ ವಿಧಿಸುತ್ತಿದ್ದ ಹೆಚ್ಚಿನ ಸುಂಕ ಶೇ ೧೨ರಷ್ಟು. |
| ೮ | ವಿಹಿರ್ ಹೂಂಡಾ (Vihir Honda) | ಬಾವಿಗಳಿಂದ ನೀರೆತ್ತಿ ಕೃಷಿ ಮಾಡುವ ಭೂಮಿಗಳಿಗೆ ವಿಧಿಸಿದ ಹೆಚ್ಚಿನ ತೆರಿಗೆ. |
| ೯ | ಘರ್ ಪಟ್ಟಿ ಅಥವಾ ಅಬರ್ ಸಾರೀ (Ghun Puttee or Amber Saree) | ಬ್ರಾಹ್ಮಣರು ಮತ್ತು ಗ್ರಾಮದ ಅಧಿಕಾರಿಗಳ ಹೊರತು ಮಿಕ್ಕವರೆಲ್ಲರೂ ತೆರಬೇಕಾಗಿದ್ದ ಮನೆಗಂದಾಯ. |
| ೧೦ | ಬತ್ ಛಪ್ಪನೀ (Bat Chappanee) | ಪ್ರತಿ ವರ್ಷವೂ ಅಳತೆ ಮತ್ತು ತೂಕದ ಬಟ್ಟುಗಳನ್ನೂ ಮಾನಗಳನ್ನೂ ಪರೀಕ್ಷೆ ಮಾಡುವುದಕ್ಕಾಗಿ ವಿಧಿಸುತ್ತಿದ್ದ ಶುಲ್ಕ. (ಇದು ಮುಖ್ಯವಾಗಿ ಚಿಲ್ಲರೆ ಮಾರಾಟಗಾರರ ಮೇಲೆ ಬೀಳುತ್ತಿತ್ತಾದರೂ ಇತರರಿಗೂ ಅನ್ವಯಿಸುತ್ತಿತ್ತು. |
| ೧೧ | ಟಗ್ (Tug) | ಭಾರೀ ತೂಕದ ವಸ್ತುಗಳನ್ನು ತೂಗಲು ಬಳಸುವ |

ತಕ್ಕಡಿಗಳ ಪರೀಕ್ಷೆಗೆ ವಿಧಿಸಿದ್ದ ಅಂಥದೇ ಶುಲ್ಕ.

| | | |
|---|---|---|
| ೧೨ | ಲಗ್ಗನ್ ತುಕ್ಕಾ (Luggan Tukka) | ಮದುವೆ ತೆರಿಗೆ. |
| ೧೩ | ಪಾತ್-ದಮ್ (Pat-Dam) | ವಿಧವಾ ಪುನರ್ವಿವಾಹದ ಮೇಲೆ ವಿಧಿಸಿದ ತೆರಿಗೆ |
| ೧೪ | ಮ್ಹೈಸನ್ ಪಟ್ಟೀ (Mhys-Putte) | ಎಮ್ಮೆಗಳ ಮೇಲಣ ತೆರಿಗೆ, ತಲೆಗೆ ಒಂದು ರೂಪಾಯಿ ಸಾಮಾನ್ಯವಾಗಿದ್ದುದು. |
| ೧೫ | ಬಕ್ರಾ ಪಟ್ಟಿ (Bakra Putte) | ಕುರಿಗಳ ಮೇಲಿನ ತೆರಿಗೆ. |
| ೧೬ | ಫದಮಾಷ್ (Fudimash) | ಆಗಾಗ ವಸ್ತುರೂಪದಲ್ಲಿ ಕೊಡುತ್ತಿದ್ದ ಕಾಣಿಕೆ. ಅನೇಕ ವೇಳೆ ಸೇವೆಗೆ ಪರಿವರ್ತನರೂಪವಾಗಿ ಸಲ್ಲಿಸಲಾಗುತ್ತಿತ್ತು. |

ಈ ತೆರಿಗೆಗಳೆಲ್ಲವನ್ನೂ ಪಾಟೀಲನು ಹಳ್ಳಿಯಲ್ಲಿ ಸಂಗ್ರಹಿಸುತ್ತಿದ್ದನು. ಪಟ್ಟಣದಲ್ಲಿ ಸರಕಾರವು ಅದಕ್ಕಾಗಿಯೇ ನೇಮಿಸಿದ ಅಧಿಕಾರಿಯಿರುತ್ತಿದ್ದನು. ಮೇಲೆ ಪಟ್ಟಿಮಾಡಿದ ತೆರಿಗೆಗಳ ಜೊತೆಗೆ ಇತರ ಕೆಲವು ಮೂಲಗಳಿಂದ ಸರಕಾರಕ್ಕೆ ವರಮಾನ ಬರುತ್ತಿದ್ದಿತು. ಅವುಗಳನ್ನು ಇಲ್ಲಿ ಸೂಚಿಸಬಹುದು.

| | | |
|---|---|---|
| ೧ | ಬೀಟಲ್ ಮಾಲ್ (Beital Maal) | ವಾರಸುದಾರರಿಲ್ಲದೆ ಸರಕಾರಕ್ಕೆ ಸೇರಿದ ಆಸ್ತಿಪಾಸ್ತಿಗಳು. |
| ೨ | ವಾನ್ ಚರಾಯೀ (Wan Charaee) | ಸರಕಾರೀ ಭೂಮಿಯಲ್ಲಿ ಹಸುಗಳನ್ನು ಮೇಯಿಸುವುದಕ್ಕಾಗಿ ಕೊಡುತ್ತಿದ್ದ ತೆರಿಗೆ. |
| ೩ | ಘಾಸ್ ಕುಟ್ಟನೀ (Ghaskuttanee) | ಸರಕಾರೀ ಭೂಮಿಗಳಲ್ಲಿ ಕತ್ತರಿಸಿದ ಹುಲ್ಲು. |
| ೪ | ದೇವಸ್ಥಾನ್ ದಭೀ (Devastan Dubhee) | ದೇವತಾ ವಿಗ್ರಹಗಳಿಗೆ ಅರ್ಪಿಸಿದ ಕಾಣಿಕೆಗಳ ವರಮಾನ. |
| ೫ | ಖುರ್-ಬೂಜಃವಾರೀ (Khur-Boozwaree) | ನದಿ ಪಾತ್ರಗಳಲ್ಲಿ ಬೆಳೆದ ಕಲ್ಲಂಗಡಿ ಹಣ್ಣಿಗೆ ವಿಧಿಸಿದ ತೆರಿಗೆ. |
| ೬ | ವತನ್ ಜಃಪ್ತಿ (Watan Zapti) | ಸರಕಾರವು ಮುಟ್ಟುಗೋಲು ಹಾಕಿಕೊಂಡ ಜಮೀನ್ದಾರರ ಭೂಮಿಗಳಿಂದ ಬಂದ ಉತ್ಪನ್ನ. |
| ೭ | ನಜರ್ (Nazar) | ತಂದೆಯ ನಂತರ ಮಗನು ಅವನ ಸ್ಥಾನಕ್ಕೆ ಬಂದರೆ ಅವನು ಜಹಗೀರುದಾರನೋ ಸರಕಾರೀ ಸೇವಕನೋ ಆಗಿದ್ದರೆ ಈ ಸುಂಕವನ್ನು ಕೊಡಬೇಕಾರಿಲಿಲ್ಲ. |
| ೮ | ಕೋತ್ವಾಲೀ (Kotwalee) | ನಗರ ಸುಂಕ, ಸೇವಾಯ್ ಜಮಾದಲ್ಲಿ ಪಟ್ಟಿಮಾಡಿರುವ ಸುಂಕಗಳಲ್ಲದೆ ಅವುಗಳಲ್ಲಿ ಅತ್ಯಂತ ಮುಖ್ಯವಾದ ಗಣನೆಗೊಳಪಟ್ಟಿದ್ದ ಮನೆಯ ಮಾರಾಟದ ಮೇಲಿನ ತೆರಿಗೆ ಶೇ. ೧೭ ದರದಲ್ಲಿ[೬] |

## ದೇಶಮುಖ ಮತ್ತು ದೇಶಪಾಂಡೆ, ಪಾಟೀಲ, ಕುಲಕರ್ಣಿಯ ವರಮಾನಗಳು

ಸರಕಾರಕ್ಕೆ ಸಲ್ಲಿಸಬೇಕಾಗಿದ್ದ ತೆರಿಗೆಗಳನ್ನು ಎಲ್ಲಾ ಮೂಲಗಳಿಂದ ಚಾಚುತಪ್ಪದೇ ವಸೂಲಿ ಮಾಡುವ ದೇಶಮುಖ, ದೇಶಪಾಂಡೆ, ಪಾಟೀಲ, ಕುಲಕರ್ಣಿಯವರಿಗೆ ವಸ್ತುರೂಪದ ವರಮಾನಗಳು ಲಭ್ಯವಿದ್ದವು. ದೇಶಮುಖ ಮತ್ತು ದೇಶಪಾಂಡೆಗೆ ಸರಕಾರದಿಂದ ಇನಾಂ ಭೂಮಿ ಲಭಿಸುತ್ತಿತ್ತಾದರೂ ಹೆಚ್ಚಿನ ವರಮಾನವ ಸ್ಥಳೀಯವಾಗಿ ಸಲ್ಲುತ್ತಿದ್ದವು. ಆದರೆ ಪಾಟೀಲ ಕುಲಕರಣಿಗೆ ಮಾತ್ರ ಸ್ಥಳೀಯ ವರಮಾನಗಳೇ ಜೀವನಾಧಾರ. ತೆರಿಗೆದಾರರು ತಮ್ಮ ವಸ್ತುಗಳ ಮಾರಾಟಕ್ಕೆ ಅಧಿಕೃತ ತೆರಿಗೆ ಕೊಟ್ಟರೂ ಈ ಮೇಲೆ ಹೆಸರಿಸಿದ ಅಧಿಕಾರಿಗಳಿಗೆ ನಿಗದಿಪಡಿಸಿದ ಕಾಣಿಕೆಯನ್ನು ತಪ್ಪದೇ ಕೊಡಬೇಕಾಗಿದ್ದತು. ಸರಕಾರಕ್ಕೆ ಕೊಡಬೇಕಾದ ತೆರಿಗೆಯನ್ನು ಕೊಟ್ಟೂ ಸಹ ಪ್ರಜೆಗಳು ಈ ನಾಲ್ಕು ಅಧಿಕಾರಿಗಳಿಗೆ ಕಾಣಿಕೆ ತಪ್ಪದೇ ಸಲ್ಲಿಸಲೇಬೇಕಾಗಿತ್ತು. ಈ ಕಾಣಿಕೆ ಅಲ್ಪವಿದ್ದರೂ ಎಲ್ಲರಿಂದ ಒಟ್ಟುಗೂಡಿದಾಗ ಒಂದು ದೊಡ್ಡ ಮೊತ್ತವೇ ಆಗುತ್ತಿತ್ತು. ಹನಿ ಹನಿ ಕೂಡಿದರೆ ಹಳ್ಳ; ತೆನೆ ತೆನೆ ಕೂಡಿದರೆ ರಾಶಿಯಲ್ಲವೇ.

### ಪಾಟೀಲನ ವರಮಾನಗಳು

ಹಳ್ಳಿಯ ಮುಖ್ಯಾಧಿಕಾರಿ ಪಾಟೀಲ. ಇವನು ಅಧಿಕಾರಿಯಲ್ಲದೆ ಹಳ್ಳಿಯ ನ್ಯಾಯಾಧೀಶನಾಗಿ, ಕಂದಾಯ ಅಧಿಕಾರಿಯಾಗಿ, ಆರಕ್ಷಕನಾಗಿ ಸೇವೆ ಸಲ್ಲಿಸುತ್ತಿದ್ದ. ಸ್ಥಳೀಯ ನ್ಯಾಯ ತೀರ್ಮಾನದ ಹಕ್ಕುಗಳು, ದರೋಡೆ, ಕಳ್ಳತನ ಇತರೆ ಅಪರಾಧಕ್ಕೆ ಕೊಡುವ ಶಿಕ್ಷೆಗಳು, ಎಲ್ಲ ರೀತಿಯ ಕಂದಾಯ ವಸೂಲಾತಿಯ ಹಕ್ಕುಗಳು ಪಾಟೀಲನಿಗೆ ಇರುತ್ತಿದ್ದುವು. ಈ ಎಲ್ಲ ಸೇವೆಗೆ ಪಾಟೀಲನಿಗೆ ಸಲ್ಲುತ್ತಿದ್ದ ವರಮಾನಗಳನ್ನು ಈ ರೀತಿಯಾಗಿ ಪಟ್ಟಿ ಮಾಡಬಹುದು.

೧. ಪ್ರತಿ ದೋಣಿಭರ್ತಿಯ ಧಾನ್ಯಕ್ಕೂ ೧೧/೨ ಮಣದ ಪ್ರಕಾರ ಬರಬೇಕಾದ ಪಾಟೀಲನ ಶೆಲ್‌ಪತಿ ಬಾಕಿಗಳು
೨. ಪ್ರತಿಯೊಬ್ಬ ರೈತನಿಂದಲೂ ೨೫ ಹೊರೆ ಜೋಳದ ಕಡ್ಡಿಗಳು.
೩. ಪ್ರತಿಯೊಂದು ಹೊಲದಿಂದಲೂ ಐದುಸೇರು ಹತ್ತಿ.
೪. ಪ್ರತಿ ರೈತನಿಂದಲೂ ಒಂದು ಹೊರೆ ಜೋಳ.
೫. ಚಮ್ಮಾರನಿಂದ ವರ್ಷಕ್ಕೆ ಎರಡು ಜೊತೆ ಪಾದರಕ್ಷೆಗಳು.
೬. ಪ್ರತಿ ಬೆಳೆಗಾರನಿಂದಲೂ ಒಂದು ಹೊರೆ ಹಸರು ಹುಲ್ಲು.
೭. ಗಾಣಿಗನಿಂದ ಪ್ರತಿಯೊಂದು ಗಾಣಕ್ಕೂ ಒಂಬತ್ತು ತಾಕು ಎಣ್ಣೆ.
೮. ಪ್ರತಿಯೊಂದು ವೀಳ್ಯೆದೆಲೆ ಅಂಗಡಿಯಿಂದಲೂ ಹದಿಮೂರು ಎಲೆಗಳು.
೯. ಪ್ರತಿಯೊಂದು ಕಬ್ಬಿನ ಗದ್ದೆಯಿಂದಲೂ ಒಂದು ಗಟ್ಟಿ ಕಾಕಂಬಿ, ಒಂದು ಹೊರೆ ಕಬ್ಬು ಮತ್ತು ಒಂದು ಡಬ್ಬ ರಸ.

೧೦. ದಸರಾ ದಿನದಂದು ಪ್ರತಿಯೊಂದು ಮಂದೆಯಿಂದಲೂ ಒಂದೊಂದು ಟಗರು.
೧೧. ಪ್ರತಿಯೊಂದು ಮಗ್ಗಕ್ಕೂ ಒಂದು ತುಂಡು ಬಟ್ಟೆ, ಎಲ್ಲ ವರ್ಗದ ನೇಕಾರರಿಂದ.
೧೨. ಧಾಂಗರನ ಮಗ್ಗದಿಂದ ವರ್ಷಕ್ಕೆ ಒಂದು ತುಂಡು ಬಟ್ಟೆ.
೧೩. ಪ್ರತಿಯೊಂದು ವಿವಾಹ ನಿಶ್ಚಿತಾರ್ಥ, ವಿವಾಹ ಮತ್ತು ವಿಧವಾ ಪುನರ್ವಿವಾಹಗಳಲ್ಲಿ ಒಂದು ಹೋಳು ತೆಂಗಿನಕಾಯಿ.
೧೪. ತರಕಾರಿ ಬೆಳೆಯುವವರಿಂದ ತರಕಾರಿ.
೧೫. ಪ್ರತಿಯೊಂದು ಹೊಲದಿಂದಲೂ ಕಾಳನ್ನು ಬಿಟ್ಟು ಮಿಕ್ಕ ಎಲ್ಲ ಉತ್ಪನ್ನಗಳ ಒಂದೊಂದು ವಫಾ (Wafa).
೧೬. ಮಾರುಕಟ್ಟೆಯ ಪ್ರತಿಯೊಬ್ಬ ವ್ಯಾಪಾರಿಯಿಂದಲೂ ರೂಢಿಯಿಂದ ಬಂದಿರುವ ಪಾಲು.
೧೭. ಪ್ರತಿಯೊಂದು ಬನಿಯಾ ಅಂಗಡಿಗೂ ಮಾಮೂಲಿನ ಕಂದಾಯ.
೧೮. ಪ್ರತಿಯೊಬ್ಬ ದಿನಸಿವರ್ತಕನಿಂದಲೂ ಒಂದು ಚೀಲಕ್ಕೆ ಕಾಲುಸೇರು ದಿನಸಿ.
೧೯. ಚೀಲಕ್ಕೆ ಇಷ್ಟೆಂದು ನಿಗಧಿಯಾಗಿರುವ ಉಪ್ಪು.
೨೦. ಪ್ರತಿ ದಿನಸಿ ವರ್ತಕನಿಂದಲೂ ದಿನಕ್ಕೆ ಒಂದು ಕಾಯಿ.[೪೭]

## ಕುಲಕರಣಿಯ ವರಮಾನಗಳು

ಕುಲಕರಣಿ ಎಂದರೆ ಕುಲಪರಂಪರೆಯಿಂದ ಕರಣಿಕನಾಗಿರುವವನು; ಶಾನುಭೋಗ[೪೮] ಎಂಬರ್ಥಗಳು ನಿಘಂಟಿನಲ್ಲಿವೆ. ಗ್ರಾಮ ಪರಿಸರದ ವಿವಿಧ ವಿಭಾಗಗಳ ಲೆಕ್ಕ ಇಡುವ ವೃತ್ತಿ ಕುಲಕರಣಿಯದು. ಪಾಟೀಲನ ಸಹಾಯಕನಾದ ಇವನು ಅವನ ಆಜ್ಞೆಗಳನ್ನು ಪಾಲಿಸುತ್ತಿದ್ದ. ಪ್ರತಿಯೊಂದು ತೆರಿಗೆಯ ಲೆಕ್ಕಶೀರ್ಷಿಕೆಯನ್ನು ಇವನು ದಾಖಲಿಸುತ್ತಿದ್ದ. ವಾಡೆಗಳಲ್ಲಿಯೂ ಕುಲಕರಣಿಗಳು ಇದ್ದರು. ಈಗಿನ ಗ್ರಾಮಲೆಕ್ಕಿಗರ ಹುದ್ದೆ ಕುಲಕರಣಿಗೆ ಸಮ. ಕುಲಕರಣಿಗೆ ನಿರ್ವಹಿಸುತ್ತಿದ್ದ ವ್ಯಕ್ತಿಗೆ ಸಾಕಷ್ಟು ಕಡೆಗಳಿಂದ ವರಮಾನಗಳು ಲಭ್ಯವಿದ್ದವು. ಸರಕಾರ ನಿಗಧಿಪಡಿಸಿದ ವರಮಾನಗಳನ್ನು ಇಲ್ಲಿ ದಾಖಲಿಸಲಾಗಿದೆ. ಸಾಮಾನ್ಯವಾಗಿ ಕುಲಕರ್ಣಿ ಬ್ರಾಹ್ಮಣನಾಗಿರುತ್ತಿದ್ದ. ಇವನಿಗೆ ಸಲ್ಲುವ ವರಮಾನಗಳು ಪಾಟೀಲನಿಗೆ ಸಂದ ನಂತರ, ಇವನಿಗೆ ಸಂದಾಯವಾಗಬೇಕಾದ ನಿಯಮವಿತ್ತು.

೧. ಸರಕಾರದಿಂದ ಬರುವ ಷಿರ್‌ಫಾವನ್ನು ಪಾಟೀಲನಾದ ಮೇಲೆ ಕುಲಕರ್ಣಿ ಸ್ವೀಕರಿಸಬೇಕು.
೨. ದೀಪಾವಳಿ ಮತ್ತು ದಸರಾ ಹಬ್ಬಗಳಂದು ಪಾಟೀಲನು ಮನೆಯಲ್ಲಿ ಆದನಂತರ ಕುಲಕರ್ಣಿಯ ಮನೆಯಲ್ಲಿ ವಾದ್ಯಗಳನ್ನು ನುಡಿಸಬೇಕು.
೩. ಗಾಣಿಗರು ಪ್ರತಿ ಅಂಗಡಿಗೂ ಪ್ರತಿದಿನವೂ ಒಂಬತ್ತು ತಾಕು ಎಣ್ಣೆ ಕೊಡಬೇಕು.

೪. ತರಕಾರಿ ಮಾರುವವರಿಂದ ರೂಢಿಯಲ್ಲಿ ಬಂದಿರುವಷ್ಟು ಪ್ರಮಾಣದ ಭಾಗವನ್ನು ಪಾಟೀಲನು ತೆಗೆದುಕೊಂಡ ಆನಂತರ ತೆಗೆದುಕೊಳ್ಳಬೇಕು.
೫. ಚಮ್ಮಾರರಿಂದ ವರ್ಷಕ್ಕೆ ಒಂದು ಜೊತೆ ಪಾದರಕ್ಷೆ.
೬. ಕೂಲಿಯು ಪಾಟೀಲನ ಮನೆಗೆ ಒದಗಿಸಿದ ಮೇಲೆ ಕುಲಕರ್ಣಿಯ ಮನೆಗೆ ನೀರು ಒದಗಿಸಬೇಕು.
೭. ಪ್ರತಿಯೊಂದು ಹಬ್ಬದ ಸಂದರ್ಭದಲ್ಲಿ ಒಂದೊಂದು ಹೊರೆ ಕಟ್ಟಿಗೆ.
೮. ಹಳ್ಳಿಗೆ ಬರುವ ಪತ್ರಗಳನ್ನು ಇಡುವುದಕ್ಕಾಗಿ ಒಂದು ತುಂಡು ಬಟ್ಟೆ ಹಾಗೂ ಬರೆಯುವ ಮಸಿಗಾಗಿ ಎಣ್ಣೆ.
೯. ವೀಳ್ಯದೆಲೆ ಮಾರುವವರಿಂದ ಪಾಟೀಲನು ತೆಗೆದುಕೊಳ್ಳುವದರ ಅರ್ಧ ಸಂಖ್ಯೆಯ ಎಲೆಗಳು.[೪೯]

ವಾಡೆ ಸಂಬಂಧಿಸಿದ ಲೆಕ್ಕ ಪತ್ರಗಳನ್ನು ಕುಲಕರಣಿಯು ನಿಭಾಯಿಸುತ್ತಿದ್ದ. ಇವರು ಮಹಾಬುದ್ಧಿವಂತರು ಮತ್ತು ಅಷ್ಟೇ ಪ್ರಾಮಾಣಿಕರು. ಬರವಣಿಗೆಯಲ್ಲಿ ಮೋಡಿ ಲಿಪಿಯನ್ನು ಹೆಚ್ಚು ಬಳಸುತ್ತಿದ್ದರು. ಕೆಲವೊಬ್ಬ ಕುಲಕರಣಿಗಳು ವಾಡೆಗೆ ಸಂಬಂಧಿಸಿದ ಹೊಲವನ್ನು ಲಪಟಾಯಿಸಿದ್ದು ಇದೆ. ದರೂರ ನಾಯಕರ ವಾಡೆಯಲ್ಲಿ ಇಂಥ ಒಂದು ಘಟನೆ ನಡೆದಿದ್ದನ್ನು ಇಲ್ಲಿ ಸ್ಮರಿಸಬಹುದು.

**ದೇಶಮುಖ ಮತ್ತು ದೇಶಪಾಂಡೆಯ ವರಮಾನಗಳು**

ದೇಶಮುಖ ಮತ್ತು ಅವನ ಕರ್ತವ್ಯ, ಕಾರ್ಯವಿಧಾನವನ್ನು ಈ ಹಿಂದೆ ಚರ್ಚಿಸಲಾಗಿದೆ. ಇವನಿಗೆ ಇನಾಂ ಭೂಮಿ ಜೊತೆಗೆ ಪ್ರತಿ ನೂರು ಎಕರೆಗೆ ಐದು ಎಕರೆ ವರಮಾನವೂ ಸೇರುತ್ತಿತ್ತು. ಪರಗಣದ ಅಧಿಕಾರಿಯಾದ ದೇಶಮುಖನಷ್ಟೇ ದೇಶಪಾಂಡೆಗೂ ರಾಜಸ್ವದಿಂದ ಮಾನ ಸಮ್ಮಾನಗಳು ದೊರೆತಿದ್ದುವು. ಇಬ್ಬರೂ ವಾಡೆಯ ಅಧಿಕಾರಿಗಳೆ. ಆದರೆ ಆಡಳಿತದ ವ್ಯಾಪ್ತಿ ದೊಡ್ಡದು. ಇವರಿಬ್ಬರೂ ಸಲ್ಲಿಸುತ್ತಿದ್ದ ಸೇವೆಗೆ ಪೇಶ್ವಾ ಆಡಳಿತಾವಧಿಯಲ್ಲಿ ದೊರೆಯುವ ವರಮಾನಗಳನ್ನು ಕಲೆಹಾಕಿದ ೨೦ ಅಂಶಗಳಲ್ಲಿ ಇವರಿಗೆ ವರಮಾನವಿತ್ತು. ಇಬ್ಬರಿಗೂ ಸಿಗುವ ವರಮಾನವನ್ನು ಒಟ್ಟೊಟ್ಟಿಗೆ ಹೇಳಲಾಗಿದೆ.

೧. ಪ್ರತಿಯೊಂದು ಹಳ್ಳಿಯಿಂದಲೂ ಮೂರು ರೂಪಾಯಿ ಕೊಡುವುದು ರೂಢಿ; ಅದರಲ್ಲಿ ದೇಶಪಾಂಡೆಗೆ ೧ ರೂಪಾಯಿ, ದೇಶಮುಖನಿಗೆ ೨ ರೂಪಾಯಿ.
೨. ಸರಕಾರದಿಂದ ಲಭಿಸುವ ಶಿರ್‌ಪಾವ್ ಅನ್ನು ಮೊದಲು ದೇಶಮುಖ ನಂತರ ದೇಶಪಾಂಡೆ ತೆಗೆದುಕೊಳ್ಳುವುದು.

೩. ವತನಕ್ಕೆ ಸಂಬಂಧಪಟ್ಟ ದಾಖಲೆಗಳಿಗೆ ಮೊದಲು ದೇಶಮುಖ ನಂತರ ದೇಶಪಾಂಡೆ ಸಹಿ ಮಾಡತಕ್ಕದ್ದು.

೪. ಸರಕಾರೀ ಅಧಿಕಾರಿಯ ಎದುರಿಗೆ ಮೊದಲು ಕಾಣಿಕೆಯನ್ನು ದೇಶಮುಖನು ನಂತರ ದೇಶಪಾಂಡೆಯು ಕಾಣಿಕೆಯನ್ನು ಅರ್ಪಿಸಬೇಕು.

೫. ಸರಕಾರದಿಂದ ಮತ್ತು ಇತರರಿಂದ ದೊರೆಯುವ ತಾಂಬೂಲವನ್ನು ಮೊದಲು ದೇಶಮುಖನು ನಂತರ ದೇಶಪಾಂಡೆಯು ಸ್ವೀಕರಿಸಬೇಕು.

೬. ಮನ್‌ಪಾನ್ (Manpan) ಮುಂತಾದ ವತನಕ್ಕೆ ಸಂಬಂಧಿಸಿದ ಮಿಕ್ಕುವನ್ನು ಮೊದಲು ದೇಶಮುಖನು ಅನಂತರ ದೇಶಪಾಂಡೆಯೂ ಸ್ವೀಕರಿಸಬೇಕು.

೭. ಕಸಬಾದಲ್ಲಿ ದೇಶಮುಖ ವತನಕ್ಕೆ ಸೇರಿದ ಒಂದು ನಿವೇಶನವಿದ್ದು ಅಲ್ಲಿ ಮನೆಕಟ್ಟಿಕೊಂಡು ದೇಶಮುಖ ವಾಸಿಸಬೇಕು.

೮. ಬೇರೆ ಬೇರೆ ಹಳ್ಳಿಗಳ ಮಾರುಕಟ್ಟೆಗಳಿಂದ ಮತ್ತು ಕಸಬಾದಿಂದ ಪದ್ಧತಿಯಿಂದ ಬರಬೇಕಾದ ಹಸರು ತರಕಾರಿಗಳನ್ನು ವಸೂಲೂ ಮಾಡಿಕೊಳ್ಳುವುದು.

೯. ಹಳೆಯ ಇನಾಂ ಭೂಮಿಯನ್ನು ಜಿರಾಯರ್ ಹಾಗೂ ಬಾಗಾಯತ್ ಸೇರಿದಂತೆ ದೇಶಮುಖ ಅನುಭವಿಸಬೇಕು.

೧೦. ಪ್ರತಿ ಹಳ್ಳಿಯ ಮಹರದಿಂದಲೂ ಹಬ್ಬಗಳ ಸಮಯದಲ್ಲಿ ಪದ್ಧತಿಯಂತೆ ಬರಬೇಕಾದ ಕಟ್ಟಿಗೆಯ ಹೊರೆಯನ್ನು ದೇಖಮುಖ ತೆಗೆದುಕೊಳ್ಳಬೇಕು.

೧೧. ಪ್ರತಿ ಹಳ್ಳಿಯಿಂದಲೂ ಸಂಕ್ರಾಂತಿ ಸಮಯದಲ್ಲಿ ಎಳ್ಳನ್ನೂ, ಶ್ರಾದ್ಧ ಮಾಡುವಾಗಲೆಲ್ಲ ತುಪ್ಪವನ್ನೂ ತಗೆದುಕೊಳ್ಳಬೇಕು.

೧೨. ದೇಶಮುಖ ಮತ್ತು ಅವನ ಪ್ರತಿನಿಧಿ ಉಡುಗೊರೆಗಳನ್ನು ತೆಗೆದುಕೊಂಡು ಹೋಗಬೇಕು.

೧೩. ಧಾಂಗರರು ಮಗ್ಗಗಳನ್ನು ಹಾಕಿಕೊಂಡಿರುವ ಪ್ರತಿಯೊಂದು ಹಳ್ಳಿಯಿಂದಲೂ ವರ್ಷಕ್ಕೆ ಒಂದರಂತೆ ಕಂಬಳಿ ತೆಗೆದುಕೊಳ್ಳುವುದು.

೧೪. ಪ್ರತಿಹಳ್ಳಿಗೆ ಒಂದು ಜೊತೆಯಂತೆ ಚಮ್ಮಾರರಿಂದ ಪಾದರಕ್ಷೆಗಳನ್ನು ಪ್ರತಿವರ್ಷವೂ ತೆಗೆದುಕೊಳ್ಳಬೇಕು.

೧೫. ದೇಶಮುಖನು ಸಯ್ವಾನ್ ಬಾಕಿ ಕಸಬಾದಿಂದ ತೆಗೆದುಕೊಳ್ಳಬೇಕು.

೧೬. ಮಸೀದಿಯನ್ನು ಗುಡಿಸುವವರು ವರ್ಷಕ್ಕೆ ಮೂರು ರೂಪಾಯಿ ತಬ್ರೂಕ್ ಕೊಡುತ್ತಾರೆ. ಅದರಲ್ಲಿ ಒಂದು ರೂಪಾಯಿ ದೇಶಪಾಂಡೆ ಎರಡು ರೂಪಾಯಿ ದೇಶಮುಖ ತೆಗೆದುಕೊಳ್ಳಬೇಕು.

೧೭. ಪ್ರತಿ ಹಳ್ಳಿಯಿಂದಲೂ ಬರುವ ರೊಟ್ಟಿಯನ್ನು ಹಣವನ್ನು (Bread Money) ದೇಶಮುಖ ಮತ್ತು ದೇಶಪಾಂಡೆ ಸಮನಾಗಿ ಹಂಚಿಕೊಳ್ಳುವುದು.

೧೮. ಸಂಗೀತಗಾರರನ್ನು ಮೊದಲು ದೇಶಮುಖನು ನಂತರ ದೇಶಪಾಂಡೆಯು ಬಹುಮಾನಿಸಬೇಕು.

೧೯. ಸಂಕೀರ್ಣ ರೂಪದ ಕೆಲಸಗಳಿಗೆ ಸಲ್ಲುವ ಸಂಕೀರ್ಣ ವರಮಾನದಲ್ಲಿ ಮೂರನೆಯ ಒಂದು ಭಾಗವನ್ನು ದೇಶಪಾಂಡೆಗೆ ಕೊಟ್ಟು ಮಿಕ್ಕ ಮೂರನೆ ಎರಡು ಪಾಲನ್ನು ದೇಖಮುಖ ಇಟ್ಟುಕೊಳ್ಳಬೇಕು.

೨೦. ಪರಗಣಕ್ಕೆ ಸಂಬಂಧಿಸಿದಂತೆ ಸಲ್ಲಿಸಬೇಕಾದ ಹಣದಲ್ಲಿ ದೇಶಪಾಂಡೆಯು ಮೂರನೆ ಒಂದು ಪಾಲನ್ನು, ದೇಶಮುಖನು ಮೂರನೆ ಎರಡು ಪಾಲನ್ನು ಕೊಡಬೇಕು.[೫೦]

ವಾಡೆಯ ಆಡಳಿತ ವ್ಯವಸ್ಥೆ ಒಂದು ಸಂಸ್ಕೃತಿಯ ಪ್ರತೀಕ ವಾಡೆ ಕೇವಲ ಆಡಳಿತ ಘಟಕ ಮಾತ್ರವಾಗಿದೆ.ಅದು ಬಹುಮುಖಿ ಸಾಂಸ್ಕೃತಿಕ ಆಚರಣೆಯ ತವರಾಗಿತ್ತು. ಒಟ್ಟಾರೆಯಾಗಿ ದೇಸಗತಿ ವ್ಯಾಪ್ತಿಗೆ ಒಳಪಡುವ ದೇಸಾಯಿ, ಪಾಟೀಲ, ಕುಲಕರ್ಣಿ ಎಲ್ಲರೂ ಲಾಭದಾಯಕ ಹುದ್ದೆಯಲ್ಲಿದ್ದವರೇ ಆಗಿದ್ದರು.ರಾಜನಿಗೆ ಕೊಡಬೇಕಾಗಿದ್ದ ತೆರಿಗೆಗೆ ಲೆಕ್ಕ ಸಿಗುತ್ತಿತ್ತು. ಆದರೆ ಈ ಅಧಿಕಾರಿಗಳು ಜನರಿಂದ ಪಡೆಯುವ ಸೇವೆ ಎಂಬ ತೆರಿಗೆಗೆ ಲೆಕ್ಕವಿಡಲು ಸಾಧ್ಯವಿಲ್ಲದ ಮಾತು. ವಾಡೆಯ ಅಧಿಕಾರಿಗಳು ಅರಸೊತ್ತಿಗೆಗೆ ಪಾವತಿಸುವ ತೆರಿಗೆಯಲ್ಲಿ ಬೆಳೆ ನಷ್ಟ ಅನುಭವಿಸಿದ ರೈತರಿಗೆ ವಿನಾಯಿತಿ ಕೊಡುತ್ತಿದ್ದು ಸ್ಮರಣೀಯ.

**೫.೪ ಸಾಂಸ್ಕೃತಿಕತೆ**

**೧. ದಾನ**

ದಾನಕೊಡುವ ಪ್ರಕ್ರಿಯೆ ಧರ್ಮದ ಒಂದು ಅಂಗ. ಜಗತ್ತಿನ ಜನಪದರು ಮತ್ತು ಅವರ ಧರ್ಮಗಳು ದಾನಕ್ಕೆ ವಿಶೇಷ ಮಾನ್ಯತೆಯನ್ನು ನೀಡಿವೆ. ವ್ಯಕ್ತಿ ತನ್ನ ಸಾಮರ್ಥ್ಯಕ್ಕೆ ಅನುಗುಣವಾಗಿ ದಾನ ನೀಡಿದ ಸಾಕಷ್ಟು ಉದಾಹರಣೆಗಳಿವೆ. ಈ ಕ್ರಿಯೆಯಲ್ಲಿ ರಾಜನಿಗೆ ಅಗ್ರಮಾನ್ಯ ಸ್ಥಾನ. ರಾಜ ನೀಡಿದ ದಾನದ ಗುಣಾವಳಿಯನ್ನು ಸಾರುವ ಸಾಕಷ್ಟು ಪ್ರಮಾಣದ ದಾಖಲೆಗಳು, ಶಾಸನಗಳು, ಜನಪದರ ಹಾಡುಗಳು ಇನ್ನೂ ನಮ್ಮೊಡನಿವೆ. ಬಹು ಹಿಂದಿನ ಕಾಲದಿಂದಲೂ ಹಿಂದೂಗಳು ತೀರ್ಥಯಾತ್ರೆಯ ಸಂದರ್ಭದಲ್ಲಿ, ಮುಸ್ಲಿಮರು ರಂಜಾನ್ ಹಬ್ಬದ ಸಂದರ್ಭದಲ್ಲಿ ವಿಶೇಷವಾಗಿ ನಿರ್ಗತಿಕರಿಗೆ, ಬಡವರಿಗೆ, ವಿಕಲಾಂಗರಿಗೆ ದಾನ ಕೊಡುವ ಪದ್ಧತಿಯನ್ನು ನಡೆಸಿಕೊಂಡು ಬಂದಿದ್ದಾರೆ. ಜೈನರು ಇದಕ್ಕೆ ಹೊರತಾದವರಲ್ಲ. ಜೈನರು ತಮ್ಮ ಪವಿತ್ರ ಯಾತ್ರಾ ತೀರ್ಥವಾದ 'ಸಮ್ಮೇದ ಶಿಖರ್ಜಿ'ಗೆ ಹೋಗುವಾಗ ಮತ್ತು ಆ ಸ್ಥಳದಲ್ಲಿ ಆಹಾರ, ಅಕ್ಕಿ, ವಸ್ತ್ರ, ಧನ ಇತ್ಯಾದಿಗಳನ್ನು ದಾನ ಕೊಡುವ ಪದ್ಧತಿಯನ್ನು ಇಟ್ಟುಕೊಂಡಿದ್ದಾರೆ. ವಚನಕಾರರು 'ದಾಸೋಹ' ಎಂಬ ವಿಶಿಷ್ಟ ಪರಿಕಲ್ಪನೆಯನ್ನು ೧೨ನೆಯ ಶತಮಾನದಲ್ಲಿಯೇ ಹುಟ್ಟು ಹಾಕಿದರು.

ದಾನ ಕೊಡುವ ಕ್ರಿಯೆಯ ಮಜಲುಗಳು ಹಲವಾರು. ಅವಶ್ಯಕತೆಗೆ ಅನುಗುಣವಾಗಿ ಮಾಡಿದ ದಾನ ಶ್ರೇಷ್ಠತೆಯನ್ನು ಪಡೆದುಕೊಳ್ಳುತ್ತದೆ. ಒಬ್ಬ ವ್ಯಕ್ತಿ ಹಸಿದು ಬಂದಾಗ ಅವನಿಗೆ ಉಣಬಡಿಸಿದರೆ 'ಆಹಾರದಾನ' ಶ್ರೇಷ್ಠವಾಗುತ್ತದೆ. ಒಬ್ಬ ರಾಜ ಅಥವಾ ಶ್ರೀಮಂತ ದೇವಾಲಯಗಳಿಗೆ ಭೂಮಿ ಮತ್ತು ಹಣ ದಾನ ಮಾಡಿದರೆ ಸಂಸ್ಕೃತಿ ಮತ್ತು ಧಾರ್ಮಿಕ ದೃಷ್ಟಿಯಲ್ಲಿ ಅದೂ ಶ್ರೇಷ್ಠವೇ ಆಗುತ್ತದೆ. ಹೀಗೆ ಆಹಾರ, ಆಶ್ರಯ, ಅರಿವೆ, ಅಕ್ಷರ, ನೀರು, ಹಣ, ಭೂಮಿ, ಗ್ರಂಥ, ಮನುಷ್ಯನ ಅಂಗಾಂಗಗಳು, ಸಲಕರಣೆಗಳು ಇತ್ಯಾದಿಗಳ ದಾನ ಆಯಾ ಸಂದರ್ಭಕ್ಕೆ ಮೌಲ್ಯಗಳಾಗಿ ಪರಿಣಮಿಸುತ್ತವೆ.

ಅಧ್ಯಯನದ ಪ್ರಮುಖ ಉದ್ದೇಶ ಜೈನ ವಾಡೆಗಳದ್ದಾಗಿದ್ದು, ಜೈನ ಧರ್ಮದಲ್ಲಿನ ದಾನ ಪ್ರಕ್ರಿಯೆ ಪದ್ಧತಿಗೆ ಒತ್ತು ಕೊಡಲಾಗಿದೆ. ಈ ಧರ್ಮದಲ್ಲಿ ದಾನಕ್ರಿಯೆ ಒಂದು ವಿಶಿಷ್ಟತೆಯನ್ನು ಪಡೆದಿದೆ. ಶ್ರಾವಕ (ಗೃಹಸ್ಥ), ಶ್ರಾವಕಿ (ಗೃಹಸ್ಥೆ) ಅನುಸರಿಸುವ ಷಟ್ಕರ್ಮಗಳಲ್ಲಿ ಇದೂ ಒಂದು

ದೇವ ಪೂಜಾಗುರೂಪಾಸ್ತಿ:।
ಸ್ವಾಧ್ಯಾಯ: ಸಂಯಮ:ತಪ:॥
ದಾನಂಚೇತಿ ಗೃಹಸ್ಥಾನಾಂ।
ಪಟ್ಕರ್ಮಾಣಿ ದಿನೇ ದಿನೇ॥[೫೧]

ದೇವಪೂಜೆ (ಜಿನಸ್ಮರಣೆ), ಗುರುಸೇವೆ [(ಮುನಿಭಕ್ತಿ (ಮುನಿ, ಕ್ಷುಲ್ಲಕ, ಐಲಕ) ಅಥವಾ ಜಿನದೀಕ್ಷೆಯನ್ನು ಸ್ವೀಕರಿಸಿದವರ ಸೇವೆ)], ಸ್ವಾಧ್ಯಾಯ (ಶಾಸ್ತ್ರಗಳ ಅಧ್ಯಯನ), ಸಂಯಮ [(ಪಂಚೇಂದ್ರಿಯಗಳ ನಿಗ್ರಹ (ಕಣ್ಣು, ಮೂಗು, ಕಿವಿ, ನಾಲಿಗೆ ಚರ್ಮ ಇವುಗಳ ಕ್ರಿಯೆ ಕ್ರಮವಾಗಿ ರೂಪ, ಗಂಧ, ಶಬ್ದ, ರಸ, ಸ್ಪರ್ಷ)]. ತಪಸ್ಸು (ಶರೀರ ಮತ್ತು ಮನಸ್ಸುಗಳನ್ನು ಅಪರಿಗ್ರಹದತ್ತ ಒಯ್ಯುವುದು) ದಾನ (ತನ್ನಲ್ಲಿರುವ ಸಂಪತ್ತನ್ನು ಸಂತೋಷದಿಂದ ಇತರರಿಗೆ ಮತ್ತು ಸಮಾಜಕ್ಕೆ ಕೊಡುವುದರ ಮೂಲಕ ತೃಪ್ತಿ ಹೊಂದುವುದು).

ಈ ರೀತಿಯಾಗಿ ಗೃಹಸ್ಥನಾದವನು ಷಟ್ಕರ್ಮಗಳನ್ನು ದಿನೇ ದಿನೇ ಆಚರಿಸಬೇಕು. ಈ ಆರು ಕೆಲಸಗಳಲ್ಲಿ ಐದು ವಯ್ಯುಕ್ತಿಕ ವಿಕಸನಕ್ಕಾಗಿ ಇದ್ದು, ದಾನ ಮಾತ್ರ ವಯ್ಯುಕ್ತಿಕ ವಿಕಸನ ಮತ್ತು ಪರರ ವಿಕಸನಕ್ಕಾಗಿ ಇದೆ. ದಾನ ಪ್ರಮುಖವಾಗಿ ನಾಲ್ಕು ರೀತಿಯದ್ದಾಗಿದೆ.

ಅಭಯಾಹಾರ ಭೈಷಜ್ಯಶ್ರುತ ಭೇದಾಚತುರ್ವಿಧಂ
ದಾನಂ ಸುಧೀಭಿರಿತ್ಯುಕ್ತಂ ಭಕ್ತಿಶಕ್ತಿ ಸಮಾಶ್ರಿತಂ॥

೧ ಆಹಾರ ಮುನಿಗಳು ಮೊದಲಾದ ಸಂಯಮಿಗಳಿಗೆ ಶಾಸ್ತ್ರದ ವಿಧಿಯಂತೆ ಆಹಾರ ನೀಡುವುದು ಆಹಾರ ದಾನವಾಗುತ್ತದೆ.

೨ ಅಭಯ — ಕಷ್ಟದಲ್ಲಿದ್ದವರಿಗೆ, ಸಮಸ್ಯೆಯ ಸುಳಿಯಲ್ಲಿ ಸಿಕ್ಕವರಿಗೆ ಸಹಾನುಭೂತಿಯನ್ನು ತೋರಿಸಿ ಸಹಾಯ ಮಾಡುವುದು ಅಭಯ ದಾನವಾಗುತ್ತದೆ

೩ ಔಷಧ — ಮುನಿಗಳಿಗೆ, ರೋಗಪೀಡಿತರಿಗೆ, ರೋಗದಿಂದ ನರಳುವ ಪಶುಪಕ್ಷಿಗಳಿಗೆ ಉಚಿತವಾಗಿ ಔಷಧ ನೀಡುವುದು. ಅವರನ್ನು ಆವರಿಸಿರುವ ರೋಗಬಾಧೆಯನ್ನು ಹೋಗಲಾಡಿಸುವುದು ಮತ್ತು ಆ ಬಗೆಯಾಗಿ ಪ್ರಯತ್ನಿಸುವುದು ಔಷಧ (ಭೈಷಜ್ಯ) ದಾನವಾಗುತ್ತದೆ.

೪ ಶಾಸ್ತ್ರದಾನ — ಅಮೂಲ್ಯ ಶಾಸ್ತ್ರಗ್ರಂಥಗಳನ್ನು ಬರೆಯಿಸಿ ಅಥವಾ ಅಚ್ಚುಹಾಕಿಸಿ, ಅವುಗಳನ್ನು ಶ್ರಾವಕ ಶ್ರಾವಕಿಯರಿಗೆ ಹಂಚಿ ಎಲ್ಲ ಸದ್ಧರ್ಮಿಗಳು ಶಾಸ್ತ್ರ ತಿಳಿಯಲೆಂಬುದೇ ಶಾಸ್ತ್ರದಾನವಾಗುತ್ತದೆ.

"ಜೈನಮತವು 'ದಾನ'ಕ್ಕೆ ವಿಶೇಷ ಮಹತ್ವ ಕಲ್ಪಿಸಿರುವುದರ ಔಚಿತ್ಯವನ್ನು ಗಮನಿಸಿದರೆ, ಜೈನ ಸಮಾಜವು, ಧರ್ಮ ಪ್ರಭಾವನೆಯಲ್ಲಿ ತೊಡಗಿದ ಯತಿಗಳಿಗೆ ಮತ್ತು ಆರ್ಯಿಕೆಯರಿಗೆ ಅನುವಾಗಲೆಂದು ಈ ವಿಧಿಯನ್ನು (ಚತುರ್ವಿಧ ದಾನ) ರೂಪಿಸಿದಂತಿದೆ. ಇದರಂತೆ ಅಹಿಂಸಾವ್ರತಿಗಳಾದ ಅವರಿಗೆ ಮಳೆಗಾಲದಲ್ಲಿ ಸಂಚಾರ ನಿಷಿದ್ಧವಿದ್ದು ತಂಗಲು ವಸತಿಗಳನ್ನು ಕಲ್ಪಿಸುವುದೇ ಅಭಯದಾನದ ವಿಧಾನವಾಗಿದೆ. ವೃದ್ಧರಿಗೆ, ರೋಗಪೀಡಿತರಿಗೆ ಸಾಂತ್ವಾನ ನೀಡಿ ಹಿಂಸೆಯನ್ನು ಪರಿಹರಿಸುವ ಭೈಷಜ್ಯದಾನವು ಶ್ರೇಷ್ಠವೆನ್ನಿಸಿದರೆ, ಧರ್ಮ ಪ್ರಭಾವನೆಗೆ ಮತ್ತು ಸ್ವಾಧ್ಯಾಯಕ್ಕೆ ನೆರವಾಗುವ ಶಾಸ್ತ್ರದಾನವು ಅತ್ಯುತ್ತಮವೆನ್ನಿಸಿತ್ತು ಹೀಗೆ ಜೈನಮದಲ್ಲಿ 'ದಾನ'ವು 'ಪೂಜೆ' ಯಷ್ಟೇ ಶ್ರೇಷ್ಠವಾದ ನಿತ್ಯವಿಧಿಯಾಗಿ ಪರಿಣಮಿಸಿತು.[೫೨]

ಈ ರೀತಿಯ ನಾಲ್ಕು ಬಗೆಯ ದಾನಗಳನ್ನು ಪರಂಪರಾಗತವಾಗಿ ಅನುಸರಿಸಿಕೊಂಡು ಬಂದ ರೂಢಿಯನ್ನು ಜೈನ ಜನಪದರಲ್ಲಿ ಕಾಣಬಹುದು. ಅಲ್ಲದೇ ದೇವಾಲಯಕ್ಕೆ, ನಿರ್ಗತಿಕರಿಗೆ, ಸೇವಕರಿಗೆ ಭೂದಾನ, ಧನ ಸಹಾಯ ಮಾಡುವುದು. ಶಿಕ್ಷಣಕ್ಕೆ ಧನ–ಭೂದಾನ, ಹಬ್ಬ–ಹರಿದಿನಗಳಿಗೆ ಧಾರ್ಮಿಕ ದತ್ತಿ ಬಿಡುವುದು, ವೀರರಿಗೆ ಭೂದಾನ ಅಲ್ಲದೇ ಮೇಲೆ ಹೇಳಿದ ಚತುರ್ವಿಧ ದಾನಗಳನ್ನು ಕೊಡುವ ಕ್ರಿಯೆಗಳು ರಾಜರ ಕಾಲಾವಧಿಯಲ್ಲಿ ಪ್ರಾಮುಖ್ಯತೆಯನ್ನು ಪಡೆದುಕೊಂಡುವು. ಜೈನ ರಾಜ, ಅಧೀನರಾಜ, ಮಹಾಸಾಮಂತ, ಸಾಮಂತ, ದಂಡನಾಯಕ, ನಾಳ್ಗಾವುಂಡ, ಗಾವುಂಡ, ಶ್ರಾವಕ, ಶ್ರಾವಕಿಯರು ಈ ರೀತಿಯ ದಾನವನ್ನು ಕೊಡುತ್ತಿದ್ದರು.

ಬಿಜಾಪುರದ ಆದಿಲ್‌ಶಾಹಿಗಳು, ಮರಾಠರು, ಪೇಶ್ವೆಗಳು, ಸಾಂಗಲಿಯ ಪಟವರ್ಧನರು, ಬ್ರಿಟೀಷರ ಕಾಲಾವಧಿಯಲ್ಲಿ ಆಡಳಿತ ನಡೆಸಿದ್ದ ವಾಡೆಯ ಅಧಿಕಾರಿ ಎಂಬ ಸಂಸ್ಕೃತಿಯು ಉತ್ತರ ಕರ್ನಾಟಕದಲ್ಲಿದ್ದ ಒಂದು ವ್ಯವಸ್ಥೆ. ಹಿಂದಿನ ನಾಳ್ಗಾವುಂಡ, ಇಂದಿನ ಜಿಲ್ಲಾಧಿಕಾರಿಗಳಿಗಿರುವ ಅಧಿಕಾರಗಳು ಮಾಮಲೇದಾರನಿಗಿದ್ದವು. ಅಧಿಕಾರ ಮತ್ತು ಸಂಪತ್ತಿನಿಂದ ಇವನು ಪುಟ್ಟ ರಾಜನಂತೆಯೇ ಭಾಸವಾಗುತ್ತಿದ್ದ. ಪ್ರಜೆಗಳಿಗೆ, ಊರಿನ ದೇಗುಲಗಳಿಗೆ, ಶಿಕ್ಷಣಕ್ಕೆ ದಾನದತ್ತಿ ಇತ್ತ

ಪ್ರಸಂಗಗಳು ಯಥೇಚ್ಛವಾಗಿ ದೊರೆಯುತ್ತವೆ. ಜೈನ ವಾಡೆಗಳ ದೇಸಾಯಿಗಳಾದ ಅಣ್ಣಿಗೇರಿ ದೇಶಪಾಂಡೆಯವರು, ಮುಳಗುಂದ ದೇಶಪಾಂಡೆಯವರು, ತೇರದಾಳದ ನಾಡಗೌಡರು, ಹನಗಂಡಿಯ ದೇಸಾಯಿಗಳು ದರೂರಿನ ನಾಯಕರು, ತಮ್ಮ ಆಡಳಿತಾವಧಿಯಲ್ಲಿತ್ತ ದಾನ ಸಂಸ್ಕೃತಿ ಅನನ್ಯ. ಈ ಮನೆತನದ ಪ್ರಮುಖ ವ್ಯಕ್ತಿಗಳ ಗುಣಾವಳಿ ಮತ್ತು ದಾನಗುಣ, ಅವರು ನೀಡಿದ ದಾನದ ವಿಚಾರವಾಗಿ ಇಲ್ಲಿ ಚರ್ಚಿಸಲಾಗಿದೆ. ಇಷ್ಟೇ ಅಲ್ಲದೇ ಈ ಎಲ್ಲ ವಾಡೆಯವರು ಕೆಲವೊಂದು ಸಾರಿ ದಾನ ನೀಡಿ ತಮ್ಮ ಹೆಸರನ್ನು ದಾಖಲಿಸದೆ ಇರುವುದು ಸೋಜಿಗ. ಇವುಗಳ ಒಟ್ಟಾರೆ ಅಧ್ಯಯನ ಈ ವಿಭಾಗದಲ್ಲಿ ಕಾಣಬಹುದು.

**ಅಣ್ಣಿಗೇರಿ ದೇಶಪಾಂಡೆ ವಾಡೆ**

ಈಗಾಗಲೇ ಚರ್ಚಿಸಿದಂತೆ ಅಣ್ಣಿಗೆರೆ ದೇಶಪಾಂಡೆ ವಾಡೆಯು ಆದಿಕವಿ ಪಂಪನ ವಂಶಜರದ್ದು. ಉತ್ತರ ಕರ್ನಾಟಕದ ಜೈನ ವಾಡೆಗಳಲ್ಲಿಯೇ ಪ್ರಾಚೀನವಾದದ್ದು, ದಾನ ನೀಡಿದ ವಿಚಾರವಾಗಿಯೂ ಈ ವಾಡೆಗೆ ಅಗ್ರಮಾನ್ಯ ಸ್ಥಾನ. ಬಸದಿಯ ಜೀರ್ಣೋದ್ಧಾರ, ನೋಂಪಿಯ ವೃತಾಚರಣೆಗಳು, ಜಿನಬಿಂಬ ಪ್ರತಿಷ್ಠಾಪನೆ, ಹಿಂದೂ ದೇವಾಲಯಗಳ ಜೀರ್ಣೋದ್ಧಾರ ಅವುಗಳಿಗೆ ದಾನದತ್ತಿ ನೀಡಿಕೆ. ಚತುಸ್ಸಂಗ (ಮುನಿ, ಆರ್ಯಿಕೆ, ಶ್ರಾವಕ, ಶ್ರಾವಿಕಾ)ಗಳಿಗೆ ಆಹಾರ ದಾನ ಆಯಗಾರರಿಗೆ ಭೂದಾನ ಮುಂತಾದ ರೀತಿಯ ದಾನ ಚಟುವಟಿಕೆಗಳಲ್ಲಿ ಈ ವಾಡೆಯ ತೊಡಗಿಸಿಕೊಂಡಿದ್ದು ಕಂಡುಬರುತ್ತದೆ.

**ಬಸದಿಯ ಜೀರ್ಣೋದ್ಧಾರ**

**ದೇಶಪಾಂಡೆ ವಾಡೆಯ ವಾಯುವ್ಯ ದಿಕ್ಕಿಗಿರುವ** ಪಾರ್ಶ್ವನಾಥ ಬಸದಿಯು ಸಾವಿರ ವರ್ಷದ ಪ್ರಾಯದ್ದು. ಇಲ್ಲಿ ಪಂಡಿತರಾದ ಶ್ರೀಮಾನ್ ಚಂದ್ರಪ್ಪ ಸಾತಪ್ಪ ಬಸ್ತಿಯವರು ಹೇಳುವಂತೆ "ಈ ಬಸ್ತಿನ್ನ ಹಿಂದ ಯಾರ, ರಾಜss, ಕಟ್ಟಿಡಸಿದನಂತರೀ. ಇದು ನಮ್ಮ ದೇಸಪಾಂಡೆ ಧನ್ಯಾರ ಮೂಲ ದೇವತಾನೂ ಹೌದರೀ. ಇದಕ್ಕೆ ಇವರು ಸಾಕಷ್ಟು ಭೂಮಿ ದಾನ ಮಾಡ್ಯಾರೀ ಇದರ ಪೂಜೀ ಮಾಡೋ ನಮಗೂ ಹೋಲಾಕೊಟ್ಟಾರಿ"[೨೦] ಎಂಬ ಮಾತುಗಳಲ್ಲಿ ಬಸದಿ ಪ್ರಾಚೀನತೆ, ವಾಡೆಯವರಿಗಿದ್ದ ಕಳಕಳಿ ವ್ಯಕ್ತವಾಗುತ್ತದೆ.

ಪ್ರಸ್ತುತ ಇರುವ ಪಾರ್ಶ್ವನಾಥ ಬಸದಿಯು ಹಿಂದೆ ಶಾಂತಿನಾಥ ತೀರ್ಥಂಕರ ಜಿನಾಲಯವಾಗಿತ್ತು. ಇದನ್ನು "ಗಂಗ ಮನೆತನದ ಇಮ್ಮುಡಿ ಭೂತುಗನು ಕ್ರಿ.ಶ. ಸುಮಾರು ೧೦ನೆಯ ಶತಮಾನದಲ್ಲಿ ನಿರ್ಮಿಸಿದನು. ಅಂದಿನಿಂದ ಈ ಜಿನಾಲಯದ ಜೋರ್ಣೋದ್ಧಾರಕ್ಕೆ ಮತ್ತು ಧಾರ್ಮಿಕ-ಸಾಮಾಜಿಕ ಚಟುವಟಿಕೆಗಳಿಗೆ ಗಂಗ ಮನೆತನದ ಇಮ್ಮುಡಿ ಮಾರಸಿಂಹ, ಕಲ್ಯಾಣ ಚಾಲುಕ್ಯ ಮನೆತನದ ತ್ರೈಲೋಕ್ಯಮಲ್ಲ ಸೋಮೇಶ್ವರ. ಈತನ ಸುಪುತ್ರ ಭುವನೈಕ್ಯಮಲ್ಲ ಇಮ್ಮುಡಿ ಸೋಮೇಶ್ವರ, ಈತನ ಮಹಾಮಂಡಳೇಶ್ವರ ಲಕ್ಷ್ಮರಸ, ಈತನ ಸಾಮಂತ ಕತ್ತಲೆ

ಕುಲದ ಕಾಟರಸ, ಸುತ್ತಮುತ್ತಲಿನ ಗ್ರಾಮಗಳ ಮೂವತ್ತು ಜನ ಶ್ರಾವಕರು, ಮಹಾಪ್ರಧಾನ ವಸುಧೈಕಬಾಂಧವರೇಚಿದೇವ ದಂಡನಾಥ ಮೊದಲಾದವರು ನಿರಂತರವಾಗಿ ದಾನದತ್ತಿಗಳನ್ನು ನೀಡುತ್ತಾ ಬಂದಿದ್ದಾರೆ"[೩೨] ಇದಷ್ಟೇ ಅಲ್ಲದೇ ಅಣ್ಣೀಗೆರಿ ದೇಶಪಾಂಡೆಯವರು ಈ ಬಸದಿಯ ಯೋಗಕ್ಷೇಮ, ನಿತ್ಯಪೂಜೆ, ಮಹೋತ್ಸವಗಳಿಗೆ, ದಾನಕೊಡುವುದರ ಜೊತೆಗೆ ಜೀರ್ಣೋದ್ಧಾರದಂತ ಮಹತ್ಕಾರ್ಯವನ್ನೂ ಮಾಡಿದ್ದಾರೆ.

ವಾಡೆ ವಂಶಾವಳಿಯ ೧೩ನೇ ತಲೆಮಾರಿನ ನಾರಪಯ್ಯ (ಉರ್ಫ ಶೂಗಪ್ಪಯ್ಯ) ಇವರು ೧೮೪೫ರಲ್ಲಿ ಪ್ರಸ್ತುತ ಜಿನಾಲಯದ ಜೀರ್ಣೋದ್ಧಾರ ಮಾಡಿದರು. ಈ ಸಂದರ್ಭದಲ್ಲಿ ವಾಡೆಯು ಪೇಶ್ವೆಗಳ ಆಡಳಿತಕ್ಕೆ ಒಳಪಟ್ಟಿತ್ತು. ಶೂಗಪ್ಪನವರು ಜಿನಾಲಯವನ್ನು ಜೀರ್ಣೋದ್ಧಾರಪಡಿಸಿದ ಶಾಸನವೊಂದು ಜಿನಾಲಯದ ನವರಂಗದ ಗೋಡೆಗೆ ಆನಿಸಿ ಇಟ್ಟಿದ್ದಾರೆ ಅದರ ಒಟ್ಟು ಒಕ್ಕಣಿಯು ಹೀಗಿದೆ.

೧. ಶ್ರೀಮತ್ಪರಮಗಂಭೀರ ಶ್ಯಾದ್ವಾದಮೋಘ ಲಾಂಛನಂ ಜೀಯಾ
೨. ತ್ರೈಲೋಕ್ಯನಾಥಸ್ಯ ಶಾಸನಂ ಜಿನಾಶಾಸನಂ ॥ ಸ್ವಸ್ತಿ ಶ್ರೀ ನ್ರ
೩. ಪ ಶಾಲಿವಾಹನ ಶಕೆ ೧೭೬೭ ॥ ೨ ಶ್ವಾ.ನಂ ॥ ದಲ್ಲಿ ಅಂನ
೪. ಗಿರಿಪುರದ ಶ್ರೀ ಶಾಂತಿನಾಥಸ್ವಾಮಿ ಚೈತ್ಯಾಲಯ
೫. ದ ದೇಶಕುಲಕರ್ಣಿಗಳಾದ ನನಾಡಕರ್ಣಿ ಶೂಗಪ್ಪನವರು ಜೀರ್ಣೋ
೬. ದ್ಧಾರ ಮಾಡಿಸಿದರು.[೫೪]

ಶಕೆ ೧೭೬೭ರಲ್ಲಿ ಅಂದರೆ ಕ್ರಿ.ಶ. ೧೮೪೫ರಲ್ಲಿ ನಾಡಕರ್ಣಿಗಳಾದ ಶೂಗಪ್ಪನವರು ಅನಗಿರಿಪುರ (ಅಣ್ಣೀಗೆರಿ)ಯ ಶಾಂತಿನಾಥ ತೀರ್ಥಂಕರ ಚೈತ್ಯಾಲಯವನ್ನು ಜೀರ್ಣೋದ್ಧಾರ ಪಡಿಸಿದ್ದು, ಶೂಗಪ್ಪನವರ ಕಾಲಕ್ಕೆ ಈ ಚೈತ್ಯಾಲಯದಲ್ಲಿ ಮೂಲಮೂರ್ತಿ ಶಾಂತಿನಾಥ ತೀರ್ಥಂಕರದ್ದಾಗಿದ್ದು, ಮುಂದಿನ ದಿನಮಾನಗಳಲ್ಲಿ ಪಾರ್ಶ್ವನಾಥ ತೀರ್ಥಂಕರರನ್ನು ಪ್ರತಿಷ್ಠಾಪನೆ ಮಾಡಲಾಗಿದೆ. ಈ ಕಾರ್ಯ ಕ್ರಿ.ಶ. ೧೯೪೫ರಲ್ಲಿ ಭೀಮಪಯ್ಯ ಅವರ ಧರ್ಮಪತ್ನಿ ಶ್ರೀಮತಿ ಪುಷ್ಪಾವತಿಬಾಯಿಯವರಿಂದ ನೆರವೇರುತ್ತದೆ.

೧. ಅಂಣೀಗೇರಿ ಶ್ರೀ ೧೦೦೮ ಶಾಂತಿನಾಥ ತೀರ್ಥ
೨. ಕರ ಚೈತ್ಯಾಲಯದಲ್ಲಿ ಶ್ರೀ ೧೦೦೮ ಶ್ರೀ ಪಾರ್ಶ್ವನಾಥ ತೀರ್ಥ
೩. ಂಕರ ಪ್ರಾಚೀನ ಜಿನಬಿಂಬವನ್ನು ಜೀರ್ರ್ಣೋದ್ಧಾರ ಮಾಡಿ ಕೊಲ್ಲಾ
೪. ಪೂರ ಶ್ರೀ ಲಕ್ಷ್ಮೀಸೇನ ಭಟ್ಟಾರಕ ಪಟ್ಟಾಚಾರ್ಯ ಸ್ವಾಮಿಯವರ
೫. ಹಸ್ತದಿಂದ ಶ್ರೀಮಂತ ಭೀಮಪಯ್ಯ ದೇಶಪಾಂಡೆಯವರ
೬. ತ್ರತಿಯಾ ಧರ್ಮಪತ್ನಿಯಾದ ಶ್ರೀ ಪುಷ್ಪಾವತೀಬಾಯಿ ದೇ

೭. ಶಪಾಂಡೆ ಅಂಣಿಗೇರಿ ಇವರು ಶಕೆ ೧೮೬೭ನೇ ಪಾರ್ಥಿವನಾಮ
ಸಂವತ್ಸರದ ಮಾರ್ಗ್ಗಶಿರ ॥ ಶುದ್ಧ ॥ ದಶಮಿ ॥ ಶುಕ್ರವಾರ ದಿವಸ
೮. ಪಂಚಕಲ್ಯಾಣ ಪೂರ್ವಕ ಪ್ರತಿಷ್ಠಾ ಮಾಡಿಸಿದರು.[೫೫]

ಬಸದಿಯ ಆವರಣ ಸ್ವಚ್ಛಗೊಳಿಸುವ ಸಂದರ್ಭದಲ್ಲಿ ನೆಲದಲ್ಲಿ ಹೂತು ಹೋಗಿದ್ದ ಸುಮಾರು ಐದು ಅಡಿಯ ಪದ್ಮಾಸನಸ್ಥ ಭವ್ಯ ಪಾರ್ಶ್ವನಾಥ ತೀರ್ಥಂಕರ ಮೂರ್ತಿಯೊಂದು ಕ್ರಿ.ಶ. ೧೯೪೦ರ ದಶಕದಲ್ಲಿ ಸಿಕ್ಕಿತು ಎಂದು ಸ್ಥಾನಿಕ ಪಂಡಿತರಾದ ಚಂದ್ರಪ್ಪನವರು ಹೇಳುತ್ತಾರೆ. ಆ ಹೊತ್ತಿಗೆ ಬಸದಿಯ ಮೂಲ ನಾಯಕ ಶಾಂತಿನಾಥನ ಮೂರ್ತಿಯು ಭಗ್ನವಾಗಿತ್ತು. ಮೂರ್ತಿಯನ್ನು ತೆಗೆದು ಆವರಣದಲ್ಲಿ ಸಿಕ್ಕಿರುವ ಪಾರ್ಶ್ವನಾಥ ತೀರ್ಥಂಕರ ಮೂರ್ತಿಯನ್ನು ಮೇಲಿನ ಶಾಸನದ ಒಕ್ಕಣಿಯಂತೆ ಕೊಲ್ಲಾಪುರದ ಶ್ರೀ ಲಕ್ಷ್ಮೀಸೇನ ಭಟ್ಟಾರಕರ ಸಮ್ಮುಖದಲ್ಲಿ ಕ್ರಿ.ಶ. ೧೯೪೫ರಲ್ಲಿ ಪ್ರತಿಷ್ಠಾಪಿಸಲಾಯಿತು. ಈ ಕಾರ್ಯಕ್ಕೆ ಪ್ರೇರಣೆಯಾದವರು ವಾಡೆಯ ೧೫ನೇ ತಲೆಮಾರಿನ ಭೀಮಪಯ್ಯ ದೇಶಪಾಂಡೆಯವರ ಮೂರನೆಯ ಹೆಂಡತಿಯಾದ ಪುಷ್ಪಾವತಿ ಬಾಯಿಯವರು.

ಬಸದಿಯನ್ನು ಜೀರ್ಣೋದ್ಧಾರಪಡಿಸಿ ತೀರ್ಥಂಕರ ಪ್ರತಿಷ್ಠೆ ಮಾಡುವಾಗ ಕಡ್ಡಾಯವಾಗಿ ಪಂಚಕಲ್ಯಾಣ ಮಾಡಬೇಕಾಗುತ್ತದೆ. ಆ ಕಾರ್ಯವನ್ನೂ ಪುಷ್ಪಾವತಿ ಬಾಯಿಯವರು ನೇರವೇರಿಸಿದ್ದಾರೆ.ಪಂಚಕಲ್ಯಾಣ ಎಂಬುದು ತೀರ್ಥಂಕರ ಸ್ವರೂಪಕ್ಕೆರಿದ ವ್ಯಕ್ತಿಯ ಇಡೀ ಜೀವನದ ಮುಖ್ಯ ಘಟನೆಗಳ ಚಿತ್ರಣ. ಜಿನನಿಗೆ ಈ ಪಂಚಕಲ್ಯಾಣ ಇರುವುದಿಲ್ಲ. ಇದು ತೀರ್ಥಂಕರರ ನಂತರದ ಹಂತ. ತೀರ್ಥಂಕರ ಜಿನನಾಗುವ ಹಂತಕ್ಕೆ ಬಂದಿರುವುದರಿಂದ ಈ ಕಲ್ಯಾಣಗಳು ನಡೆಯುತ್ತವೆ. ಇವು ಮುಖ್ಯವಾಗಿ ಐದುತೆರನಾಗಿ ಆಚರಣೆಗೊಳ್ಳುತ್ತವೆ.

| | |
|---|---|
| **೧. ಗರ್ಭ ಕಲ್ಯಾಣ** | ತಾಯಿಯಾದವಳು ತೀರ್ಥಂಕರ ಆಗುವ ಮಗು ತನ್ನ ಗರ್ಭದಲ್ಲಿ ಬೆಳೆಯುತ್ತದೆ ಎಂಬುದರ ಚಿಹ್ನೆಯಾಗಿ ಹದಿನಾರು ಸ್ವಪ್ನಗಳನ್ನು ಕಾಣುವಳು. ದೇವೇಂದ್ರನು ಬಂದು ಗರ್ಭಾವತರಣದ ಪೂಜಾ ಮಹೋತ್ಸವವನ್ನು ನೆರವೇರಿಸುತ್ತಾನೆ. |
| **೨. ಜನ್ಮಾಭೀಷೇಕ ಕಲ್ಯಾಣ** | ತೀರ್ಥಂಕರ ಸ್ವರೂಪಿಯಾದ ಮಗು ಜನಿಸಿದ ಬಳಿಕ ಶಚಿದೇವಿಯು ಅದರ ತಾಯಿಗೆ ತಿಳಿಯದಂತೆ ಬೇರೊಂದು ಮಗುವನ್ನು ಅಲ್ಲಿಟ್ಟು ಆ ಮಗುವನ್ನು ಇಂದ್ರನಿಗೆ ಒಪ್ಪಿಸುವಳು. ಇಂದ್ರನು ತನ್ನ ಐರಾವತದಲ್ಲಿ ಮಗುವನ್ನು ಕೂರಿಸಿ ಅದರ ಜನ್ಮ ಅಭೀಷೇಕ ಕಲ್ಯಾಣವನ್ನು ಸ್ವರ್ಗದಲ್ಲಿ ಸಂಭ್ರಮದಿಂದ ಆಚರಿಸುವನು. |
| **೩. ದೀಕ್ಷಾಗ್ರಹಣ ಕಲ್ಯಾಣ** | ತೀರ್ಥಂಕರ ಸ್ವರೂಪಿಯಾದ ವ್ಯಕ್ತಿ ಸನ್ಯಾಸದ ದೀಕ್ಷೆ ತೆಗೆದುಕೊಳ್ಳುವುದಕ್ಕೆ ದೀಕ್ಷಾಗ್ರಹಣ ಎನ್ನುತ್ತಾರೆ. ಇದು ಇಂದ್ರನಿಂದ |

ನೇರವೇರಲ್ಪಡುತ್ತದೆ.

| | | |
|---|---|---|
| ೪. | ಕೇವಲ ಜ್ಞಾನ ಪ್ರಾಪ್ತಿ | ದೀಕ್ಷೆ ಸ್ವೀಕರಿಸಿದ ವ್ಯಕ್ತಿ ಧೀರ್ಘ ತಪಸ್ಸು ಧಾರ್ಮಿಕ ನಡೆನುಡಿಗಳನ್ನು ಪೂರೈಯಿಸಿ ಅರಿಹಂತ ಅವಸ್ಥೆಹಂತಕ್ಕೆ ಬರುವುದೇ ಕೇವಲ ಜ್ಞಾನ. ಈ ಹಂತದಲ್ಲಿ ದೇವೇಂದ್ರನು ಮಾಡಿದ ಪೂಜೆಯೇ ಕೇವಲ ಜ್ಞಾನವಾಗುತ್ತದೆ. |
| ೫. | ನಿರ್ವಾಣ ಕಲ್ಯಾಣ | ತೀರ್ಥಂಕರಸ್ವರೂಪಿಯಾದ ವ್ಯಕ್ತಿ ದೇಹತ್ಯಾಗ ಮಾಡುವುದೇ ನಿರ್ವಾಣ ಕಲ್ಯಾಣವಾಗುತ್ತದೆ. ಈ ಸಂದರ್ಭದಲ್ಲಿ ದೇವೇಂದ್ರನು ಬಂದು ಪೂಜೆಮಾಡುತ್ತಾನೆ.[೫೬] |

೨೪ ತೀರ್ಥಂಕರರಲ್ಲಿ ಯಾವುದೇ ತೀರ್ಥಂಕರ ಮೂರ್ತಿಯನ್ನು ಪ್ರತಿಷ್ಠೆಯನ್ನು ಮಾಡಬೇಕಾದರೂ ಮೇಲೆ ಹೇಳಿದ ಪಂಚಕಲ್ಯಾಣಗಳು ನೆರವೇರಲೇಬೇಕು. ಇವುಗಳನ್ನು ವಿಧಿವತ್ತಾಗಿ ನೆರವೇರಿಸಬೇಕು ಮತ್ತು ಪಂಚಕಲ್ಯಾಣಗಳ ಪ್ರತಿಕೃತಿಗಳ ಆಚರಣೆಗಳು ಜರುಗಬೇಕು. ತೀರ್ಥಂಕರ ತಂದೆ, ತಾಯಿ, ಇಂದ್ರ-ಇಂದ್ರಾಣಿ, ಕುಬೇರ ದಂಪತಿಗಳು, ಧ್ವಜಾರೋಹಣ ದಂಪತಿಗಳು, ಯಜ್ಞನಾಯಕರು, ಮಂಗಳಕಲಶ ಈಶ್ಯಾನೇಂದ್ರ ಇಂದ್ರಾಣಿ ದಂಪತಿಗಳೂ, ಮಂಟಪ ಉದ್ಘಾಟಣೆ ದಂಪತಿಗಳು, ಅಷ್ಟಕುಮಾರಿಕೆಯರ ಆಯ್ಕೆ ಮಾಡಿ ತೀರ್ಥಂಕರ ಹುಟ್ಟು ಮತ್ತು ಸಮವಸರಣದವರೆಗೂ (ಮೋಕ್ಷ) ಇವರು ಪಾಲ್ಗೊಳ್ಳುವಂತೆ ಮಾಡಬೇಕು. ಒಟ್ಟಿನಲ್ಲಿ ತೀರ್ಥಂಕರರ ಇಡೀ ಜೀವನವನ್ನು ಮತ್ತೆ ಕಟ್ಟಿಕೊಡುವ ಸಂಸ್ಕೃತಿಯೇ ಪಂಚಕಲ್ಯಾಣ ಮಹೋತ್ಸವ.

ಅಣ್ಣಿಗೇರಿ ಪಾರ್ಶ್ವನಾಥ ತೀರ್ಥಂಕರ ಪ್ರತಿಷ್ಠಾಪನೆ ಶಾಸನದಲ್ಲಿ ಹೇಳಿರುವಂತೆ ಪಂಚಕಲ್ಯಾಣದಿಂದ ನೆರವೇರಿದೆ. ಮೇಲೆ ಹೇಳಿದ ವಿಧಿ, ವಿಧಾನಗಳೂ, ಪ್ರತಿಷ್ಠಾಪನಾಚಾರ್ಯರ ಖರ್ಚು, ಶ್ರಾವಕ-ಶ್ರಾವಕಿಯರ, ಮುನಿಗಳ, ಆರ್ಯಿಕಿಯರ ಯೋಗಕ್ಷೇಮ ವಿಚಾರಿಸಲು ಅಪಾರ ಖರ್ಚು ಬರುತ್ತದೆ. ಈ ಎಲ್ಲ ಖರ್ಚನ್ನು ಶ್ರೀಮಂತ ಭೀಮಪಯ್ಯನವರ ಧರ್ಮಪತ್ನಿಯವರಾದ ಶ್ರೀಮತಿ ಪುಷ್ಪಾವತಿಬಾಯಿಯವರು ಭರಿಸಿದರು. ಈ ಘಟನೆಯಿಂದ ಇವರು ಮಹಾನ್‌ದಾನ ಚಿಂತಾಮಣೀಯೇ ಎನ್ನಿಸುತ್ತಾರೆ. ಪುಷ್ಪಾವತಿ ಬಾಯಿಯವರಿಗೆ 'ಅಭಿನವ ದಾನಚಿಂತಾಮಣಿ' ಎಂಬ ಬಿರುದು ಇಂದು ಜನಪದರ ಬಾಯಿಯಲ್ಲಿ ನಲೆದಾಡುತ್ತಿದೆ. ಪಂಚ ಕಲ್ಯಾಣ ಕಾರ್ಯಕ್ರಮದಿಂದ ಈ ಪ್ರಶಂಶೆ ಬಂದಿದ್ದಲ್ಲ. ಇವರ ಅನೇಕ ಸಮಾಜೋ-ಧಾರ್ಮಿಕ ಕಾರ್ಯಕ್ರಮಗಳಿಂದ ಈ ಸನ್ಮಾನ ಸಂದಿದೆ. ಪಂಚಕಲ್ಯಾಣ ಕಾರ್ಯಕ್ರಮ ಒಂದು ಭಾಗವಷ್ಟೆ.

ಅಣ್ಣೀಗೆರಿಯಲ್ಲಿ ದೊರೆತ ಪ್ರಾಚೀನ ಜಿನಬಿಂಬಗಳ ವಜ್ರಲೇಪನ ಮಾಡಿದ್ದು, ಪಾರ್ಶ್ವನಾಥ ಮೂರ್ತಿ ಪ್ರತಿಷ್ಠಾಪನೆ ಮತ್ತು ಪಂಚ ಕಲ್ಯಾಣ, ಮಾನಕಾಪುರ (ಚಿಕ್ಕೋಡಿ ತಾಲ್ಲೂಕು ಬೆಳಗಾವಿ ಜಿಲ್ಲಾ)ದಲ್ಲಿ ನವಬಸದಿಯನ್ನು ನಿರ್ಮಿಸಿ ಪಂಚಕಲ್ಯಾಣ ನೆರವೇರಿಸಿದ್ದು, ಕುಂಭೋಜದಲ್ಲಿ ಮುನಿ ನಿವಾಸ ಕಟ್ಟಿಸಿದ್ದು, ಅಬ್ದುಲಲಾಟದಲ್ಲಿ ಹೊಸ ಕೆರೆಯನ್ನು ನಿರ್ಮಿಸಿದ್ದು, ಹುಬ್ಬಳ್ಳಿಯಲ್ಲಿ

ಜೈನಬೋರ್ಡಿಂಗ್‌ನಲ್ಲಿ ವಿದ್ಯಾರ್ಥಿಗಳ ಅನುಕೂಲಕ್ಕೋಸ್ಕರ ಕೋಣೆಗಳ ನಿರ್ಮಾಣ. ತವರು ಮನೆಯ ಊರಾದ ರಂಗೋಳಿ (ಬೆಳಗಾವಿ ಜಿಲ್ಲೆ)ಯಲ್ಲಿ ಹೊಸ ಬಸದಿ ನಿರ್ಮಾಣ–ಪಂಚಕಲ್ಯಾಣ ಮಹೋತ್ಸವ, ಅಣ್ಣಿಗೇರಿಯಲ್ಲಿ ಧಾರ್ಮಿಕ ಪಾಠಶಾಲೆ ಪ್ರಾರಂಭಿಸಿದ್ದು ಇವಷ್ಟೇ ಅಲ್ಲದೆ ಚತುರ್ವಿಧ ದಾನ, ನೋಂಪಿಯ ವ್ರತಾಚರಣೆ ಮುಂತಾದವು ಚಟುವಟಿಕೆಗಳು ಪುಷ್ಪಾವತಿ ಬಾಯಿಯವರನ್ನು 'ಅಭಿನವ ದಾನಚಿಂತಾಮಣಿ'ಯನ್ನಾಗಿಸಿದುವು. ಇವರ ಸಮಾಜೋ–ಧಾರ್ಮಿಕ ಚಟುವಟಿಕೆಗಳನ್ನು ಗಮನಿಸಿದ ಜಿನಮುನಿ ಶ್ರೀ ಪಾಯಸಾಗ ಮಹಾರಾಜ ಮುನಿಗಳು 'ಮುನಿಸಂಘ ಸೇವಾಶಕ್ತಿ' ಎಂಬ ಬಿರುದನ್ನೂ ನೀಡಿದ್ದರು.

**ದೇವಾಲಯಗಳಿಗೆ ಭೂದಾನ**

ದೇಶಪಾಂಡೆ ವಾಡೆಗೆ ಬರುವ ಒಂಬತ್ತು ಚಾವರತ್ ಹಳ್ಳಿಗಳಲ್ಲಿರುವ ದೇವಾಲಯಗಳಿಗೆ ಅಪಾರ ಪ್ರಮಾಣದ ಭೂದಾನ ಮಾಡಿದ್ದು ವಾಡೆಯವರ ಜಾತ್ಯತೀತ ಮನೋಭಾವನೆಯನ್ನು ತೋರುತ್ತದೆ. ಪರಧರ್ಮದ ದೇವಾಲಯಗಳಿಗೂ ದಾನ–ದತ್ತಿ ಕೊಡುವುದು ಒಬ್ಬ ದೇಸಾಯಿಯ ಕರ್ತವ್ಯವು ಹೌದು ರಾಜಮಹಾರಾಜರೂ ಇದನ್ನು ಅನುಸರಿಸಿಕೊಂಡು ಬಂದಿದ್ದಾರೆ. ಅದೇ ಪರಧರ್ಮ ಸಹಿಷ್ಣು ಮನೋಭಾವ ಕೆಲವೊಂದು ಸಾರಿ ಆಡಳಿತದ ಸುಭಗತೆಗೋಸ್ಕರ ಈ ರೀತಿ ದಾನ ದತ್ತಿ ಕೊಡುವುದು ರೂಢಿಯಲ್ಲಿತ್ತು.

ಅಣ್ಣಿಗೇರಿಯ ಅಮೃತೇಶ್ವರ ದೇವಾಲಯ ಐತಿಹಾಸಿಕವಾಗಿ ಪ್ರಸಿದ್ಧವಾದುದು. ಹೊಯ್ಸಳ ಶೈಲಿಯ ರಚನೆಯಲ್ಲಿರುವ ದೇವಾಲಯ ೧೨ನೇ ಶತಮಾನದಲ್ಲಿ ನಿರ್ಮಾಣವಾಗಿದೆ. ಹೊಯ್ಸಳ, ಕಲಚೂರಿ, ಸೇವುಣ, ವಿಜಯನಗರ ಅರಸರು ಈ ದೇವಾಲಯಕ್ಕೆ ದಾನ–ದತ್ತಿ ನೀಡಿರುವುದು ಇಲ್ಲಿರುವ ಶಾಸನಗಳಿಂದ ತಿಳಿದು ಬರುತ್ತದೆ. ಅಂತೆಯೇ ದೇಶಪಾಂಡೆ ವಾಡೆಯ ಅಧಿಕಾರಿಗಳು ಈ ದೇವಾಲಯದ ನಿತ್ಯಪೂಜಾ ಕೈಂಕುರ್ಯಗಳು ಸಾಂಗವಾಗಿ ನೆರವೇರಲೆಂದು ೧೦೦ ಎಕರೆ ಭೂಮಿಯನ್ನು ದಾನವನ್ನು ಕೊಟ್ಟಿದ್ದಾರೆ. ಅಲ್ಲದೇ ದೇವರ ಹೆಸರಿನಲ್ಲಿ ನಡೆಯುವ ಶಾಲೆಗೂ ಸಹ ಭೂಮಿಯನ್ನು ಕೊಟ್ಟಿದ್ದಾರೆಂದು ಶ್ರೀ ಶಿವಪ್ಪ ಅವರು ಹೇಳುತ್ತಾರೆ.[೫೭]

ಇದೇ ಊರಿನ ಹನುಮಂತದೇವರ ಗುಡಿಯು ವಿಜಯನಗರೋತ್ತರ ಕಾಲಾವಧಿಯಲ್ಲಿ ನಿರ್ಮಿತವಾಗಿದೆ. ಈ ದೇವಾಲಯಕ್ಕೆ ದೇಶಪಾಂಡೆ ವಾಡೆಯಿಂದ ೬೦ ಎಕರೆ ದಾನ ಸಂದಿದೆ. ದೇವರ ಉತ್ಸವದಲ್ಲಿ ದೇಶಪಾಂಡೆಯ ವಾಡೆಯವರದ್ದೇ ಮುಂದಾಳತ್ವ, ದೇಶಪಾಂಡೆಯವರು ಉತ್ಸವ ಪಲ್ಲಕ್ಕಿಗೆ ಮೊದಲ ಪೂಜೆಸಲ್ಲಿಸಿದ ನಂತರವೇ ಉತ್ಸವ ಜರುಗುತ್ತದೆ.

ಬಸಾಪುರ ಇದೇ ಮನೆತನದ ಕಂದಾಯ ಗ್ರಾಮ. ಇಲ್ಲಿನ ಎಲ್ಲ ದೇವಾಲಯಗಳಿಗೂ ಅಲಿಖಿತ ದಾನವು ಸಂದಾಯವಾಗಿದೆ. ಇಲ್ಲಿರುವ ಹನುಮಂತ ದೇವಾಲಯವನ್ನು ಹೊಸದಾಗಿ ನಿರ್ಮಿಸಿ ೨೦ ಎಕರೆ ಭೂಮಿ ನಮ್ಮ ಹಿರಿಯರು ಮಾಡಿದ್ದಾರೆ ಎಂದು ಶ್ರೀ ರಾಜೇಂದ್ರ ಭೀಮಪಯ್ಯ ದೇಶಪಾಂಡೆಯವರು ಹೇಳುತ್ತಾರೆ ಮತ್ತು ಜನರ ಆಡೋಂಬೋಲ. ಇವಷ್ಟೇ ಅಲ್ಲದೇ ಗದುಗಿನ ತೋಂಟದಾರ್ಯ ಮಠಕ್ಕೂ ಈ ವಾಡೆಯಿಂದ ದಾನ ಅರ್ಪಿತವಾಗಿದೆ.

ಕ್ರಿ.ಶ. ೧೭೧೬ರಲ್ಲಿ ಅಣ್ಣೀಗೇರಿ ಸೀಮೆಯ ದೇಶಕುಲಕರ್ಣಿಯವರಾದ ನಾಗಪಯ್ಯ ಚಂದಪ್ಪಯ್ಯ ದೇಶಪಾಂಡೆಯವರು ಜಿನಕುಲವೃದ್ಧವರಾಗಿದ್ದು, ತಮ್ಮ ವಂಶ ಅಭಿವೃದ್ಧಿಯ ನಿಮಿತ್ತವಾಗಿ ಆನಂದಾನಿಮಠಕ್ಕೆ ಭೂಮಿ ದಾನಮಾಡುತ್ತಾರೆ. ಈ ಕುರಿತಾದ ಪತ್ರದ ಕ್ರಮವು ಹೀಗಿದೆ.

"ಶ್ರೀ ಗಣೇಶಾಯ ನಮ: ಶುಭಮಸ್ತು । ನಮ:ಸ್ತುಂಗ ಶಿರ:ಶ್ಚುಂಬಿ ಚಂದ್ರಚಾಮರ ಚಾರವೆ । ತ್ರಯಲೋಕ್ಯ ನಗರಾರಂಭ ಮೂಲಸ್ತಂಬಾಯ ಶಂಭವೆ । ಜಯಲ್ಲಳಿಡಿವ ರಾಹೊಯಂ । ಯೆನ ಧಾತ್ರಿ ಸಮುಧ್ರುತ । ಅಂಗಸಂಗಾಧಿ ನಾದ್ಯಾಪಿ । ಸಪ್ರೇಮ ಪುಲಕದಂತ್ತು ಸ್ವಸ್ತಿಶ್ರೀ ಮಂನೃಪ ಶಾಲಿವಾಹನ ಶಕ ೧೬೩೮ನೆಯಾ ಪ್ರವರ್ತಮಾನೆx ಮುಳಿಂಬಿನಾ ಸಂ ॥ ದ ಜೆಷ್ಟ ಶುಧ ೫ ಪಂಚಮಿಯಲ್ಲು ಶ್ರೀ ಆನಂದಾನಿ ಮಠಕ್ಕೆ ತಮ್ಮ ರಾ ॥ ರಾಜೇಶ್ರಿ ತೋಂಟದ ಸ್ವಾಮಿಗಳಿಗೆ । ಕ ॥ ಅಂಣಿಗೇರಿಯ ಸೀಮೆಯಾ ದೆಶಕುಲ್ಲಕರಗಿ ಜಿನಕುಲವೃದ್ಭವನಾದ ಹಿ ನಾಗಪ್ಪಯ್ಯxx ಚಂದಪ್ಪಯ್ಯಾ ಸಪುತ್ರ ನಾಗಪ್ಪಯ್ಯನ ಪತ್ನಿ ಪುತ್ರ ಸಖರೆವಾರಾ ಮಾರಸಯ್ಯನು ಬರಕೊಟ್ಟ ಭೂದಾನ ಪಟ್ಟೆಕ್ರಮವೆಂತೆಂದರೆ: ನಾಉ ನಂಮ್ಮ ವಂಶಾಭಿವೃದ್ಧಿಯಾಗಿ ಪುಂಣ್ಯ ಸಂಗ್ರಹ ನಿಮಿತ್ಯವಾಗಿ ನಂಮ್ಮ ಯಿನಾಮತಿ ಹಿರೆಮಾಂನ್ಯೆದೊಳಗೆ ಕೊಂಡಿಕೊಪ್ಪದ ಸೀಮೆಯಲ್ಲಿ ಕ್ಲರ್ಸ್ತ ಭೂಮಿ ಮೂವತ್ತಾರು ಭೀಗೆದ ಹುಲ್ಲುಮಾರು ೧ । ಮಾರುಕಾಲ್ಲು ಭೂಮಿಯನ್ನು ಧಾರಾಪೂರ್ವಕ ಕಡಿಂದಾ ಕೊಟ್ಟುಯಿಧ್ಯೆ. ಆ ಚಂದ್ರಾರ್ಕ ಸ್ಥಾಯಿಗಳಾಗಿ ಆ ಭೂಮಿಯೊಳಗೆxx ದ ನಿಧೀ ನಿಕ್ಷೆಪ ಜಲ ಪಾಷಾಣ ಅಕ್ಷಿಂಣ್ಯ ಆಗಮಿಸಿದ ಸಾದ್ಯಗಳೆಂಬೊ ಅಸ್ಟಭೋಗ ಸಾಂಮ್ಯ ಸಮಸ್ತ ಕಳುಬಳ್ಳಿಗಳಿಂದಾ ಸಹಿತವಾಗಿ ಸರ್ವ ಮಾಂನ್ಯೆಕ್ಕೆ ಬೊದ್ಯಗಾಗಿ ಆನವಿಸಿ ಕೊಳ್ಳುತ್ತಬಾಹುದು ಯೆಂದು ಬರಕೊಟ್ಟ ಭೂದಾನ ಪಟ್ಟಿ ॥ ಶ್ಲೋಕಾ ॥ ದಾನಾವ್ರಾಯೋನು ಪಾಲನಂ । ದಾನಾತ್ಸ್ವರ್ಗತ್ಸ್ವಮವಕಪ್ನೋತಿ । ಪರದತ್ತಾಂ ಕೊಸ್ಪದತ್ತಾ ನಿಷ್ಪಲಂ ಭವೇತು ॥ ೧ ॥ ಸ್ವದತ್ತಾಂ ಪರದತ್ತಾಂ । ವಸುಂಧರಾ । ಶಷ್ಠಿರ್ವರುಷ ಸಹಸ್ರಾಣಿ ವಿಷ್ಟಾಯಾಂ ಜಾಯತೇ ಕ್ರಿಮಿ । ೧ ಯೆಕೇವಾಯೋಹರೆ । ಸರ್ವಶಾಂಮೆಭೂಭೂಜಾಂ ನಭೊಗ್ಯೆ ನಕರ ಗ್ರಾಹ್ಯಂ । ಪ್ರದತ್ತವಸುಂಧರಾ ಆಹೋರಾಘವ ರಾಜೇಂದ್ರ ಸಪ್ತಕಲ್ಪಾನು ಜೀವನಾ । ನಶ್ರುಣೋಮಿನಪ್ಪಸ್ವಯಂ ದತ್ತಾಪ ಹಾರೇಣಾ ॥ ೧ ॥ ರುಜು ದೊಡ್ಡ ಸಿದ್ಧಲಿಂಗಮರಿ । ಕ ॥ ೧ ವಾದಿ ತೋಟದ ಸ್ವಾಮಿ ವಗ್ಯೆರೆ ಅನ್ನದಾನಿ ಸ್ವಾಮಿ".[೫೮]

ಇಷ್ಟೊಂದು ಪ್ರಮಾಣದ ಭೂಮಿಯನ್ನು ಮಠಕ್ಕೆ ಕೊಟ್ಟಿರುವುದನ್ನು ನೋಡಿದರೆ ಅದು ನಾಗಪ್ಪಯ್ಯನವರ ಪರಧರ್ಮ ಪ್ರೀತಿಯನ್ನು ತೋರಿಸುತ್ತದೆ. ಈ ಪ್ರೀತಿ ದಾನ ಪತ್ರ ಬರೆಯುವಾಗ ಪ್ರಾರಂಭದ ಒಕ್ಕಣಿಯಲ್ಲೂ ವ್ಯಕ್ತವಾಗಿದೆ. ನಾಗಪಯ್ಯ ಜೈನರಾಗಿದ್ದರೂ ದಾನ ಬಿಡುವಾಗ 'ಶಿವ'ನ ಸ್ತುತಿಯನ್ನು ಅನುಮೋದಿಸುತ್ತಾರೆ. ಇದೇ ಅಣ್ಣೀಗೇರಿಯ ಪುಷ್ಪಾವತಿಬಾಯಿವರ ಶಾಸನ, ಅಣ್ಣೀಗೇರಿಯಲ್ಲಿನ ಜಿನಾಲಯದಲ್ಲಿರುವ ಶಾಸನಗಳು 'ಶ್ರೀಮತ್ಪರಮಗಂಭೀರ ಸ್ಯಾದ್ವಾದಾಮೋಘ ಲಾಂಛನಂ ಜೀಯಾತ್ತ್ರೈಲೋಕ್ಯ ನಾಥಸ್ಯ ಶಾಸನಂ ಜಿನಶಾಸನಂ' ಎಂಬ ಜಿನಸ್ತುತಿಯೊಂದಿಗೆ

ಪ್ರಾರಂಭವಾಗುತ್ತವೆ. ಇಲ್ಲಿ ಮಾತ್ರ ನಮ: (ಮೋ)ಸ್ತುಂಗ ಶಿರ:ಶ್ಚುಂಬಿ ಚಂದ್ರಚಾಮರ ಚಾರವೇ ತ್ರ (ತ್ರೈ) ಲೋ (ಳೋ) ಕ್ಯ ನಗರಾರಂಭ ಮೂಲಸ್ತಂಬಾ (ಭಾ)ಯ ಶಂಭವೆ । ಎಂಬ ಶಿವಸ್ತುತಿಯನ್ನು ಸ್ಮರಿಸಲಾಗಿದೆ.

ಜೈನರು ಪರಂಪರೆ ಉದ್ದಕ್ಕೂ ಇತರ ಧರ್ಮಗಳೊಂದಿಗೆ ಹೊಂದಾಣಿಕೆ ಮಾಡಿಕೊಂಡು ಅವರ ಧರ್ಮವನ್ನೂ ಪ್ರೀತಿಸುತ್ತಾ ಬಂದಿದ್ದಾರೆ. ಸಣ್ಣಪುಟ್ಟ ವ್ಯಾಜ್ಯಗಳು, ಧಾರ್ಮಿಕ ವಾದಗಳು, ಅಸಮಾಧನಗಳಿದ್ದರೂ ಕಲಹದಂತ ಕೃತ್ಯಕ್ಕೆ ಅವು ಎಡೆಮಾಡಿಕೊಡಲಿಲ್ಲ. ಜೈನರು ಕಲಹ ಮಾಡಿದ್ದು ಕಡಿಮೆ ಅನುಸಂಧಾನ ಮಾಡಿಕೊಂಡಿದ್ದು ಹೆಚ್ಚು ಎಂಬುದು ಮೇಲಿನ ದಾನಪತ್ರದ ಶಿವಸ್ತುತಿಯಾದರಿಂದಲೇ ಊಹಿಸಬಹುದು. ಇಲ್ಲಿ ಇನ್ನೊಂದು ಗಮನಕ್ಕೆ ಬರುವ ಅಂಶವೆಂದರೆ ತಾನುಕೊಟ್ಟ ದಾನ ಇತರರು ಕಬಳಿಸಬಾರದೆಂದು ಮತ್ತು ತಮ್ಮ ಮನೆತನದವರೆ ಅದರ ಮೇಲೆ ಮುಂದಿನ ದಿನಮಾನಗಳಲ್ಲಿ ಹಕ್ಕು ಸ್ಥಾಪಿಸಬಾರದೆಂದು "ಸಮಸ್ತ ಕಳು(ಳ್ಳು)ಬಳ್ಳಿಗಳಿಂದಾ ಸಹಿತವಾಗಿ ಸರ್ವಮಾಂನ್ಯಕ್ಕೆ ಬೊದ್ಯರಾಗಿ ಆನವಿಸಿಕೊಳ್ಳತ್ತಬಾಹುದುಯೆಂದು ಬರಕೊಟ್ಟ ಭೂದಾನ ಪಟ್ಟಿ"ಯನ್ನು ಬರೆದುಕೊಡುತ್ತಾರೆ. ಇದಷ್ಟೇ ಅಲ್ಲದೆ ದಾನಕೊಟ್ಟ ಭೂಮಿಯ ಅಸ್ಟಭೋಗಗಳೂ ಮಠಕ್ಕೆ ಸಲ್ಲಬೇಕೆಂದು ನಾಗಪ್ಪಯ್ಯನವರು ಮಠಕ್ಕೆ ದಾನ ಬಿಡುತ್ತಾರೆ.

**ಹನಗಂಡಿ ದೇಸಾಯಿ ವಾಡೆ**

೩೩ ಹಳ್ಳಿಗಳ ವತನದಾರರಾದ ದೇಸಾಯಿಗಳು ಜನಾನುರಾಗಿಗಳಾಗಿದ್ದರು. ಈ ಹಳ್ಳಿಗಳಿಂದ ಬರುವ ಕಂದಾಯದ ಆದಾಯದಲ್ಲಿ ಮತ್ತು ತಮ್ಮ ಇನಾಂ ಭೂಮಿಯಿಂದ ಬರುವ ಆದಾಯದಿಂದ ಸಾಕಷ್ಟು ದಾನ ಧರ್ಮದ ಕಾರ್ಯಗಳನ್ನು ಮಾಡಿದ್ದಾರೆ. ಅತೀ ಮುಖ್ಯವಾದ ದಾನದ ವಿವರಗಳನ್ನು ಇಲ್ಲಿ ತಪ್ಪದೇ ಹೆಸರಿಸಬೇಕಾಗುತ್ತದೆ.

**ತೇರದಾಳದ ಗೊಂಕ ಜಿನಾಲಯ**

ಚಾಳುಕ್ಯ ಅರಸ ಆರನೇ ವಿಕ್ರಮಾದಿತ್ಯನ ಸಾಮಂತರಲ್ಲಿ ಸವದತ್ತಿ ರಟ್ಟರೂ ಒಬ್ಬರು. ರಟ್ಟರ ಆಳ್ವಿಕೆಗೆ ತೇರದಾಳ ಒಳಪಟ್ಟಿತ್ತು.ಆಗಿನ ಸಂದರ್ಭದಲ್ಲಿ ಈ ಊರಿಗೆ ಅಧಿಪತಿ ಗೊಂಕರಸನೆಂಬುವನಿದ್ದ ಇವನಿಗೆ ವಿಷಸರ್ಪವೊಂದು ಕಚ್ಚಲು, ಔಷಧ ತೆಗೆದುಕೊಳ್ಳದೇ ಪಂಚಪರಮೇಷ್ಠಿಗಳನ್ನು ನೆನೆದು ಬದುಕುಳಿದ ತತ್ಸಂಬಂಧವಾಗಿ ತೇರದಾಳದಲ್ಲಿ ಕ್ರಿ.ಶ. ೧೧೨೩ರಲ್ಲಿ ಈ ಬಸದಿಗೆ 'ಗೊಂಕಜಿನಾಲಯವೆಂದು ಹೆಸರಾಯ್ತು. ಈ ಜಿನಾಲಯಕ್ಕೆ ಕಾಲಕಾಲಕ್ಕೆ ದಾನದತ್ತಿಗಳು ವಿವಿಧ ಅಧಿಕಾರಿಗಳು, ಧರ್ಮಾನುರಾಗಿಗಳಿಂದ ಅರ್ಪಿತವಾಗುತ್ತ ಬಂದಿವೆ.

ಪ್ರಕೃತಿಯ ವಿಕೋಪಕ್ಕೋ, ಸಂಘರ್ಷದ ಕಿಡಿಗೊ ಗೊಂಕಜಿನಾಲಯದ ಮೂರ್ತಿ ಭಗ್ನವಾಗಿ ನಾಪತ್ತೆಯಾಗಿಬಿಟ್ಟಿತು. ಇಂಥ ಸಂದರ್ಭದಲ್ಲಿ ಹನಗಂಡಿಯ ದೇಸಾಯಿಗಳಿಂದ ನವನಿರ್ಮಿತ ನೇಮಿನಾಥ ಬಿಂಬ ಪ್ರತಿಷ್ಠಾಪನೆಯಾಯ್ತು.

ಗೊಂಕಜಿನಾಲಯದ ಮೂಲಮೂರ್ತಿಯು ಕಾಣದೇ ಆತಂಕಗೊಂಡ ಜಿನಧರ್ಮ ವ್ರತಾಚರಣೆಯಾದ, ಧರ್ಮಾನುರಾಗಿಗಳೂ ಆದ ಸತ್ಯವ್ವ ದೇಸಾಯಿನಿಯವರು ಪುತ್ರ ಜಕ್ಕಪ್ಪ ದೇಸಾಯಿಯವರೊಡಗೂಡಿ ನವನೇಮಿನಾಥ ಮೂರ್ತಿಯನ್ನು ಕ್ರಿ.ಶ. ೧೭೪೮ ನವೆಂಬರ್ ೧೮ ರಂದು ಗೊಂಕಜಿನಾಲಯದಲ್ಲಿ ಪ್ರತಿಷ್ಠೆ ಮಾಡಿದರು ಈ ಸಂಬಂಧವಾದ ಶಾಸನ ಇದೇ ಮೂರ್ತಿಯ ಕೆಳಭಾಗದಲ್ಲಿದೆ.

೧. ಶ್ರೀಮನ್ನೇಮಿ ಜಿನೇಂದ್ರನ ಪ್ರತಿಮೆಯಂ ಸಮ್ಯಕ್ತ್ವ
೨. ಚೂಡಾಮಣಿಗಳಾದಂಥಾ ಶ್ರೀ ಮತ್ತೇರಿದಾಳದ ದೇಶಾಯಿ
೩. ಸತ್ಯವ್ವ ತತ್ಪುತ್ರ ಜಕ್ಕಪ್ಪ ಸಹವಾಗಿ ಮಾಡಿಸಿ
೪. ಶ್ರೀ ಗೊಂಕ ಜಿನಾಲಯದಲ್ಲಿ ಪ್ರತಿಷ್ಠೆಯನ್ನು ಮಾಡಿದ
೫. ಶಕವರ್ಷ ೧೬೭೦ ವಿಭವನಾಮ ಸಂವತ್ಸರದ
೬. ಮಾರ್ಗಶಿರದ ಶುಕ್ಲದಶಮಿ ಶುಕ್ರವಾರದಲ್ಲಿ
೭. ಭದ್ರಂ ಭೂಯಾತ್ ಶ್ರೀ ಶ್ರೀ ಶ್ರೀ.[೫೯]

೫೧ ಇಂಚು ಎತ್ತರವಿರುವ ಖಡ್ಗಾಸನಸ್ಥ ನೇಮಿನಾಥರ ಮೂರ್ತಿ ಸುಂದರವಾಗಿದೆ. ದೇಸಾಯಿನಿ ಸತ್ಯವ್ವ ಮೋಗೆಪ್ಪ ದೇಸಾಯಿಯವರ ಶಿಲ್ಪಿಗಳನ್ನು ತೇರದಾಳಕ್ಕೆ ಕರೆಯಿಸಿ ಮೇಲ್ವಿಚಾರಣೆ ಮಾಡುತ್ತ ನಿರ್ಮಿಸಿದ ಕರಿಕಲ್ಲಿನ ಮೂರ್ತಿ ಇದು. ಅಲ್ಲದೇ ಇದೇ ಸಮಯದಲ್ಲಿ ದೇಸಾಯಿ ಮನೆತನದಿಂದ ಗೊಂಕಜಿನಾಲಯಕ್ಕೆ ೧೯೮ ಇಂಚು ಎತ್ತರದ ಮಾನಸ್ತಂಭ ನಿರ್ಮಾಣವಾಗುತ್ತದೆ. ಹೀಗೆ ಜಿನಾಲಯದ ನೂತನ ವಿಗ್ರಹ ಪ್ರತಿಷ್ಠಾಪನೆ, ಮಾನಸ್ತಂಭದ ನಿರ್ಮಾಣದ ಜೊತೆಗೆ 'ಪಂಚಕಲ್ಯಾಣ' ಕಾರ್ಯಕ್ರಮವನ್ನು ಕೈಗೊಳ್ಳಲಾಗುತ್ತದೆ. ಈ ಹಿಂದೆ ತಿಳಿಸಿರುವಂತೆ ಪಂಚಕಲ್ಯಾಣದ ಖರ್ಚು ಅಪಾರ ಮೂರ್ತಿ, ಮಾನಸ್ತಂಭ, ಪಂಚಕಲ್ಯಾಣದಂತಹ ಕಾರ್ಯಕ್ರಮಗಳನ್ನು ಒಬ್ಬರೇ ನಿಭಾಯಿಸುವುದು ಕಷ್ಟಸಾಧ್ಯ. ಈ ಎಲ್ಲವುಗಳನ್ನು ಸತ್ಯವ್ವ ಅವರ ಪುತ್ರ ಜಕ್ಕಪ್ಪ ದೇಸಾಯಿಯವರು ತಮ್ಮ ಸ್ವಂತ ಖರ್ಚಿನಿಂದ ನಿಭಾಯಿಸರುವುದು ಅವರ ಧರ್ಮಪರತೆ ಮನಸ್ಸಿಗೆ ಹಿಡಿದ ಕನ್ನಡಿಯಾಗಿದೆ. ಪ್ರಸ್ತುತ ಶಾಸನದಲ್ಲಿ ಉಲ್ಲೇಖವಾಗಿರುವ 'ತ್ತೇರಿದಾಳದ ದೇಶಾಯಿ ಸತ್ಯವ್ವ ತತ್ಪುತ್ರ ಜಕ್ಕಪ್ಪ'[೬೦] ಎಂಬಲ್ಲಿ ದೇಸಾಯಿ ಮನೆತನವು ಮೂಲದಲ್ಲಿ ತೇರದಾಳದಲ್ಲಿಯೇ ಇದ್ದಿತು. ಕಾಲಾನಂತರ ಇವರ ವತನದಾರಿಕೆಯು ಹನಗಂಡಿಯಿಂದ ಚಲಾವಣೆಯಾಗತೊಡಗಿತು. ಹಾಗೆ ನೋಡಿದರ ತೇರದಾಳದ ನಾಡಗೌಡರು ಹನಗಂಡಿ ದೇಸಾಯಿಗಳು ಮೂಲ ಒಂದೇ ಮನೆತನದವರು. ಮೂಲ ಮನೆತನಕ್ಕೆ ೬೬ ಚಾವರಾತ್

ಹಳ್ಳಿಗಳಿದ್ದವು. ೧೫೭೨ರ ಸುಮಾರಿಗೆ ತೇರದಾಳ ವತನದಾರಿಕೆ ಎರಡು ಭಾಗಗಳಾಗಿ ಕಾರಿಬಸಗೌಡನ ಮಕ್ಕಳಾದ ಕಲಗೌಡನಿಗೆ ೩೩ ಹಳ್ಳಿಗಳು ಮತ್ತು ಜಿನಗೌಡನಿಗೆ ೩೩ ಹಳ್ಳಿಗಳ ವತನದಾರಿಕೆ ಕೊಡಲಾಯಿತು. ಕಲಗೌಡನದ್ದು ದೇಸಾಯಿ ವಂಶ, ಜಿನಗೌಡನದ್ದು ನಾಡಗೌಡ ವಂಶವೆಂದು ನಾಮಾವಳಿಗಳಾದವು. ಇಬ್ಬರೂ ತೇರದಾಳ ಪಗರಣದ ವ್ಯಾಪ್ತಿಗೆ ಬರುತ್ತಿದ್ದು, ಸತ್ಯವ್ವ ಮಗ ಜಕ್ಕಪ್ಪ ಕಾಲದವರೆಗೂ ದೇಸಾಯಿಗಳು ತೇರದಾಳದಲ್ಲೆ ಇದ್ದು ಮುಂದಿನ ತಲೆಮಾರಿನವರು ಹನಗಂಡಿಯನ್ನು ತಮ್ಮ ಠಾಣೆಯನ್ನಾಗಿಸಿಕೊಂಡು. ಆದರೆ ಪಗರಣ ಮಾತ್ರ ತೇರದಾಳವೇ ಆಗಿತ್ತು.

ಗೊಂಕಜಿನಾಲಯಕ್ಕೆ ದೇಸಾಯಿಗಳು ಕೊಟ್ಟ ಇನ್ನೊಂದು ಕೊಡುಗೆ ಎಂದರೆ ೧೫೦ ಎಕರೆ ಭೂಮಿ. ಬಸದಿಯಲ್ಲಿ ನಿತ್ಯ ಪೂಜೆ, ಅಷ್ಟವಿಧಾರ್ಚನೆ[೧] ಸಾಂಗವಾಗಿ ನಡೆಯಲಿ ಎಂಬುದಕ್ಕೆ ಬಸದಿಯ ಜೀರ್ಣೋದ್ಧಾರಕ್ಕೆ ಈ ಭೂಮಿಯಿಂದ ಬಂದ ಆದಾಯದಿಂದ ಖರ್ಚುಮಾಡುವ ದೃಷ್ಟಿಯಿಂದ ಮತ್ತು ನಿತ್ಯ ಪೂಜೆಗೈವ ಪಂಡಿತರು (ಪೂಜಾರಿ)ಗಳಿಗೆ ೪೦ ಎಕರೆ ಭೂಮಿಯನ್ನು ದಾನ ಕೊಟ್ಟಿದ್ದಾರೆ.

**ಹನಗಂಡಿ ಪಾರ್ಶ್ವನಾಥ ಜಿನಾಲಯ**

ದೇಸಾಯಿಗಳು ತೇರದಾಳದಿಂದ ಹನಗಂಡಿಗೆ ತಮ್ಮ ಠಾಣೆಯನ್ನು ಬದಲಾಯಿಸಿಕೊಂಡ ನಂತರ ತಮ್ಮ ವಾಡೆಯಲ್ಲಿಯೇ ಒಂದು ಬಸದಿಯನ್ನು ನಿರ್ಮಾಣಮಾಡಿಕೊಂಡರು. ಈ ಬಸದಿಯ ಮೂಲನಾಯಕ ಪಾರ್ಶ್ವನಾಥ ತೀರ್ಥಂಕರರು. ಸಮವಸರಣ ಮಾದರಿಯ ಬಸದಿಯು ಚಿಕ್ಕ ಮತ್ತು ಅಚ್ಚುಕಟ್ಟಾದ ನಿರ್ಮಾಣವಾಗಿದೆ. ಇಂಡೋ-ಅರೇಬಿಕ್ ಶೈಲಿಯಲ್ಲಿ ಮಾದರಿಗೆ ಹತ್ತಿರವಾಗುವ ಬಸದಿ ಮೇಲ್ಭಾಗಕ್ಕೆ ಹೋಗಲು ಅಟ್ಟಣಿಗೆಗಳಿವೆ. ಬಸದಿಯ ಮುಂದುಗಡೆ ದೀಪಮಾಲೆಯ ಕಂಬವೊಂದಿದೆ. ಈ ಬಸದಿಗೆ ದೇಸಾಯಿಗಳು ೮೦ ಎಕರೆ ಭೂಮಿಯನ್ನು ದಾನ ಮಾಡಿದ್ದಾರೆ. ನಿತ್ಯ ಪೂಜೆ ನಡೆಯಲು ಪಂಡಿತರೊಬ್ಬರನ್ನು ನಿಯಮಿಸಿ ಅವರ ಜೀವನ ನಿರ್ವಹಣೆಗೆ ಭೂಮಿಯನ್ನೂ ಕೊಟ್ಟಿದ್ದಾರೆ.

ಹಳಿಂಗಳಿಯಲ್ಲಿ ನವಬಸದಿ ನಿರ್ಮಾಣ, ಜಿನಬಿಂಬ ಪ್ರತಿಷ್ಠಾಪನೆ ಮತ್ತು ೭೦ ಎಕರೆ ಭೂಮಿ ದಾನ, ತಮದಡ್ಡಿಯ ದಿಗಂಬರೇಶ್ವರ ಬಸದಿ ನಿರ್ಮಾಣ ಮೂರ್ತಿ ಪ್ರತಿಷ್ಠಾಪನೆ, ನಿರ್ವಹಣೆಗೆ ೬೦ ಎಕರೆ ಭೂಮಿಯನ್ನು ದಾನವಾಗಿ ಬಿಟ್ಟಿರುತ್ತಾರೆ. ಅಲ್ಲದೆ ಪೂಜೆ ಮಾಡುವ ಪಂಡಿತರಿಗೂ ಭೂದಾನ ದೇಸಾಯಿಯವರಿಂದ ಸಂದಿದೆ.

**ಜೈನೇತರ ದೇಗುಲಗಳಿಗೆ ದಾನ**

ಹನಗಂಡಿ ದೇಸಾಯಿ ಮನೆತನದವರು ಧರ್ಮದಿಂದ ಜೈನಮತಾವಲಂಬಿಗಳು. ತಮ್ಮ ಧರ್ಮದ ದೇಗುಲಗಳಿಗೆ ದಾನ-ದತ್ತಿಯನ್ನು ಎಷ್ಟು ಬಿಟ್ಟಿದ್ದಾರೆಯೋ ಅದಕ್ಕಿಂತ ಒಂದು ಕೈ

ಮೇಲೆ ಎಂಬಂತೆ ಪರಧರ್ಮದ ದೇಗುಲಗಳಿಗು ದಾನ ನೀಡಿದ್ದಾರೆ. ಪರಧರ್ಮ ಸಹಿಷ್ಣು ಮನೋಭಾವನೆಯನ್ನು ಇಲ್ಲಿ ಕಾಣಬಹುದು.

**ಅಲ್ಲಮಪ್ರಭುಸ್ವಾಮಿ ಮಠ**

ಅಲ್ಲಮಪ್ರಭುಗಳೆಂದೆ ಕರೆಯಲ್ಪಡುವ ಪ್ರಭುಸ್ವಾಮಿ ಮಠವೊಂದು ತೇರದಾಳದಲ್ಲಿದೆ. ಬೃಹತ್ ಪ್ರಮಾಣದ ಭಕ್ತವರ್ಗ ಮಠಕ್ಕಿದೆ. ಅವರಲ್ಲಿ ಹನಗಂಡಿ ದೇಸಾಯಿಗಳೂ ಒಬ್ಬರು. ಇವರ ಮೂಲ ಪುರಷರು ಪ್ರಭುಸ್ವಾಮಿಯವರ ಭಕ್ತನೂ ಹೌದು. ತತ್ಸಂಬಂಧವಾಗಿ ದೇಸಾಯಿಗಳು ಈ ಮಠಕ್ಕೆ ೨೦೦ ಎಕರೆ ಭೂಮಿದಾನ ಮಾಡಿರುತ್ತಾರೆ. ಇಂದಿನ ದಿನಮಾನಗಳಲ್ಲಿಯೂ ಪ್ರಭುಸ್ವಾಮಿಯ ಜಾತ್ರೆ-ಉತ್ಸವಗಳು ಈ ಮನೆತನದ ಮತ್ತು ತೇರದಾಳದ ನಾಡಗೌಡರ ಮುಂದಾಳತ್ವದಲ್ಲಿಯೇ ನಡೆಯುತ್ತವೆ. ಪ್ರಭುಸ್ವಾಮಿಯ ಮೊದಲ ಪೂಜೆಯೂ ಇವರಿಂದಲೇ ನೆರವೇರಲ್ಪಡುತ್ತದೆ. ಹನಗಂಡಿಯ ವಾಡೆಯಲ್ಲಿ ಪ್ರಭುಸ್ವಾಮಿ ದೇಗುಲ ಕಟ್ಟಿಸಿದ್ದು ದೇಸಾಯಿಗಳಿಗೆ ಇದ್ದ ಭಕ್ತಿಯನ್ನು ಪ್ರಕಟಿಸುತ್ತದೆ. ತೇರದಾಳದ ಪ್ರಭುಸ್ವಾಮಿ ಜಾತ್ರೆಗೆ ಕಾಣಿಕೆ-ದೇಣಿಗೆ ಇಂದಿಗೂ ಪ್ರತೀವರ್ಷವೂ ದೇಸಾಯಿಗಳಿಂದ ಸಲ್ಲುತ್ತದೆ.

**ಜಿನಗಿ ಬಾಬಾ ದರ್ಗಾ**

ಹನಗಂಡಿ ದೇಸಾಯಿಗಳ ಮೂಲಪುರುಷ ಬಸವಗೌಡಕಾರಿ ಆದಿಲ್‌ಷಾಹಿಯಿಂದ ವತನದಾರಿಕೆಯನ್ನು ಸಂಪಾದಿಸುವಲ್ಲಿ ಜಿನಗಿ ಬಾಬಾ ಸಹಾಯ ಮಾಡಿದ್ದರು. ಆ ಸಂದರ್ಭಕ್ಕೆ ಬಾಬಾ ದೈವಿಪುರಷರಂತೆಯೇ ಜನಗಳಿಗೆ ಕಾಣುತ್ತಿದ್ದರು. ಇವರೊಬ್ಬ ಪವಾಡ ಪುರುಷರಾಗಿದ್ದರು ಎಂಬುದನ್ನು ಶ್ರೀ ನೀಲೇಶ್ ದೇಸಾಯಿಯವರು[೬] ಹೇಳುತ್ತಾರೆ. ಬಾಬಾ ಮಾಡಿದ ಸಹಾಯಕ್ಕೆ ಅವರಿಗೊಂದು ತೇರದಾಳದಲ್ಲಿ ಮಸೀದಿಯನ್ನು ನಿರ್ಮಿಸಿದ್ದಾರೆ. ಇದಕ್ಕೆ ದರ್ಗಾವೆಂದಲೂ ಕರೆಯುತ್ತಾರೆ. ಈ ಮಸೀದಿಗೆ ೩೦ಎಕರೆ ಭೂಮಿಯ ದೇಸಾಯಿಯವರಿಂದ ಸಂದಿದೆ. ಪ್ರತೀ ವರ್ಷ ನಡೆಯುವ 'ಉರುಸು'ಗೆ ಇವರ ಕಾಣಿಕೆ-ದೇಣಿಗೆ ಸಲ್ಲುತ್ತವೆ.

ಚಾವರಾತ್ ಹಳ್ಳಿಗಳಾದ ಮದಲಮಟ್ಟಿಯಲ್ಲಿ ಹನುಮಂತ ಗುಡಿ ನಿರ್ಮಾಣ, ಪೂಜಾರಿ ನೇಮಕ ಮತ್ತು ದೇಗುಲಕ್ಕೆ ೫೦ ಎಕರೆ ಭೂದಾನ, ಮೂಡಲಗಿಯ ಬ್ರಾಹ್ಮಣ ಮಠಕ್ಕೆ ೫೦ ಎಕರೆ ಭೂದಾನ ಮಾಡಿ ದಿನನಿತ್ಯ ಪೂಜೆ ನಡೆಯುವಂತೆಯೂ, ಪುರೋಹಿತರಿಂದ ಪುರಾಣ ಪ್ರವಚನಗಳು ನಡೆಯುವಂತೆಯೂ ದೇಸಾಯಿಗಳು ನೋಡಿಕೊಳ್ಳುತ್ತಿದ್ದರು.

ಜೈನ, ಬ್ರಾಹ್ಮಣ, ಲಿಂಗಾಯಿತ (ಶೈವ), ಮುಸ್ಲಿಂ ಮುಂತಾದ ಧರ್ಮದ ದೇಗುಲಗಳಿಗೆ ದಾನ-ದತ್ತಿಗಳನ್ನು ಕೊಟ್ಟಿರುವುದು ದೇಸಾಯಿಗಳ ಜಾತ್ಯತೀತ ನಿಲುವನ್ನು ತೋರುತ್ತದೆ. ವತನದಾರ ಒಬ್ಬ ಚಿಕ್ಕ ರಾಜನೇ ಆಗಿದ್ದರಿಂದ ಈ ಗುಣ ಅವನಲ್ಲಿ ಇರಲೇಬೇಕು ಕೂಡಾ.

ಪ್ರಜೆಗಳ ಹಿತಾಸಕ್ತಿಯನ್ನು ಕಾಪಾಡಿ ವಿವಿಧ ಧರ್ಮಗಳನ್ನು ಗೌರವಯುತವಾಗಿ ನೋಡಿಕೊಂಡ ಕೀರ್ತಿ ಹನಗಂಡಿ ದೇಸಾಯಿಗಳಿಗೆ ಸಲ್ಲುತ್ತದೆ.

ಒಂದು ಪ್ರಮುಖ ಆಡಳಿತ ಕೇಂದ್ರವೇ ಎನ್ನಿಸಿಕೊಂಡಿದ್ದ ವಾಡೆಯಲ್ಲಿ ಸಾಕಷ್ಟು ಜನ ಸೇವಕರಿದ್ದರು. ಅವರ ಸೇವೆಗೆ ತಕ್ಕ ಸಂಬಳ ಸಂದಾಯವಾಗುತ್ತಿದ್ದರೂ ದೇಸಾಯಿಗಳು ಅವರಿಗೆ ಹೊಲವನ್ನು ಜೀವನ ನಿರ್ವಹಣೆಗೆಂದೆ ಕೊಟ್ಟಿದ್ದಾರೆ. ಇದರಲ್ಲಿ ವಾಡೆಯ ಪಂಡಿತರು, ಕಾರಖೂನ ಮತ್ತು ಆಯಗಾರರಾದ ತಳವಾರರು, ಶೀಲೆದಾರರು, ಬುಯ್ಯಾರರು, ಪಟ್ಟೇವಾಲರು, ಪಾಗನೀಸರ್‌ರು, ಕುದರಿಸವಾರಿಗಳು, ತೋಫಖಾನೆಗಳೂ, ಪಕಾಲಿ ಜನಾಂಗದವರು, ಪರಿಶಿಷ್ಟ ವರ್ಗದವರಿಗೆ ಅವರವರ ಶ್ರಮ ಪ್ರಾಮಾಣಿಕತೆಗೆ ದೇಸಾಯಿಗಳಿಂದ ಭೂಮಿ ಸಂದಿದೆ.

**ಪಂಡಿತರು**

ಜೈನಧರ್ಮ ಪಂಡಿತರಿಗೆ ಒಂದು ವಿಶಿಷ್ಟ ಸ್ಥಾನವಿದೆ. ಶ್ರಾವಕರಿಗೆ ವಿಶೇಷ ಮಾರ್ಗದರ್ಶನ ಧರ್ಮ ಸಂಬಂಧಿ ವ್ರತಾಚರಣೆಗಳ ತಿಳಿವಳಿಕೆ ಅವುಗಳ ಅನುಷ್ಠಾನ ಇವರದ್ದಾಗಿರುತ್ತದೆ. ಶ್ರಾವಕರ ಕರ್ಮ ಸಿದ್ಧಾಂತಕ್ಕೆ ಇವರು ಬೆಂಬಲ ಮಾರ್ಗದರ್ಶನವನ್ನು ಕೊಡುತ್ತಾರೆ. ಇಂಥವರು ದೇಸಾಯಿ ವಾಡೆಯಲ್ಲಿಯೂ ಇದ್ದರು. ವಾಡೆಯ ಪಂಡಿತರ ಜವಾಬ್ದಾರಿ ವಾಡೆಯ ಜಿನಬಿಂಬಗಳಿಗೆ ನಿತ್ಯ ಸಾಂಗವಾಗಿ ಪೂಜಾ ವಿಧಿ ವಿಧಾನಗಳನ್ನು (ಜಲ, ಗಂಧ, ಪುಷ್ಪ, ದೀಪ, ಧೂಪ) ನೆರವೇರಿಸಿ ಇದೇ ರೀತಿಯ ಪೂಜೆಯನ್ನು ವಾಡೆಯ ಬಸದಿಯಲ್ಲಿಯೂ ನೆರವೇರಿಸಬೇಕಾಗಿತ್ತು. ಅಲ್ಲದೇ ವಾಡೆಯ ಕುಟುಂಬದವರಿಗೆ ಧರ್ಮದ ಬೋಧನೆ, ನೋಂಪಿ ವ್ರತಾಚರಣೆಯ ವಿಧಿ ವಿಧಾನಗಳು, ಅವುಗಳು ಸಾಂಗವಾಗಿ ನೆರವೇರುವಂತೆ ಕಾಳಜಿ ವಹಿಸುವುದಾಗಿತ್ತು. ಪ್ರಾರಂಭದಿಂದಲೂ ವಾಡೆಯ ಪೂಜಾ ವಿಧಿ ವಿಧಾನಗಳನ್ನು, ಶುಭ ಕಾರ್ಯ ದಿನ ನಿಗದಿ, ಮುಂತಾದ ಕಾರ್ಯಗಳನ್ನು ನಿರ್ವಹಿಸಿದ ಪಂಡಿತರ (ಪುರೋಹಿತ) ಕುಟುಂಬಕ್ಕೆ ೧೦ ಎಕರೆ ಭೂಮಿಯನ್ನು ದೇಸಾಯಿಗಳು ದಾನವಾಗಿ ಕೊಟ್ಟಿರುತ್ತಾರೆ.

**ಕಾರಕೂನ**

ವಾಡೆಯ ದುರ್ಗತಿ. ಅವನತಿ, ಪ್ರಗತಿ ಈ ಕಾರಕೂನನ ಮೇಲೆ ಅವಲಂಬಿತವಾಗಿರುತ್ತದೆ. ವಾಡೆಯ ಪ್ರತಿಯೊಂದು ವ್ಯವಹಾರವು ಇವನ ಗಮನಕ್ಕೆ ಬರದೇ ಇರದು. ಕಂದಾಯ ವಸೂಲಿ–ಬಾಕಿ ನಿರ್ವಹಣೆಯು ಇವನದಾಗಿತ್ತು. ಲೆಕ್ಕ–ಪತ್ರಗಳ ಜವಬ್ದಾರಿಯೂ ಇವನದೇ. ಒಂದರ್ಥದಲ್ಲಿ ಇವನು ವಾಡೆಯ ಮಂತ್ರಿ ಇದ್ದಹಾಗೆಯೇ. ವಾಡೆಯ ಪ್ರತಿಯೊಂದು ಚಟುವಟಿಕೆಯೂ ಇವನಿಗೆ ಗೊತ್ತಿರುತ್ತಿತ್ತು. ಸಾಮಾನ್ಯವಾಗಿ ವತನದಾರರ ಹೆದರಿಕೆ ಇರುವುದರಿಂದ ಕಾರಕೂನ ವಾಡೆಯ ಪ್ರಗತಿಯನ್ನೇ ಬಯುಸುತ್ತ, ನಿಷ್ಠನಾಗಿರುತ್ತಿದ್ದ. ಹೀಗೆ

ನಿಷ್ಠವಾಗಿದ್ದ ಕಾರಕೂನ ಕುಟುಂಬಕ್ಕೆ ದೇಸಾಯಿಗಳಿಂದ ೧೦ ಎಕರೆ ಭೂಮಿ ದಾನವಾಗಿ ಸಂದಿದೆ.

**ತಳವಾರ**

ತಳವಾರ ಆಗಿನ ಕಾಲದ ಆರಕ್ಷಕ (ಪೋಲೀಸ್)ನಂತೆ ಕಾರ್ಯನಿರ್ವಹಿಸುತ್ತಿದ್ದ. ಇವನ ಪ್ರಮುಖ ಕೆಲಸ ದೇಸಾಯಿಗಳ ಸಂದೇಶಗಳನ್ನು ಗೌಪ್ಯವಾಗಿ ಅರಸನಿಗೆ, ಇತರೆ ವಾಡೆಯವರಿಗೆ, ಬ್ರಿಟೀಷ್ ಅಧಿಕಾರಿಗಳಿಗೆ ಮುಂತಾದವರಿಗೆ ಮುಟ್ಟಿಸುವುದು. ಪಾವತಿಯಾಗದ ಹಫ್ತಾ (ಕಂದಾಯ) ವಸೂಲಿ ಮಾಡುವುದು. ಸದೃಢ ಕಾಯ ಹೊಂದಿರುತ್ತಿದ್ದ ಇವರಿಗೆ ಜನರು ಸಹಜವಾಗಿಯೇ ಹೆದರುತ್ತಿದ್ದರು. ಇವರ ಸೇವೆಗೆ ಮೆಚ್ಚಿ ಪ್ರತಿ ಕುಟುಂಬಕ್ಕೆ ೧೦ ಎಕರೆಯಂತೆ ೪೦ ಎಕರೆ ಭೂಮಿಯನ್ನು ಕೊಟ್ಟಿದ್ದಾರೆ.

**ಶೀಲೆದಾರರು**

ವಾಡೆಯಲ್ಲಿ ಜರುಗುವ ಮಂಗಳಕಾರ್ಯಗಳಿಗೆ ವಾದ್ಯ ಬಾರಿಸುವ ಕೆಲಸ ಇವರದು. ಪ್ರತಿ ಘಂಟೆಗೂ ನಗಾರಿ ಬಾರಿಸಿ ಸಮಯ ಹೇಳುವ ಜವಬ್ದಾರಿಯೂ ಇವರಿಗಿತ್ತು. ದೇಸಾಯಿಯು ವಾಡೆಯಿಂದ ಹೊರ ಹೋಗುವಾಗ ಒಳಬರುವಾಗ ನಗಾರಿಗಳನ್ನು ಬಾರಿಸುವುದೂ ಇವರ ಕೆಲಸವಾಗಿತ್ತು. ಇವರಿಗೂ ೧೦ ಎಕರೆ ಭೂಮಿ ದಾನವಾಗಿ ಸಂದಿದೆ.

**ಪಟ್ಟೇವಾಲರು**

ವಾಡೆಯ ರಕ್ಷಣೆ ಪಟ್ಟೇವಾಲರದಾಗಿತ್ತು. ವಾಡೆಯ ಸುತ್ತಲೂ ಇರುವ ಹುಡೇಗಳ ಮೇಲೆ ನಿಂತು ವೈರಿಗಳನ್ನು ಗಮನ ಇಡುವುದು. ದ್ವಾರಬಾಗಿಲ ಕಾವಲು, ಸದರಕಟ್ಟೆಯ ಕಾವಲುವನ್ನು ದೇಸಾಯಿ ಗೊತ್ತುಮಾಡಿದ ಉಡುಗೆ-ತೊಡುಗೆಗಳೊಂದಿಗೆ ಎದೆಯ ಮೇಲೆ ಪದಕಗಳನ್ನು ಧರಿಸಿಕೊಂಡು ಗೌರವ ಸೂಚಿಸುವುದು ಇವರ ಕೆಲಸ. ಇವರಿಗೆ ೫೦ ಎಕರೆ ಭೂಮಿ ಸಂದಿದೆ.

**ತೋಫಖಾನೆ**

ವಾಡೆಗೆ ಸಂಬಂಧಿಸಿದ ಗಡಿಯನ್ನು ಕಾಯುವುದು, ತೋಫುಗಳ ನಿರ್ವಹಣೆ, ಶತ್ರುಗಳು ಎದುರಾದಾಗ ಅವುಗಳ ಬಳಕೆ ಇವರದಾಗಿತ್ತು. ತತ್ಸಂಬಂಧವಾಗಿ ಇವರಿಗೆ ೨೦ ಎಕರೆ ಭೂಮಿ ದೇಸಾಯಿಗಳಿಂದ ಲಭಿಸಿದೆ.

## ಹರಿಜನ (ಮಾದರ ಜನಾಂಗ)

ವಾಡೆಗೆ ಸಂಬಂಧಪಟ್ಟ ದನದ ಮನೆ (ಕೊಟ್ಟಿಗೆ) ಶುಚಿಗೊಳಿಸುವುದು, ದನಕರಗಳನ್ನು ಶುಚಿಗೊಳಿಸುವುದು ಇವರ ಕಾರ್ಯವಾಗಿತ್ತು. ಸುಗ್ಗಿಯ ಸಮಯದಲ್ಲಿ ದವಸ-ಧಾನ್ಯಗಳು ಇವರಿಗೆ ಲಭಿಸುತ್ತಿದ್ದವು. ೧೦ ಎಕರೆ ಭೂಮಿಯು ದೇಸಾಯಿವರಿಂದ ಇವರಿಗೆ ದೊರೆತಿದೆ.

ಇವರಷ್ಟೇ ಅಲ್ಲದೆ ಮೇಣಿ (ಮೇನೆ) ಹೊರುವ ಬುಯ್ಯಾರರಿಗೆ ೨೦ ಎಕರೆ, ಕುದುರೆ ಪಾಲಕರಾದ ಪಾಗನೀಸ್‌ರಿಗೆ ೨೦ ಎಕರೆ, ಆದಿಲ್‌ಷಾಹಿ ಗುಪ್ತಚರ ಕಾರ್ಯನಿರ್ವಹಿಸುವ ಪಕಾಲಿ ಜನಾಂಗ (ಮುಸ್ಲಿಂ ಧರ್ಮದವರು)ದವರಿಗೆ ೫ ಎಕರೆ ಭೂಮಿಯನ್ನು ದೇಸಾಯಿಗಳು ದಾನವಾಗಿ ಕೊಟ್ಟಿರುತ್ತಾರೆ. ಇವಷ್ಟೇ ಅಲ್ಲದೇ ಇನ್ನೂ ಅನೇಕ ದೇವಾಲಯಗಳಿಗೆ ವ್ಯಕ್ತಿಗಳಿಗೆ ದಾನ-ದತ್ತಿಗಳನ್ನು ಕೊಟ್ಟಾರ್‌ರೀ.ಎಂದು ವಾಡೆಯ ದೇಸಾಯಿನಿ ಶ್ರೀ ಪ್ರಸನ್ನಕುಮಾರ ದೇಸಾಯಿಯವರು ಹೇಳುತ್ತಾರೆ.[೬೩] ಈಗಲೂ ಚತುರ್ವಿಧ ದಾನಗಳು ವಾಡೆಯಲ್ಲಿ ಸಾಂಗವಾಗಿ ನಡೆಯುತ್ತವೆ ಎಂಬ ಮಾಹಿತಿಯನ್ನೂ ಇವರೇ ನೀಡುತ್ತಾರೆ. ಒಟ್ಟಾರೆಯಾಗಿ ದೇಸಾಯಿಗಳು ಕೊಟ್ಟ ಭೂಮಿ ದಾನದ ವಿವರವನ್ನು ಈ ರೀತಿಯಾಗಿ ನೋಡಬಹುದು.

ತೇರದಾಳ ಗೊಂಕ ಜಿನಾಲಯಕ್ಕೆ — ೧೫೦ ಎಕರೆ ಭೂಮಿ
ಹನಗಂಡಿ ಪಾರ್ಶ್ವನಾಥ ಜಿನಾಲಯಕ್ಕೆ — ೫೦ ಎಕರೆ ಭೂಮಿ
ಹಳಿಂಗಳಿ ಬಸದಿಗೆ — ೭೦ ಎಕರೆ ಭೂಮಿ
ತಮದಡ್ಡಿ ದಿಗಂಬರೇಶ್ವರ ಬಸದಿಗೆ — ೬೦ ಎಕರೆ ಭೂಮಿ
ಅಲ್ಲಮಪ್ರಭುಸ್ವಾಮಿ ಮಠಕ್ಕೆ (ತೇರದಾಳ) — ೨೦೦ ಎಕರೆ ಭೂಮಿ
ಜಿನಗಿ ಬಾಬಾ ದರ್ಗಾಕ್ಕೆ (ತೇರದಾಳ) — ೩೦ ಎಕರೆ ಭೂಮಿ
ಮದಲಮಟ್ಟಿ ಹನುಮಂತನ ಗುಡಿಗೆ — ೫೦ ಎಕರೆ ಭೂಮಿ
ಮೂಡಲಗಿ ಬ್ರಾಹ್ಮಣ ಮಠಕ್ಕೆ — ೫೦ ಎಕರೆ ಭೂಮಿ
ವಾಡೆಯ ಪಂಡಿತರಿಗೆ — ೧೦ ಎಕರೆ ಭೂಮಿ
ಕಾರಕೂನರಿಗೆ — ೧೦ ಎಕರೆ ಭೂಮಿ
ತಳವಾರರಿಗೆ (೪ x ೧೦) — ೪೦ ಎಕರೆ ಭೂಮಿ
ಶೀಲೇದಾರರಿಗೆ — ೧೦ ಎಕರೆ ಭೂಮಿ
ಪಟ್ಟೇವಾಲರಿಗೆ — ೫೦ ಎಕರೆ ಭೂಮಿ
ತೋಫಖಾನೆಯವರಿಗೆ — ೨೦ ಎಕರೆ ಭೂಮಿ
ಹರಿಜನರಿಗೆ — ೧೦ ಎಕರೆ ಭೂಮಿ
ಬುಯ್ಯಾರರಿಗೆ — ೨೦ ಎಕರೆ ಭೂಮಿ

| | |
|---|---|
| ಪಾಗನೀಸ್‌ರಿಗೆ | ೨೦ ಎಕರೆ ಭೂಮಿ |
| ಫಕಾಲಿಯವರಿಗೆ | ೦೫ ಎಕರೆ ಭೂಮಿ |
| | ಒಟ್ಟು ೮೫೫ ಎಕರೆ ಭೂಮಿ |

ಒಟ್ಟು ೮೫೫ ಎಕರೆ ಭೂಮಿಯನ್ನು ವಾಡೆಯಿಂದ ದಾನವಾಗಿ ಕೊಡಲಾಗಿದೆ ಎಂದು ಶ್ರೀಕೃಷ್ಣಗೌಡ ಅಲ್ಲಪ್ಪ ದೇಸಾಯಿಯವರು ಹೇಳುತ್ತಾರೆ.[೬೪]

**ಮುಳಗುಂದ ದೇಶಪಾಂಡೆ**

೧೮ನೇ ಶತಮಾನದಲ್ಲಿ ಉಂಟಾದ ಭೀಕರ ಮಾರಣಾಂತಿಕ ಖಾಯಿಲೆಯಿಂದ ಸ್ಥಳಾಂತರಗೊಂಡ ಊರು ಮುಳಗುಂದ. ಇಲ್ಲಿರುವ ಬಸದಿಗಳ ಸಂಕೀರ್ಣಗಳ ಗುಡ್ಡದ ಹಿಂದೆ ನಮ್ಮ ವಾಡೆ ಇತ್ತು ಎಂದು ಶ್ರೀ ನಾಗರಾಜ ಆರ್ ದೇಶಪಾಂಡೆಯವರು[೬೫] ಹೇಳುತ್ತಾರೆ. ಆದ್ದರಿಂದ ಹಿಂದಿನ ತಲೆಮಾರಿನ ಬಗ್ಗೆ ಹೆಚ್ಚಿನ ವಿವರಗಳು ಈ ವಾಡೆಗೆ ಸಂಬಂಧಿಸಿದಂತೆ ತಿಳಿಯುವುದಿಲ್ಲ. ಈ ವಾಡೆಯ ದೇಶಕುಲಕರ್ಣಿಗಳು ಸಾಕಷ್ಟು ಅಲಿಖಿತ ದಾನವನ್ನು ಕೊಟ್ಟಿದ್ದಾರೆ.

ಮುಳಗುಂದದ ಸರ್ಕಾರಿ ಆಸ್ಪತ್ರೆಗೆ ಕ್ರಿ.ಶ. ೧೯೪೦ರಲ್ಲಿ ಮೂರು ಎಕರೆ ಜಾಗೆಯನ್ನು ನಾಗಪಯ್ಯ ರಂಗಪಯ್ಯ ಕೊಟ್ಟರು. ಜನರ ಆರೋಗ್ಯದ ಬಗ್ಗೆ ಇವರು ಹೆಚ್ಚಿನ ಆಸ್ಥೆಯುಳ್ಳವರಾಗಿದ್ದರು. ಮುಂದಿನ ದಿನಮಾನಗಳಲ್ಲಿ ವಾಡೆಯವರು ಇದೇ ಊರಿನ ಸರ್ಕಾರಿ ಪದವಿ ಪೂರ್ವ ಕಾಲೇಜಿಗೆ ಏಳು ಎಕರೆ ಜಾಗೆ, ಚಾವರಾತ್ ಹಳ್ಳಿಯಾದ ಯಳವಟ್ಟಿ ಶಾಲೆಗೆ ಏಳು ಎಕರೆ ಜಾಗೆ ಕೊಟ್ಟಿದ್ದು ದೇಶಪಾಂಡೆ ಮನೆತನದವರಿಗಿದ್ದ ಶೈಕ್ಷಣಿಕ ಕಳಕಳಿಯನ್ನು ತೋರಿಸುತ್ತದೆ.

ತಳವಾರಿಕೆ ಮತ್ತು ಅಂಗರಕ್ಷಕನಾಗಿ ಕೆಲಸ ನಿರ್ವಹಿಸುತ್ತಿದ್ದ ಅಬ್ದುಲ್ ರಹೀಮ್‌ಸಾಬ್ ಶೇಖ್‌ಗೆ ಮೂವತ್ತು ಎಕರೆ ವಾಹನ ಚಾಲಕ ನಾಯಕ ಎಂಬುವವರಿಗೆ ಆರು ಎಕರೆ, ಕುರುಬರ ಬಸಪ್ಪ ಭಗವಂತಿಯವರಿಗೆ ಹನ್ನೆರಡು ಎಕರೆ ಭೂಮಿ ಮತ್ತು ವಾಡೆಯ ಆವರಣದಲ್ಲಿ ಒಂದು ಮನೆಯನ್ನು ಕಟ್ಟಿಕೊಟ್ಟಿದ್ದಾರೆ. ಯಳವತ್ತಿ ಮುಳಗುಂದ ಕುಬಿಹಾಳ ಬಂಡಿವಾಡ ಮುಂತಾದ ಊರುಗಳ ದೇವಾಲಯಗಳಿಗೆ ವ್ಯಕ್ತಿಗಳಿಗೆ ಭೂಮಿ ದಾನವನ್ನು ಮಾಡಿದ್ದಾರೆ ಎಂದ ಸದ್ಯದ ಹಿರೀತಲೆ ರಂಗಪಯ್ಯ ನಾಗಪಯ್ಯ ದೇಶಪಾಂಡೆಯವರು[೬೬] ಹೇಳುತ್ತಾರೆ.

ಈ ಮನೆತನದ ಹಿಂದಿನ ತಲೆಮಾರಿನವರು ಧಾರ್ಮಿಕ ಶ್ರದ್ಧಾ ಕೈಕುಂರ್ಯ್ಯಗಳಲ್ಲಿ ಪಾಲ್ಗೊಂಡು ಬಸದಿಯೊಂದನ್ನು ಜೀರ್ಣೋದ್ಧಾರ ಪಡಿಸಿದ ಮಾಹಿತಿಯನ್ನು ಶ್ರೀ ನಾಗರಾಜ ರಂಗಪಯ್ಯ ದೇಶಪಾಂಡೆಯವರು ಕೊಟ್ಟರು. "ಈ ಗುಡ್ಡದ ಮೇಲಿರುವ ಚಂದ್ರನಾಥ ಬಸದಿಯು ಮುಸಲ್ಮಾನರ ದಾಳಿಗೆ ಸಿಲುಕಿ ಹಾಳಾಗಿ ಹೋದ ಸಂದರ್ಭದಲ್ಲಿ ನಮ್ಮ ಮನೆತನದ ಹಿರಿಯರು ಆ ಬಸದಿಯನ್ನು ಜೀರ್ಣೋದ್ಧಾರಗೊಳಿಸಿದ್ದಾರೆ ಮತ್ತು ಮೂರ್ತಿಯನ್ನೂ ಪ್ರತಿಷ್ಠಾಪಿಸಿದ್ದಾರೆ. ಆಗ ಮತ್ತೆ ಆ ಮೂರ್ತಿಯು ಭಗ್ನಗೊಂಡಿದ್ದು ನಾವೇ ಹೊಸ ಮೂರ್ತಿಯೊಂದನ್ನು ಮಾಡಿಸಿ

ಪ್ರತಿಷ್ಠಾಪಿಸಬೇಕೆಂದಿದ್ದೇವೆ" ಎಂದು ಹೇಳಿದರು. ಅಂತೆಯೇ ಅವರು ಹೊಸದಾಗಿ ನಿರ್ಮಿಸಿದ ಚಂದ್ರನಾಥ ಬಿಂಬವನ್ನು ತೋರಿಸಿದರು. ಮೂಲ ಚಂದ್ರನಾಥ ತೀರ್ಥಂಕರರ ತದ್ರೂಪವಾಗಿ ಹೊಸ ಚಂದ್ರನಾಥ ಬಿಂಬ ನಿರ್ಮಾಣಗೊಂಡಿದೆ. ಮೂರ್ತಿ ನಿರ್ಮಾಣಕ್ಕೆ ಸಾಕಷ್ಟು ವೆಚ್ಚವಾಗಿದ್ದು, ಬಸದಿಯ ಜೀರ್ಣೋದ್ಧಾರಕ್ಕೆ ಈಗಾಗಲೇ ಎಂಟು–ಹತ್ತು ಲಕ್ಷ ರೂಪಾಯಿಗಳನ್ನು ಖರ್ಚು ಮಾಡಿದ್ದಾರೆ.

ನಾಗರಾಜ ದೇಶಪಾಂಡೆಯವರು ತಮ್ಮ ಪೂರ್ವಿಕರು ಚಂದ್ರನಾಥ ಬಸದಿಯ ಮೂರ್ತಿ ಪ್ರತಿಷ್ಠಾಪನೆ ಮಾಡಿರುವ ಕುರಿತಾದ ಶಾಸನವನ್ನು ಚಂದ್ರನಾಥ ಬಸದಿಯಲ್ಲಿರುವುದನ್ನು ತೋರಿಸಿ ಖಚಿತಗೊಳಿಸಿದರು.

೧. ಶ್ರೀಮತ್ಫರಮರಗಂಭೀರ ಸ್ಯಾದ್ಯಾದ (ದಾ)ಮೋಘಲಾಂಛನಂ ಜೀಯಾ ತ್ರೈಲೋಕ್ಯನಾ
೨. ಥಸ್ಯ ಶಾಸನಂ ಜಿನಶಾಸನಂ ॥ ವೃ ॥ ಶ್ರೀಮನ್ಮುಕ್ತಿ ಮುಖಾಬ್ಜವರ್ಧನ
೩. ರವಿ । ದುರ್ಮ್ಮಾರ್ಗಕುಮಿದಾರವಿ । ದೋಷಾಷ್ಟ ದಶಪಂಕ ಸೋಶಣರವಿ । ಪಾಪಾಂ
೪. ಧಕಾರೋ ರವಿ ॥ ಸದ್ಧರ್ಮ್ಮಾಂಬೆಣೆವಕ್ಕಿ ರಾಜಿಪ ರವಿ । ಸರ್ವ್ವಸ್ಯನೇತ್ರಾ ರವಿ । ಶ
೫. ತತಂ ಭವ್ಯರ ರಕಿಸಲ್ಕೆ ಕೃಪೆಯಿ । ಶ್ರೀ ಯಾದಿನಾಥೋ ರವಿ ॥ ಶ್ರೀ ॥
೬. ದುರುಳಮತಿ ತುರುಕರು ಬಂದರುಹನ ಆಲಯವ ಹೊಕ್ಕು ಕೆಡಿಸಲ್ಮತ್ತಾ । ದೊ
೭. ರೆ ನಾಗಭೂಪನರಸಿಯು । ನಿರುತದಿ ನೆಗಳಿದಳು ಪಂಚಕಲ್ಯಾಣವನಂ ॥ ವ
೮. ಸ್ವಸ್ತಿ ॥ ಶ್ರೀ ಸಾಲಿವಾಹನ ಸೆಕೆ ೧೫೯೭ ರಾಕ್ಷಸನಾಮ ಸಂವಚ್ಛರದೆ ಭಾದ್ರ
೯. ಪದಮಾಷ(ಸ) ಬಹುಳ ಪಂಚಮಿ ಅರ್ಕ್ರವಾರದಲ್ಲು ॥ ಶ್ರೀ ಮತು [ಮುಳಗುಂ]
೧೦. ದದ . . . ಕುಲಕರಣಿ [ನಾಗಭೂ]ಪನ ಮನೋವಲ್ಲಭೆ ಬನದಾಂಭಿ[ಬಿ]
೧೧. ಕೆ ಸೀಲಗುಣಸಂಪನೆ । ಶ್ರೀ ಆದಿಪರಮೇಶ್ವರಂಗೆ . . . ಪ್ರತಿಷ್ಟೆಯಂ ಮಾ
೧೨. ಮಾಡಿಸಿ ಮುಗಿಯಲೊಡಂ ॥ ಕ . . . [ಸಾ]ಗರವರ್ನಿಯ ॥ ಶ್ರೀ ಸ
೧೩. ಮನೆಂದಿನಿಪ ಚಲ್ಲ ಬನದಾಂಬಿಕೆಗಂ । ಶ್ರೀ ಸುಕುವಡೆವಸು ನೋಂಪಿಯ ಶ್ರೀ
೧೪. ಕರದಿಂದಿತ್ತಡಾಕಿ ನೋಂತ್ತಳ್ ಸುಖದಿ ॥ . . . ಸಾಗರವರ್ನ್ನಿಯು ।
೧೫. ಧರೆಯಲು ಪುಷ್ಪಾಂಜಲಿಯ ನೋಂಪಿಯ ಮುದದಿಂ । ತರುಣೆ ಹರಿಣ
೧೬. ಸುಲೋಚನೆ । ಗುರುಕುಚ ಮರಿದುಂಬೆಗುರುಳ ನೋಂತಸ್ಫುಖದಿಂ
೧೭. ಲಕ್ಷದೀಪ ರಥ ಉತ್ಸಹವ ಮಾಡಿಸಿದರು[೬೭]

ಪ್ರಾರಂಭದಲ್ಲಿ ಜಿನಸ್ತುತಿ ತದನಂತರ ರವಿ (ಸೂರ್ಯ)ಯ ವರ್ಣನೆಯನ್ನು ಕವಿಸುಂದರವಾಗಿ ವರ್ಣಿಸಿದ್ದಾನೆ. ಲೋಕದ ಬೆಳಕು, ಸರ್ವಪ್ರಜೆಗಳ ಕಣ್ಣು ಪಾಪ ನಿವಾರಕ ಎಂದೆಲ್ಲಾ ವರ್ಣಿಸಿ ಆದಿನಾಥನೇ ರವಿ ಎಂದು ಕವಿ ಅನ್ವರ್ಥಗೊಳಿಸಿದ್ದಾನೆ. ತದನಂತರ ಮುಸ್ಲಿಂರು ಜಿನಾಲಯವನ್ನು ಹಾಳುಮಾಡಿದ ವಿವರವಿದೆ. ಹೀಗೆ 'ತುರುಕರು' ಹಾಳುಮಾಡಿದ

ಜಿನಾಲಯವನ್ನು ಮುಳುಗುಂದದ ನಾಡ (ದೇಶ) ಕುಲಕರಣಿಯಾದ ನಾಗಭೂಪನ ಪತ್ನಿ ಬನದಾಂಬಿಕೆಯು ಕ್ರಿ.ಶ. ೧೬೭೫ ಆಗಸ್ಟ ೨೯ ಭಾನುವಾರ ಪಂಚಕಲ್ಯಾಣವನ್ನು ಮಾಡಿಸಿ ತೀರ್ಥಂಕರರನ್ನು ಪ್ರತಿಷ್ಠಾಪನೆ ಮಾಡಿಸಿದಳು. ಪಂಚಕಲ್ಯಾಣದ ಖರ್ಚು ವೆಚ್ಚಗಳನ್ನು ಈ ಹಿಂದೇ ಹೇಳಲಾಗಿದೆ. ಅಲ್ಲದೇ ಬನದಾಂಬಿಕೆಯು ಬಸದಿಯನ್ನು ಜೀರ್ಣೋದ್ಧಾರವನ್ನು ಮಾಡಿಸಿದಂತೆ ಕಾಣುತ್ತದೆ. ಏಕೆಂದರೆ ತುರುಕರ ದಾಳಿಯ ಸಂದರ್ಭದಲ್ಲಿ 'ಅರುಹನ ಆಲಯವ ಹೊಕ್ಕು ಕೆಡಿಸಲ್ಮತ್ತಾ' ಎಂಬಲ್ಲಿ ಅವರು ಜಿನಾಲಯವನ್ನು ಕೆಡಿಸಿದ್ದರು. ಹೀಗೆ ಶಿಥಿಲಗೊಂಡ ಬಸದಿಯನ್ನು ಜೀರ್ಣೋದ್ಧಾರಗೊಳಿಸಿ ನವಬಿಂಬದ ಪ್ರತಿಷ್ಠಾಪನೆ, ಪುಷ್ಪಾಂಜಲಿಯ ನೋಂಪಿ ಜೊತೆಗೆ ಲಕ್ಷದೀಪ ರಥೋತ್ಸವ ನಾಡಕರ್ಣಿ ನಾಗಭೂಪನ ಅರಸಿ ಬನದಾಂಬಿಕೆಯವರಿಂದ ನೆರವೇರಲ್ಪಟ್ಟಿತು.

**ದರೂರ ನಾಯಕ ವಾಡೆ**

ಹನಗಂಡಿ ವಾಡೆಯ ವಂಶಸ್ಥರಾದ ಇವರೂ ಸಹ ಧರ್ಮಾನುರಾಗಿಗಳು. ದೇವಾಲಯ, ಬಸದಿ, ವಾಡೆಗೆ ಸೇವೆಸಲ್ಲಿಸಿದವರಿಗೆ ಧನ-ದಾನ್ಯ-ಭೂಮಿಯನ್ನು ದಾನಮಾಡುತ್ತಾ ಬಂದಿದ್ದಾರೆ. ಪ್ರತೀ ಸಲ ಸುಗ್ಗಿ ಬಂದಾಗ ವಾಡೆಯ ಆಯಗಾರಿಕೆ ಮಾಡುವವರಿಗೆ ಯಥೇಚ್ಛವಾಗಿ ದಾನ್ಯ-ಧವಸಾದಿಗಳನ್ನು ಕೊಡುತ್ತಿದ್ದರು. ವರ್ಷಪೂರ್ತಿ ಒಂದಲ್ಲಾ ಒಂದು ವಾಡೆಯ ಕೆಲಸದಲ್ಲಿ ತೊಡಗಿದ ಕಂಬಾರರು, ಕುಂಬಾರರು, ಬಡಿಗರು, ಚೌರದವರು, ಮಡಿವಾಳರು, ತಳವಾರರು, ಹರಿಜನರು, ಪಂಡಿತರು, ಬಳೆಗಾರರು, ನಾವಲಿಗರು (ಕ್ಷೌರಿಕರು) ಮುಂತಾದವರಿಗೆ ಸುಗ್ಗಿ ಬಂತೆಂದರೆ ಹಬ್ಬವೇ ಸರಿ. ನಾಯಕರು ಸುಗ್ಗಿಯ ಸಂದರ್ಭದಲ್ಲಿ ಯಥೇಚ್ಛವಾಗಿಯೇ ದಾನ-ಧರ್ಮಾದಿಗಳನ್ನು ಕೈಗೊಳ್ಳುತ್ತಿದ್ದರು.

ಹನಗಂಡಿಯಿಂದ ಬಂದ ದರೂರು ವಾಡೆಯ ಮೂಲ ವಾಡೆಯ ನಾಯಕರು ದರೂರಿನಲ್ಲಿ ಒಂದು ಹೊಸ ವಾಡೆಯನ್ನು ಕಟ್ಟಿದರು. ಈ ವಾಡೆಯನ್ನು ಕಟ್ಟಲು ಸಹಾಯವಾದ ಕೆಲಸಗಾರರಿಗೆ ಸಂಬಳದ ಜೊತೆಗೆ ಭೂಮಿಯು ಇವರಿಗೆ ಲಭಿಸಿದೆ. ಎಂದು ಸದ್ಯದ ವಾಡೆಯ ಸದಸ್ಯ ಶ್ರೀರಾಹುಲ ನಾಯಕ[೬೮] ಅವರು ಹೇಳುತ್ತಾರೆ. ವಾಡೆಯ ಕಟ್ಟಿಗೆ ಕುಸರಿ ಕೆಲಸ ಮಾಡಿದ ಬಡಿಗರಿಗೆ ೧೮ ಎಕರೆ, ಗೌಂಡಿ (ತರಗಾರರು)ಗಳಿಗೆ ೦೬ ಎಕರೆ, ಕಂಬಾರರಿಗೆ ೦೮ ಎಕರೆ ಭೂಮಿಯನ್ನು ದಾನರೂಪದಲ್ಲಿ ಕೊಡಲಾಗಿದೆ. ಇದಷ್ಟೇ ಅಲ್ಲದೇ ವಾಡೆಯ ಸಕಲ ಧರ್ಮಾಚರಣೆಗಳನ್ನು ಸಾಂಗವಾಗಿ ನಡೆಯುವಂತೆ ನೋಡಿಕೊಂಡ ಪಂಡಿತರಿಗೆ (ಅರ್ಚಕ) ೦೬ ಎಕರೆ, ದನಕರಾದಿಗಳನ್ನು ಶುಚಿಗೊಳಿಸಿ ಕೊಟ್ಟಿಗೆಯನ್ನು ಅಂದಗೊಳಿಸುತ್ತಿದ್ದ ಹರಿಜನರಿಗೆ ೦೬ ಎಕರೆ, ಕುಂಬಾರರಿಗೆ ೦೮ ಎಕರೆ ಭೂಮಿಯನ್ನು ಕೊಟ್ಟಿದ್ದಾರೆ.

ಕ್ರಿ.ಶ. ೧೯೦೦ರಲ್ಲಿ ಊರಲ್ಲಿ ಒಂದು ಹೊಸ ಬಸದಿಯನ್ನು ನಿರ್ಮಿಸಿದ್ದಾರೆ. ಇದಕ್ಕೆ ಉಂಬಳಿಯಾಗಿ ಭೂಮಿಯಸ್ನು ಹಾಕಿಕೊಟ್ಟಿದ್ದಾರೆ. ಊರಿನ ಶಾಲೆಗೆ, ಹನುಮಂತ ದೇವಾಲಯಕ್ಕೆ (ಇವರೇ ಕಟ್ಟಿಸಿದ್ದು), ಅವ್ವನಿಂಗವ್ವ ಎಂದು ಕರೆಯಲ್ಪಡುವ ಗ್ರಾಮದೇವತೆ ದೇವಾಲಯ

ನಿರ್ಮಾಣ ಸಂದರ್ಭದಲ್ಲಿ (೧೫ ಲಕ್ಷಗಳಷ್ಟು) ಹಣದಾನ ಮಾಡಿದ್ದಾರೆ. ಇಷ್ಟೇ ಅಲ್ಲದೇ ನೋಂಪಿಯ ವ್ರತಾಚರಣೆಗಳಲ್ಲಿ ಪ್ರಜೆಗಳಿಗೆ ಯಥೇಚ್ಛವಾಗಿ ಧವಸ-ಹಣವನ್ನು ಕೊಡುತ್ತಿದ್ದರು. ಈಗಲೂ ಕರ್ನಾಟಕದ ಮತ್ತು ಮಹಾರಾಷ್ಟ್ರದ ನಿರ್ಮಾಣವಾಗುವ ಕೆಲ ಬಸದಿಗಳಿಗೆ ಹಣ ರೂಪದ ದಾನವನ್ನು ಸಲ್ಲಿಸುತ್ತಾ ಬಂದಿದ್ದೇವೆ ಎಂದು ಶ್ರೀ ರಾಹುಲನಾಯಕ ಅವರು ಹೇಳುತ್ತಾರೆ.

**ತೇರದಾಳ ನಾಡಗೌಡ ವಾಡೆ**

ತೇರದಾಳ ಪ್ರಾಚೀನ ಐತಿಹಾಸಿಕ ಸ್ಥಳ. ಕರ್ನಾಟಕದ ಪ್ರಮುಖ ಜೈನಕೇಂದ್ರಗಳಲ್ಲಿ ಒಂದು. ಇಲ್ಲಿ ಇತಿಹಾಸ ಪ್ರಸಿದ್ಧ ಗೊಂಕಜಿನಾಲಯವೇ ಈ ಪ್ರಸಿದ್ಧತೆಗೆ ಕಾರಣ ಗೊಂಕರಸನ ವಂಶಸ್ಥರು ಬಾಳಿದ ಊರು ತೇರದಾಳ. ನಾಡಗೌಡರು ಸುಮಾರು ೩೦೦ ವರ್ಷಗಳ ಕಾಲ ಈ ಊರಿನ ನಾಡಗೌಡಿಕೆಯನ್ನು ಮಾಡಿದ್ದಾರೆ. ಹಾಗೆ ನೋಡಿದರೆ ಈ ಹಿಂದೆ ಉಲ್ಲೇಖಿಸಿರುವಂತೆ ಹನಗಂಡಿ ದೇಸಾಯಿಗಳು ತೇರದಾಳದ ನಾಡಗೌಡರ ಕುಟುಂಬಗಳು ಮೂಲದಲ್ಲಿ ಒಂದೇ ಆಗಿದ್ದು ಇವರ ಮಧ್ಯೆ ದತ್ತು ಪುತ್ರರ ಕೊಡುಕೊಳ್ಳಿಕೆಗಳಾಗಿವೆ. ಕಾರಿಬಸವಗೌಡನ ಕಾಲದಲ್ಲಿಯೇ ಇಬ್ಭಾಗವಾದ ಮನೆತನ ೩೩ ಹಳ್ಳಿಗಳೊಂದಿಗೆ ನಾಡಗೌಡ ವಂಶವು, ೩೩ ಹಳ್ಳಿಗಳೊಂದಿಗೆ ದೇಸಾಯಿ ಮನೆತನವು ತೇರದಾಳದಲ್ಲಿಯೇ ಆಳ್ವಿಕೆ ವತನದಾರಿಕೆ ನಡೆಸಿದುವು.

ಈ ಊರಿನ ಗೊಂಕದೇವರಸ ಹಾಕಿಕೊಟ್ಟ 'ದಾನಗುಣ'ವೂ ಈ ಎರಡೂ ಮನೆತನಗಳ ವತನದಾರರಲ್ಲಿ ಕಾಣಬಹುದು. ಹನಗಂಡಿ ದೇಸಾಯಿಗಳ ದಾನಗುಣವನ್ನು ಈಗಾಗಲೇ ನೋಡಿದ್ದಾಗಿದೆ. ಇವರಷ್ಟೇ ದಾನಗುಣ ಸ್ವಭಾವ ಹೊಂದಿದವರು ತೇರದಾಳದ ನಾಡಗೌಡರು. ಸದ್ಯದ ಶ್ರೀಮತಿ ಜಯಶ್ರೀ ಅಮ್ಮನವರು[೬೭] ಹೇಳುವ ಪ್ರಕಾರ ದಾನಕೊಟ್ಟದ್ದಕ್ಕೆ ದಾಖಲೆಗಳಿಲ್ಲ ಕೊಟ್ಟಿದ್ದು ನೆನಪು ಇದೆ ಎನ್ನುತ್ತ ನಾಡಗೌಡರು ಕುಂಬಾರರಿಗೆ, ತಳವಾರರಿಗೆ, ಐನಾರರಿಗೆ, ಸಿಂಪಿಗರಿಗೆ, ಮಡಿವಾಳರಿಗೆ, ಹರಿಜನರಿಗೆ ಮುಂತಾದ ಆಯಗಾರರಿಗೆ, ಸಿಪಾಯಿಗಳಿಗೆ, ಕೊಂಬು ಊದುವವರಿಗೆ, ಅಡುಗೆ ಮಾಡುವವರಿಗೆ, ಕಾರಕೂನರಿಗೆ ಬಡಿವ್ಯಾ [(ಮೇಣಿ (ಮೇನೆ) ಹೊರುವವರಿಗೆ)]ಗಳಿಗೆ, ಪಲ್ಲಕ್ಕಿ ಹೊರುವವರಿಗೆ ಮತ್ತು ಬೆಂಕಿ ಹೊಲದವರಿಗೆ (ಸ್ಮಶಾನ ನೋಡಿಕೊಳ್ಳುವವರಿಗೆ) ಸಾಕಷ್ಟು ಭೂಮಿಯನ್ನು ಕೊಟ್ಟಿದ್ದಾಗಿ ಹೇಳಿದರು.

ವಾಡೆಯ ಮೂಲ ಪುರುಷ ವತನದಾರಿಕೆ ಸಂಪಾದಿಸುವಲ್ಲಿ ನೆರವಾದ ಜಿನಗಿ ಅಬಾಖಾನ ದರ್ಗಾಕ್ಕೆ ೧೦ ಎಕರೆ ಭೂಮಿ ಮತ್ತು ದತ್ತಾತ್ರೇಯ ಗುಡಿಗೆ ೧೦ ಎಕರೆ ಭೂಮಿ ಇವರಿಂದ ದಾನದ ರೂಪದಲ್ಲಿ ಅರ್ಪಿತವಾಗಿದೆ. ಇವಷ್ಟೇ ಅಲ್ಲದೆ ಬಸದಿಗಳಿಗೆ, ದೇವಾಲಯಗಳಿಗೆ ಚಾವರಾತ್ ಹಳ್ಳಿಗಳ ದೇವಾಲಯ ನಿರ್ಮಾಣ ಕಾರ್ಯದಲ್ಲಿ ಧನ-ಭೂಮಿ ದಾನಗಳು ಅಲಿಖಿತವಾಗಿ ಸಂದಿವೆ ಎಂದು ಶ್ರೀಮತಿ ಜಯಶ್ರೀ ನಾಡಗೌಡತಿಯವರು ಹೇಳುತ್ತಾರೆ. ಈ ಮನೆತನದವರು ಕೊಟ್ಟ ಭೂದಾನದ ಒಟ್ಟಾರೆ ಮಾಹಿತಿಯನ್ನು ಈ ರೀತಿಯಾಗಿ ಪಟ್ಟಿ ಮಾಡಬಹುದು.

| ಕ್ರ.ಸಂ. | ದಾನ ತೆಗೆದುಕೊಂಡವರು | ದಾನದ ಪ್ರಮಾಣ |
|---|---|---|
| ೧ | ಕುಂಬಾರ | ೦೪ ಎಕರೆ ಭೂಮಿ |
| ೨ | ತಳವಾರ | ೦೪ ಎಕರೆ ಭೂಮಿ |
| ೩ | ಐನಾರ | ೧೨ ಎಕರೆ ಭೂಮಿ |
| ೪ | ಸಿಂಪಿಗ | ೦೪ ಎಕರೆ ಭೂಮಿ |
| ೫ | ಮಡಿವಾಳ | ೦೪ ಎಕರೆ ಭೂಮಿ |
| ೬ | ಹರಿಜನ | ೦೪ ಎಕರೆ ಭೂಮಿ |
| ೭ | ಸಿಪಾಯಿಗಳು | ೧೦ ಎಕರೆ ಭೂಮಿ |
| ೮ | ಕೊಂಬುಊದುವವರು | ೧೦ ಎಕರೆ ಭೂಮಿ |
| ೯ | ಅಡುಗೆ ಮಾಡುವವರು | ೧೪ ಎಕರೆ ಭೂಮಿ |
| ೧೦ | ಕಾರಕೂನರು | ೨೮ ಎಕರೆ ಭೂಮಿ |
| ೧೧ | ಬಡಿವ್ಯಾಗಳು | ೮೦ ಎಕರೆ ಭೂಮಿ |
| ೧೨ | ಪಲ್ಲಕ್ಕಿಯವರು (೧೬ ಜನ) | ೧೦ x ೧೦ = ೧೬೦ ಎಕರೆ ಭೂಮಿ |
| ೧೩ | ಬೆಂಕಿ ಹೊಲದವರಿಗೆ | ೦೪ ಎಕರೆ ಭೂಮಿ |
| ೧೪ | ತಾಶೇ ಭಾರಿಸುವವರು | ೦೪ ಎಕರೆ ಭೂಮಿ |
| ೧೫ | ಜಿನಗಿ ಅಬಾಖಾನ ದರ್ಗಾ | ೧೦ ಎಕರೆ ಭೂಮಿ |
| ೧೬ | ದತ್ತಾತ್ರೇಯ ಗುಡಿ | ೧೦ ಎಕರೆ ಭೂಮಿ |
| | ಒಟ್ಟು | ೩೬೨ ಎಕರೆ ಭೂಮಿ |

ಇವಷ್ಟೇ ಅಲ್ಲದೆ ಹಬ್ಬಹರಿದಿನಗಳು, ಮದುವೆ ಸಮಾರಂಭಗಳಲ್ಲಿ ವಸ್ತ್ರದಾನ, ಆಹಾರ ದಾನ, ಅಬಾಖಾನ ದರ್ಗಾದ ಉರುಸು, ಪ್ರಭುಸ್ವಾಮಿ ಮಠದ ಉತ್ಸವಗಳಲ್ಲಿ ಇವರೂ ಸಹ ಮುಂದಾಳುಗಳಾಗಿರುತ್ತಾರೆ. ಈ ಉತ್ಸವಗಳಿಗೆ ಧನ ರೂಪದ ದಾನ ವಾಡೆಯಿಂದ ಪ್ರತಿವರ್ಷ ಸಂದಾಯವಾಗುತ್ತದೆ. ಅಲ್ಲದೇ ನೋಂಪಿಯ ವ್ರತಾಚರಣೆಗಳಲ್ಲಿ ಶಾಸ್ತ್ರ, ವಸ್ತ್ರ ಆಹಾರ ದಾನಗಳನ್ನೂ ಮಾಡಿದ್ದೇವೆ ಎಂದು ವಾಡೆಯ ಸದಸ್ಯರು ಹೇಳುತ್ತಾರೆ. ಈ ಭಾಗದ ನೂತನ ಬಸದಿಗಳ ನಿರ್ಮಾಣ ಮತ್ತು ಪಂಚಕಲ್ಯಾಣ ಕಾರ್ಯಕ್ರಮಗಳಿಗೆ ನಿರಂತದ ಧನ ದಾನ ಇವರಿಂದ ಸಂದಾಯವಾಗುತ್ತದೆ.

### ೨. ಹಬ್ಬ ಹರಿದಿನಗಳು

ಹಬ್ಬಗಳು ಭಾರತೀಯರ ಅವಿಭಾಜ್ಯ ಅಂಗ. ಪ್ರಾರಂಭದಲ್ಲಿ ಬಾಂಧವ್ಯ ಬೆಸೆಯುವ ಕೊಂಡಿಗಳಾಗಿ ಹಬ್ಬಗಳು ಆಚರಣೆಗೆ ಬಂದುವು. ಈಗಲೂ ಅದೇ ಕೆಲಸವನ್ನು ಮಾಡುತ್ತಿವೆ.

ಕರ್ನಾಟಕದ ಮಟ್ಟಿಗೆ ಹೇಳುವುದಾದರೆ ಯುಗಾದಿ, ದಸರಾ, ದೀಪಾವಳಿ ದೊಡ್ಡ ಹಬ್ಬಗಳು. ಇವುಗಳ ಆಚರಣೆ ಪೌರಾಣಿಕ ಹಿನ್ನೆಲೆಯದ್ದಾದರೂ ಮುಖ್ಯ ಉದ್ದೇಶ ಬಂಧು-ಬಾಂಧವರು, ಅಣ್ಣ-ತಮ್ಮಂದಿರು, ಅಕ್ಕ-ತಂಗಿಯರು, ಇಡೀ ಕುಟುಂಬ ಮತ್ತು ಊರುಗಳಲ್ಲಿ ಬಾಂಧವ್ಯ ಬೆಸೆಯುವುದೇ ಆಗಿದೆ. 'ಎಳ್ಳು ಬೆಲ್ಲ ತಿಂದು ಒಳ್ಳೊಳ್ಳೆ ಮಾತನಾಡೋಣ' ಎಂಬ ಸಂಕ್ರಾಂತಿಯ ನುಡಿ, 'ಬನ್ನಿ ತಗೊಂಡು ಬಂಗಾರದಂಗ್ಹ ಇರೋಣ' ಎಂಬ ಮಾತುಗಳು ಒಡೆದ, ಬಿರಿತ ಮನಸ್ಸುಗಳಲ್ಲಿ ಸಾಮರಸ್ಯವನ್ನು ಉಂಟು ಮಾಡುವುದೇ ಆಗಿದೆ. ಎಷ್ಟೋ ಸಂಬಂಧಗಳು ಹಬ್ಬದ ಸಂದರ್ಭದಲ್ಲಿ ಮತ್ತೆ ಒಂದಾದ ಉದಾಹರಣೆಗಳಿವೆ. ಹಬ್ಬಗಳಲ್ಲಿ ಅಂಥ ಅನನ್ಯತೆಯಿದೆ.

ಉತ್ತರ ಕರ್ನಾಟಕದ ಮಟ್ಟಿಗೆ ಹೇಳುವುದಾದರೆ ಪ್ರತಿ ಅಮವಾಸೆ ಮತ್ತು ಹುಣ್ಣಿಮೆಗಳು ಇಲ್ಲಿಯ ಜನರಿಗೆ ಹಬ್ಬಗಳೆ. ಯುಗಾದಿ, ದೀಪಾವಳಿ ಮುಂತಾದವುಗಳು ದೊಡ್ಡ ಹಬ್ಬಗಳು ಎನ್ನಿಸುತ್ತವೆ. ಬಡವ-ಬಲ್ಲಿದರೆನ್ನದೇ ಎಲ್ಲರು ತಮ್ಮ ಸಾಮರ್ಥ್ಯಕ್ಕೆ ಅನುಗುಣವಾಗಿ ಹಬ್ಬಗಳನ್ನು ಆಚರಿಸುವುದು ರೂಢಿ. ಇಂಥ ಸಂಭ್ರಮ ವಾಡೆಗಳಲ್ಲಿ ಆಕರ್ಷಕವಾಗಿ ಆಚರಣೆಯಾಗುತ್ತಿದ್ದವು. ಈಗಲೂ ಕೆಲವು ವಾಡೆಗಳು ದಸರಾ, ದೀಪಾವಳಿ ಮುಂತಾದ ಹಬ್ಬಗಳನ್ನು ವಿಜೃಂಭಣೆಯಿಂದಲೇ ಮಾಡುತ್ತಾರೆ. ದಸರಾ ಹಬ್ಬ ಮೈಸೂರನ್ನು ಬಿಟ್ಟರೇ ಪಾರಂಪರಿಕವಾಗಿ ಉತ್ತರ ಕರ್ನಾಟಕದ ವಾಡೆಗಳಲ್ಲಿ ಆಚರಣೆಗೊಳ್ಳುತ್ತಾ ಬಂದಿದೆ. ಇದಕ್ಕೆ ಜೈನ ವಾಡೆಗಳೂ ಹೊರತಾಗಿಲ್ಲ. ಅಧ್ಯಯನಕ್ಕೆ ಒಳಪಡುವ ಜೈನವಾಡೆಗಳಲ್ಲಿ ಪ್ರಮುಖವಾಗಿ ಯುಗಾದಿ, ಮಹಾವೀರ ಜಯಂತಿ, ಕಾರಹುಣ್ಣಿಮೆ, ಗಣೇಶ ಚತುರ್ಥಿ, ದಸರಾ, ದೀಪಾವಳಿ, ಮೊಹರಂ ಮತ್ತು ಗೌರಿ ಹುಣ್ಣಿಮೆಗಳು ಅತ್ಯಂತ ವೈಭವದಿಂದ ನಡೆಯುತ್ತವೆ.

**ಯುಗಾದಿ**

ಯುಗಾದಿ ವರ್ಷದ ಮೊದಲ ಹಬ್ಬ. ರೈತರಿಗಂತೂ ಭೂತಾಯಿಯ ಪೂಜಿಸುವ ಹಬ್ಬ. ದೇಸಾಯಿಗೆ ಸಾಕಷ್ಟು ಭೂಮಿ ಇರುತ್ತಿರುವುದರಿಂದ ಅವನಿಗೂ ಈ ಹಬ್ಬ ಅತ್ಯಂತ ಶ್ರೇಷ್ಠವೇ. ಇವನ ಸಾಕಷ್ಟು ಪ್ರಮಾಣದ ಜಮೀನುಗಳನ್ನು ರೈತರೇ ಕೃಷಿಗೈದು ಬಂದ ಬೆಳೆಯಲ್ಲಿ ಬಹುಪಾಲು ಇವನಿಗೆ ತಂದು ಕೊಡುತ್ತಿದ್ದರು. ಅಂತೆಯೇ ಅವರ ನಿಷ್ಠೆ, ಪ್ರಾಮಾಣಿಕತೆಗಳನ್ನು ಮೆಚ್ಚಿದ ಮಾಮಲೇದಾರ ಯುಗಾದಿಗೆ ಹೊಸ ಬಟ್ಟೆ, ಧವಸ-ಧಾನ್ಯಗಳನ್ನು ಕೆಲವೊಂದು ಸಾರಿ ಹಣವನ್ನು ರೈತರಿಗೆ ಉಡುಗೊರೆಯಾಗು ಕೊಡುತ್ತಿದ್ದ. ಈ ರೀತಿಯ ಸಂಪ್ರದಾಯ ಜೈನ ವಾಡೆಗಳಲ್ಲಿ ರೂಢಿಯಲ್ಲಿತ್ತು. ಈಗಲೂ ಈ ವಾಡೆಗಳಲ್ಲಿ ಈ ಸಂಪ್ರದಾಯ ನಿಂತಿಲ್ಲ. ರೈತರಿಗೆ ಕೊಡುವ ಉಡುಗೊರೆ ವಾಡೆಯ ಕೆಲಸಗಾರರಿಗೆ ಸಲ್ಲುತ್ತಿದೆ.

ಯುಗಾದಿ ವರ್ಷದ ಮೊದಲ ದಿನ. ಎಲ್ಲ ಹೊಸ ಕೆಲಸಗಳಿಗೂ ಶುಭಾರಂಭ ಎಂದು ಹಿಂದುಗಳು ನಂಬಿದ್ದಾರೆ. ಈ ನಂಬಿಕೆಯ ಜೊತೆಗೆ ಜೈನರು ತಮ್ಮ ನಂಬಿಕೆಗಳನ್ನೂ ಸೇರಿಸಿ ಆಚರಿಸುತ್ತಾರೆ. ಚೈತ್ರ ಪ್ರತಿಪದೆಯ ಯುಗಾದಿಯನ್ನು ಜೈನರು ಆದಿನಾಥ ತೀರ್ಥಂಕರನ ಮಗ ಭರತನ ದಿಗ್ವಿಜಯದ ದಿನವೆಂದೆ ಆಚರಿಸುತ್ತಾರೆ. ವಾಡೆಗಳಲ್ಲೂ ಈ ಸಂಪ್ರದಾಯ ಚಾಚು

ತಪ್ಪದೇ ಅನುಸರಣೆಯಾಗುತ್ತ ಬಂದಿದೆ ಎನ್ನುತ್ತಾರೆ ಶ್ರೀಮತಿ ಜಯಶ್ರೀ ಅಮ್ಮನವರು.[೨೦] ಪ್ರಾತ: ಕಾಲದಲ್ಲಿ ಎದ್ದ ವಾಡೆಯ ಪ್ರಮುಖ ತೈಲಾಭ್ಯಂಜನ ಮಾಡಿ ಹೊಸ ಬಟ್ಟೆ ಧರಿಸಿ, ಉತ್ತತ್ತಿ, ಗೋಡುಂಬೆ, ಅಕ್ಕಿ, ಫಲ-ಪುಷ್ಪಾದಿಗಳ ಸಮೇತ ಬಸದಿಗೆ ಹೋಗಿ ಅಲ್ಲಿ ಪುಂಜವನ್ನಿಟ್ಟು[೨೧] ತೀರ್ಥಂಕರರಿಗೆ ವಂದನೆಗೈಯುತ್ತಾ 'ಣಮೋಕಾರ' ಮಂತ್ರವನ್ನು ಪಠಣೆ ಮಾಡುತ್ತಿದ್ದರು. ಈ ಸಂದರ್ಭದಲ್ಲಿ ತೀರ್ಥಂಕರರಿಗೆ ವಿಶೇಷ ಪೂಜೆಗಳು ಜರುಗುತ್ತಿದ್ದವು.

ಸಾಂಗವಾಗಿ ತೀರ್ಥಂಕರ ಪೂಜೆ ನಡೆದ ನಂತರ ದೇಸಾಯಿ ತೀರ್ಥಂಕರರಿಗೆ ಅಭಿವಂದಿಸಿ ಬಸದಿಯ ಪಂಡಿತರು (ಅರ್ಚಕ ಅಥವಾ ಪೂಜಾರಿ) ಕೊಟ್ಟ ಗಂಧೋದಕ[೨೨]ವನ್ನು ತೆಗೆದುಕೊಂಡು ಬಂದು ವಾಡೆಯ ಪ್ರತಿಯೊಂದು ಸ್ಥಳಗಳಿಗೂ ಸಿಂಪಡಿಸುತ್ತಾನೆ. ಮನೆಯ ಉಳಿದ ಸದಸ್ಯರೆಲ್ಲರೂ ವಾಡೆಯ ಪ್ರಮುಖನಂತೆಯೇ ಯುಗಾದಿಯ ಸಂಪ್ರದಾಯಗಳನ್ನೂ ಅವನ ಹಿಂಬಾಲಕರೆನ್ನುವಂತೆ ಆಚರಿಸುತ್ತಾರೆ. ಗಂಧೋದಕವನ್ನು ಸಿಂಪಡಿಸಿದ ದೇಸಾಯಿ, ದೇಶಪಾಂಡೆ, ನಾಡಗೌಡ ನಾಯಕರು ಸ್ವತ: ತಾವೇ ಭೂಮಿ ಪೂಜೆ ಮಾಡಲಿಕ್ಕೆ ಹೋಗುತ್ತಾರೆ. ಈ ಹಬ್ಬದ ದಿನವೇ ಹೊಸ ಕೆಲಸಗಳಿಗೆ ಚಾಲನೆಯನ್ನೂ ಸಹ ಕೊಡುವುದರೊಂದಿಗೆ ತಮ್ಮ ವತನದಾರಿಕೆಯ ವ್ಯಾಪ್ತಿಗೊಳಪಡುವ ಪ್ರಜೆಗಳಿಗೆ 'ಹೊಸ ವರುಷ ಶುಭ ತರಲಿ' ಎಂದು ಬೇವು-ಬೆಲ್ಲ ಕೊಟ್ಟು ಶುಭ ಹಾರೈಯಿಸುತ್ತಿದ್ದರು. ಜೊತೆಗೆ ಪ್ರಜೆಗಳ ಸಮಸ್ಯೆಗಳಿಗೆ ಸ್ಪಂದಿಸುತ್ತಿದ್ದರೂ. ಈಗ ವತನದಾರಿಕೆ ಇಲ್ಲ. ಆದರೂ ಈ ಆಚರಣೆಗಳು ನಿಂತಿಲ್ಲ.

ಇನ್ನೊಂದು ವಿಶೇಷ ಸಂಗತಿಯೆಂದರೆ ವಾಡೆಯ ಮುಖ್ಯಸ್ಥ ಯುಗಾದಿ ದಿನದಂದು ಪೂಜೆಗೆ ಹೋಗುವ ಬಸದಿ ವಾಡೆಯ ಅನತಿ ದೂರದಲ್ಲಿಯೇ ಇರುವುದು. ಹನಗಂಡಿ, ತೇರದಾಳ, ಅಣ್ಣೀಗೆರೆ, ಮುಳಗುಂದ, ದರೂರು ವಾಡೆ ಸಮೀಪವೇ ಬಸದಿಗಳಿವೆ. ಹನಗಂಡಿ ವಾಡೆಯವರಂತೂ ವಾಡೆಯ ಆವರಣದಲ್ಲಿಯೇ ನೇಮಿನಾಥ ತೀರ್ಥಂಕರರ ಬಸದಿಯನ್ನು ನಿರ್ಮಿಸಿಕೊಂಡಿದ್ದಾರೆ.

**ಕಾರ ಹುಣ್ಣಿಮೆ**

ಕಾರಹುಣ್ಣಿಮೆಯನ್ನು ಜೇಷ್ಠ ಮಾಸದಲ್ಲಿ ಆಚರಿಸಲಾಗುತ್ತದೆ. ಕೃಷಿ ಪ್ರಧಾನ ಸಂಸ್ಕೃತಿ ಉತ್ತರ ಕರ್ನಾಟಕದ್ದು. ಕೃಷಿಗೆ ಅತ್ಯಂತ ಸಹಕಾರಿ ಸ್ನೇಹಜೀವಿಯಾದ ಎತ್ತುಗಳನ್ನು ಪೂಜಿಸುವ ಹಬ್ಬವೇ ಕಾರ ಹುಣ್ಣಿಮೆ. ವಾಡೆಗಳಲ್ಲಿ ಈ ಹಬ್ಬ ವೈಭವವಾಗಿಯೇ ನಡೆಯುತ್ತದೆ. ಈ ಹುಣ್ಣಿಮೆ ಹಿಂದಿನ ದಿನ ಹೊನ್ನುಗ್ಗಿ ಎಂದು ಆಚರಿಸುವ ಸಂಪ್ರದಾಯವೂ ಇದೆ. ವಾಡೆಯ ಆಳುಮಕ್ಕಳೆಲ್ಲಾ ಎರಡು-ಮೂರು ದಿನ ಮುಂಚೆಯೇ ಕೃಷಿ ಸಂಬಂಧಿತ ಉಪಕರಣಗಳಾದ ರಂಟೆ, ಕುಂಟೆ, ನೊಗ, ಚಕ್ಕಡಿ, ಮುಂತಾವನ್ನು ತೊಳೆದು, ಎತ್ತುಗಳನ್ನೂ ಚೆನ್ನಾಗಿ ಮೇಯಿಸುತ್ತಾರೆ. ಎತ್ತುಗಳ ಕೋಡುಗಳನ್ನು, ಕಾಲಿನ ಉಗುರುಗಳನ್ನು ಸಮ ಮಾಡುತ್ತಾರೆ. ಹೊನ್ನುಗ್ಗಿ ದಿನದಂದು ಎತ್ತುಗಳಿಗೆ ಕೊರಳಲ್ಲಿ ಗೆಜ್ಜೆಸರ, ಕೋಡುಗಳಿಗೆ ಕೊಡಣಸು, ಬಣ್ಣದ ಬಟ್ಟೆಯನ್ನು ಕೋಡಿಗೆ ಕಟ್ಟುವುದು,

ಮೈಮೇಲೆ ಜೂಲಾ (ಕಸೂತಿ ಹಾಕಿದ ಬಟ್ಟೆಯನ್ನು) ಹೊದಿಸಿ ಶೃಂಗರಿಸುತ್ತಾರೆ. ಇದೇ ದಿನ ಎತ್ತುಗಳನ್ನು ಸದರ ಕಟ್ಟೆಯ ಮೇಲೆ ಹತ್ತಿಸಿ ಪೂಜೆ ಮಾಡುತ್ತಾರೆ. ಅವುಗಳಿಗೆ ಪೂಜೆ ಮಾಡಿ ಹತ್ತಿಕಾಳು ಮತ್ತು ಪೂಜೆಗೆ ತಯಾರಿಸಿದ ನೈವೇದ್ಯವನ್ನು ತಿನ್ನಿಸಲಾಗುತ್ತದೆ. ಮಾರನೆಯ ದಿನ ಯಥಾ ಪ್ರಕಾರ ಎತ್ತುಗಳನ್ನು ಶೃಂಗರಿಸಿ ಕೊರಳಲ್ಲಿ ಬೇವಿನ ಸೊಪ್ಪಿನೊಂದಿಗೆ ತೆಂಗಿನ ಬಟ್ಟಲು ಚಕ್ಕುಲಿ, ಕೋಡಬಳೆ ಕೆಲವೊಂದು ಸಾರಿ ಬಂಗಾರ, ಬೆಳ್ಳಿ ಹಣವನ್ನೂ ಕಟ್ಟಿ ಊರಿನಲ್ಲಿ ಮೆರವಣಿಗೆ ಮಾಡಿ ಕರಿ ಹರಿಯುವ ಸ್ಥಳಕ್ಕೆ ಎತ್ತುಗಳನ್ನು ತೆಗೆದುಕೊಂಡು ಬರುತ್ತಾರೆ. ವಾಡೆಯ ಮುಖ್ಯಸ್ಥ ಮತ್ತು ಊರ ಜನ ಈ ಸಂಭ್ರಮ ವೀಕ್ಷಿಸಲು ಕಾತರದಿಂದಲೇ ಕಾಯುತ್ತಿರುತ್ತಾರೆ. ಕರಿ ಹರಿಯಲು ಊರಿನ 'ಮಹರ್' ಜನಾಂಗದವರು ಪುಳಕಿತಗೊಂಡು ತಯಾರಾಗಿರುತ್ತಾರೆ. ಎತ್ತುಗಳ ಕೊರಳಲ್ಲಿ ಕಟ್ಟಿರುವ ಕರಿ (ಬೇವಿನ ಸೊಪ್ಪಿನೊಂದಿಗಿರುವ ತೆಂಗಿನ ಬಟ್ಟಲು) ಹರಿದಾಗೊಮ್ಮೆ ಅವರ ಸಂಭ್ರಮ ಹೆಚ್ಚುತ್ತಲೇ ಇರುತ್ತದೆ. ಅವರಿಂದ ಎತ್ತುಗಳು ತಪ್ಪಿಸಿಕೊಂಡಾಗ ನೆರೆದವರ ಮತ್ತು ಎತ್ತುಗಳ ಯಜಮಾನನಿಗೆ ಸಂಭ್ರಮ.

ಹನಗಂಡಿ ಮತ್ತು ತೇರದಾಳದಲ್ಲಿ ಈ ಆಚರಣೆಗಳು ವಿಶಿಷ್ಟ, ಹನಗಂಡಿ ಮೂಲ ಮನೆತನ ತೇರದಾಳದಲ್ಲಿಯೇ ಇರುವಾಗ ದೇಸಾಯಿಗಳ 'ಬಿಳಿ' ಬಣ್ಣದ ಎತ್ತನ್ನು, ನಾಡಗೌಡರ ಕೆಂದು ಬಣ್ಣದ ಎತ್ತನ್ನು ಕರಿ ಬಿಡುತ್ತಿದ್ದರಂತೆ ದೇಸಾಯಿಗಳ ಎತ್ತು ಕರಿ ತಂದರೆ ಆ ವರ್ಷ ಜೋಳದ ಬೆಳೆ ಸಂಮೃದ್ಧಿಯಾಗಿ ಬರುತ್ತದೆ. ನಾಡಗೌಡ ಎತ್ತು ಕರಿ ಗೆದ್ದರೆ ಆ ವರ್ಷ ಗೋಧಿಯ ಫಸಲು ಹುಲುಸಾಗಿ ಬರುತ್ತದೆ ಎಂದು ಅಲ್ಲಿನ ಕೃಷಿಕರ ನಂಬಿಕೆಯಾಗಿತ್ತು. ಒಂದು ವೇಳೆ ಎರಡೂ ಎತ್ತು ಗೆದ್ದರೆ ಎರಡೂ ಬೆಳೆ ಸಂಮೃದ್ಧಿ ಎಂದೇ ಅರ್ಥಯಿಸುಕೊಳ್ಳುತ್ತಿದ್ದರು. ಈ ಬಗೆಯ ವಾಡಿಕೆ ಉತ್ತರ ಕರ್ನಾಟಕದ ಬಹುತೇಕ ಹಳ್ಳಿಗಳಲ್ಲಿ ಇದೆ.

ಹೊನ್ನುಗ್ಗಿಯ ದಿನ ಎತ್ತುಗಳಿಗೆ ಸಾಂಪ್ರದಾಯಿಕ ಪೂಜೆ ಜೈನವಾಡೆಗಳಲ್ಲಿ ಸಲ್ಲುವುದರ ಜೊತೆಗೆ ವಿಶೇಷ ಪೂಜೆಯು ಸಲ್ಲುತ್ತದೆ ಎಂದು ಮುಳಗುಂದ ದೇಶಪಾಂಡೆ ವಾಡೆಯ ಶ್ರೀ ನಾಗರಾಜ ದೇಶಪಾಂಡೆಯವರು[೨] ಹೇಳುತ್ತಾರೆ. ಏಕೆಂದರೆ ಜೈನರ ಮೊದಲ ತೀರ್ಥಂಕರ ಆದಿನಾಥ. ಈ ತೀರ್ಥಂಕರರ ಇನ್ನೊಂದು ಹೆಸರು ವೃಷಭ ನಾಥ. ಎತ್ತನ್ನು ಲಾಂಛನವನ್ನಾಗಿ ಹೊಂದಿದ ಆದಿನಾಥರಿಗೆ ವೃಷಭ ನಾಥನೆಂದು ಕರೆಯುತ್ತಾರೆ. ಆದ್ದರಿಂದ ಆದಿನಾಥರ ಪ್ರೀತಿಗೆ ಪಾತ್ರವಾದ ಎತ್ತು ಕೂಡ ನಮಗೆ ಪೂಜ್ಯವೇ ಎನ್ನುತ್ತಾರೆ.

ಮುಳಗುಂದ ವಾಡೆಯ ಆಡಳಿತಕ್ಕೆ ಒಳಪಟ್ಟಿದ್ದ ಕುಬಿಹಾಳ, ಬು॥ ಕೊಪ್ಪ, ತರಲಘಟ್ಟ ಇತ್ಯಾದಿ ಪ್ರದೇಶಗಳಲ್ಲಿ ಕಾರ ಹುಣ್ಣಿಮೆಯಲ್ಲಿ ಒಂದು ವಿಶೇಷ ಸಂಪ್ರದಾಯವೊಂದಿದೆ. ಕರಿಗೆ ತಂದ ಎತ್ತುಗಳು ಜನಜಂಗುಳಿ ನೋಡಿ ಹೆದರಿ ದಿಕ್ಕುಪಾಲಾಗಿ ಓಡಿ ಹೋಗಿ ಆ ಗ್ರಾಮಗಳ ಎಲ್ಲೆಯನ್ನು ದಾಟಿ ಬೇರೆ ಗ್ರಾಮದ ಎಲ್ಲೆಗೆ ಹೋದರೆ ಎತ್ತು ಆ ಗ್ರಾಮದವರಿಗೆ ಸಲ್ಲುತ್ತದೆ. ಎತ್ತನ್ನು ಕಳೆದುಕೊಂಡ ಗ್ರಾಮದವರು ಒಂದು ವರ್ಷ ಕಾರ ಹುಣ್ಣಿಮೆ ಆಚರಿಸುವಂತಿಲ್ಲ.

**ಗಣೇಶ ಚತುರ್ಥಿ**

ಈ ಹಬ್ಬ ಸ್ವಾತಂತ್ರ್ಯ ಚಳುವಳಿಯ ನಿಮಿತ್ತ ಹುಟ್ಟಿದ್ದಾದರೂ ಗಣೇಶನಿಗೆ ಬಹು ಹಿಂದಿನಿಂದಲೂ ಪ್ರಾಧಾನ್ಯತೆ ಇದೆ. ಹೊಸ ಕೆಲಸಗಳನ್ನು ಆರಂಭಿಸುವಾಗ ವಿಘ್ನಗಳು ಬರದೇ ಇರಲಿ ಎಂದು ವಿಘ್ನೇಶ್ವರನನ್ನು ನೆನೆಸುವುದು ಸಂಪ್ರದಾಯ. ಈ ಹಬ್ಬ ಜೈನ ವಾಡೆಗಳಲ್ಲೂ ಆಚರಣೆಗೊಳ್ಳುತ್ತದೆ. ಸ್ವಾತಂತ್ರ್ಯ ನಿಮಿತ್ತ ಆರಂಭವಾದ ಗಣೇಶ ಉತ್ಸವ ತದನಂತರ ಜಾತ್ಯತೀತವಾಗಿ ಬೆಳೆದು ಬಂತು. ಹನಗಂಡಿ ದೇಸಾಯಿಗಳು ಈ ಹಬ್ಬವನ್ನು ವಿಶೇಷವಾಗಿ ಆಚರಿಸುತ್ತಿದ್ದರು. ಈಗಲೂ ಆಚರಿಸುತ್ತಾರೆ.

ಗಣೇಶನ ಮೂರ್ತಿಯನ್ನು ತರಲಿಕ್ಕೆ ವಿಶೇಷವಾದ ಪಲ್ಲಕ್ಕಿ ಈ ವಾಡೆಯಲ್ಲಿದೆ. ಪ್ರಾತಃಕಾಲದಲ್ಲಿಯೇ ನವವಧುವಿನಂತೆ ಶೃಂಗಾರಗೊಂಡ ಪಲ್ಲಕ್ಕಿ ಜೊತೆಗೆ ದೇಸಾಯಿ ಅಥವಾ ವಾಡೆಯ ಸದಸ್ಯರು ಹೋಗಿ ಗಣಪತಿಯನ್ನು ಅದರಲ್ಲಿರಿಸಿಕೊಂಡು ವಾಡೆಗೆ ತರುತ್ತಾರೆ. ಈ ಮಧ್ಯೆ ಊರಿನಲ್ಲಿ ವಿಜೃಂಭಣೆಯ ಮೆರವಣಿಗೆ, ಶಂಖ, ಜಾಗಟೆ, ಕೊಂಬು, ಕಹಳೆ ವಾದ್ಯಗಳೊಂದಿಗೆ ಊರಲ್ಲಿ ಪ್ರದರ್ಶನವಾಗುತ್ತದೆ. ಊರ ಪ್ರಜೆಗಳು ಈ ಸಂಭ್ರಮ ವೀಕ್ಷಿಸಲು ಕಿಕ್ಕಿರಿದಿರುತ್ತಿದ್ದರು ಎಂದು ಶ್ರೀ ನೀಲೇಶ್ ದೇಸಾಯಿಯವರು ಹೇಳುತ್ತಾರೆ. ಇತ್ತೀಚೆಗೆ ಮೆರವಣಿಗೆಯ ಸಂದರ್ಭದಲ್ಲಿ ಆಧುನಿಕ ವಾದ್ಯಗಳು ಬಳಕೆಯಾಗುತ್ತಿವೆ. ಧ್ವನಿವರ್ಧಕದ ಹಾವಳಿಯೂ ಪಟಾಕಿಗಳ ಸದ್ದು ಸೇರಿವೆ.

ಮೆರವಣಿಗೆಯ ನಂತರ ಗಣಪತಿಯ ಹೊತ್ತ ಪಲ್ಲಕ್ಕಿ ವಾಡೆಯ ಪ್ರವೇಶ ಮಾಡುತ್ತದೆ. ದೇಸಾಯಿಗಳು ಗಣೇಶನಿಗೆ ಸಾಂಗವಾಗಿ ಪೂಜೆ ನೆರವೇರಿಸಿ ಮೊದಲೆ ಸಿದ್ಧಗೊಂಡ ಮಂಟಪದಲ್ಲಿ ಗಣಪತಿಯ ಮೂರ್ತಿಯನ್ನು ಕೂರಿಸಲು ಅಪ್ಪಣೆ ಕೊಡುತ್ತಾರೆ. ಈ ಮಂಟಪ ಸಾಗವಾನಿ ಕಟ್ಟಿಗೆಯಿಂದ ರಚನೆಯಾಗಿದ್ದು ಕುಸುರಿ ಕೆತ್ತನೆಯ ಅಲಂಕರಣವನ್ನು ಹೊಂದಿರುತ್ತದೆ. ಹೂಮಾಲೆಗಳಿಂದ ಶೃಂಗಾರಗೊಂಡ ಮಂಟಪದಲ್ಲಿ ಸ್ವಲ್ಪ ಅಕ್ಕಿ ಹಾಕಿ ಗಣೇಶನನ್ನು ಕೂರಿಸಲಾಗುತ್ತದೆ. ಅಕ್ಕಿ ಶುಭ ಸಂಕೇತ ಎಂಬ ನಂಬಿಕೆ ಚಾಲ್ತಿಯಲ್ಲಿದೆ.

ಗಣಪತಿಯ ಪ್ರತಿಷ್ಠಾಪನೆಯ ನಂತರ ವಾಡೆಯ ಅರ್ಚಕರಿಂದ ಸಾಂಗವಾಗಿ ಪೂಜೆ ನೆರವೇರುತ್ತದೆ. ಕಡುಬು, ಕರ್ಚಿಕಾಯಿ, ವಿವಿಧ ಬಗೆಯ ಉಂಡೆಗಳು ಪಂಚ ಫಲಗಳು (ಸೇಬು, ಪೇರಲ, ಬಾಳೆ, ಸಪೋಟ (ಚಿಕ್ಕು), ಸೀತಾಫಲ, ಕಿತ್ತಲೆ, ಮೋಸಂಬಿ ಇತ್ಯಾದಿಗಳಲ್ಲಿ ಯಾವುದಾದರೂ ಐದು ಫಲಗಳು) ನೈವೇದ್ಯ ಗಣೇಶನ ಮುಂದಿರಿಸಲಾಗುತ್ತದೆ. ಸಂಜೆ ಗಣೇಶನ ದರ್ಶನಕ್ಕೆ ಗಣ್ಯರಿಗೆ ಮಾತ್ರ ದರ್ಶನಕ್ಕೆ ಅವಕಾಶವಿರುತ್ತಿತ್ತು. ಕೆಲವೊಂದು ಸಂದರ್ಭಗಳಲ್ಲಿ ಸಾರ್ವಜನಿಕರಿಗೂ ದರ್ಶನದ ಭಾಗ್ಯ ಲಭಿಸುತ್ತಂತೆ.

ಈ ಉತ್ಸವ ಐದು ದಿನಗಳ ಕಾಲ ನಡೆಯುತ್ತದೆ. ಪ್ರತಿಯೊಂದು ದಿನವೂ ವಿವಿಧ ಮನರಂಜನೆಗಳು ವಾಡೆಯಲ್ಲಿ ಜರುಗುತ್ತಿದ್ದವು. ದೇಸಾಯಿನಿಯರು ಈ ಕಾರ್ಯಕ್ರಮವನ್ನು ವಾಡೆಯ ಅಟ್ಟಣಿಗೆ ಮೇಲೆ ಕುಳಿತು ವೀಕ್ಷಿಸುತ್ತಿದ್ದರು. ದೇಸಾಯಿ ಮತ್ತು ಆಪ್ತರು ಹಜಾರದಲ್ಲಿ

ಕುಳಿತು ಈ ಕಾರ್ಯಕ್ರಮವನ್ನು ವೀಕ್ಷಿಸುತ್ತಿದ್ದರು. ಭಜನೆ, ಗೀಗಿ ಪದ, ಕೋಲಾಟ, ವೇಷಧಾರಿ ಆಟಗಳು ಹೀಗೆ ವಿವಿಧ ಮನರಂಜನೆಗಳು ಐದು ದಿನಗಳ ಕಾಲ ಜರುಗುತ್ತಿದ್ದವು. ಐದು ದಿನ ಪ್ರಜೆಗಳಿಗೆ ಪ್ರಸಾದ ರೂಪದ ಅನ್ನಸಂತರ್ಪಣೆ ನಡೆಯುತ್ತಿತ್ತು. ಐದನೆ ದಿನ ಗಣೇಶ ವಿಸರ್ಜನೆಗೊಳ್ಳುತ್ತಿದ್ದ ಮಂಟಪದಿಂದ ಗಣಪತಿಯ ಮೂರ್ತಿಯನ್ನು ಎತ್ತಿದ ನಂತರ ಅಲ್ಲಿ ಒಂದು ನೀರು ತುಂಬಿದ ತಂಬಿಗೆ ಅಥವಾ ಕೊಡವನ್ನು ಇರಿಸಲಾಗುತ್ತದೆ.

ಪಲ್ಲಕ್ಕಿಯಲ್ಲಿ ಕುಳಿತ ಗಣೇಶನನ್ನು ತರುವಾಗ ಇರುವ ಸಂಭ್ರಮ ದ್ವಿಗುಣಗೊಂಡಂತೆ ಸೇವಕರು ಎತ್ತಿಕೊಂಡು ರಾತ್ರಿಯೆಲ್ಲ ಮೆರವಣಿಗೆ ಮಾಡುತ್ತಾರೆ. ಹಿಂದೆ ರಾತ್ರಿಯ ಸಂದರ್ಭದಲ್ಲಿ 'ಪಂಜು'ಗಳನ್ನು ಬಳಸುತ್ತಿದ್ದರಂತೆ. ಈಗ ಆ ಸ್ಥಾನಕ್ಕೆ ವಿದ್ಯುದ್ದೀಪಗಳು ಬಂದು ಕೂತಿವೆ. ಕೊನೆಗೆ ಊರ ೮ ಕಿ.ಮೀ. ದೂರದ ಕೃಷ್ಣ ನದಿಗೆ ಗಣೇಶ ವಿಸರ್ಜನೆಯಾಗುತ್ತಾನೆ. ಐದು ದಿನ ವಾಡೆಯ ಸದಸ್ಯರಲ್ಲಿ ಅಕ್ಷರಶಃ ಸಂಭ್ರಮದ ವಾತಾವರಣ ಮನೆ ಮಾಡಿರುತ್ತದೆ. ಪ್ರಜೆಗಳಿಗೂ ಈ ಸಂಭ್ರಮ ಖುಷಿಗೊಳಿಸುತ್ತಿತ್ತು.

**ದಸರಾ**

ಕರ್ನಾಟಕದ ನಾಡ ಹಬ್ಬ ಎಂತಲೇ ಕರೆಯುವ ದಸರಾ ಮೈಸೂರಿನಲ್ಲಿ ಅತ್ಯದ್ಭುತವಾಗಿ ನಡೆಯುತ್ತದೆ. ಇದನ್ನು ಮೈಸೂರು ಒಡೆಯರು ಆಚರಿಸುತ್ತಿದ್ದರು. ಈ ಹಬ್ಬವು ಮೊದಲು ವಿಜಯನಗರದಲ್ಲಿ ಆಚರಣೆಗೊಳ್ಳುತ್ತಿತ್ತು. ಈಗಲೂ ಮಹಾನವಮಿಯ ದಿಬ್ಬ ಎಂದೇ ಕರೆಯಲ್ಪಡುವ ಬೃಹತ್ ಸಭಾಂಗಣವನ್ನು ಹಜಾರ ರಾಮಸ್ವಾಮಿಯ ಮಂದಿರದ ಬಳಿ ಕಾಣಬಹುದು. ಆ ಸಂದರ್ಭದಲ್ಲಿಯೇ ಉತ್ತರ ಕರ್ನಾಟಕದಲ್ಲಿ ಇದು ವ್ಯಾಪಕಗೊಂಡಿತ್ತು. ಮೈಸೂರಿನಲ್ಲಿ ಬಿಟ್ಟರೆ ಅತ್ಯಂತ ಸಂಭ್ರಮದ ದಸರಾ ಆಚರಣೆಗಳೂ ಉತ್ತರ ಕರ್ನಾಟಕದ ವಾಡೆಗಳಲ್ಲಿ ವಿಜೃಂಭಣೆಯಿಂದ ನಡೆಯುತ್ತವೆ. ಮೈಸೂರಲ್ಲಿ ನಾಡು-ವಿದೇಶಗಳ ಜನರು ನೆರೆದರೆ ವಾಡೆಗಳಲ್ಲಿ ಚಾವರಾತ್ ಹಳ್ಳಿಗಳ ಪ್ರಜೆಗಳು ನೆರೆದಿರುತ್ತಾರೆ. ಹತ್ತು ದಿನ ಹಲವು ಸಂಭ್ರಮಗಳು ನೆರೆದಿರುತ್ತವೆ. ವಿಜಯದಶಮಿಯಂದು ವಾಡೆಯ ಗಂಡು ಮಕ್ಕಳಿಗೆ ಅಕ್ಕ-ತಂಗಿಯರು ಆರತಿ ಮಾಡಿ ಶುಭ ಹಾರೈಸುತ್ತಾರೆ. ಒಂದು ವೇಳೆ ಅಕ್ಕ-ತಂಗಿಯರಿಗೆ ಮದುವೆಯಾಗಿದ್ದರೆ ಗಂಡನ ಮನೆಯಿಂದ ಬಂದು ಈ ಕಾರ್ಯ ನೆರವೇರಿಸಿ ತವರು ಸುಖ ಸಮೃದ್ಧಿಯಿಂದ ಉತ್ತರೋತ್ತರವಾಗಿ ಬೆಳೆಯಲೆಂದು ದೇವರಲ್ಲಿ ಬೇಡುತ್ತಾರೆ. ಆರತಿ ತಟ್ಟೆಯಲ್ಲಿ ಮಾಮಲೇದಾರ ಹಣ ಮತ್ತು ಬಂಗಾರವನ್ನು ಇಟ್ಟು ಸಹೋದರಿಯರಿಗೆ ಆಶೀರ್ವದಿಸುತ್ತಾರೆ. ಮಾಮಲೇದಾರನ ಸಹೋದರರು ಮತ್ತು ಮಕ್ಕಳಿಗೆ ಆಯಾ ಸಹೋದರಿಯರಿಂದ ಆರತಿ ಸಲ್ಲುತ್ತದೆ. ಈ ಕಾರ್ಯಕ್ರಮ ಎಲ್ಲ ಜೈನವಾಡೆಗಳಲ್ಲಿಯೂ ನಡೆಯುತ್ತದೆ.

ಪಾಂಡವರ ವನವಾಸ ನಿಮಿತ್ತ ಆಚರಣೆಯಾಗುವ ವಿಜಯದಶಮಿ ಆಯುಧ ಪೂಜೆಯಂದು ಪರ್ಯಾಯ ನಾಮದಿಂದ ಕರೆಯಲ್ಪಡುತ್ತದೆ. ಪಾಂಡವರು ಅಜ್ಞಾತ ವಾಸದ

ಸಂದರ್ಭದಲ್ಲಿ ತಮ್ಮಾಯುಧಗಳನ್ನು ಬನ್ನಿ (ಶಮಿ)ಯ ಗಿಡದಲ್ಲಿ ಇರಿಸಿ ಹೋಗುತ್ತಾರೆ. ಹಾಗೆ ಇರಿಸುವಾಗ ಪಾಂಡವರು

ಬನ್ನಿಯ ಗಿಡದಾಗ ಬಾಣ ಇಟ್ಟೇವಿ ತಾಯಿ
ಯಾರೂ ಬಂದರೂ ಕೊಡಬೇಡ ಹಡದವ್ವ
ಅರ್ಜುನ ಬಂದರ ಕೊಡಬೇಕು

ಎಂದು ಕೇಳಿಕೊಳ್ಳುತ್ತಾರೆ ಎಂದು ಜನಪದ ಹಾಡಿನ ಮೂಲಕ ಪಾಂಡವರ ಭಿನ್ನಕೆಯನ್ನು ತೇರದಾಳದ ಶ್ರೀ ಭೂಪಾಲ್ ಬ ನಾರಿಗೊಂಡ[೭೪] ಅವರು ಹೇಳುತ್ತಾರೆ. "ಒಂದು ವರುಷ ವಿರಾಟ ರಾಜನ ರಾಜ್ಯದಾಗ ಅಜ್ಞಾತ ವಾಸ ಮುಗಿಸಿ ಯಶಸ್ವಿ ಹೊಂದಿ ಅವರು ಆಯುಧಾ ಪಡೆದ ದಿನವನ್ನು ಈಗಲೂ ಆಯುಧ ಪೂಜಾ ದಿನವೆಂದು ಆಚರಿಸುತಾರೀ. ಮಾರನೇ ದಿನ ವಿಜಯದಶಮೀ ರೀ" ಎನ್ನುವ ಮಾತುಗಳಲ್ಲಿ ಪಾಂಡವರು ಅರಣ್ಯ ಅಜ್ಞಾತ ವಾಸ ಮುಗಿಸಿ ನಿಮಿತ್ತ ಪ್ರಜೆಗಳು ಪಾಂಡವರು ಸುರಕ್ಷಿತವಾಗಿ ಹಿಂದಿರುಗಿದರು ಎಂಬ ಕಾಳಜಿಯಿದೆ.

ಸದ್ಯ ಅಣ್ಣೀಗೆರೆ, ತೇರದಾಳ, ಹನಗಂಡಿಯಲ್ಲಿ ಆಯುಧ ಪೂಜಾ ಕಾರ್ಯಕ್ರಮ ನಡೆಯುತ್ತವೆ. ಆ ದಿನ ಬೆಳಗಿನಿಂದಲೇ ಮಾಮಲೇದಾರ ಮತ್ತು ಅವನ ಸೇವಕರು ಬಳಸುತ್ತಿದ್ದ ಎಲ್ಲ ಆಯುಧಗಳನ್ನು ತೊಳೆದು ಬಟ್ಟೆಯಿಂದ ಒರೆಸಿ ಎಣ್ಣೆಯನ್ನು ಲೇಪಿಸಿ ತಿಕ್ಕುತ್ತಾರೆ. ತೇರದಾಳದಲ್ಲಿ ಕತ್ತಿ, ಬರ್ಚಿ, ಪಟ್ಟಕತ್ತಿ, ಗುರಾಣಿ ಖಡ್ಗ, ಈಟಿ ಸೊಂಟಗತ್ತಿ, ಡಾಲು, ತಲವಾರ್ ಬಿಚ್ಚುಕತ್ತಿ, ಗುಪ್ತಭರ್ಚಿ, ಕಾಲುಬರ್ಚಿ, ಹತಾರ ಮುಂತಾದ ಆಯುಧಗಳಿವೆ. ಅಣ್ಣೀಗೆರೆಯಲ್ಲಿ ಜೋಡು ನಳಿಕೆ, ರಿವಾಲ್ವಾರ್ ಸಣ್ಣಪುಟ್ಟ ಆಯುಧಗಳಿವೆ. ಈ ಎಲ್ಲ ಆಯುಧಗಳ ಜೊತೆಗೆ ಕೃಷಿ ಸಲಕರಣೆಗಳನ್ನೂ ಇಟ್ಟು ಪೂಜೆಗೈಯುತ್ತಾರೆ.

ವಿಜಯ ದಶಮಿಯ ಸಂಜೆ ಬನ್ನಿಯ ಮುಡಿಯುವ ಕಾರ್ಯಕ್ರಮ. ಈ ನಿಮಿತ್ತವಾಗಿ ಊರ ದೈವದ ಪಲ್ಲಕ್ಕಿಯ ಜೊತೆಗೆ ವಾಡೆಯ ದೈವ ಪಲ್ಲಕ್ಕಿಯೂ ಬನ್ನಿ ಮುಡಿಯಲಿಕ್ಕೆ ಶಮಿ ವೃಕ್ಷದ ಬಳಿ ತೆರಳುತ್ತದೆ. ಮೊದಲು ಪಲ್ಲಕ್ಕಿಯಲ್ಲಿ ಗಾದಿಮಾಲಕನಾದ ಮಾಮಲೇದಾರ ಕುಳಿತು ಬನ್ನಿ ಮುಡಿಯಲಿಕ್ಕೆ ಹೋಗುತ್ತಿದ್ದ. ಸ್ವಾತಂತ್ರ್ಯೋತ್ತರ ದಿನಗಳಲ್ಲಿ ಈ ನಿಯಮ ಬದಲಾಗಿ ಪಲ್ಲಕ್ಕಿಯಲ್ಲಿ ದೇವರನ್ನು ಕೂರಿಸುತ್ತಾರೆ. ಮೈಸೂರು ದಸರಾದ ಅಂಬಾರಿಯಲ್ಲಿಯೂ ಇದೇ ಬದಲಾವಣೆಯಾಗಿ ಈಗ ಅಂಬಾರಿಯಲ್ಲಿ ಚಾಮುಂಡಿಯನ್ನು ಕೂರಿಸಲಾಗುತ್ತದೆ. ಭಾಗಶಃ ಈ ಬದಲಾವಣೆ ವಾಡೆಯ ಅಧಿಕಾರಿಗಳ ಮೇಲಾಗಿ ತದನಂತರದ ದಿನಗಳಲ್ಲಿ ಅವರೂ ಪಲ್ಲಕ್ಕಿಯಲ್ಲಿ ಕೂರುವ ಪದ್ಧತಿಯನ್ನು ಬದಲಿಸಿಕೊಂಡಂತೆ ಕಾಣುತ್ತದೆ.

ಸಂಜೆ ವಾಡೆಯ ಮುಖ್ಯಸ್ಥನ ಸಮೇತ ಶಮಿವೃಕ್ಷದ ಬಳಿಗೆ ಬಂದು ಊರಜನ ಭಕ್ತಿಯಿಂದ ವೃಕ್ಷಕ್ಕೆ ಕೈ ಮುಗಿಯುವರು ಮಾಮಲೇದಾರ ವೃಕ್ಷದ ಪೂಜೆ ಮಾಡುತ್ತಾನೆ. ಈ ಸಂದರ್ಭದಲ್ಲಿ ಜೋಡುನಳಿಕೆಯಲ್ಲಿ ಒಂದು ಸುತ್ತು ಗಾಳಿಯಲ್ಲಿ ಗುಂಡು ಹಾರಿಸುತ್ತಾರೆ.

ಮಾಮಲೇದಾರ ಬನ್ನಿಯನ್ನು ಕಿತ್ತು ಪಲ್ಲಕ್ಕಿಯಲ್ಲಿರುವ ದೇವರ ಮುಂದೆ ಇಡುತ್ತಾನೆ. ಉಳಿದ ಜನರು ತದನಂತರ ಭಯ ಭಕ್ತಿಯಿಂದ ಬನ್ನಿ (ಬನ್ನಿ ವೃಕ್ಷದ ತಪ್ಪಲು)ಯನ್ನು ಕೀಳುತ್ತಾರೆ. ಈಗಲೂ ಜನಪದರಿಗೆ ಬನ್ನಿ ವೃಕ್ಷ ಆರಾಧ್ಯ ದೈವ. ಈ ವೃಕ್ಷವನ್ನು ರೈತ ಕಡಿಯುವುದಿಲ್ಲ. ಒಣಗಿದ್ದರೂ ಉರುವಲಾಗಿ ಈ ಮರನ್ನು ಬಳಸುವುದಿಲ್ಲ.

ಬನ್ನಿಯನ್ನು ಮುಡಿದ ನಂತರ ಊರ ದೈವದ ಪಾಲಿಕೆಗಳು ದೇವಾಲಯಕ್ಕೆ ವಾಡೆ ಪಾಲಿಕೆ ವಾಡೆಗೆ ಹೋಗುತ್ತದೆ. ಅಧಿಕಾರ ಇದ್ದ ಸಂದರ್ಭದಲ್ಲಿ ಚಾವರಾತ್ ಹಳ್ಳಿಗಳ ಜನ ಮತ್ತು ಆ ಊರಿನ ಪಾಲಿಕೆಗಳು ಮಾಮಲೇದಾರ ಇರುವ ಊರಿಗೆ ಬಂದು ಬನ್ನಿ ಮುಡಿದ ನಂತರ ಊರಿಗೆ ಮರಳುತ್ತಿದ್ದವು. ಈಗ ಈ ಸ್ಥಿತಿ ಇಲ್ಲ, ಬನ್ನಿ ಮುಡಿದು ಬಂದು ಊರ ಹಿರಿಯರು ಮಾಮಲೇದಾರನಾದ ಅಘೋಷಿತ ಊರ ಪ್ರಥಮ ಪ್ರಜೆಗೆ ಕೊಟ್ಟು 'ಬಾಳು ಬಂಗಾರವಾಗಲಿ ಬನ್ನಿ ತೆಗೆದುಕೊಂಡು ಬಂಗಾರದ ಹಾಗೆ ಇರೋಣ' ಎಂಬ ಹಾರೈಕೆಯೊಂದಿಗೆ ಬನ್ನಿಯನ್ನು ವಿನಿಯಮ ಮಾಡಿಕೊಳ್ಳುತ್ತಾರೆ. ಇದಾದ ನಂತರ ಊರ ಜನ ತಮ್ಮ ತಮ್ಮಲ್ಲಿಯೇ ಬನ್ನಿ ವಿನಿಮಯಿಸಿಕೊಂಡು ಮೇಲಿನ ವಾಕ್ಯಗಳನ್ನೇ ಹೇಳಿ ಶುಭಕೋರುತ್ತಾರೆ. ಕಿರಿಯರು ಹಿರಿಯರಿಗೆ ಬನ್ನಿಕೊಟ್ಟು ಕಾಲಿಗೆ ನಮಸ್ಕರಿಸುವ ಪದ್ಧತಿಯು ಈಗಲೂ ನಡೆದುಕೊಂಡು ಬರುತ್ತಿದೆ.

ಒಂದು ವಿಶೇಷ ಪದ್ಧತಿ ಈ ಸಮಯದಲ್ಲಿ ಜರುಗುತ್ತದೆ. ದಶಮಿಯಂದು ಬನ್ನಿ ಮುಡಿದು ಬರುವಾಗ ರೈತರು ಫಸಲಿಗೆ ಬಂದ ಜೋಳ, ಕೆಂಜೋಳದ ದಂಟು, ಅದರ ಸೊಪ್ಪನ್ನು ಕಿತ್ತು ತಂದು ಊರ ದೇವರುಗಳಿಗೆ ಅರ್ಪಿಸುವರು. ಮೊದಲ ಬೆಳೆ ದೇವರಿಗೆ ಅರ್ಪಿತವಾಗಲಿ ಎಂದು ಭಿನ್ನಯಿಸುವ ರೈತ ಕೊಯಿಲಿನ ಸಂದರ್ಭಕ್ಕೆ ತೆನೆ ಇನ್ನೂ ಬಲಿಷ್ಠವಾಗಿ ಕಾಳು ತುಂಬಿಕೊಂಡು ಬರಲಿ ಎಂದು ಕೇಳಿಕೊಳ್ಳುತ್ತಾನೆ. ಜೋಳದ ದಂಟುಗಳನ್ನು ನವಮಿಯಂದು ಆಯುಧಗಳ ಜೊತೆಗಿಟ್ಟು ಪೂಜಿಸುವ ಪದ್ಧತಿಯೂ ಚಾವರಾತ್ ಹಳ್ಳಿಗಳಲ್ಲಿ ಕಂಡುಬರುತ್ತದೆ.

**ಮೊಹರಂ**

ಒಂದು ಪ್ರಭುತ್ವ ಬಲಿಷ್ಠವಾದಾಗ ಇತರೆ ಕೋಮುಗಳ ಮೇಲೆ ಸಂಸ್ಕೃತಿ ಹೇರಲ್ಪಡುತ್ತದೆ. ಬಹಮನಿ ಮತ್ತು ಅದರ ಅವಿಚ್ಛಿನ್ನ ಭಾಗವಾಗಿದ್ದ ಬಿಜಾಪುರ ಆದಿಲ್ ಷಾಹಿಗಳು ಅಧಿಕಾರಾವಧಿಯಲ್ಲಿ ಕರ್ನಾಟಕ ಅದರಲ್ಲೂ ಉತ್ತರ ಕರ್ನಾಟದಕ ಮೇಲೆ ತಮ್ಮ ಸಂಸ್ಕೃತಿಯ ಪ್ರಭಾವ ಬೀರಿದರು. ಆಡಳಿತದ ಪದಗಳು ಉರ್ದು, ಅರಬ್ಬೀಕರಣಗೊಂಡವು. ನಜರಾಣಾ, ಮಾಮಲೇದಾರ ಮುಂತಾದವು ಅಲ್ಲದೇ ಅವರ ಹಬ್ಬವು ಒತ್ತಾಯಪೂರ್ವಕ ಹೇರಲ್ಪಟ್ಟಂತೆ ಕಾಣುತ್ತದೆ. ಅಂತೆಯೇ ಮೊಹರಂ ಹಬ್ಬವು ಉತ್ತರ ಕರ್ನಾಟಕ ಹಿಂದೂಗಳ ಹಬ್ಬವೇ ಎನ್ನುವಂತಾಗಿದೆ. ಎಷ್ಟೋ ಊರುಗಳಲ್ಲಿ ಮುಸ್ಲಿಂರೇ ಇಲ್ಲ. ಆದರೂ ಮೊಹರಂ ವಿಜೃಂಭಣೆಯಿಂದ ನಡೆಯುತ್ತದೆ. ಈ ಹಬ್ಬ ಇಷ್ಟೊಂದು ಜನಮಾನಸದಲ್ಲಿ ಆಚರಣೆಗೊಳ್ಳಬೇಕಾದರೆ ಆದಿಲ್ ಷಾಯಿ ಪ್ರಭಾವ ಇರದೇ ಇರದು. ಇದು ಜನರಿಗೆ ನೇರವಾದ

ಪ್ರಭುತ್ವದ ಆದೇಶವಾಗಿದರೇ ಮಾಮಲೇದಾರನಿಂದ ಬಂದಿರದ್ದಾಗಿರುತ್ತದೆ. ಮಾಮಲೇದಾರನಿಗೆ ರಾಜನಿಂದ ಆದೇಶವಾಗಿರುತ್ತದೆ. ಈ ಆದೇಶವನ್ನು ಮಾಮಲೇದಾರನು ಹೇಗೆ ಸ್ವೀಕರಿಸಿ ಜಾರಿಗೊಳಿಸುತ್ತಾನೆ ಎಂಬುದನ್ನು ಆದಿಲ್ ಷಾಯಿ ಗುಪ್ತಚರರ ಮೂಲಕ ತಿಳಿಯುತ್ತಿದ್ದ. ಇಂಥ ಗುಪ್ತಚಾರರು ವಾಡೆಯ ಕೆಲಸಗಾರರಾಗಿ ನೇಮಕಗೊಂಡಿದ್ದ 'ಪಕಾಲಿ' ಎಂಬ ಜನಾಂಗದವರಾಗಿದ್ದರು. ಇವರು ಮುಸ್ಲಿಂ ಸಮುದಾಯದವರು. ಈಗಲೂ ಹನಗಂಡಿ ವಾಡೆಯಲ್ಲಿ ಈ ಜನಾಂಗ ವಾಸವಾಗಿದೆ.

ಹನಗಂಡಿ ಮತ್ತು ತೇರದಾಳದಲ್ಲಿ ಮೊಹರಂ ವಿಜೃಂಭಣೆಯಿಂದ ನಡೆಯುತ್ತದೆ. ಮುಳಗುಂದ, ಅಣ್ಣೀಗೇರಿ, ದರೂರು ವಾಡೆಗಳ ವ್ಯಾಪ್ತಿಯಲ್ಲಿಯೂ ಹಬ್ಬ ಆಚರಣೆಯಾಗುತ್ತಿದೆಯಾದರೂ ಹನಗಂಡಿ ತೇರದಾಳ ವ್ಯಾಪ್ತಿಯ ಅದ್ದೂರಿ ಆಚರಣೆ ಕಂಡುಬರುವುದಿಲ್ಲ.

ವಾಸ್ತವವಾಗಿ ಮೊಪರಂ ಎಂಬುದು ಶೋಕಾಚರಣೆಯ ದಿನ. ಈಗ ಮೂಲ ಸ್ವರೂಪವನ್ನು ಕಳೆದುಕೊಂಡು ಅದು ಹಬ್ಬವಾಗಿದೆ. ಅರಬಸ್ಥಾನದಲ್ಲಿದ್ದ 'ಖುರೇಶ್' ಎಂಬ ವಂಶದಲ್ಲಿ 'ಹಾಶಿಮ್' ಮತ್ತು 'ಉಮ್ಮೆಯಾ' ಎಂಬ ವೀರಪುರಷರು ಹುಟ್ಟಿ ಅಲ್ಲಿ ಬನೀಹಾಶಿಮ್ ಮತ್ತು ಬನೀ ಉಮ್ಮೆಯಾ ಎಂಬ ಎರಡು ವಂಶಗಳು ಪ್ರಸಿದ್ಧವಾಗಲು ಕಾರಣರಾದರು. ಪ್ರವಾದಿ ಮಹಮ್ಮದ್ ಬನೀ ಹಾಶಿಮ್‌ಗೆ ಸೇರಿದವರು. ಇವರ ನಂತರ ಖಲೀಫ ಪದವಿ ಈ ವಂಶಕ್ಕೆ ಸೇರುವುದಿತ್ತು. ಇದು ಬನಿಉಮ್ಮೆಯಾ ವಂಶದವರ ಮತ್ಸರಕ್ಕೆ ಕಾರಣವಾಗಿ ಯಜೀದನ ಕಾಲಕ್ಕೆ ಸ್ಫೋಟಗೊಂಡಿತು. ಅಂತೆಯೇ ಅವನು ಖಲೀಫನಾದ. ಜನ ಮತ್ತೆ ಹಜರತ್ ಇಮಾಮ್ ಹುಸೇನರ ಹಿರಿಯ ಮಗನಾದ ಇಮಾಮ ಹಸನರಿಗೆ ಪಟ್ಟಕಟ್ಟ ಬಯಸಿದರು. ಇವರು ಯಜೀದನ ಕುತಂತ್ರಕ್ಕೆ ಸಿಕ್ಕಿ ವಿಷಪ್ರಾಶನದ ಮೂಲಕ್ಕೆ ಮರಣಕ್ಕೆ ಈಡಾದರು. ಇವರ ತಮ್ಮ ಇಮಾಮ ಹುಸೇನರು ಅನ್ಯಾಯ ಪ್ರತಿಭಟಿಸಲು ಕೇವಲ ೭೨ ನಂಬಿಗಸ್ಥ ಅನುಯಾಯಿಗಳೊಡನೆ 'ಕರ್ಬಲ' ಮೈದಾನದಲ್ಲಿ ಯಜೀದನ ಬಲಿಷ್ಠ ಸೈನ್ಯವನ್ನು ಎದುರಿಸಲು ತೆರಳಿದರು. ಯುದ್ಧದಲ್ಲಿ ಅವರು ಮರಣಕ್ಕೀಡಾದರು. ಈ ಆತ್ಮ ಬಲಿದಾನದ ದಿನವೇ ಮೊಹರಂ ತಿಂಗಳಿನ ಹತ್ತನೆಯ ದಿನ ನಡೆಯಿತು.[೭೫] ಈ ಕುರಿತಾಗಿಯೇ ಮೊಹರಂ ಎಂಬ ಶೋಕಾಚರಣೆ ಚಾಲ್ತಿಗೆ ಬಂದಿತು.

ಹನಗಂಡಿಯಲ್ಲಿ ಗುದ್ದಲಿ ಹಾಕಿ ಐದು ದಿನಕ್ಕೆ ದೇವರು ಕೂರಿಸುವರು. ಈ ದೇವರು ಎಂದರೆ ಹಿತ್ತಾಳೆ, ತಾಮ್ರ, ಬೆಳ್ಳಿಯಿಂದ ಮಾಡಿದ ಮೂರು, ನಾಲ್ಕು, ಐದು ಬೆರಳಿನ 'ಆಲಂ'ಗಳು. ಈ ಆಲಂಗಳು ಸೇರಿ ಒಂದು 'ಡೋಲಿ'ಯಾಗುತ್ತದೆ. ಸಾಮಾನ್ಯವಾಗಿ ಆಲಂಗಳು ಹಸೇನ್, ಹುಸೇನ, ಮದರಸಾಬ, ಅಬ್ಬಾಸ ಅಲಿ, ಅಲಿ ಅಕ್ಬರ, ಕಾಸೀಂ ಸಾಬ್ ದವರದ್ದಾಗಿರುತ್ತವೆ. ಇವುಗಳಿಗೆ ಹಸಿರು ಬಟ್ಟೆಯನ್ನು ಕಟ್ಟಿರುತ್ತಾರೆ.

ಮೊಹರಂ ತಿಂಗಳಿನ ಒಂಭತ್ತನೆಯ ದಿನ ಕತ್ತಲರಾತ್ರಿ, ಹಸೇನ್ ಮತ್ತು ಹುಸೇನ ತೀರಿಕೊಂಡ ಪ್ರಯುಕ್ತ ಈ ಆಚರಣೆ. ಈ ದಿನ ಸಾಯಂಕಾಲ 'ಓದಿಕೆ ಊದಿಸುವ' ಎಂಬ ಸಂಪ್ರದಾಯ ಕಂಡುಬರುತ್ತದೆ. ಊರಿನ ಹಿಂದು-ಮುಸ್ಲಿಂರು ಚೊಂಗ್ಯಾ ಮತ್ತು ಕೊಬ್ಬರೀ

ಸೂಸಲ (ಮಾದ್ಲಿ), ಊದಿನ ಕಟ್ಟಿ, ಸಕ್ಕರೆ (ಬೆಲ್ಲ ಮತ್ತು ಹಿಟ್ಟಿನಿಂದ ಮಾಡಿದ ಸಕ್ಕರೆ) ಮುಂತಾದ ಸಾಮಗ್ರಿಗಳನ್ನು ಆಲಂಗಳಿರುವ ಜಾಗಕ್ಕೆ ತೆಗೆದುಕೊಂಡು ಹೋಗಿ ಅಲ್ಲಿರುವ ಮೌಲಿ ಅಥವಾ ಫಕೀರನಿಂದ ಆಶೀರ್ವಾದ ಪಡೆಯುವರು. ತದನಂತರ ಆ ಮೌಲಿ ಕೊಟ್ಟ ಕೆಂಪುದಾರ (ಲಾಡಿ, ಗಜರಾ) ಧರಿಸಿ ಪುನೀತರಾಗುವರು.

ಮುಳಗುಂದ ವಾಡೆ ಭಾಗವಾಗಿದ ಬು॥ ಕೊಪ್ಪ (ಕುಂದಗೋಳ ತಾ॥) ಎಂಬ ಗ್ರಾಮದಲ್ಲಿ ಹಸೇನ್-ಹುಸೇನರ ತಾಯಿಯಾದ ಬೀಬಿ ಫಾತೀಮಾ ಒಬ್ಬ ಹಿಂದು ಹೆಣ್ಣು ಮಗಳ ಶ್ರೀಮತಿ ದ್ಯಾಮವ್ವ ತಳವಾರ ಮೈಯಲ್ಲಿ ಬರುತ್ತಾಳೆ. ನೂರಾರು ಭಕ್ತರು ತಮ್ಮ ಸಮಸ್ಯೆಗಳಿಗೆ ಇವರಲ್ಲಿ ಪರಿಹಾರ ಕಂಡುಕೊಳ್ಳುವರು. ಸವಣೂರು, ಶಿಗ್ಗಾವಿ, ಲಕ್ಷ್ಮೇಶ್ವರ, ಹುಬ್ಬಳ್ಳಿ ಅಲ್ಲದೇ ಮುಂಬೈನಿಂದ ಭಕ್ತರು ಬಂದು ಪರಿಹಾರ ಕಂಡುಕೊಂಡ ಉದಾಹರಣೆಗಳಿವೆ. ಮೊಹರಂ ಹತ್ತನೆಯ ದಿನ ಡೋಲಿ ಸಹಿತ ದೇವರು ಬಂದ ಶ್ರೀಮತಿ ದ್ಯಾಮವ್ವನವರು ಊರಲ್ಲಿ ಉತ್ಸವಕ್ಕೆ ಹೋಗುತ್ತಾರೆ. ಊರಿನ ಪ್ರತಿಯೊಂದು ಮನೆಯವರು ಕಾಲಿಗೆ ನೀರು ಹಾಕಿ ಪುನೀತರಾಗುತ್ತಾರೆ. ಕೆಲವೊಂದು ಸಾರಿ ಡೋಲಿ ಕೆಲವರ ಮನೆಗಳಿಗೆ ಹೋಗಿ ಹೇಳಿಕೆ ಹೇಳುವುದುಂಟು. ಉತ್ಸವ ಮುಗಿದ ತರುವಾಯ ಮಸೀದಿಯ ಮುಂದೆ ಸುಮಾರು ೧೦ x ೨೦ ಅಡಿಯ ಗುಂಡಿಯಲ್ಲಿ ಕಟ್ಟಿಗೆಯ ತುಂಡುಗಳಿಂದ ಸುಟ್ಟ ಕೆಂಡದಲ್ಲಿ ಡೋಲಿ ಹೊತ್ತ ಯುವಕರು, ದೇವರು ಬಂದ ಹೆಣ್ಣು ಮಗಳು ಮತ್ತು ಭಕ್ತರು ಕೆಂಡ ಹಾಯುತ್ತಾರೆ. ತರುವಾಯ ದೇವರ ಹೇಳಿಕೆಗಳು ಶುರುವಾಗುತ್ತದೆ.

ಮೊಹರಂ ಇನ್ನೂ ಒಂದು ತಿಂಗಳಿರುವಾಗಲೇ ಹಳ್ಳಿಯ ಯುವಕರು ಕೋಲಾಟ, ಹೆಜ್ಜೆ ಕುಣಿತ, ಲೇಜಿಮ್ ಮೇಳದ ತರಬೇತಿಯಲ್ಲಿ ಮಗ್ನರಾಗಿರುತ್ತಾರೆ. ಮೊಹರಂ ಹತ್ತನೇ ದಿನ ಈ ರೀತಿಯ ಕಲೆಗಳು ಪ್ರದರ್ಶನಗೊಳ್ಳುತ್ತವೆ. ಜೊತೆಗೆ ವಿಶೇಷವಾದ ಕರ್ಬಲಾ ಪದಗಳು ಹಾಡಿನ ರೂಪದಲ್ಲಿ ಕೇಳಿಬರುತ್ತವೆ. ಕರ್ಬಲ ಪದಗಳು ದುಃಖ ವಾರ್ತೆಗಳು ಈ ಕರ್ಬಲ ಎಂಬುದು ಒಂದು ಸ್ಥಳ, ಇದು ಇರಾಕ್ ದೇಶದ ಬಾಗ್ದಾದ್ ನಗರದಿಂದ ೮೦ ಕಿ.ಮೀ. ದೂರದಲ್ಲಿದೆ. ಇಲ್ಲೆ ಹಸೇನ್-ಹುಸೇನರು ಮಡಿದಿದ್ದು ಎಂಬುದು ಜನಪದರ ನಂಬಿಕೆ. ಕರ್ಬ ಎಂದರೆ ದುಃಖ, ಬಲಾ ಎಂದರೆ ವಿಪತ್ತು.

ಕರ್ಬಲ ಪದಗಳು ಉತ್ತರ ಕರ್ನಾಟಕದಾದ್ಯಂತ ಕಂಡು ಬರುತ್ತವೆ. ಹುಬ್ಬಳ್ಳಿ ತಾಲ್ಲೂಕಿನ ಪಾಳೇ ಗ್ರಾಮದ ಶ್ರೀ ಬಸವನಗೌಡ ಶಿವನಗೌಡ ಶಿವನಗೌಡ್ರ,[೭೬] ಎಂಬುವರು ಅತ್ಯಂತ ಸೊಗಸಾಗಿ ಈ ಪದಗಳನ್ನು ಹಾಡುತ್ತಾರೆ. ಹಸೇನ್-ಹುಸೇನರನ್ನು ಕಳಕೊಂಡ ತಾಯಿ ದುಃಖತಳಾಗುವ ಬಗೆ ಎಂಥವರನ್ನೂ ಕಣ್ಣೀರು ಹಾಕಿಸಿಬಿಡುತ್ತದೆ.

ಸಲಹ ಕದನಕ ಹೋರಟಾರ್ ಹಸೇನ್ ಹುಸೇನ  
ಎಲ್ಲಿ ಹುಡಕಲೀ ನನ್ನ ಎರಡ ಮಕ್ಕಳನ ॥ಪ॥  
ತಾಯಿ ಅಳತಾಳೋ ಬೀಬಿ ಫಾತೀಮಾ  
ತಾಯಿ ಹಿಡಿತಾಳೋ ಕಲ್ಲು ಎಂಬ ಮಣ್ಣ ॥

ಅಣ್ಣ ತಮ್ಮಂದಿರ ಪರಾಕ್ರಮ ಮತ್ತು ಅವರು ಪ್ರಾಣತ್ಯಾಗದ ದುಃಖದಿಂದ ಪ್ರಕೃತಿಯು ರೋಧಿಸುತ್ತದೆ.

ಮೋಲಾಲಿ ಸ್ವಾಮಿ ಮಡಿದಾ ದಿನಾ
ಮುರಿದು ಬಿದ್ದಾಂಗಾತೋ ಕಾಸೀ ಗಗನ
ಹಸೇನ್ ಹುಸೇನ ಸ್ವಾಮಿ ಮಡಿದಾವ ದಿನಾ
ಮುರಿದು ಬಿದ್ದಾಂಗಾತೋ ಕಾಸೀ ಗಗನ
ಹಸೇನ ಹುಸೇನ ಸ್ವಾಮಿ ಚಂದ್ರಧರನ
ಕರಬಲದೋಳಗ ಮಾಡ್ಯಾರೋ ಕದನ
ವೈರಿ ದಂಡಿನೊಳಗ ಜಿಗಸ್ಯಾರೋ ಕುದರೀನ ॥

ಇಂಥಹ ಎಷ್ಟೋ ಪದಗಳನ್ನು ಇವರು ಹಾಡುತ್ತಾರೆ. 'ಹಜರತ್ ಇಮಾಮ್ ಹುಸೇನ ಹೋರಾಟ'ದ ಚಿತ್ರವನ್ನು ಜನಪದ ಕವಿ ರೇಖಿಸಿರುವ ಪರಿ ಅದ್ಭುತ.

ಲಡಾಯಿ ತಯ್ಯಾರಾ ಆದಾರ ಒಂಟೆ ಮ್ಯಾಲೆ ಸ್ವಾರಾ ।
ಹೊಂಟ ನಿಂತಾರೊ ಕರ್ಬಲಾ ಭೂಮಿಗೆ ಬಂಧ ಬಳಗ ಪೂರಾ ॥
ಆರ್‍ಯಾಣದಾಗವರಾ ಕಾಣದ ಮೂರ ದಿವಸ ನೀರಾ ।
ಕುಡದಾರೊ ಕಣ್ಣೀರಾ ಮಕ್ಕಳು ಹುಡುಗರು ಹೆಂಗಸರಾ ॥
ಜಂಗ ಎದರ ಬದರಾ ವೈರಿಯ ಮೋಸಕ ಜಯಕಾರಾ ।
ಶರಣು ಹೋಗದವರಾ ಸ್ವರ್ಗಕ್ಕೆ ಹೋದಾರೊ ಹಜರತರಾ ॥[೭೭]

ಈ ರೀತಿಯ ಕರ್ಬಲ ಅಥವಾ ಅಲಾವೀ (ಅಲಾಬಿ) ಪದಗಳನ್ನು ಹಾಡುತ್ತ ಕುಣಿಯುತ್ತ ಮೊಹರಂ ಹಬ್ಬ ಸಾಂಗವಾಗಿ ನೆರವೇರುತ್ತದೆ. ಹತ್ತನೇ ದಿನ ಡೋಲಿ ಮತ್ತು ಕೈ ದೇವರುಗಳು ಹೊಳೆಗೆ ಹೋಗುತ್ತವೆ. ಸಾಯಂಕಾಲ ೫ ಗಂಟೆಗೆ ಶುರುವಾಗಿ ರಾತ್ರಿ ೯ರ ಸುಮಾರಿಗೆ ಈ ಕಾರ್ಯಕ್ರಮ ಮುಕ್ತಾಯವಾಗುತ್ತದೆ. ಇಲ್ಲಿ ದೇವರು ಹೊಳೆಗೆ ಹೋಗುವುದೆಂದರೆ ಹಸೇನ್-ಹುಸೇನರು ಹುತಾತ್ಮರಾದರು ಎಂದರ್ಥ.

ಈ ರೀತಿ ಒಂದು ಮುಸ್ಲಿಂ ಹಬ್ಬವು ಪ್ರಭುತ್ವದ ಹಿತಾಸಕ್ತಿ ತಲೆಬಾಗಿ ಹಿಂದುಗಳ ಹಬ್ಬವಾಗಿಬಿಟ್ಟಿದೆ. ಈಗ ಈ ಹಬ್ಬದಲ್ಲಿ ಹಿಂದೂ ಆಚರಣೆಗಳು ಸಾಕಷ್ಟು ಪ್ರಮಾಣದಲ್ಲಿ ಸೇರಿಕೊಂಡುಬಿಟ್ಟಿವೆ. "ಅದರಲ್ಲೂ ವೀರಶೈವ ಮತದ ಪ್ರಭಾವ ವಿಶೇಷವಾಗಿದೆ. ವೀರಶೈವ ಪರಿಭಾಷೆಯ ಶಿವ, ಮಾದೇವ, ಹರ, ಶರಣ ಎಂಬ ಪದಗಳು ಸಾರ್ವತ್ರಿಕವಾಗಿ ಬಳಸಲ್ಪಟ್ಟಿವೆ"[೭೮]

ಒಂದೊಮ್ಮೆ ವಾಡೆಯ ಅಧಿಕಾರಿಗಳ ಫರ್ಮಾನಿನಿಂದ ನಡೆಯುತ್ತಿದ್ದ ಈ ಹಬ್ಬ ಈಗ ಸಂಸ್ಕೃತಿಯ ಒಂದು ಭಾಗವಾಗಿ ಬಿಟ್ಟಿದೆ. ಪ್ರಸ್ತುತದಲ್ಲಿ ಆದಿಲ್ ಷಾಯಿಗಳೂ ಇಲ್ಲ, ವಾಡೆಯವರ ಫರ್ಮಾನು ಇಲ್ಲ. ಆದರೆ ಜನರು ಮಾತ್ರ ತಮ್ಮ ನಿಷ್ಠೆ ಮಾತ್ರ ಮರೆತಿಲ್ಲ. ಜೈನ ಎಲ್ಲ ವಾಡೆಗಳಿಗೂ ಡೋಲಿ ಹೋಗಿ ಈ ದಿನ ಮಾಮಲೇದಾರನಿಗೆ ಆಶೀರ್ವದಿಸಿ ಬರುವ ಕ್ರಮ ಇಂದಿಗೂ ಇದೆ. ವಾಡೆಯ ಜನಗಳು ಇಂದಿಗೂ ಡೋಲಿಗೆ ನೀರು ಹಾಕಿ ಊದು ಹಾಕಿ ಗೌರವಿಸುವರು. ಹನಗಂಡಿ ಮತ್ತು ತೇರದಾಳದಲ್ಲಿ ಈ ದೇವರುಗಳನ್ನು ಕೂರಿಸುವುದು ಮತ್ತು ವಿಸರ್ಜಿಸುವುದು ದೇಸಾಯಿಗಳು ಮತ್ತು ನಾಡಗೌಡರ ಮೇಲುಸ್ತುವಾರಿಯಲ್ಲಿ ನಡೆಯುತ್ತದೆ.

### ಗೌರಿ ಹಬ್ಬ

ಗೌರಿ ಹೆಣ್ಣುಮಕ್ಕಳಿಗೆ ವರ ಕೊಡವ ದೇವತೆ. ಪಾರ್ವತಿಯ ಇನ್ನೊಂದು ಹೆಸರು ಗೌರಿ. ಗಣೇಶನ ಹಬ್ಬದ ಹಿಂದಿನ ದಿನ, ದೀಪಾವಳಿ ಪಾಡ್ಯಮಿ ದಿನ, ಭಾದ್ರಪದ ಮಾಸದಲ್ಲಿ ಗೌರಿ ಕುರಿಸುವ ಸಂಪ್ರದಾಯವಿದೆ. "ಪಾರ್ವತಿ ತಪೋನಿರತ ಶಿವನನ್ನು ಪೂಜಿಸಿ ಸುಮಂಗಲಿಯರಿಗೆ ವರವನ್ನು ಕರುಣಿಸು ಎಂದು ಪ್ರಾರ್ಥಿಸುತ್ತಾಳೆ. ಇದರ ಕುರುಹಾಗಿ ಮಹಿಳೆಯರು ಗೌರಿ ವ್ರತವನ್ನು ಆಚರಿಸುತ್ತಾರೆ."[೭೯] ಕರ್ನಾಟಕದಾದ್ಯಂತ ಈ ಹಬ್ಬವನ್ನು ಸುಮಂಗಲಿಯರು ಬೇರೆ ಬೇರೆ ದಿನಗಳಂದು ಆಚರಿಸಿದರೂ ಉದ್ದೇಶ ತಮ್ಮ ಸುಮಂಗಲಿತನದ ಚೀರಾಯುತನವನ್ನೆ ಬಯಸುವುದೇ ಆಗಿದೆ.

ಹನಗಂಡಿ, ತೇರದಾಳ, ದರೂರ ವಾಡೆಗಳಲ್ಲಿ ಕಾರ್ತಿಕ ಮಾಸ ಶುದ್ಧ ಹುಣ್ಣಿಮೆಯಂದು ಗೌರಿಯನ್ನು ಕೂರಿಸುತ್ತಾರೆ. ಇದು ಹಿಂದು ಸಂಪ್ರದಾಯದ ರೀತಿಯಲ್ಲಿಯೇ ನಡೆದರೂ ಜೈನ ಅಂಶಗಳು ಬಹುಪಾಲು ಸೇರಿಕೊಂಡಿವೆ. ಇಲ್ಲಿನ ಗೌರಿ ಶಿವನ ಹೆಂಡತಿ ಪಾರ್ವತಿ ಆಗಿರದೇ ಹನ್ನೊಂದನೆಯ ತೀರ್ಥಂಕರ ಶ್ರೇಯಾಂಸರ ಯಕ್ಷಿ ಗೌರಿಯಾಗಿದ್ದಳು. ಕಾಲಾನಂತರ ಸಿದ್ಧ ಮಾದರಿಯ ಹಿಂದು ಸಂಪ್ರದಾಯದ ಗೌರಿ ಆಚರಣೆ ಪ್ರಸ್ತುತದಲ್ಲಿ ಚಾಲ್ತಿಯಲ್ಲಿದೆ. ವಾಡೆಯ ಹೆಣ್ಣುಮಕ್ಕಳು ಗಂಡನ ಮನೆಯಿಂದ ತವರಿಗೆ ಬರುತ್ತಾರೆ. ಗೌರಿ ಕೂರಿಸುವ ದಿನ ವಾಡೆಯ ಹೆಣ್ಣು ಮಕ್ಕಳಿಗೆ ಎಲ್ಲಿಲ್ಲದ ಸಂಭ್ರಮ ಅಕ್ಕ-ತಂಗಿಯರು, ಅತ್ತಿಗೆ-ನಾದಿನಿಯರು ಹಿರಿಯ ಹೆಂಗಳೆಯರು ಹೊಸ ಬಟ್ಟೆ ಧರಿಸಿ ಸಂಪ್ರದಾಯ ಬದ್ಧವಾಗಿ ಗೌರಿ ಕೂರಿಸುತ್ತಾರೆ.

ಹೆಣ್ಣಿಗೆ ತವರು ಶ್ರೇಷ್ಠ ಗಂಡನ ಮನೆಯಲ್ಲಿ ಅಷ್ಟೈಶ್ವರ್ಯವಿದ್ದರೂ ಹೆಣ್ಣಿಗೆ ತವರೇ ಸ್ವರ್ಗ ಒಬ್ಬ ಜನಪದ ಮಹಿಳೆಗಂತೂ

ಹಾಲುಂಡ ತವರೀಗೆ ಏನೆಂದು ಹಾಡಲೆ ।
ಹೊಳೆದಂಡೆಲಿರುವ ಕರಕೀಯ । ಕುಡಿಯಂಗ ।
ಹಬ್ಬಲೆ ಅವರ ರಸಬಳ್ಳಿ[೮೦]

ಎಂದು ತವರ ಉಪಕಾರ ಸ್ಮರಣೆ ಮತ್ತು ಅವರ ಏಳ್ಗೆಯನ್ನೆ ಬಯಸುತ್ತಾಳೆ. ಇಂಥ ತವರು ಮನೆಗೆ ಸ್ತ್ರೀಯರು ಬರುವ ಸಲುವಾಗಿಯೇ ಗೌರಿ ಹಬ್ಬ ಆಚರಣೆಗೆ ಬಂದಂತೆ ತೋರುತ್ತದೆ ಯಾಕೆಂದರೆ ಈ ಹಬ್ಬಕ್ಕೆ ಹೆಣ್ಣುಮಕ್ಕಳು ಒಂದೆಡೆ ಸೇರಿದಂತಾಗುತ್ತದೆ. ತವರಿನ ಜೊತೆ ವಿವಾಹ ಪೂರ್ವದ ಸಂಭ್ರಮವನ್ನು ಮತ್ತೇ ಪಡೆದಂತಾಗುತ್ತದೆ. ಈ ಹಬ್ಬ ಆಚರಣೆ ಆಗುವುದೇ ಗೌರಿ ತವರು ಮನೆಗೆ ಹೋಗುವ ನಿಮಿತ್ತವಾಗಿ. ಆದ್ದರಿಂದಲೇ ಗೌರಿಯನ್ನು ತರುವಾಗ ಮೆರವಣಿಗೆ ಮೂಲಕ ತಂದು ಕೂರಿಸುತ್ತಾರೆ. ಹನಗಂಡಿ ವಾಡೆಯಲ್ಲಿ ಗೌರಿಯನ್ನು ತರುವುದು ಮೆರವಣಿಗೆ ಮೂಲಕವೇ. ಆ ಸಂದರ್ಭದಲ್ಲಿ ಹೆಣ್ಣು ಮಕ್ಕಳಲ್ಲಿ ಸಂತೋಷ ಸಡಗರ ಮುಗಿಲು ಮುಟ್ಟಿರುತ್ತದೆ. ವಾಡೆಗೆ ಬಂದ ಗೌರಿಯನ್ನು (ಕಟ್ಟಿಗೆಯಿಂದ ಮಾಡಿಸಿದ್ದು) ಸಂಪ್ರದಾಯ ಪ್ರಕಾರ ಪೂಜಾ ವಿಧಿ ವಿಧಾನಗಳಲ್ಲು ಮುಗಿಸಿ ಸ್ತ್ರೀಯರು ತಮ್ಮ ಸುಮಂಗಲಿತನಕ್ಕೆ ಚೀರಾಯುಷ್ಯವನ್ನು ಕೋರಿಕೊಳ್ಳುತ್ತಾರೆ. ಈ ಸಂದರ್ಭದಲ್ಲಿ ಸಕ್ಕರೆ ಆರತಿಯನ್ನು[೮೧] ಬೆಳಗುವ ಪದ್ಧತಿಯಿದೆ ಇದೇ ರೀತಿಯ ಆಚರಣೆ ತೇರದಾಳ ಮತ್ತು ದರೂರಿನಲ್ಲಿ ನಡೆಯುತ್ತದೆ.

ತವರಿಗೆ ಬಂದ ಪುತ್ರಿಯರನ್ನು ಖುಷಿಗೊಳಿಸಲು ದೇಸಾಯಿಗಳು ರಾತ್ರಿ ನಾಟಕವನ್ನೇರ್ಪಡಿಸುತ್ತಾರೆ. ವಾಡೆಯ ಎಲ್ಲ ಸದಸ್ಯರು ಪುರಜನರು ಸಂತೋಷದಿಂದ ನಾಟಕವನ್ನು ಇಡೀ ರಾತ್ರಿ ವೀಕ್ಷಿಸುವರು. ಈ ಮುಂಚೆ ಹೆಣ್ಣು ಮಕ್ಕಳು ಕೋಲಾಟ, ಹಾಡುಗಳ ಮನೋರಂಜನಾ ಕಾರ್ಯಕ್ರಮಗಳಲ್ಲಿ ಪಾಲ್ಗೊಂಡು ವರ್ಷದ ಬೇಸರವನ್ನು ಕಳೆದು ಉಲ್ಲಾಸತೆಯನ್ನು ಪಡೆಯುತ್ತಾರೆ.

**೩. ಮದುವೆ**

ಮದುವೆ ಎಂಬುದು ಗಂಡು-ಹೆಣ್ಣು ಒಟ್ಟಿಗೆ ಬದುಕುವ ಧಾರ್ಮಿಕ ವಿಧಿ-ವಿಧಾನದ ಆಚರಣೆ. ವಧು-ವರರ ಪರಸ್ಪರ ಒಪ್ಪಿಗೆ ನಿಮಿತ್ತ ಜರುಗುವ ಒಂದು ಸಂಭ್ರಮ. ಮನೆಯ ಹಿರಿಯರು, ಬಂಧು-ಬಳಗ, ಹಿತೈಷಿಗಳು ಈ ಕಾರ್ಯಕ್ರಮದಲ್ಲಿ ಭಾಗಿಯಾಗುತ್ತಾರೆ. ಈ ರೀತಿಯ ಗಂಡು-ಹೆಣ್ಣುಗಳ ಪವಿತ್ರ ಬಂಧನಕ್ಕೆ ಮದುವೆ ಎನ್ನುವ ರೂಢಿ ಜನಪದರಲ್ಲಿದೆ. ವಾಡೆಯ ಸದಸ್ಯರ ಮುದುವೆಯ ಚಿತ್ರಣ ಕೊಡುವುದು ಪ್ರಸ್ತುತ ಉದ್ದೇಶವಾಗಿದೆ.

ವಾಡೆಯಲ್ಲಿ ಒಂದು ಮದುವೆ ನಡೆಯುತ್ತಿದೆ ಎಂದರೆ ಒಂದು ಜಾತ್ರೆ ನಡೆದಂತೆ ಸರಿ. ಪುರುಜನರು, ಪರಗಣದ ಪ್ರಜೆಗಳು, ಇತರೆ ವಾಡೆಗಳು ದೇಸಾಯಿಗಳು, ಆಡಳಿತ ವರ್ಗದ ಪರಿವಾರ ಬಂಧು-ಬಳಗ, ಹಿತೈಷಿಗಳು ಮುಂತಾದ ಅನೇಕರು ಒಂದು ವಾಡೆಯ ಸದಸಯರು ಮದುವೆಯಲ್ಲಿ ಭಾಗವಹಿಸುತ್ತಿದ್ದರು. ಮುದುವೆಗೆ ಬಂದ ಅತಿಥಿಗಳ ಆತಿಥ್ಯ, ಅವರ ಕ್ಷೇಮ ವಿಚಾರ ವಾಡೆಯ ಸದಸ್ಯರು ವಿಚಾರಿಸಿಕೊಳ್ಳುತ್ತಿದ್ದರು. ಎಲ್ಲರಿಗೂ ಮೃಷ್ಟಾನ್ನ ಭೋಜನದ ವ್ಯವಸ್ಥೆ, ಫಲ-ತಾಂಬೂಲದ ವ್ಯವಸ್ಥೆ ಸರ್ವೇಸಾಮಾನ್ಯವಾಗಿತ್ತು. ಓಲಗದವರು, ಹಾಡುಗಾರರು, ಮೋಜಿನವರು, ವೇಷಧಾರಿಗಳು, ಮದುವೆಯ ಮನರಂಜನೆಯ ಮುಖ್ಯ

ಆಕರ್ಷಣೆಯಾಗಿರುತ್ತಿದ್ದರು. ದೇಸಾಯಿ ನಡೆಸುವ ಬಹುವೆಚ್ಚದ ಸಂಭ್ರಮವೇ ಮದುವೆ ಎಂದರೆ ತಪ್ಪಾಗುವುದಿಲ್ಲ.

ಸಾಮಾನ್ಯವಗಿ ವಾಡೆಯ ಸದಸ್ಯನಿಗೆ ವಧುವನ್ನು ತರುವುದು ಇತರೆ ಜೈನವಾಡೆಯಿಂದ ಘನತೆಗೆ ತಕ್ಕ ವಧುವಿನ ಅನ್ವೇಷಣೆ ಸಹಜವಾಗಿತ್ತು. ಈ ರೀತಿಯ ಆಯ್ಕೆ ಬಹುಶ: ವೃತ್ತಿ ಆಧಾರದಿಂದ ಬಂದದ್ದು ಎಂದು ಕಾಣುತ್ತದೆ. ದೇಸಗತಿ ಮತ್ತು ವಾಡೆಯ ನೀತಿ-ನಿಯಮಗಳನ್ನು ತಿಳಿದ ಹೆಣ್ಣು ಸಹಜವಾಗಿಯೇ ಗಂಡನ ಮನೆಗೆ ಹೊಂದಿಕೊಳ್ಳುತ್ತಾಳೆ ಎಂಬುದಾಗಿತ್ತು. ಬೇರೆ ವೃತ್ತಿಯ ಹೆಣ್ಣನ್ನು ತಂದರೆ ವಾಡೆ ಜ್ಞಾನ, ರೀತಿ-ರಿವಾಜುಗಳು ತಿಳಿಯದಾದ ಕಾರಣ ಗಂಡ ಹೆಂಡಿರಲ್ಲಿ ಅನ್ಯೂನ್ಯತೆ ಬರಲು, ಸೊಸೆ ವಾಡೆಗೆ ಹೊಂದಿಕೊಳ್ಳು ತುಂಬಾ ದಿನವೇ ನಡೆಯುತ್ತಿತ್ತು. ಹೆಣ್ಣನ್ನು ಕೊಡುವಾಗಲು ಇತರ ವಾಡೆಗೆ ಕೊಡಲಾಗುತ್ತಿತ್ತು.

ವಧು-ವರರ ಮನೆತನಗಳು ಶ್ರೀಮಂತವಾಗಿರುವುದರಿಂದ ಮಧುವೆ ವಿಜೃಂಭಣೆಯಿಂದಲೇ ನಡೆಯುತ್ತಿತ್ತು. ದೊಡ್ಡ ವೇದಿಕೆ, ವಧು-ವರರ ಮೆರವಣಿಗೆ, ಕುದುರೆ ಸವಾರಿ, ಕೋಲಾಟ ಸಂಭ್ರಮ ಇತರೆ ಮನೋರಂಜನಾ ಕಾರ್ಯಕ್ರಮಗಳಿಗೆ ಕೊರತೆ ಇರಲಿಲ್ಲ. ಸಾಮಾನ್ಯವಾಗಿ ವಾಡೆಗೆ ಹೆಣ್ಣನ್ನು ತರುವಾಗ ಪಂಡಿತರ ಸಲಹೆ ಕೇಳಲಾಗುತ್ತಿತ್ತು. ಅವರು ವಧು ಪರೀಕ್ಷೆ ನಡೆಸಿ, ಸರಿ ಎಂದರೆ ಮದುವೆ ಕಾರ್ಯಕ್ಕೆ ತಯಾರಿ ಮಾಡಲಾಗುತ್ತಿತ್ತು. ಇಲ್ಲಿ ಜಾತಕ ನೋಡುವ ಸಂಪ್ರದಾಯ ಇರಲಿಲ್ಲ. ಜೈನರಲ್ಲಿ ಜಾತಕ ಹೊಂದಾಣಿಕೆ ಸಂಪ್ರದಾಯ ಇಲ್ಲ. ಇತ್ತೀಚಿಗೆ ವೈದಿಕರ ಈ ಸಂಪ್ರದಾಯ ಜೈನರಲ್ಲಿಯೂ ನುಸುಳುತ್ತಿದೆ. ವಾಡೆಯಲ್ಲಿ ವರದಕ್ಷಿಣೆ ತೆಗೆದುಕೊಳ್ಳುವ ಸಂಪ್ರದಾಯ ಇತ್ತೋ-ಇಲ್ಲವೋ ಎಂಬ ಮಾಹಿತಿ ತಿಳಿದು ಬರುವುದಿಲ್ಲ. ಬಹುಶ: ದೇಸಾಯಿಯ ಹತ್ತಿರವೇ ಸಾಕಷ್ಟು ಸಂಪತ್ತು ಇರುವುದರಿಂದ ಅದು ಅಗತ್ಯವೂ ಇರಲಿಲ್ಲ ಎನ್ನಿಸುತ್ತದೆ.

ಮದುವೆ ಗೊತ್ತಾದ ಬಳಿಕ ವಾಡೆಯಲ್ಲಿ ತಿಂಗಳ ಮುಂಚಿತವಾಗಿಯೇ ತಯಾರಿ ನಡೆಯುತ್ತಿದ್ದವು. ಕಾಳುಗಳು ಹಸನು ಮಾಡುವಿಕೆ, ಮದುವೆ ಬೇಕಾಗುವ ಪೂಜಾ ಸಾಮಾಗ್ರಿಗಳ ಹೊಂದಾಣಿಕ, ಊಟದ ಚಟ್ನಿಗಳು, ಕಾರದ ತಯಾರಿಕೆ, ವಧು-ವರರ, ಮನೆತನದ ಸದಸ್ಯರ ಬಟ್ಟೆ ಬರೆಗಳ ಆಯ್ಕೆ, ಬಂಗಾರ ಆಭರಣಗಳ ಖರೀದಿ ಇತರೆ ಕಾರ್ಯಕ್ರಮಗಳ ಕಲರವ ವಾಡೆಯಲ್ಲಿ ನಿತ್ಯ ನೂತವಾಗುತ್ತಿತ್ತು.

ಮದುವೆಯ ಹಿಂದಿನ ದಿನ ಬೀಗರನ್ನು ವಾಡೆಗೆ ಬರಮಾಡಿಕೊಳ್ಳುವ ಕಾರ್ಯಕ್ರಮ, ಮದುಮಕ್ಕಳನ್ನು ಮಾಡುವುದು, ಅರಿಸಿನ ಹಚ್ಚುವ ಕಾರ್ಯಕ್ರಮ, ಮಾರನೆಯ ದಿನ ಸುರಗಿ ನೀರಿನ ಕಾರ್ಯಕ್ರಮ, ಮಾಂಗಲ್ಯಧಾರಣೆ, ಸಪ್ತಪದಿ, ಬಸದಿಯ ತೀರ್ಥಂಕರರ ದರ್ಶನ, ಹಿರಿಯರ ಆಶೀರ್ವಾದ ಪಡೆದುಕೊಳ್ಳುವುದು ಇತ್ಯಾದಿ ಸಂಪ್ರದಾಯಗಳೊಂದಿಗೆ ಮದುವೆಯ ಕಾರ್ಯಕ್ರಮ ಕೊನೆಗೊಳ್ಳುತ್ತದೆ. ಈ ಎಲ್ಲ ಸಂಪ್ರದಾಯಗಳು ಪರಂಪರಾಗತವಾಗಿ ಬಂದಂತಹುಗಳು. ಬಹುಶ: ಈಗಲೂ ಈ ರೀತಿಯ ಸಂಪ್ರದಾಯಗಳೇ ನಡೆದುಕೊಂಡೆ ಬರುತ್ತಿವೆ. ವಾಡೆಯ ಮದುವೆಯ ವಿಶೇಷತೆ ಎಂದರೆ ವೈಭವ.

**ಸಾಮಾನ್ಯರ ಯಾದಿ ಮೇ ಶಾದಿ**

ದೇಸಾಯಿ ವೈಭವದ ಮದುವೆ ಅನವಶ್ಯಕವಾಗಿದ್ದರೂ ಅನಿವಾರ್ಯವಾಗಿತ್ತು. ರಾಜ್ಯಾಡಳಿತದಲ್ಲಿ ವೈಭವದ ತೋರಿಕೆ ಸಹಜ. ಇದರ ತದ್ವಿರುದ್ಧವಾದ ಮದುವೆ ಸಂಭ್ರಮ ಜೈನ ಸಮಾಜದಲ್ಲಿ ನಡೆಯುತ್ತಿತ್ತು. ಸರಳ ಮತ್ತು ಅಪಾರ ಖರ್ಚು ರಹಿತ ಮದುವೆಗೆ 'ಯಾದಿ ಮೇ ಶಾದಿ' ಎಂಬ ಹೆಸರು. ಯಾದಿ ಮೇ ಶಾದಿ ಎಂದರೆ ವಧು-ವರರಿಗೆ ಕೊಡುವ ಮತ್ತು ಕೊಳ್ಳುವ ಸಲಕರಣೆ, ಹಣದ ಪಟ್ಟಿ ಮಾಡಿ, ಅದಕ್ಕೆ ಲಾಭಯತರ ಹಿರಿಯರು ಸಹಿ ಮಾಡಿ ನಂತರ ವಧು-ವರರ ಸಹಿ ಮಾಡಿಸಿ ನಡೆಸುವ ಮದುವೆ. ಈ ರೀತಿ ಮದುವೆ ಬೆಳಗಾವಿ, ಬಾಗಲಕೋಟೆ ಪ್ರದೇಶಗಳಲ್ಲಿ ಹೆಚ್ಚು ಆಚರಣೆಯಲ್ಲಿದ್ದುದರಿಂದ ಬಹುಶ: ಮರಾಠಿಗರ ಪ್ರಭಾವದಿಂದ ಈ ಪದ್ಧತಿ ಬಂದಿರಬಹುದು. ಈ ಲಘು ಮದುವೆ ಜೈನರಲ್ಲಿ ಇರುವುದು ವಿಶೇಷ.

**ಮದುವೆಯ ವಿಧಾನ.**

ವಧು ಪರೀಕ್ಷೆಯ ನಂತರ ವರನಿಗೆ-ವಧುವೂ ಮತ್ತು ವಧುವಿಗೆ ವರನೂ ಇಷ್ಟವಾದ ನಂತರ ಉಭಯತರ ಹಿರಿಯರು ಮಾತನಾಡಿ ಆ ಕ್ಷಣವೇ ಅಥವಾ ಒಂದೆರಡೂ ದಿನಗಳನ್ನು ಬಿಟ್ಟು ಮದುವೆ ನಿಶ್ಚಯ ಮಾಡುತ್ತಾರೆ. ಮದುವೆ ವಧುವಿನ ಮನೆಯಲ್ಲಿ ಅಥವಾ ಹತ್ತಿರದ ಬಸದಿಯಲ್ಲಿ ಮಾಡುವುದು ರೂಢಿ. ನಿಗದಿತ ದಿನದಂದು ವರನ ಪರಿವಾರದವರು (ಎಂಟು-ಹತ್ತು ಜನ) ವರನೊಡಗೂಡಿ ಬಂದು ಮದುವೆಗೆ ಬೇಕಾದ ತಾಳಿ, ಬಟ್ಟೆ, ಆಭರಣಗಳು, ಊಟದ ಇತರೆ ಖರ್ಚುಗಳನ್ನು ವಧು-ವರನ ಮನೆಯವರು ಸಮನಾಗಿ ಹಂಚಿಕೊಳ್ಳುತ್ತಾರೆ. ಮದುವೆ ಪಂಡಿತರ ಸಮ್ಮುಖದಲ್ಲಿ ನಡೆಯುತ್ತದೆ. ಮದುವೆಗೆ ಎರಡು ಮನೆಯವರು ಮತ್ತು ಅಕ್ಕಪಕ್ಕದ ಮನೆಯವರು ಸೇರಿ ಸುಮಾರು ೩೦-೪೦ ಜನರು ಸೇರಿರುತ್ತಾರೆ. ಅಷ್ಟೆ ಮದುವೆ ನಂತರ ವಧುವನ್ನು ವರನ ಮನೆಗೆ ಕರೆದೊಯ್ಯಲಾಗುತ್ತದೆ. ಇದು ಒಂದು ರೀತಿಯ ರಿಜಿಸ್ಟಾರ್ ಮದುವೆ ತರಹವೆ ಇದೆ.

**ಯಾದಿ ಮೇ ಶಾದಿ ಅನುಕೂಲಗಳು.**

೧. **ಕಡಿಮೆ ಖರ್ಚಿನ ಸರಳ ಮದುವೆ.**

೨. ಖರ್ಚನ್ನು ವಧು-ವರನ ಮನೆಯವರು ಸಮಾನವಾಗಿ ಹಂಚಿಕೊಳ್ಳುವುದರಿಂದ ವಧುವಿನ ಮನೆಯವರಿಗೆ ನಿರಾಂತಕವಾಗಿರಬಹದು.

೩. ವರದಕ್ಷಿಣೆಯ ಪ್ರಸ್ತಾಪವೇ ಇರುವುದಿಲ್ಲ.

೪. ಲಘುವಾಗಿ ನಡೆಯುವ ಮದುವೆಯೀದಮ ಅನ್ಯರು ವಧು-ವರರ ಬಗ್ಗೆ ಚಾಡಿ ಮಾತುಗಳನ್ನು ಹೇಳುವುದು ತಪ್ಪುತ್ತದೆ.

೫. ಲಗ್ನಪತ್ರಿಕೆ ಮುದ್ರಿಸುವುದು, ಹಂಚುವುದು ತಪ್ಪುತ್ತದೆ.

೬. ಮದುವೆಗಾಗಿ ವ್ಯಯಿಸುವ ಅಪಾರ ಸಮಯ ಉಳಿಯುತ್ತದೆ.
೭. ಅತಿಯಾದ ಮದುವೆಯ ಆಚರಣೆಗಳನ್ನು ತಪ್ಪಿಸಿದಂತಾಗುತ್ತದೆ.
೮. ಮದುವೆಯ ನಿಶ್ಚಯ ಉಭಯತರ ಪರಸ್ಪರ ಒಪ್ಪಗೆ ಮತ್ತು ಯಾದಿ (ಪಟ್ಟಿ)ಯಲ್ಲಿ ಸಹಿ ಮಾಡುವ ಮೂಲಕ ನೆರವೇರಿದ್ದರಿಂದ ಗಂಡ-ಹೆಂಡಿರಲ್ಲಿ ಜಗಳ ಒಡಮೂಡದು.

ಇಂಥಹ ಮದುವೆಗಳು ಈಗಲೂ ತೇರದಾಳ, ಹನಗಂಡಿ, ದರೂರು ವಾಡೆಯ ಪ್ರಾಂತಗಳಲ್ಲಿ ಜರುಗುತ್ತಿದ್ದು, ಜೈನರಲ್ಲಿ ಮಾತ್ರ ಚಾಲ್ತಿಯಲ್ಲಿರುವುದು ವಿಶೇಷ. ಆಧುನಿಕ ಎಲ್ಲ ಸಮಾಜದವರು 'ಯಾದಿ ಮೇ ಶಾದಿ' ವಿಧಾನವನ್ನು ಅನುಸರಿಸಿದ್ದೇ ಆದರೆ ಹೆಣ್ಣು ಹೆತ್ತವರು ನಿರಾಂತಕದಿಂದ ಇರಬಹುದು. ಅತಿಮುಖ್ಯವಾಗಿ ವರದಕ್ಷಿಣೆ ಎಂಬ ಮಹಾಮಾರಿಯನ್ನು ಹೊಡೆದೋಡಿಸಬಹುದು. ಈ ರೀತಿಯ ಮದುವೆಗಳನ್ನು ನಾಡಗೌಡರು ಪ್ರೋತ್ಸಾಹಿಸುತ್ತಿದ್ದರು ಎಂಬ ಮಾತನ್ನು ತೇರದಾಳದ ನಾಡಗೌಡತಿಯಾದ ಶ್ರೀಮತಿ ಜಯಶ್ರೀ ಅಮ್ಮ ನಾಡಗೌಡರು ವ್ಯಕ್ತಪಡಿಸಿದರು.

**೪. ಅಂತ್ಯಕ್ರಿಯೆ**

ವಾಡೆಯಲ್ಲಿ ಮಗುವಿನ ನಾಮಕರಣ, ತೊಟ್ಟಿಲು, ಸಮಾರಂಭ, ಶ್ರೀಮಂತ ಕಾರ್ಯ, ಮದುವೆ-ಮುಂಜಿ ಕಾರ್ಯಕ್ರಮಗಳಂತೆ ಮರಣ ಪ್ರಕ್ರಿಯೆಯೂ ಒಂದು ಆಚರಣೆಯಾಗಿದೆ. ವಾಡೆಯ ಸದಸ್ಯರು ಮರಣಿಸಿದರೆ ಪಾರಂಪರಿಕವಾಗಿ ನಡೆದು ಬಂದಿರುವ ಜೈನ ವಿಧಾನಗಳು ಆಚರಣೆಗಳು ನಡೆಯುತ್ತವೆ. ವ್ಯಕ್ತಿಯು ಮರಣ ಹೊಂದಿದ ಬಳಿಕ ವಾಡೆಯ ಬಂಧು-ಬಳಗಕ್ಕೆ, ಮಿತ್ರತ್ವ ಹೊಂದಿದ ಇತರೆ ವಾಡೆಯ ವ್ಯಕ್ತಿಗಳಿಗೆ ನಿಧನ ವಾರ್ತೆಯನ್ನು ಮುಟ್ಟಿಸಲಾಗುತ್ತದೆ. ಎಲ್ಲರು ಬಂದ ನಂತರ ಶವವನ್ನು ಸ್ನಾನಮಾಡಿಸಿ, ಪಂಡಿತ ಮಾರ್ಗದರ್ಶನದಂತೆ ಧಾರ್ಮಿಕ ಕಾರ್ಯ ನೆರವೇರಿಸಲಾಗುತ್ತದೆ.

ಸಕಲ ಧಾರ್ಮಿಕ ವಿಧಿ-ವಿಧಾನಗಳ ನೆರವೇರಿದ ಬಳಿಕ ಬಿದಿರ ಬೊಂಬುಗಳಿಂದ ಮಾಡಿದ ಛಟ್ಟದಲ್ಲಿ ಶವವನ್ನು ಮಲಗಿಸಿ ನಾಲ್ಕು ಜನ ಜೈನರೆ ಛಟ್ಟ ಎತ್ತುತ್ತಾರೆ. ಸತ್ತವ್ಯಕ್ತಿಯ ಮೊದಲ ಮಗ ಅಗ್ನಿಕುಂಡ (ಗಡಿಗೆ) ಕೈಯಲ್ಲಿ ಹಿಡಿದು ಛಟ್ಟದ ಮುಂದೆ ಸಾಗುತ್ತಾನೆ. ಶವ ಬರುವ ಮುಂಚೆಯೆ ದೇಸಾಯಿಗಳಿಗೆ ಸಂಬಂಧಿಸಿದ ಹೊಲದಲ್ಲಿ ಕಟ್ಟಿಗೆಗಳನ್ನು ಒಕ್ಕಟ್ಟುಮಾಡಿ ಇಡಲಾಗುತ್ತದೆ. ಶವವನ್ನು ಅದರ ಮೇಲೆ ಇರಿಸಿ ಛಟ್ಟವನ್ನು ಬೊರಲು ಹಾಕುತ್ತಾರೆ. ಕೊನೆಗೆ ಪಂಡಿತರ ಮಂತ್ರಪಠಣೆಯ ಜೊತೆಜೊತೆಗೆ ಮರಣಿಸಿದ ವ್ಯಕ್ತಿಯ ಹಿರಿಯ ಮಗ ಜನಕುಂಡಲವನ್ನು ಹೊತ್ತು ಮೂರು ಸಾರಿ ಚಿತೆಯನ್ನು ಸುತ್ತುತ್ತಾನೆ. ಈ ನಡುವೆ ಚಿತೆಗೆ ಅಗ್ನಿ ಸ್ಪರ್ಷವನ್ನೂ ಹಿರಿಯ ಪುತ್ರನೇ ಮಾಡಿರುತ್ತಾನೆ. ಮೂರು ಸುತ್ತು ಮುಗಿದ ಬಳಿಕ ತಿರುಗಿ ನೋಡದ ಹಾಗೆ ಜಲಕುಂಡಲವನ್ನು ಹೆಗಲಿಂದ ಕೆಳಗೆ ಬಿಟ್ಟು ಹೋಗುತ್ತಾನೆ.

ಶವವನ್ನು ಸುಟ್ಟು ಮೂರನೆಯ ದಿನ 'ಅಸ್ಥಿ' ಆಯುವ ಆಚರಣೆಯನ್ನು ನೆರವೇರಿಸಲಾಗುತ್ತದೆ. ಉರಿದು ಭೂದಿಯಾದ ಚಿತೆಯನ್ನು ಪೂಜಿಸಿ ಮರಣಿಸಿದ ವ್ಯಕ್ತಿಯ ಇಷ್ಟದ ತಿನಿಸುಗಳನ್ನು ಇಡಲಾಗುತ್ತದೆ. ಇವುಗಳನ್ನು ಕಾಗೆಗಳು ಬಂದು ತಿಂದಾಗ ಅಸ್ಥಿ ಆಯುವ ಕ್ರಿಯೆಗೆ ಚಾಲನೆ ಸಿಗುತ್ತದೆ. ಮರಣಿಸಿದ ವ್ಯಕ್ತಿ ಕಾಗೆ ರೂಪದಲ್ಲಿ ಬರುತ್ತಾನೆ ಎಂಬುವುದು ಜನಪದರ ಕಲ್ಪನೆ. ವಾಡೆಯ ಸದಸ್ಯರು ಊರ ಪ್ರಮುಖರು ಬಂಧುಗಳು ಅಸ್ಥಿಯನ್ನು ಆರಿಸಿ ಒಂದು ಗಡಿಗೆಯಲ್ಲಿ ಹಾಕುತ್ತಾರೆ. ತದನಂತರ ಹತ್ತಿರದ ಹೊಳೆಯಲ್ಲಿ ಅದನ್ನು ವಿಸರ್ಜಿಸಲಾಗುತ್ತದೆ. ಒಟ್ಟು ಹನ್ನೊಂದು ದಿನ ಸೂತಕದ ಕ್ರಮ ವಾಡೆಯಲ್ಲಿ ಅನುಸರಣೆಯಾಗುತ್ತಿದ್ದು ಹನ್ನೊಂದನೆಯ ದಿನ ಬಸದಿಯ ಪಂಡಿತರು ವಾಡೆಯನ್ನು ಮತ್ತು ವಾಡೆಯ ಸದಸ್ಯರನ್ನು ಗಂಧತೀರ್ಥದಿಂದ ಶುದ್ಧಗೊಳಿಸುತ್ತಾರೆ. ಗಂಧತೀರ್ಥ (ಗಂಧಪ್ರಸಾದ) ಎಂಬುದು ತೀರ್ಥಂಕರ ಬಿಂಬಕ್ಕೆ ಅಭಿಷೇಕ ಮಾಡಿದ ನೀರು, ಹನ್ನೆರಡನೆಯ ದಿನ 'ಹೊತ್ತವರ ಹೊರೆ' ಧಾರ್ಮಿಕ ವಿಧಾನ ಆಚರಿಸಲಾಗುತ್ತದೆ. ಮರಣ ಹೊಂದಿದ ವ್ಯಕ್ತಿಯ ಛಟ್ಟವನ್ನು ಮೊದಲು ಹೊತ್ತ ನಾಲ್ಕು ಜನ ಜೈನರನ್ನು ಕರೆದು ಅವರಿಗೆ ಭೋಜನ ವ್ಯವಸ್ಥೆ ಮಾಡಲಾಗುತ್ತದೆ. ಇದೇ ಹೊತ್ತವರ ಹೊರೆ ವಿಧಿ-ವಿಧಾನ ಛಟ್ಟ ಹೊತ್ತವರ ಹೊರೆ ತಮ್ಮ ಮೇಲೆ ಇರಬಾರದೆಂದು ಅವರಿಗೆ ಈ ರೀತಿಯ ಗೌರವ ಸೂಚಿಸಲಾಗುತ್ತದೆ.

ವ್ಯಕ್ತಿ ಮರಣಿಸಿದ ೧೩ನೆಯ ದಿನ ವಾಡೆಯಲ್ಲಿ ಪೂಜಾ ಕಾರ್ಯಕ್ರಮ ಏರ್ಪಡಿಸಲಾಗುತ್ತದೆ. ಪಂಡಿತರ ಸಮ್ಮುಖದಲ್ಲಿ ಪೂಜೆ ನೆರವೇರುತ್ತದೆ. ಬಂಧು-ಬಳಗ, ಪುರುಜನರು ಈ ಕಾರ್ಯಕ್ರಮ (ಶ್ರದ್ಧಾಂಜಲಿ)ದಲ್ಲಿ ಭಾಗಿಯಾಗುತ್ತಾರೆ. ಮರಣಿಸಿದ ವ್ಯಕ್ತಿಯ ನಿಮಿತ್ತ ವಾಡೆಯ ಸದಸ್ಯರು ಗೊತ್ತುಪಡಿಸಿದ ಫಲ, ಆಹಾರ, ತ್ಯಾಗ, ಕೆಟ್ಟ ಮಾಸನಗಳ ತ್ಯಾಗ ಮಾಡುತ್ತಾರೆ. ಉದಾ ಬಾಳೆಹಣ್ಣು ತಿನ್ನುವುದಿಲ್ಲ ಅನ್ನ ಉಣ್ಣಲಾರೆ, ಸಿಟ್ಟು ಮಾಡಿಕೊಳ್ಳಲಾರೆ ಇತ್ಯಾದಿ.

ವಾಡೆಯ ವ್ಯಕ್ತಿ ಮರಣಿಸಿದ ಅವನನ್ನು ವಾಡೆಯಿಂದ ಹೊರಗೊಯ್ಯುವಾಗ ಆಚರಿಸುವ ಒಂದು ವಿಶೇಷ ಸಂಪ್ರದಾಯ ದರೂರು ವಾಡೆಯಲ್ಲಿ ನಡೆಯುತ್ತದೆ. ಅದೇನೆಂದರೆ ವ್ಯಕ್ತಿಯ ಶವವನ್ನು ಹೊತ್ತು ಒಯ್ಯುವಾಗ ಹೊಸ್ತಿಲು ದಾಟಬಾರದೆಂಬುವ ನಿಯಮ. ಈ ಕಾರಣಕ್ಕಾಗಿಯೇ ದರೂರು ವಾಡೆಯ ಹೊಸ್ತಿಲ ಮಧ್ಯದಲ್ಲಿ ಒಂದು ಚಿಕ್ಕ ದಾರಿಯನ್ನು (ಸಂಧಿ) ಮಾಡಲಾಗಿದೆ. ಹೊಸ್ತಿಲು ದಾಟಿ ಹೋದರೆ ವಾಡೆಯಿಂದಲೇ ಹೊರಹೋದಂತಾಗುತ್ತದೆ. ಬಳಸಿ ಹೋದರೆ ಮರಣಿಸಿದ ವ್ಯಕ್ತಿ ನಮ್ಮ ವಾಡೆಯಲ್ಲಿಯೇ ಇದ್ದ ಹಾಗೆ ಆಗುತ್ತದೆ ಎಂದು ವಾಡೆಯ ಶ್ರೀ ರಾಹುಲ ನಾಯಕರು ಹೇಳುತ್ತಾರೆ.

ವಾಡೆ ಕೇವಲ ಕಟ್ಟಡವಾಗದೆ ಅದು ಆಡಳಿತದ ಮಜಲುಗಳ ಸಾಕ್ಷಿಯಾಗಿ, ಧಾರ್ಮಿಕ ಚಟುವಟಿಕೆಗಳ ತಾಣವಾಗಿ, ಸಾಮಾಜಿಕ ನ್ಯಾಯ ಸ್ಥಾನವಾಗಿ, ಹಬ್ಬ-ಹರಿದಿನಗಳ ಆಗರವಾಗಿ, ದಾನದ ಗಣಿಯಾಗಿ ಹೀಗೆ ಬಹುಮುಖ ಪಾತ್ರವನ್ನು ವಹಿಸಿತ್ತು. ಈಗ ಆ ಚಟುವಟಿಕೆಗಳ

ಅರ್ಧದಷ್ಟು ಇಲ್ಲವಾಗಿವೆ. ಆದರೆ ಅವು ನಡೆದಿದ್ದವು ಎಂಬುದಕ್ಕೆ ಸಾಕ್ಷಿಯಾಗಿ ಜೈನವಾಡೆಗಳು ಇನ್ನು ನಮ್ಮೊಡನಿವೆ.

**ಅಡಿ ಟಿಪ್ಪಣಿಗಳು**

೧. ಸಂಕ್ಷಿಪ್ತ ಕನ್ನಡ ನಿಘಂಟು (ಪರಿಷ್ಕೃತ): ಕನ್ನಡ ಸಾಹಿತ್ಯ ಪರಿಷತ್ತು. ೨೦೦೧. ಪುಟ-೧೨೪೦.

೨. ಡಾ॥ ಸೂರ್ಯನಾಥ ಕಾಮತ್: ಕರ್ನಾಟಕದ ಸಂಕ್ಷಿಪ್ತ ಇತಿಹಾಸ ಮೊದಲ ಮುದ್ರಣ ೧೯೭೩. ಎಂಟನೇ ಮುದ್ರಣ ೨೦೧೨. ಪುಟ-೧೯೫.

೩. 'THE SECRETARY OF STATE IN COUNCIL' ಬ್ರಿಟಿಷ್ ಸರಕಾರದಿಂದ ಕೊಡಮಾಡಲ್ಪಟ್ಟ ಪತ್ರ. ಅನುಬಂಧ ನೋಡಿ.

೪. ಶ್ರೀ ಸಂಗಪ್ಪ ಚ ಕಲ್ಯಾಣಿ: ಬಾಗಲಕೋಟೆ ಜಿಲ್ಲೆಯ ದೇಸಗತಿಗಳು (ಅಪ್ರಕಟಿತ ಪಿ.ಎಚ್.ಡಿ. ಮಹಾಪ್ರಬಂಧ) ೨೦೦೬, ಪುಟ-೧೪೭.

೫. ಅದೇ ಪುಟ-೧೪೭.

೬. ಅದೇ ಪುಟ-೧೪೭.

೭. ಅದೇ ಪುಟ-೧೪೬.

೮. ಸಂಕ್ಷಿಪ್ತ ಕನ್ನಡ ನಿಘಂಟು. ಪೂರ್ವೋಕ್ತ: ಪುಟ-೨೪೪.

೯. ಆನಂದಿಬಾಯಿ ಕೋಂ ಚಂದಪಯ್ಯ ದೇಶಪಾಂಡೆ, ಕಸಬೆ ಅಣ್ಣಿಗೇರಿ ಇವರು ತಮ್ಮ ವಂಶಾವಳಿ ದಾಖಲೆಯನ್ನು ALIENATION RECORD PRESS POONA ಇವರಲ್ಲಿ ಕೊಡಿ ಎಂದು ಕೇಳಿಕೊಂಡಾಗ ಆಗಿನ ಆ ಸಂಸ್ಥೆಯ ಕಮೀಷನರ್ ಕ್ರಿ.ಶ. ೧೮೪೪ರಲ್ಲಿ ಕೊಟ್ಟ ಅಣ್ಣಿಗೇರಿ ದೇಶಪಾಂಡೆ ವಂಶಾವಳಿಯ ದಾಖಲಾತಿ. ಅನುಬಂಧ ನೋಡಿ.

೧೦. ಆರ್.ಎಲ್. ಅನಂತರಾಮಯ್ಯ (ಮೂಲ: ಸುರೇಂದ್ರನಾಥ ಸೆನ್): ಮರಾಠರ ಆಡಳಿತ ವ್ಯವಸ್ಥೆ ಭಾಗ-೧, ೨೦೧೨. ಪುಟ-೧೯೬.

೧೧. ೧) THE SERETARY OF STATE IN CONCIL ಪತ್ರ
೨)ALIENATION RECORD PRESS POONA ಪತ್ರ ಅನುಬಂಧ ನೋಡಿ.

೧೨. ಆರ್.ಎಲ್. ಅನಂತ ರಾಮಯ್ಯ. ಪೂರ್ವೋಕ್ತ ಪುಟ. ೨೦೧.

೧೩. ಇತಿಹಾಸ ದರ್ಶನ ಸಂ ೧೩. ೧೯೯೮. ಪುಟ-೨೮೪.

೧೪. ಆರ್.ಎಲ್. ಅನಂತರಾಮಯ್ಯ, ಪೂರ್ವೋಕ್ತ ಪುಟ-೧೯೯

೧೫. ಶ್ರೀ ಸಂಗಪ್ಪ ಚ ಕಲ್ಯಾಣಿ ಪೂರ್ವೋಕ್ತ ಪುಟ-೧೬೬.

೧೬. ಅದೇ ಪುಟ-೧೬೬

೧೭. ಸೌತ್ ಇಂಡಿಯನ್ ಇನ್‌ಸ್ಕ್ರಿಪ್ಶನ್ಸ್ ಸಂ ೧೫. ನಂ ೭೧೬ ಮುಳಗುಂದ ಕ್ರಿ.ಶ. ೧೬೭೫ ಪುಟ ೪೪೧-೪೪೨. ಸಾಲು ೧೫-೧೭

೧೮. ಪಿ.ಜಿ. ಕೆಂಪಣ್ಣವರ, ಟಿ.ಆರ್. ಜೋಡಟ್ಟಿ: ಜೈನ ಕ್ಷೇತ್ರಗಳ ಐತಿಹ್ಯ ೧೯೯೦. ಪುಟ ೧೨೧-೨೨.

೧೯. ಕನ್ನಡ ಸಾಹಿತ್ಯ ಪರಿಷತ್ಪತ್ರಿಕೆ: ಸಂ ಡಾ॥ ಎಂ.ಎ. ಜಯಚಂದ್ರ. ಅಣ್ಣಿಗೇರಿಯ ಎರಡು ಜೈನ ಶಿಲಾಫಲಕ ಶಾಸನಗಳು - ಶ್ರೀ ಅಪ್ಪಣ್ಣ ಹಂಜೆ ೨೦೦೫ ಪುಟ ೫೮.

೨೦. ಶೋಧ (ಸಂಶೋಧನ ನಿಯತಕಾಲಿಕೆ) ಪ್ರಧಾನ ಸಂಪಾದಕರ ಡಾ. ಬಿ. ಯಶೋವರ್ಮ ಸಂ. ಡಾ. ಎಸ್.ಡಿ. ಶೆಟ್ಟಿ. ಅಣ್ಣಿಗೇರಿಯ ಜೈನ ದೇಸಗತಿ ಮನೆತನ (ಆದಿಕವಿ ಪಂಪನ ವಂಶಸ್ತರು) ಡಾ. ಅಣ್ಣಪ್ಪ ಎನ್. ಹಂಜೆ. ೨೦೧೩. ಪು-೪೫.

೨೧. ಡಾ. ಎಂ.ಎಂ. ಕಲಬುರ್ಗಿ, ಡಾ. ಪಿ.ಕೆ. ರಾಠೋಡ: ಶ್ರೀ ಜಗದ್ಗುರು ತೋಂಟದಾರ್ಯ ಸಂಸ್ಥಾನಮಠದ ದಾಖಲು ಸಾಹಿತ್ಯ ಸಂಪುಟ-ಒಂದು ೨೦೦೮.ಪುಟ-೮೩.

೨೨. ಡಾ. ಅಪ್ಪಣ್ಣ.ಎನ್.ಹಂಜೆ, ಅಣ್ಣಿಗೇರಿಯ ಜೈನ ದೇಸಗತಿ ಮನೆತನ (ಆದಿಕವಿ ಪಂಪನ ವಂಶಸ್ಥರು). ಶೋಧ-ಜುಲೈ-೨೦೧೩. ಪುಟ-೪೫.

೨೩. ಶ್ರೀಮತಿ ಜಯಶ್ರೀ ಪಾರ್ಶ್ವನಾಥ ನಾಡಗೌಡರು, ತೇರದಾಳ, ವಯಸ್ಸು-೭೦, ಸಂದರ್ಶನದ ದಿನಾಂಕ:೧೦-೦೯-೨೦೧೩.

೨೪. ಶ್ರೀಮತಿ ಜಯಶ್ರೀ ಪಾರ್ಶ್ವನಾಥ ನಾಡಗೌಡರು, ತೇರದಾಳ, ವಯಸ್ಸು-೭೦, ಸಂದರ್ಶನದ ದಿನಾಂಕ:೧೦-೦೯-೨೦೧೩.

೨೫. ಡಾ ಎಂ.ಎಂ. ಕಲಬುರ್ಗಿ ಡಾ. ಪಿ ಕೆ ರಾಠೋಡ (ಸಂ), ಶ್ರೀ ಜಗದ್ಗುರು ತೋಂಟದಾರ್ಯ ಸಂಸ್ಥಾನಮಠದ ದಾಖಲು ಸಾಹಿತ್ಯ ಸಂಪುಟ-ಒಂದು, ಪುಟ ೮೩-೮೪.

೨೬. ಶ್ರೀ ದಿನೇಶ ಆಚಾರ್, ಶಿಕ್ಷಕರು, ಹರಿಹರ. ವಯಸ್ಸು-೪೫, ಸಂದರ್ಶನದ ದಿನಾಂಕ:೧೦-೦೧-೨೦೧೪.

೨೭. ಶ್ರೀ ಪ್ರಸನ್ನಕುಮಾರ್ ಶಂಕ್ರಗೌಡ ದೇಸಾಯಿ, ಹನಗಂಡಿ, ವಯಸ್ಸು-೪೧, ಸಂದರ್ಶನದ ದಿನಾಂಕ:೧೧-೦೬-೨೦೧೩.

೨೮. ಡಾ. ಸಂಗಪ್ಪ.ಚ. ಕಲ್ಯಾಣಿ, ಉತ್ತರ ಕರ್ನಾಟಕದ ದೇಸಗತಿ ಮನೆತನಗಳ ನ್ಯಾಯಾಡಳಿತ. (ಕರ್ನಾಟಕ ಪಾಳೆಗಾರರ ನ್ಯಾಯಾಡಳಿತ), ಜಿ.ಹೆಚ್. ಪ್ರಸಾದ್ ಅಭಿನಂದನ ಸಂಪುಟ, ಸಂ.ಪ್ರೋ ಲಕ್ಷಣ್ ತೆಲಗಾವಿ, ಪುಟ ೩೩೮-೩೩೯.

೨೯. ಡಾ. ಜಿ.ಶಂ. ಪರಮಶಿವಯ್ಯ (ಸಂ) ಜನಪದ ಖಂಡಕಾವ್ಯ. ೨೦೧೫ ಪುಟ ೧೧-೧೨.

೩೦. ಡಾ. ಸಿ.ಯು. ಮಂಜುನಾಥ್ - ಶಾಸನಗಳು ಮತ್ತು ಕರ್ನಾಟಕ ಸಂಸ್ಕೃತಿ. ೨೦೧೨ ಪುಟ-೨೪೭.

೩೧. ಜಯವಂತ ಕುಳ್ಳಿ (ಮೂಲ ಯು.ಎಸ್. ಗೋಶಾಲ್) ಪ್ರಾಚೀನ ಭಾರತದ ಕಂದಾಯ ವ್ಯವಸ್ಥೆ ೨೦೧೩, ಪುಟ-೧೯

೩೨. ಡಾ. ಸಿ.ಯು. ಮಂಜುನಾಥ - ಶಾಸನಗಳು ಮತ್ತು ಕರ್ನಾಟಕ ಸಂಸ್ಕೃತಿ ೨೦೧೨, ಪುಟ-೨೪೭.

೩೩. ಡಾ. ಸೂರ್ಯನಾಥ ಕಾಮತ್ ಕರ್ನಾಟಕದ ಸಂಕ್ಷಿಪ್ತ ಇತಿಹಾಸ. ೨೦೧೨ ಪುಟ-೭೫.

೩೪. ಅದೇ ಪುಟ-೯೯.

೩೫. ಜೀ.ಶಂ. ಪರಮಶಿವಯ್ಯ (ಸಂ) ಕರ್ನಾಟಕ ಜಾನಪದ ಸಮೀಕ್ಷೆ. ೧೯೮೨ ಪುಟ-೩೭.

೩೬. ಶ್ರೀಮತಿ ಜಯಶ್ರೀ ನಾಡಗೌಡರು, ತೇರದಾಳ, ವಯಸ್ಸು-೭೦, ಸಂದರ್ಶನ ದಿನಾಂಕ:೦೧-೧೧-೨೦೧೫.

೩೭. ಸಂಗಪ್ಪ ಚ ಕಲ್ಯಾಣಿ, ಬಾಗಲಕೋಟೆ ಜಿಲ್ಲೆಯ ದೇಸಗತಿಗಳು (ಅಪ್ರಕಟಿನ ಮಹಾಪ್ರಬಂಧ). ೨೦೦೬ ಪುಟ-೧೦೮-೧೦೯.

೩೮. ಶ್ರೀ ಕೃಷ್ಣಗೌಡ ದೇಸಾಯಿ, ಹನಗಂಡಿ, ವಯಸ್ಸು-೮೦, ಸಂದರ್ಶನದ ದಿನಾಂಕ:೦೨-೧೧-೨೦೧೫.

೩೯. ಸಂಗಪ್ಪ ಚ ಕಲ್ಯಾಣಿ ಪೂರ್ವೋಕ್ತ ಪುಟ-೧೧೧.

೪೦. ಡಾ. ಎಂ ಎಂ. ಕಲಬುರ್ಗಿ, ಡಾ.ಪಿ.ಕೆ. ರಾಠೋಡ, (ಸಂ) ಶ್ರೀ ಜಗದ್ಗುರು ತೋಂಟದಾರ್ಯ ಸಂಸ್ಥಾನ ಮಠದ ದಾಖಲು ಸಾಹಿತ್ಯ ಸಂಪುಟ: ಒಂದು. ೨೦೦೮ ಪುಟ-೮೩.

೪೧. ಸಂಗಪ್ಪ ಚ ಕಲ್ಯಾಣಿ, ಪೂರ್ವೋಕ್ತ ಪುಟ-೧೧೧

೪೨. ಸುರೇಂದ್ರನಾಥ ಸೇನ್ ಕನ್ನಡಕ್ಕೆ ಆರ್.ಎಲ್ ಅನಂತರಾಮಯ್ಯ: ಮರಾಠರ ಆಡಳಿತ ವ್ಯವಸ್ಥೆ-೨೦೧೨. ಪುಟ-೨೦೧.

೪೩. ಅದೇ ಪುಟ-೨೦೧.

೪೪. ಪೇಷ್ವಾಸ್ ಡೈರೀಸ್. ಸಂಪುಟ-೦೯, ಪುಟ-೨೫೩.

೪೫. ಸಂಗಪ್ಪ ಚ ಕಲ್ಯಾಣಿ, ಪೂರ್ವೋಕ್ತ ಪುಟ-೧೧೫ ಮತ್ತು ಜಮಾ ಖರ್ಚಿನ ಬಾರನೀಸೆ ಮೋಡಿ ದಾಖಲೆಗಳು, ಕನ್ನಡಕ್ಕೆ ಲಕ್ಷ್ಮಪ್ಪ ಡಂಗಿ.

೪೬. ಸುರೇಂದ್ರನಾಥ ಸೇನ್ ಪೂರ್ವೋಕ್ತ ಪುಟ-೨೦೯-೨೧೧.

೪೭. ಅದೇ ಪುಟ-೧೪೨-೧೪೬.

೪೮. ಸಂಕ್ಷಿಪ್ತ ಕನ್ನಡ ನಿಘಂಟು (ಪರಿಷ್ಕೃತ: ಕನ್ನಡ ಸಾಹಿತ್ಯ ಪರಿಷತ್ತು-೨೦೦೦) ಪುಟ-೨೯೬.

೪೯. ಸುರೇಂದ್ರನಾಥ ಸೇನ್, ಪೂರ್ವೋಕ್ತ ಪುಟ-೧೫೨.

೫೦. ಅದೇ ಪುಟ-೧೬೭-೧೬೮.

೫೧. ಡಿ. ಪದ್ಮನಾಭ ಶರ್ಮ, ಜೈನಧರ್ಮ ಬೋಧೆ ಭಾಗ-೧, ೧೯೯೭, ಪುಟ-೭೬.

೫೨. ಡಾ. ವಸಂತಲಕ್ಷ್ಮಿ.ಕೆ. ತುಳುನಾಡಿನ ಜೈನದಾನ ಶಾಸನಗಳು, ತುಳುನಾಡಿನ ಜೈನ ಶಾಸನಗಳು : ಸಂ ಡಾ. ದೇವರಕೊಂಡಾರೆಡ್ಡಿ, ಡಾ. ಜಯಪ್ರಕಾಶ್ ಮಾವಿನಕುಳಿ, ೨೦೦೪, ಪುಟ ೪೦-೪೧.

೫೩. ಶ್ರೀ ಚಂದ್ರಪ್ಪ ಸಾತಪ್ಪ ಬಸ್ತಿ, ಅಣ್ಣಿಗೇರಿ ಪಾರ್ಶ್ವನಾಥ ಬಸದಿಯ ಪಂಡಿತರ ವಯಸ್ಸು ೭೫, ಸಂದರ್ಶನದ ದಿನಾಂಕ: ೨೩-೧೧-೨೦೧೩.

೫೪. ಶ್ರೀ ಅಪ್ಪಣ್ಣ ಎನ್ ಹಂಜೆ, ಅಣ್ಣಿಗೇರಿಯ ಎರಡು ಜೈನ ಶಿಲಾಫಲಕ ಶಾಸನಗಳು ಪುಟ ೫೭-೫೯.

೫೫. ಅದೇ ಪುಟ ೫೭.

೫೭. ಇಂದಿಗೂ ಈ ಆಚರಣೆಗಳು ಪಾಲನೆಗೊಳ್ಳುತ್ತಿವೆ. ಇಂದ್ರ-ಇಂದ್ರಾಣಿ, ಕುಬೇರ ದಂಪತಿಗಳು, ಧ್ವಜಾರೋಹಣ ದಂಪತಿಗಳು, ಯಜ್ಞನಾಯಕರು, ಮಂಗಳಕಲಶ, ಈಶ್ಯಾನೇಂದ್ರ ಇಂದ್ರಾಣಿ ದಂಪತಿಗಳು, ಮಂಟಪ ಉದ್ಘಾಟನೆ ದಂಪತಿಗಳು, ಅಷ್ಟ ಕುಮಾರಿಕೆಯರ ಆಯ್ಕೆಗಳು ಆಯಾ ಊರಿನ ನವನಿರ್ಮಿತ ಬಸದಿಯ ಪಂಚಕಲ್ಯಾಣ ಕಾರ್ಯಕ್ರಮ ನಿಮಿತ್ತ ನಡೆಯುತ್ತವೆ. ಈ ಆಯ್ಕೆಗಳು ಹರಾಜು ಮೂಲಕ ನಡೆಯುತ್ತವೆ. ಈ ಹರಾಜಿನಿಂದ ಬಂದ ಹಣ ಪಂಚಕಲ್ಯಾಣ ಕಾರ್ಯಕ್ರಮಕ್ಕೆ ಬಂದ ಶ್ರಾವಕ-ಶ್ರಾವಕಿಯರ ಊಟ-ವಸತಿಗಾಗಿ, ಕಾರ್ಯಕ್ರಮದ ಖರ್ಚಿಗಾಗಿ ಬಳಸಿಕೊಳ್ಳಲಾಗುತ್ತದೆ. ಹಣ ಉಳಿದಲ್ಲಿ ಬಸದಿಯ ಮುಂದಿನ ಕಾರ್ಯಕ್ರಮಕ್ಕೆ ಪುದುವಟ್ಟು ಇಡಲಾಗುತ್ತದೆ.

೫೭. ಶ್ರೀ ಶಿವಪ್ಪ ಪೂಜಾರ್ ಇವರು ಅಣ್ಣಿಗೇರಿ ದೇಶಪಾಂಡೆಯಲ್ಲಿ ೪೦ ವರ್ಷಗಳಿಂದ ಕೆಲಸ ಮಾಡುತ್ತಿದ್ದಾರೆ. ಹಿಂದಿನ ಕಾರಕೂನರಿಂದ ವಾಡೆಯ ಇತಿಹಾಸದ ಕೆಲವು ವಿಚಾರಗಳನ್ನು ತಿಳಿದುಕೊಂಡಿದ್ದಾರೆ. ಸಂದರ್ಶನದ ದಿನಾಂಕ: ೨೪-೧೧-೨೦೧೩.

೫೮. ಡಾ. ಎಂ ಎಂ ಕಲಬುರ್ಗಿ, ಡಾ. ಪಿ ಕೆ ರಾಠೋಡ (ಸಂ) : ಶ್ರೀ ಜಗದ್ಗುರು ತೋಂಟದಾರ್ಯ ಸಂಸ್ಥಾನಮಠದ ದಾಖಲು ಸಾಹಿತ್ಯ ಸಂಪುಟ-ಒಂದು, ಪುಟ ೮೩-೮೪.

೫೯. ಪಿ ಜಿ ಕೆಂಪಣ್ಣವರ, ಟಿ ಆರ್ ಜೋಡಟ್ಟಿ : ಜೈನ ಕ್ಷೇತ್ರಗಳ ಐತಿಹ್ಯ ಪುಟ-೧೨೧.

೬೦. ಅದೇ ಪುಟ ಶಾಸನ ಸಾಲು ೨-೩.

೬೧. ಅಕ್ಷತೆ, ಜಲ, ಗಂಧ, ಪುಷ್ಪ, ಧೂಪ, ದೀಪ, ನೈವೇದ್ಯ, ತಾಂಬೂಲಗಳಿಂದ ಮಾಡುವ ಎಂಟು ತರಹದ ಅರ್ಚನೆ.

೬೨. ಶ್ರೀ ನೀಲೇಶ್ ಜಕ್ಕಪ್ಪ ದೇಸಾಯಿ, ಹನಗಂಡಿ, ವಯಸ್ಸು-೪೫, ಸಂದರ್ಶನದ ದಿನಾಂಕ: ೨೦-೧೧-೨೦೧೩.

೬೩. ಶ್ರೀ ಪ್ರಸನ್ನಕುಮಾರ ಶಂಕರಗೌಡ ದೇಸಾಯಿ, ವಯಸ್ಸು-೪೩, ಸಂದರ್ಶನದ ದಿನಾಂಕ: ೨೦-೧೧-೨೦೧೩.

೬೪. ಶ್ರೀ ಕೃಷ್ಣಗೌಡ ಅಲ್ಲಪ್ಪ ದೇಸಾಯಿ, ವಯಸ್ಸು-೮೦, ಸಂದರ್ಶನದ ದಿನಾಂಕ: ೨೦-೧೧-೨೦೧೩.

೬೫. ಶ್ರೀ ನಾಗರಾಜ ರಂಗಪಯ್ಯ ದೇಶಪಾಂಡೆ, ವಯಸ್ಸು-೩೫, ಸಂದರ್ಶನದ ದಿನಾಂಕ: ೧೦-೦೬-೨೦೧೬.

೬೬. ಶ್ರೀ ರಂಗಪಯ್ಯ ನಾಗಪಯ್ಯ ದೇಶಪಾಂಡೆ, ಮುಳಗುಂದ, ವಯಸ್ಸು-೭೦, ಸಂದರ್ಶನದ ದಿನಾಂಕ: ೧೦-೦೬-೨೦೧೩.

೬೭. ಎಸ್.ಐ.ಐ ಸಂ-೧೫, ೭೧೬, ಮುಳಗುಂದ, ಗದಗ ತಾಲ್ಲೂಕು, ಧಾರವಾಡ ಜಿಲ್ಲೆ (ಈಗ ಗದಗ ಜಿಲ್ಲೆ) ಪುಟ ೪೪೧-೪೪೨, ಸಾಲು ೧-೧೭.

೬೮. ಶ್ರೀ ರಾಹುಲ ನಾಯಕ, ವಯಸ್ಸು-೩೫, ಸಂದರ್ಶನದ ದಿನಾಂಕ: ೧೧-೦೭-೨೦೧೩.

೬೯. ಶ್ರೀಮತಿ ಜಯಶ್ರೀ ನಾಡಗೌಡ ವಯಸ್ಸು-೭೦, ಸಂದರ್ಶನದ ದಿನಾಂಕ: ೧೧-೦೭-೨೦೧೩.

೭೦. ಶ್ರೀಮತಿ ಜಯಶ್ರೀ ಪಾರ್ಶ್ವನಾಥ ನಾಡಗೌಡ, ತೇರದಾಳ, ವಯಸ್ಸು ೭೦ ಸಂದರ್ಶನದ ದಿನಾಂಕ ೨೦-೧೧-೨೦೧೩.

೭೧. ಸುಗಂಧದ ನೀರು, ಪನ್ನೀರು (ಗಂಧೋದಕಾದಿಗಲಿಂ ಮಾಡುವ ಸವನಮುಂ: ಆದಿಪು, ೧೫,೧೩ವ, ಚಂಪೂನುಡಿಗನ್ನಡಿ – ಡಾ. ಪಿ.ವಿ. ನಾರಾಯಣ. ಗಂಧ + ಉದಕ = ಗಂಧೋದಕ. ತೀರ್ಥಂಕರರಿಗೆ ಅಭಿಷೇಕ ಮಾಡಿದ ಗಂಧದ ನೀರು. ಜೈನರು ಈ ನೀರನ್ನು ಪವಿತ್ರ ಎಂದೇ ಪರಿಗಣಿಸುತ್ತಾರೆ. ಬಸದಿಯಲ್ಲಿ ಪೂಜೆಯ ನಂತರ ಶ್ರಾವಕರಿಗೆ ಗಂಧೋದಕವನ್ನು ಶುಭವಾಗಲಿ ಎಂಬ ಆಶೀರ್ವಚನದ ಮೂಲಕ ತಲೆಯ ಮೇಲೆ ಹಾಕಲಾಗುತ್ತದೆ.

ಹಬ್ಬ, ಅಮವಾಸೆ ಹುಣ್ಣಿವೆಗಳಂದು ಮನೆಯ ಎಲ್ಲ ಜಾಗೆಗಳಿಗೂ ಈ ನೀರನ್ನು ಯಾವುದೇ ರೀರಿಯ ಸಂಕಷ್ಟಗಳು ಬರದಿರಲಿ ಎಂದೂ, ಮನೆ ಮನೆತನ ನೂರುಕಾಲ ಉತ್ತರೋತ್ತರವಾಗಿ ಬಾಳಲಿ ಎಂದು ಸಿಂಪರಿಸುತ್ತಾರೆ. ಮನೆಯಲ್ಲಿ ಯಾರಾದರೂ ಜಿನೈಕ್ಯರಾದಾಗ ೧೩ನೇ ದಿನಕ್ಕೆ ಈ ನೀರನ್ನು ಹಾಕಿ ಶುದ್ಧಮಾಡಲಾಗುತ್ತದೆ.

೭೨. ಬಸದಿಗೆ ಹೋದಾಗ ಶ್ರಾವಕರು ಅಕ್ಷತೆಯ ಪುಂಜ (ಗುಂಪೆ)ವನ್ನಿಟ್ಟು ತೀರ್ಥಂಕರರ ದರ್ಶನ ಮಾಡುತ್ತಾರೆ. ಪುಂಜವನ್ನಿಡಲು ಅಕ್ಕಿಯನ್ನು ಬಳಸಲಾಗುತ್ತದೆ. ಅಕ್ಕಿ (ಅಕ್ಷತೆ)ಯು ಸಸ್ಯದ ಅಂಕುರತೆಯನ್ನು ಕಳೆದುಕೊಂಡಿದ್ದರಿಂದ ಈ ದಾನ್ಯವನ್ನು ಇಲ್ಲಿ ಬಳಸಲಾಗುತ್ತದೆ. ಸಮ್ಯಗ್ ಜ್ಞಾನ, ದರ್ಶನ, ಚಾರಿತ್ರ್ಯ ಫಲಗಳು ಈ ಕ್ರಮದಿಂದ ದೊರೆಯುತ್ತವೆ. ಪುಂಜ ಇಟ್ಟ ನಂತರ ಪುಷ್ಪ ಪುಂಜಗಳು ಮೂರು ೧) ಪಂಚ ಪರಮೇಷ್ಠಿ ಪುಂಜ, ೨) ಪೂಜಾಪಾಠದ ಪುಂಜ, ೩) ನವದೇವತಾ ಪುಂಜ.

೭೩. ಶ್ರೀ ನಾಗರಾಜ ರಂಗಪಯ್ಯ ದೇಶಪಾಂಡೆ, ಮುಳಗುಂದ. ವಯಸ್ಸು ೩೫ ಸಂದರ್ಶನದ ದಿನಾಂಕ ೧೦-೦೬-೨೦೧೩.

೭೪. ಶ್ರೀ ಭೂಪಾಲ.ಬ. ನಾರಿಗೊಂಡ, ತೇರದಾಳ ವಯಸ್ಸು ೭೦ ಸಂದರ್ಶನದ ದಿನಾಂಕ: ೨೦-೧೧-೨೦೧೩.

೭೫. ಕನ್ನಡ ವಿಷಯ ವಿಶ್ವಕೋಶ, ಜಾನಪದ, ಕುವೆಂಪು ಕನ್ನಡ ಅಧ್ಯಯನ ಸಂಸ್ಥೆ, ಮೈಸೂರು ವಿಶ್ವವಿದ್ಯಾಲಯ ೨೦೦೬. ಪುಟ-೨೫೨.

೭೬. ಶ್ರೀ ಬಸವನಗೌಡ ಶಿವನಗೌಡ ಶಿವನಗೌಡ್ರ ಪಾಳೆ ತಾ॥ ಹುಬ್ಬಳಿ, ಜಿ॥ ಧಾರವಾಡ. ವಯಸ್ಸು ೬೫ ಸಂದರ್ಶನದ ದಿನಾಂಕ: ೧೦-೦೧-೨೦೧೩.

೭೭. ಕನ್ನಡ ವಿಷಯ ವಿಶ್ವಕೋಶ. ಜಾನಪದ. ಪೂರ್ವೋಕ್ತ ಪುಟ. ೨೫೩.

೭೮. ಅದೇ ಪುಟ ೨೫೩.

೭೯. ಅದೇ ೫೦೨.

೮೦. ಹಲಸಂಗಿಯ ಚೆನ್ನಮಲ್ಲಪ್ಪ, ಲಿಂಗಪ್ಪ, ರೇವಪ್ಪ ಮೊದಲಾದ ಗೆಳೆಯರು ಗರತಿಯ ಹಾಡು (ತ್ರಿಪದಿ ಸಂಗ್ರಹ) ೨೦೧೨. ಪುಟ ೫೫.

೮೧. ಸಕ್ಕರೆಯನ್ನು ಹದವಾಗಿ ನೀರಿನಲ್ಲಿ ಕುದಿಸಿ ಪಾಕಮಾಡಲಾಗುತ್ತದೆ. ಸಕ್ಕರೆ ಕುದಿಯುವಾಗಲೇ ವಿವಿಧ ಬಣ್ಣಗಳನ್ನು ಬೆರೆಸಲಾಗುತ್ತದೆ. ಹದಗೊಂಡ ಸಕ್ಕರೆಯನ್ನು ಕಟ್ಟಿಗೆಯಿಂದ ತಯಾರಿಸಿದ ಅಚ್ಚುಗಳಲ್ಲಿ ಹಾಕಲಾಗುತ್ತದೆ. ಅರ್ಧ ಗಂಟೆ ಬಿಟ್ಟು ತೆಗೆದಾಗ ಸಕ್ಕರೆಯ ಗೊಂಬೆಗಳು ನಿರ್ಮಾಣವಾಗುತ್ತವೆ. ತೇರು, ದೇವಾಲಯ, ಕುದುರೆ, ಆನೆ, ಎತ್ತು, ನವಿಲು, ಮನುಷ್ಯರು, ಆಟವಾಡುವ ಬಾಲಕ-ಬಾಲಕಿಯರ ಇತ್ಯಾದಿ ಗೊಂಬೆಗಳು ಮಾದರಿಯ ಲಭ್ಯ. ಈ ಸಕ್ಕರೆ ಗೊಂಬೆಗಳನ್ನು ಆರತಿ ತಟ್ಟೆಯಲ್ಲಿಟ್ಟುಕೊಂಡು ಹೆಂಗಳೆಯರು ಗೌರಿಗೆ ಬೆಳಗುತ್ತಾರೆ. ಇವುಗಳನ್ನು ಬೆಳಗುವ ಉದ್ದೇಶ ಜೀವನ ಸಕ್ಕರೆಯಂತೆ ಸಿಹಿಯಾಗಿರಲಿ ಎಂಬುದು.

## ಅಧ್ಯಾಯ–ಆರು

# ವಾಡೆಯ ನಿರ್ಮಾಣ

ಅಧ್ಯಾಯ–ಆರು

# ವಾಡೆಯ ನಿರ್ಮಾಣ

ಅಲೆಮಾರಿ ಮಾನವನನ್ನು ಒಂದು ಕಡೆ ಇರುವಂತೆ ಮಾಡಿದ್ದು ವಸತಿ. ಪ್ರಾರಂಭದ ಹಂತದಲ್ಲಿ ಮರದ ಪೊಟರೆ, ಕಲ್ಲಿನ ಪೊಟರೆ, ಗುಹೆ ಇತ್ಯಾದಿ ನಿಸರ್ಗದತ್ತ ತಾಣಗಳು ಮಾನವನ ವಾಸಸ್ಥಾನಗಳಾಗಿದ್ದುವು. ಆತನ ಜ್ಞಾನ ನೆಲೆಗಳು ವಿಕಸನಗೊಂಡಾಗ ಸೃಷ್ಟಿಯಾದದ್ದೆ ಗುಡಿಸಲು. ಬಹುಶ: ಪಕ್ಷಿಗಳು ಕಟ್ಟುತ್ತಿದ್ದ ಗೂಡು ಮನುಷ್ಯನ ಗುಡಿಸಲಿಗೆ ಪ್ರೇರಣೆಯಾದಂತೆ ತೋರುತ್ತದೆ. ನಿತ್ಯ ಪ್ರಕೃತಿಯ ಒಡನಾಡಿಯಾದ ಮನುಷ್ಯನಿಗೆ ಗುಡಿಸಲು ನಿರ್ಮಾಣದಂತಹ ಕಾರ್ಯ ಸುಲಭ ಸಾಧ್ಯವಾಯ್ತು. ಏಕೆಂದರೆ ಪ್ರಕೃತಿಯಲ್ಲಿ ದೊರೆಯಬಹುದಾದ ಹುಲ್ಲು, ಮರದ ತುಂಡುಗಳು, ತೊಗಟೆ ಇತ್ಯಾದಿ ಸಾಮಗ್ರಿ ಯಥೇಚ್ಛವಾಗಿ ದೊರೆತದ್ದರಿಂದ ಗುಡಿಸಲು ಸುಲಭವಾಗಿಯೇ ಸೃಷ್ಟಿಯಾಯ್ತು. ಹೀಗೆ ಗುಡಿಸಲು ನಿರ್ಮಿಸುವಾಗ ಮಾನವ ಬಹುಮುಖ್ಯವಾಗಿ ತನ್ನ ಮೂಲಭೂತ ಅವಶ್ಯವೆನಿಸಿದ ನೀರಿನ ಇರುವಿಕೆಯನ್ನು ನೋಡುತ್ತಿದ್ದ. ದಿನಕಳೆದಂತೆ ಗುಡಿಸಲು ಹಾಳಾಗದಿರಲೆಂದು ಎತ್ತರದ ಸ್ಥಳವನ್ನು ನಿರ್ಮಾಣ ಹಂತದಲ್ಲಿ ಗಮನಿಸತೊಡಗಿದ. ಏಕೆಂದರೆ ಗುಡಿಸಲು ತಗ್ಗಿನಲ್ಲಿದ್ದರೆ ನೀರು ಸುಲಭವಾಗಿ ಒಳನುಗ್ಗುವುದರಿಂದ ಈ ವ್ಯವಸ್ಥೆ ಕಂಡುಕೊಂಡ. ಎತ್ತರದ ಸ್ಥಳ ಸುರಕ್ಷತೆ, ಗಾಳಿ, ಬೆಳಕು ಸೌಲಭ್ಯಗಳಿಂದ ಕೂಡಿರುತ್ತದೆ ಎಂದು ಅರಿತ ಮೇಲೆ ಊರುಗಳೂ ಅಲ್ಲೆ ನಿರ್ಮಾಣಗೊಂಡವು. ಈಗಲೂ ನಮ್ಮ ಬಹುತೇಕ ಗ್ರಾಮಗಳು ನೆಲನಿಂತಿದ್ದು ಎತ್ತರದ ಪ್ರದೇಶ ಮತ್ತು ನೀರು ಇರುವ ಕಡೆ.

ವಸತಿ ಮಾನವನ ಸಂಸಾರದ ಚಟುವಟಿಕೆಯ ತಾಣವಾದ ಮೇಲೆ ಅದರ ಕಡೆ ಹೆಚ್ಚು ಗಮನಹರಿಸತೊಡಗಿದ. ಪ್ರಾರಂಭದಲ್ಲಿ ಗುಡಿಸಲು ಹಂತದಲ್ಲಿದ್ದ ವಸತಿ ಮನೆಯಾದದ್ದು ರಕ್ಷಣೆಯ ದೃಷ್ಟಿಯಿಂದ. ಗುಡಿಸಲಿನಲ್ಲಿ ಸುರಕ್ಷತೆ ಕಡಿಮೆ. ಕ್ರಿಮಿ ಕೀಟಗಳು, ವಿಷ ಜಂತುಗಳು ಸುಲಭವಾಗಿ ಪ್ರವೇಶ ಮಾಡಬಹುದಿತ್ತು. ಆದ್ದರಿಂದಲೆ ಗುಡಿಸಲುಗಳಿಗೆ ಮಣ್ಣು ಮೆತ್ತುವ ಕ್ರಮವೂ ರೂಢಿಯಾಯ್ತು. ಕಾಲಾನಂತರ ಮಣ್ಣೇ ಗೋಡೆಯಾಗಿ ಭದ್ರಗೊಂಡಿತು. ಬಾಗಿಲು ವ್ಯವಸ್ಥೆ ಬಂದಿದ್ದು ಈ ಹಂತದಲ್ಲಿಯೇ. ಮಳೆ, ಗಾಳಿ, ಚಳಿಯಿಂದಲೂ ಮಣ್ಣಿನ ಮನೆ ಸುರಕ್ಷತೆ ಎನಿಸತೊಡಗಿತು. ಇದೇ ಮುಂದುವರೆಯಿತು. ಮನುಷ್ಯ ಸಂಘ ಜೀವಿಯಾದ ನಂತರ ಊರು, ಪಟ್ಟಣ, ನಗರಗಳು ಬೆಳೆದು ರಾಜಸತ್ತೆಯ ನೆಲೆಗಳು ಭದ್ರವಾಗತೊಡಗಿದವು. ರಾಜಸತ್ತೆಯ ಕಾಲದಲ್ಲಿ ವಸತಿ ಕಲ್ಪನೆ ಗಣನೀಯ ಪ್ರಮಾಣದಲ್ಲಿ ಬದಲಾಯಿತು. ಕಾರಣ ಮನುಷ್ಯನ ಆರ್ಥಿಕ ನೆಲೆಗಟ್ಟಿನ ಸ್ಥಿತಿ.

ಮನುಷ್ಯನ ಆರ್ಥಿಕ ನೆಲೆಗಟ್ಟು ಬದಲಾದಂತೆ ಅವನ ವಸತಿ ನೆಲೆಯೂ ನಾವೀನ್ಯವಾಗತೊಡಗಿತು. ಸಾಮಾನ್ಯ ಮಣ್ಣಿನ ಮನೆಯಲ್ಲಿ ವಾಸಿಸತೊಡಗಿದರೆ, ಶ್ರೀಮಂತ ಅತಿಶ್ರೀಮಂತ, ರಾಜ ಮುಂತಾದವರು ಕಲ್ಲಿನ ಗೋಡೆಯಿಂದ ನಿರ್ಮಾಣವಾದ ಮನೆಯಲ್ಲಿ ವಾಸಿಸತೊಡಗಿದರು. ಸಾಮಾನ್ಯ ಮನೆಗಳಲ್ಲಿ ಇರದ ಹೆಚ್ಚಿನ ಕೋಣೆಯ ವ್ಯವಸ್ಥೆ ಈ ಮನೆಗಳಲ್ಲಿ ಕಾಣತೊಡಗಿದುವು. ಜೊತೆಗೆ ಕಟ್ಟಿಗೆಯೂ ಒಳ ಅಲಂಕಾರವಾಗಿ ಬಳಕೆಯಾಗತೊಡಗಿತು.

ಇನ್ನು ರಾಜನ ಅರಮನೆಯಂತೂ ವೈಭವದಿಂದಲೇ ಕೂಡಿರುತ್ತಿತ್ತು. ಈಗಿನ ಮೈಸೂರು ಅರಮನೆಯನ್ನು ಇದಕ್ಕೆ ಉದಾಹರಣೆಯಾಗಿಸಬಹುದು. ಬೃಹತ್ ಗೋಡೆ, ಒಳಗೋಡೆಗೆ ಬಣ್ಣದ ಅಲಂಕರಣ, ಕುಸುರಿ ಕೆತ್ತನೆಯ ಬಾಗಿಲುಗಳು, ಮಂಚ, ನಿಲುಗನ್ನಡಿ, ಕಂಬಗಳು, ನುಣುಪಾದ ನೆಲಹಾಸು, ಕಬ್ಬಿಣ ಗಾಜುಗಳ ಬಳಕೆ ಹೀಗೆ ಬಹುವೆಚ್ಚದ ವಸತಿ ಇದು.

ಸಾಮಾನ್ಯರ ಮನೆಗಳು ಸರಳ. ಇಲ್ಲಿ ಅಡುಗೆ ಮನೆ, ಪಡಸಾಲೆ, ದೇವರ ಮನೆ ಎಂಬ ವಿಭಾಗಗಳಿರುತ್ತವೆ. ಅದೇ ಶ್ರೀಮಂತರ ಮನೆಯಲ್ಲಿ ಇವುಗಳ ಜೊತೆಗೆ ಮಲಗುವ ಕೋಣೆಗಳು, ಅತಿಥಿ ಕೋಣೆಗಳು ಹಜಾರ, ದನದ ಕೊಟ್ಟಿಗೆ ಇತ್ಯಾದಿ ವ್ಯವಸ್ಥೆಯ ಜೊತೆಗೆ ಸ್ನಾನ ಗೃಹದ ವ್ಯವಸ್ಥೆಯೂ ಒಳಗೆ ಇರುತ್ತದೆ. ಈ ಎಲ್ಲ ವ್ಯವಸ್ಥೆ ಆರ್ಥಿಕತೆಯ ಸದೃಢತೆಯನ್ನು ಸೂಚಿಸುತ್ತದೆ. ರಾಜಸತ್ತೆ ಕಾಲಾವಧಿಯಲ್ಲಿ ದೇಸಾಯಿ ಎಂಬ ಆಡಳಿತಾಧಿಕಾರಿ ಇದಕ್ಕೂ ಹೆಚ್ಚಿನ ಸೌಲಭ್ಯದ ಮನೆಯನ್ನು ನಿರ್ಮಿಸುತ್ತಿದ್ದ. ಈ ರೀತಿಯ ಮನೆಯನ್ನು 'ವಾಡೆ' ಎನ್ನುವ ರೂಢೀ ಇದೆ. ವಾಡೆಯ ನಿರ್ಮಾಣ, ಸ್ವರೂಪ ಮುಂತಾದವುಗಳ ಚರ್ಚೆ ಈ ಅಧ್ಯಾಯದಲ್ಲಿವೆ.

**೬.೧ ವಾಡೆ.**

ವಾಡೆ ಒಂದು ಆಡಳಿತ ಪ್ರದೇಶದ ಮುಖ್ಯ ಕೇಂದ್ರ. ಆಡಳಿತದ ಚಟುವಟಿಕೆಯ ತಾಣ. ಜೊತೆಗೆ ದೇಸಾಯಿಯ ವಾಸಸ್ಥಾನವೂ ಹೌದು. ದೇಸಾಯಿ ತನ್ನ ಆರ್ಥಿಕ ಸ್ಥಿತಿಗೆ ಅನುಗುಣವಾಗಿ ಕಟ್ಟಿದ ವಸತಿಯೇ ವಾಡೆ. ಬಿಜಾಪುರ ಆದಿಲ್‌ಷಾಹಿಗಳು, ಮರಾಠರು, ಪೇಶ್ವೆ, ಸಾಂಗಲಿಯ ಪಟವರ್ಧನರ ಆಡಳಿತಾವಧಿಯಲ್ಲಿ ಪರಗಣದ, ಕಸಬಾದ ಅಧಿಕಾರಿಗಳಾಗಿದ್ದ, ದೇಸಾಯಿ, ನಾಡಗೌಡರು, ನಾಯಕರು, ದೇಶಪಾಂಡೆಗಳು ಸಾಕಷ್ಟು ಆದಾಯವನ್ನು ಹೊಂದಿದ್ದರು. ಈ ಆದಾಯ ಕಂದಾಯ ವಸೂಲಾತಿಯಿಂದ, ರಾಜ ಕೊಟ್ಟ ಇನಾಂ ಭೂಮಿಯಿಂದ, ಬಹುಮಾನದಿಂದ, ಜನರು, ವ್ಯಾಪಾರಿಗಳು ಕೊಟ್ಟ ಕಾಣಿಕೆಯಿಂದ ಬಂದುದಾಗಿತ್ತು. ನಾನಾ ಮೂಲಗಳಿಂದ ಬರುವ ಯಥೇಚ್ಚ ಆದಾಯ ದೇಸಾಯಿಯನ್ನು ಅತೀ ಶ್ರೀಮಂತನನ್ನಾಗಿಸಿತು. ಅವನು ಸ್ಥಳೀಯ ರಾಜನಂತೆ ಭಾಸವಾಗತೊಡಗಿದ. ಅಂತೆಯೇ ಅವನು ತನ್ನ ಘನತೆ, ಗೌರವ, ಆರ್ಥಿಕತೆಗೆ ಅನುಗುಣವಾಗಿ ಬೃಹತ್ ಪ್ರಮಾಣದ ವಸತಿಯನ್ನು ನಿರ್ಮಿಸಿಕೊಂಡಿದ್ದು ಆಶ್ಚರ್ಯವೇನಲ್ಲ. ವಾಡೆಯ ವೈಭವ ಮತ್ತು ಗಾತ್ರ ಎಷ್ಟಿತ್ತೆಂದು ಮನಗಂಡಾಗ ಹನಗಂಡಿಯ ದೇಸಾಯಿ ವಾಡೆ ಮೈಸೂರು ಅರಸರ ಹಳೆಯ ಅರಮನೆಯಷ್ಟೇ ದೊಡ್ಡದಾಗಿದೆ. ಇಂಥಹ ವಾಡೆ ನಿರ್ಮಾಣವಾಗಬೇಕೆಂದರೆ ಹಲವಾರು ಹಂತಗಳನ್ನು ದೇಸಾಯಿಗಳು ಅನುಸರಿಸುತ್ತಿದ್ದರು. ವಾಡೆ ನಿರ್ಮಾಣ ಮತ್ತು ಅದರ ಅಂಗಗಳನ್ನು ಇಲ್ಲಿ ವಿವರವಾಗಿ ಗಮನಿಸಬಹುದು.

### ೬.೨ ವಾಡೆಯ ನಿರ್ಮಾಣ

ಸಾಮಾನ್ಯ ವ್ಯಕ್ತಿ ಮನೆ ಕಟ್ಟುವಾಗ ಸ್ಥಳ, ವಾಸ್ತು, ಶಾಸ್ತ್ರ ಇತ್ಯಾದಿಗಳ ಪೂರ್ವಾಪರವನ್ನು ತಿಳಿದುಕೊಂಡು ಮುಂದುವರೆಯುತ್ತಾನೆ. ಸಾಮಾನ್ಯ ವ್ಯಕ್ತಿಯೇ ಇಷ್ಟೊಂದು ಆಲೋಚಿಸುವಾಗ ರಾಜಸತ್ತೆಯ ಭಾಗವಾಗಿದ್ದ ದೇಸಾಯಿ ತನ್ನ ವಾಡೆಯ ನಿರ್ಮಿಸುವಾಗ ಎಷ್ಟು ಆಲೋಚಿಸಬೇಡ. ವಾಡೆ ಕಟ್ಟುವಾಗ ಶಾಸ್ತ್ರ ಕೇಳಿಸುವುದು ಸಹಜವಾಗಿತ್ತು. ಮತ್ತು ಈ ಪದ್ಧತಿ ಪರಂಪರಾಗತವೂ ಕೂಡಾ. ಶುಭ ಕಾರ್ಯಗಳ ಪ್ರಾರಂಭದಲ್ಲಿ ಶಾಸ್ತ್ರ ಕೇಳಿಸುವುದು ರೂಢಿ. ಶಾಸ್ತ್ರ ಕೇಳಿಸುವುದು ಜೈನಧರ್ಮಕ್ಕೆ ವಿರುದ್ಧವಾಗಿದ್ದರೂ, ಸನಾತನ ಧರ್ಮದ–ಧರ್ಮಿಯರ ಒಡನಾಟ, ಪ್ರಭಾವದಿಂದ ಈ ಕ್ರಮವನ್ನು ಜೈನ ದೇಸಾಯಿಗಳು ಅನುಸರಿಸಿದಂತಿದೆ. ಹನಗಂಡಿ ವಾಡೆ ನಿರ್ಮಾಣದ ಸಂದರ್ಭದಲ್ಲಿ ಈ ರೀತಿ ಕ್ರಮವನ್ನು ಅನುಸರಿಸಲಾಗಿತ್ತು ಎಂಬುದು ವಾಡೆಯವರು ಹೇಳುತ್ತಾರೆ. ವಾಡೆ ನಿರ್ಮಿಸಲು ಶಾಸ್ತ್ರದ ಅನುಮತಿ ದೊರೆತ ನಂತರ ಸ್ಥಳ ಆಯ್ಕೆ, ವಾಸ್ತು ಕಟ್ಟಡದ ಸಲಕರಣೆಯ ವ್ಯವಸ್ಥೆ, ವಾಡೆಯ ನೀಲನಕ್ಷೆ ಇತ್ಯಾದಿಗಳನ್ನು ಅನುಸರಿಸಲಾಗುತ್ತಿತ್ತು.

### ೬.೩ ಸ್ಥಳದ ಆಯ್ಕೆ.

ವಾಡೆಯು ರಾಜಸತ್ತೆಯ ಭಾಗವಾಗಿದ್ದರಿಂದ ಅದು ಆಡಳಿತ ಕೇಂದ್ರವೂ ಹೌದು. ಆದ್ದರಿಂದ ಸುರಕ್ಷತೆಯ ದೃಷ್ಟಿಯಿಂದ ವಾಡೆಯನ್ನು ಪ್ರಶಸ್ತವಾದ ಸ್ಥಳದಲ್ಲಿಯೇ ನಿರ್ಮಿಸುತ್ತಿದ್ದರು. ಈ ಸಂದರ್ಭದಲ್ಲಿ ಸ್ಥಳದ ಆಯ್ಕೆ ಮಾಡಲು ಪರಿಣಿತರನ್ನೂ ದೇಸಾಯಿ ನಿಯಮಿಸಿಕೊಳ್ಳುತ್ತಿದ್ದ. ಸಾಮಾನ್ಯವಾಗಿ ಇವರು ಪಂಡಿತರಾಗಿರುತ್ತಿದ್ದರು. ಇವರಿಗೆ ಸಾಕಷ್ಟು ಉಂಬಳಿ ಭೂಮಿ ಲಭಿಸಿದ್ದು ಈ ಹಿಂದೆ ನೋಡಲಾಗಿದೆ. ಪಂಡಿತನಾದವನು ವಾಡೆ ಕಟ್ಟಲು ಯೋಗ್ಯವಾದ ಸ್ಥಳ ಆಯ್ಕೆ ಮಾಡುತ್ತಿದ್ದ, ಸಾಮಾನ್ಯವಾಗಿ ಪಂಡಿತ ಗೊತ್ತು ಮಾಡುವ ಸ್ಥಳ ಎತ್ತರದ ಪ್ರದೇಶವಾಗಿರುತ್ತಿತ್ತು. ಬಹುಶ: ದೇಸಾಯಿಯ ಇಂಗಿತವೂ ಇದೇ ಆಗಿರುತ್ತಿತ್ತು. ವಾಡೆ ಎತ್ತರದ ಸ್ಥಳದಲ್ಲಿ ನಿರ್ಮಾಣವಾಗುವುದು ಘನತೆಯ ಸಂಕೇತವೂ ಹೌದು. ಅಲ್ಲದೇ ಪ್ರವಾಹದಂತಹ ಭೀತಿ, ಕಳ್ಳಕಾಕರ ಭಯ, ದಂಗೆಕೋರರು, ಶತ್ರುಗಳ ದಾಳಿಯಿಂದ ಸುರಕ್ಷವಾಗಿರಲೆಂದು ಈ ಕ್ರಮ ಅನುಸರಿಸುತ್ತಿದ್ದರು. ಜೊತೆಗೆ ನೀರಿನ ಸೌಲಭ್ಯ ಸುಲಭವಾಗಲೆಂದು ನದಿಯ, ಕೆರೆಯ ಹತ್ತಿರದ ಪ್ರದೇಶವನ್ನು ಬಳಸಿಕೊಂಡಿದ್ದು ಹೆಚ್ಚಾಗಿ ಕಂಡುಬರುತ್ತದೆ. ತೇರದಾಳ, ಹನಗಂಡಿ ವಾಡೆಗಳಿಗೆ ಕೃಷ್ಣಾ ನದಿ ಹತ್ತಿರವಾದರೆ ಅಣ್ಣಿಗೇರಿ, ಮುಳುಗುಂದ ವಾಡೆಗಳಿಗೆ ಕೆರೆಗಳು ಹತ್ತಿರವಾಗುತ್ತವೆ. ವಾಡೆಗಳಲ್ಲಿ ಬಾವಿಗಳಿದ್ದರೂ ಈ ಕ್ರಮವನ್ನು ಯಾಕೆ ಅನುಸರಿಸಿದರೆಂದು ಯೋಚಿಸಿದಾಗ, ನೀರು ಮೂಲಭೂತ ಅವಶ್ಯಕತೆಗಳಲ್ಲಿ ಒಂದು. ದೇಸಾಯಿಗೆ ಅದು ಸುಲಭವಾಗಿ ವಾಡೆಯಲ್ಲಿಯೇ ದೊರೆಯುತ್ತಿತ್ತು. ವಾಡೆಯ ಸುತ್ತಲೂ ಇದ್ದ ಊರ ಜನರಿಗೆ ಬಾವಿ ತೋಡಿಸುವುದು ದುರ್ಲಭ. ಆದ್ದರಿಂದ ಜನ ಸಾಮಾನ್ಯರ ನಿತ್ಯ ಬದುಕಿಗೆ ಅನುಕೂಲವಾಗಲೆಂದು ಇಂಥ ಸ್ಥಳದ ಆಯ್ಕೆ ಮಾಡುತ್ತಿದ್ದರು. ಏಕೆಂದರೆ ವಾಡೆ ಸುತ್ತಲೂ ಅಥವಾ ಹೊಂದಿಕೊಂಡು

ಊರು ಇರುತ್ತಿತ್ತು. ಊರ ಹತ್ತಿರ ವಾಡೆಯನ್ನು ಅಥವಾ ವಾಡೆ ಹತ್ತಿರ ಊರನ್ನು ನಿರ್ಮಿಸುವುದು ವಾಡೆಯ ಸುರಕ್ಷತೆಯ ಮುನ್ನೋಟವೇ ಆಗಿರುತ್ತಿತ್ತು.

ದೇಸಾಯಿ ವಾಡೆ ನಿರ್ಮಿಸಲು ಎತ್ತರವಾದ ಪ್ರದೇಶವನ್ನು ಆಯ್ಕೆ ಮಾಡಿಕೊಳ್ಳಲು ಬಹುಮುಖ್ಯ ಉದ್ದೇಶ ತನ್ನ ಘನತೆಯನ್ನು ಕಾಪಾಡುವುದು ಮತ್ತು ಹೆಚ್ಚಿಸಿಕೊಳ್ಳುವುದೂ ಆಗಿತ್ತು. ತಾನು ಆರ್ಥಿಕವಾಗಿ ಪ್ರಬಲನೆಂದು ತೋರಿಸುವ ಉದ್ದೇಶದ ಜೊತೆಗೆ ಅಧಿಕಾರದ ಶ್ರೇಷ್ಠತೆಯ ಛಾಪು ಮೂಡಿಸಲು ಈ ತಂತ್ರ ಬಳಸಿಕೊಂಡಂತೆ ಕಂಡುಬರುತ್ತದೆ. ತಾನು ಎತ್ತರ ಪ್ರದೇಶದಲ್ಲಿ ಜನಸಾಮಾನ್ಯರು ತನ್ನ ಕೆಳಗೆ ಇರಬೇಕು ಎಂಬ ರಾಜತಂತ್ರವೂ ಇದರಲ್ಲಿ ಅಡಗಿದೆ.

"ಆಳುವ ಹಾಗೂ ಆಳಿಸಿಕೊಳ್ಳುವ ಇಬ್ಬರಲ್ಲೂ ಸಾಮಾಜಿಕ ಅಂತರವಿದ್ದಂತೆ, ಬೇರೆ ಬೇರೆ ಕರ್ತವ್ಯಗಳ ಜವಾಬ್ದಾರಿ ನಿರ್ವಹಿಸುವವರು ವಾಸಿಸುವ ಸ್ಥಳಗಳಲ್ಲೂ ಭೇದ ಇದ್ದೆ ಇರುತ್ತದೆ. ಈ ರೀತಿಯ ತರತಮದ ವಸತಿಗಳನ್ನು ಹರಪ್ಪಾ, ಮೆಹೆಂಜೋದಾರೋ, ಕಾಲಿಬಂಗನ್, ದೊರವಿಲ್ಲಾ, ಲೋಥಲ್ ಹಾಗೂ ಇನ್ನೂ ಹತ್ತು ಹಲವಾರು ಇಂಥ ಸಿಂಧೂ ನಾಗರಿಕತೆ ಬೆಳದೆ ಬಂದಂತಹ ಪ್ರದೇಶಗಳಲ್ಲಿ ಗುರುತಿಸಲಾಗಿದೆ. ಅವರು ಕಟ್ಟಿದ ರಕ್ಷಣಾ ಗೋಡೆಗಳ ಆವರಣಗಳಲ್ಲಿ ಮೇಲಸ್ತರ ಹಾಗೂ ಕೆಳಸ್ತರ ಹೀಗೆ ಎರಡು ಸ್ತರಗಳಲ್ಲಿ ಕೋಟೆ ವಸತಿಗಳು ಕಂಡು ಬಂದಿವೆ. ಮೇಲಿನ ಸ್ತರದಲ್ಲಿ, ರಾಜರು ರಾಜಮನೆತನದವರು ಪ್ರತಿಷ್ಠಿತ ಆಡಳಿತಗಾರರು ಇರುತ್ತಿದ್ದು ಕೆಳಸ್ತರದಲ್ಲಿ ಸಾಮಾನ್ಯ ಜನರು ವಾಸಿಸುತ್ತಿದ್ದರು. ಈ ತರಹದ ವಸತಿಗಳ ಪಾತಳಿಯು ಸಿಂಧೂ ನಾಗರಿಕತೆಯಿಂದ ಕ್ರಿ.ಪೂ. ೩೫೦೦ ವರ್ಷಗಳಿಂದ ಹಿಡಿದು ಇತಿಹಾಸದುದ್ದಕ್ಕೂ ಆಧುನಿಕ ಕಾಲದವರೆಗೆ ಅಂದರೆ ಸುಮಾರು ೧೯ನೆಯ ಕ್ರಿಸ್ತ ಶತಕಗಳವರೆಗೂ ಇದ್ದುದು ಕಂಡು ಬರುತ್ತದೆ. ಅಂದರೆ ಪ್ರಾಚೀನ, ಮಧ್ಯ ಹಾಗೂ ಆಧುನಿಕ ಯುಗದ ಕೋಟೆಗಳಲ್ಲಿಯೂ ವಾಡೆಗಳ ವಿನ್ಯಾಸದಲ್ಲಿಯೂ ಕಾಣಸಿಗುತ್ತವೆ."[೭]

ದೇಸಾಯಿ ವಾಡೆಕಟ್ಟುವ ಎತ್ತರ ಸ್ಥಳದ ಆಯ್ಕೆ ನಂತರ ಸ್ಥಳ ಪರಿಶೀಲನೆ ಮಾಡಲಾಗುತ್ತಿತ್ತು. ಸ್ಥಳ ಪರಿಶೀಲನೆ ಎಂದರೆ ಭೂಮಿಯ ಗಟ್ಟಿತನದ ಪರೀಕ್ಷೆಯೇ ಆಗಿರುತ್ತಿತ್ತು. ಸಾಮಾನ್ಯವಾಗಿ ಬಿಳಿ, ಕೆಂಪು, ಕಪ್ಪು, ಎರೆ, ಮಿಶ್ರಬಣ್ಣದ ಮಣ್ಣಿನ ವಿಧಗಳಿರುತ್ತವೆ. ಕಟ್ಟಡಕ್ಕೆ ಎರೆ ಭೂಮಿ ಯೋಗ್ಯವಲ್ಲ ಎಂದು ವಾಸ್ತು ಶಾಸ್ತ್ರ ಹೇಳುತ್ತದೆ. ಇದರಲ್ಲಿರುವ ವೈಜ್ಞಾನಿಕ ಸತ್ಯವೆಂದರೆ ಎರೆಮಣ್ಣು ನೀರನ್ನು ಹೆಚ್ಚು ಹೀರುವುದರಿಂದ ತೇವಾಂಶ ಈ ಮಣ್ಣಲ್ಲಿ ಹೆಚ್ಚು ಇರುತ್ತವೆ. ಮಳೆ ಬಂದಾಗ ಕುಸಿಯುವ ಗುಣವೂ ಇದರಲ್ಲಿದ್ದು ಕಟ್ಟಡಕ್ಕೆ ಹಾನಿ ತರುವ ಅಪಾಯ ಇರುತ್ತದೆ. ಕೆಂಪು ಮಣ್ಣು ಗಟ್ಟಿತನವನ್ನು ಹೊಂದಿರುವುದರಿಂದ ಕಟ್ಟಡಗಳಿಗೆ ಹೆಚ್ಚು ಯೋಗ್ಯವಾದುದಾಗಿದೆ. ಆದ್ದರಿಂದ ವಾಡೆ ಕಟ್ಟಲು ಈ ಮಣ್ಣು ಮತ್ತು ಕರಿ ಮಣ್ಣು ಇರುವ ನೆಲವನ್ನೇ ಆಯ್ಕೆ ಮಾಡಿಕೊಳ್ಳಲಾಗಿದೆ. ಹನಗಂಡಿ, ತೇರದಾಳ, ದರೂರು ಕೆಂಪು ಭೂಮಿಯಲ್ಲಿ, ಅಣ್ಣಿಗೇರಿ ಮತ್ತು ಮುಳಗುಂದ ವಾಡೆಗಳು ಕಪ್ಪು ಮಣ್ಣಿನಲ್ಲಿ ನಿರ್ಮಾಣವಾಗಿರುವುದನ್ನು ಗಮನಿಸಿದಾಗ ವಾಡೆಯವರಿಗಿರುವ ವೈಜ್ಞಾನಿಕ ವಾಸ್ತು ಪ್ರಜ್ಞೆ ಇತ್ತು ಎಂಬುದನ್ನು ಮನಗಾಣಬಹುದು.

ಶಾಸ್ತ್ರದ ಪ್ರಕಾರ ಇರುವೆಯ ಹುತ್ತಗಳಿರುವ ನೆಲ, ಮಾವಿನ ಮರ, ಹುಣಸೇ ಮರ, ಆಲದ ಮರಗಳ ಪಕ್ಕದ ನೆಲ, ಕೊಲೆಯಾದ ಸ್ಥಳ, ಸ್ಮಶಾನ ಭೂಮಿ ಇತ್ಯಾದಿಗಳು ಕಟ್ಟಡಕ್ಕೆ ಯೋಗ್ಯವಲ್ಲ. ಮೊದಲ ಎರಡು ಕಾರಣಗಳು ವೈಜ್ಞಾನಿಕ ಸತ್ಯ. ಹುತ್ತಗಳಿರುವ ಜಾಗವು ಪೊಳ್ಳಾಗಿದ್ದು ಮಳೆ ಬಂದಾಗ ನೆಲ ಕುಸಿಯುವ ಸಂದರ್ಭ ಸಂಭವಿಸುತ್ತದೆ. ಇನ್ನು ಮಾವು, ಹುಣಸೆ, ಆಲದ ಮರಗಳ ಬೇರುಗಳು ಬಹುದೂರ ಹರಡಿಕೊಂಡಿರುವುದರಿಂದ ಕಟ್ಟಡಕ್ಕೆ ಹಾನಿಯಾಗುವ ಸಂದರ್ಭವಿರುತ್ತದೆ. ಆದ್ದರಿಂದ ಈ ಮರಗಳು ಇರುವ ಕಡೆ ಕಟ್ಟಡ ಕಟ್ಟಬಾರದೆಂಬ ನಿಯಮ ಬಂದಂತೆ ಕಾಣುತ್ತದೆ. ಸ್ಮಶಾನದಲ್ಲಿ ಮನೆ ಕಟ್ಟಿದರೆ ನಿತ್ಯ ಹೆಣಗಳ ದರ್ಶನ, ಹೆಣಗಳು ಸುಟ್ಟವಾಸನೆ ಇತ್ಯಾದಿಗಳಿಂದ ದರ್ಶನದಿಂದ ಮಾನಸಿಕ ನೆಮ್ಮದಿ ಹಾಳಾಗುತ್ತದೆ. ಕೊಲೆಯಾದ ಸ್ಥಳ ಭಯ ಹುಟ್ಟಿಸುವುದರಿಂದ ಅದುವು ಕೂಡ ಕಟ್ಟಡಕ್ಕೆ ಅಯೋಗ್ಯ. ಈ ಎಲ್ಲ ಅಂಶಗಳನ್ನು ಗಮನಿಸಿ ಒಂದು ಸುಸಜ್ಜಿತ ಯೋಗ್ಯ ಜಾಗದಲ್ಲಿ ವಾಡೆಯನ್ನು ಕಟ್ಟಲಾಗುತ್ತಿತ್ತು. ಪ್ರಸ್ತುತ ಎಲ್ಲ ಜೈನ ವಾಡೆಗಳು ಊರ ಮಧ್ಯೆ ಎತ್ತರದ ಜಾಗೆಯಲ್ಲಿ ನಿರ್ಮಾಣಗೊಂಡಿವೆ.

### ೬.೪ ವಾಸ್ತು.

ವಾಸ್ತುಶಾಸ್ತ್ರ ಎಂಬುದು ರೂಢಿಯಿಂದ ಬಂದ ಪದ್ಧತಿ ಜನರು ಸಾಮಾನ್ಯವಾಗಿ ಕಟ್ಟಡ ಕಟ್ಟುವಾಗ ಅಗತ್ಯವಾಗಿ ವಾಸ್ತುಶಾಸ್ತ್ರದ ಮೊರೆ ಹೋಗುವುದನ್ನು ಸರ್ವೇಸಾಮಾನ್ಯವಾಗಿದೆ. ವಾಸ್ತುಶಾಸ್ತ್ರ ವೈಜ್ಞಾನಿಕ ನೆಲೆಗಟ್ಟಿನಲ್ಲಿ ರೂಪಿತವಾದದ್ದು ಎನ್ನುವ ಅಭಿಪ್ರಾಯವನ್ನು ವಾಸ್ತುಶಾಸ್ತ್ರಜ್ಞರು ವ್ಯಕ್ತಪಡಿಸುತ್ತಾರೆ. ಇದು ಸತ್ಯವೂ ಹೌದು. ಬಹುತೇಕ ಅಲ್ಲದಿದ್ದರೂ ಅರ್ಧಸತ್ಯವಂತೂ ಹೌದು. ವೈಜ್ಞಾನಿಕವಾಗಿ ರೂಪಿತವಾದ ವಾಸ್ತುವಿಗೆ ವೈಯ್ಯುಕ್ತಿಕ ಅಭಿಪ್ರಾಯಗಳು, ಮೂಢನಂಬಿಕೆ ಸೇರಿಕೊಂಡು ಅವೈಜ್ಞಾನಿಕತೆಯ ಮೆರಗನ್ನು ಕೊಡಲಾಗುತ್ತಿದೆ.

ವಾಸ್ತು ಎನ್ನುವುದು ಇಂದು ನಿನ್ನೆಯದಲ್ಲಿ ಮನುಷ್ಯನ ವಿಕಸದ ಜೊತೆ ಜೊತೆಗೆ ಬಂದದ್ದು. ಈ ಪದ ಅಂದು ಬಳಕೆಯಲ್ಲಿರಲಿಲ್ಲ. ಬಹುಶ: ಅನುಕೂಲ ಎಂಬುದಾಗಿ ಬಳಕೆಯಾದಂತೆ ಕಾಣುತ್ತದೆ. ಮಾನವ ಗುಹೆ, ಪೊಟರೆಗಳನ್ನು ಬಿಟ್ಟು ತಾನಾಗಿಯೇ ವಸತಿ ನಿರ್ಮಿತಿಯನ್ನು ಕಂಡುಕೊಳ್ಳುವ ಹೊತ್ತಿಗೆ ಸಾಕಷ್ಟು ಕಾಲ ಗತಿಸಿಹೋಗಿತ್ತು. ವಸತಿಯನ್ನು ಎಲ್ಲಿ ಬೇಕೆಂದಲ್ಲಿ ಕಟ್ಟುತ್ತಿದ್ದ ಮನುಷ್ಯ ತದನಂತರ ಅನುಕೂಲಕರ ಜಾಗಗಳನ್ನು ನೋಡತೊಡಗಿದ. ತನಗೆ ಬಹುಮುಖ್ಯ ಅವಶ್ಯಕತೆ ಇರುವ ಅನುಕೂಲದ ಹತ್ತಿರ ವಸತಿ ನಿರ್ಮಿಸಬೇಕು ಅಂದುಕೊಂಡಾಗ ಅವನಿಗೆ ತನ್ನ ಮೂಲಭೂತ ಅವಶ್ಯ ಎನಿಸಿದ್ದು ನೀರು. ನಂತರ ನೀರು ಇರುವಲ್ಲಿ ಅವನ ವಸತಿ ಸ್ಥಳಾಂತರವಾಯಿತು. ಜಗತ್ತಿನ ನಾಗರೀಕತೆಗಳು ಉಗಮವಾದದ್ದು ನದಿ ಬಯಲಿನಲ್ಲಿಯೇ ಎಂಬುದನ್ನು ಇಲ್ಲಿ ಸ್ಮರಣಿಸಬಹುದು. ಈಗಲೂ ಊರುಗಳು ಪಕ್ಕ ಕೆರೆ, ಹಳ್ಳ, ನದಿ ಇರುವುದನ್ನು ಗಮನಿಸಬಹುದು. ನೀರು ಇರುವ ಕಡೆ ಖಾಯಂ ನೆಲೆ ನಿಂತ ಮನುಷ್ಯ

ತನ್ನ ವಸತಿಯನ್ನು ಮತ್ತಷ್ಟು ನಾವೀನ್ಯಗೊಳಿಸತೊಡಗಿದ. ಬೆಳಕು ಹೆಚ್ಚಿಗೆ ಬರಲೆಂದು ಪೂರ್ವಕ್ಕೆ ಬಾಗಿಲು ಇಟ್ಟ, ಗಾಳಿ ಬೆಳಕು ಹೆಚ್ಚಿಗೆ ಬರಲೆಂದು ಯಥೇಚ್ಛ ಕಿಟಕಿಗಳನ್ನು ಇಟ್ಟ. ಇವಿಷ್ಟು ವ್ಯವಸ್ಥೆಗಳನ್ನು ಕಂಡುಕೊಳ್ಳುವ ಹೊತ್ತಿಗೆ ಮನುಷ್ಯ ಸಾಕಷ್ಟು ನಾಗರೀಕನಾಗಿದ್ದ.

ವಾಸ್ತು ಶಾಸ್ತ್ರದಲ್ಲಿ ಪೂರ್ವಕ್ಕೆ ಬಾಗಿಲು, ಯಥೇಚ್ಛ ಕಿಟಕಿಗಳು, ದಕ್ಷಿಣೋತ್ತರ ಮಲಗುವ ಕೋಣೆ ಇತ್ಯಾದಿ ವೈಜ್ಞಾನಿಕ ಸತ್ಯವೆನಿಸುತ್ತವೆ. ಮನೆಕಟ್ಟುವಾಗ ಜೋತಿಷ್ಯ, ಜಾತಕ, ಪರಿಶೀಲಿಸುವುದು ನಾಮಬಲಕ್ಕೆ ಅನುಗುಣವಾಗಿ ಮನೆ ನಿರ್ಮಿಸುವುದು, ನಕ್ಷತ್ರದ ಅನುಗುಣವಾಗಿ ಫಲಾಫಲ ವಿವರಿಸುವುದು ಇವೆಲ್ಲ ಮೂಢನಂಬಿಕೆಗಳು. ಪ್ರಾರಂಭದಲ್ಲಿ ಮನೆಗಳಿಗಷ್ಟೇ ಸೀಮಿತವಾಗಿದ್ದ ವಾಸ್ತು ತದನಂತರ ದೇವಾಲಯಗಳಿಗೆ ವ್ಯಾಪಿಸಿತು. ಇತ್ತೀಚಿಗೆ ಇದರ ರೆಂಬೆ ಕೊಂಬೆಗಳು ವಿಸ್ತರಿಸಿ ವ್ಯಾಪಾರ ಮಳಿಗೆ, ಖಾಸಗಿ ಕಛೇರಿಗಳು, ಆಸ್ಪತ್ರೆ, ಶಾಲೆ, ಕಾಲೇಜು ಕಟ್ಟಡಗಳಿಗೂ ವ್ಯಾಪಿಸಿದೆ. ಒಂದು ಸಣ್ಣ ಕಟ್ಟಡಕ್ಕೂ ವಾಸ್ತು ನೋಡುವ, ನೋಡಿಸುವ ಮಹಾಶಯರಿದ್ದಾರೆ. ಇವೆಲ್ಲ ವಾಸ್ತುವನ್ನೇ ನಿತ್ಯ ಕಾಯಕವನ್ನಾಗಿ ಮಾಡಿಕೊಂಡವರ ತಂತ್ರ ಅಷ್ಟೇ. ವಾಸ್ತುವಿಲ್ಲದ ಕಟ್ಟಡಗಳಲ್ಲಿ ಅಶಾಂತಿ, ಸಾವು, ಅಪಾಯ ಇತ್ಯಾದಿಗಳು ಸಂಭವಿಸುತ್ತವೆ ಎಂದು ಮನುಷ್ಯನ ಭಾವನಾತ್ಮಕ ಸಂಬಂಧಗಳ ಜೊತೆ ಆಟವಾಡಿ ತಮ್ಮ ಹೊಟ್ಟೆ ಹೊರೆಯುವ ಜನರೂ ಇದ್ದಾರೆ. ಪ್ರಸ್ತುತ ವಾಡೆಗಳು ನಿರ್ಮಾಣದ ಸಮಯದಲ್ಲಿ ವಾಸ್ತು ಶಾಸ್ತ್ರದಿಂದ ಹೊರಗುಳಿಯಲು ಸಾಧ್ಯವಾಗದೇ ಹೋದರೂ, ಸಂಪೂರ್ಣ ವಾಸ್ತು ನಿಯಮಗಳನ್ನೇನು ಅನುಸರಿಸಿಲ್ಲ.

ಜೈನರು ಮೂಢ ವಾಸ್ತುಶಾಸ್ತ್ರವನ್ನು ನಂಬುವುದಿಲ್ಲ. ವಾಸ್ತುವಿನ ವೈಜ್ಞಾನಿಕ ನೆಲೆಗಟ್ಟನ್ನಷ್ಟೇ ನಂಬುತ್ತಾರೆ. ಹಾಗಾಗಿ ಜೈನ ವಾಡೆಗಳಲ್ಲಿ ವಾಸ್ತುವಿನ ಅತಿಯಾದ ಜಂಜಡಕ್ಕೆ ಸಿಲುಕದೇ ತಮ್ಮ ಅನುಕೂಲಕ್ಕೆ ತಕ್ಕಂತೆ ವಾಡೆ ನಿರ್ಮಿಸಿದ್ದಾರೆ. ಪ್ರವೇಶ ದ್ವಾರಗಳು, ದ್ವಾರಗಳು ಇಲ್ಲಿ ಪೂರ್ವಕ್ಕೆ ನಿರ್ಮಿತವಾದದ್ದು ವಾಸ್ತು ನಿಯಮದಂತೆ ಕಂಡರೂ ವಾಸ್ತು ಅನುಸರಿಸಿಯೇ ಕಟ್ಟಿದರೆಂಬುದು ಕಷ್ಟ. ದ್ವಾರ ಪೂರ್ವಕ್ಕೆ ಇದ್ದರೆ ಬೆಳಕು ಹೆಚ್ಚು ಒಳಗೆ ಬರುತ್ತದೆ ಎಂಬುದು ಸಾಮಾನ್ಯ ಜ್ಞಾನ. ಭಾಷೆ ಹುಟ್ಟಿದ ಮೇಲೆ ವ್ಯಾಕರಣ, ಕಾವ್ಯ ಇದ್ದರೆ ವಿಮರ್ಶೆ, ನದಿ ಇದ್ದರೆ ಆಣೆಕಟ್ಟು ಅಂತೆಯೇ ಮನೆಗಳು (ಕಟ್ಟಡಗಳು) ಹುಟ್ಟಿದ ಮೇಲೆ ವಾಸ್ತು ಹುಟ್ಟಿಕೊಂಡಿತು. ಆಚರಣೆ ಮೊದಲು ಮಾರ್ಪಾಡುಗಳು ನಂತರ ಬಂದವುಗಳು.

**೬.೫ ಕಟ್ಟಡದ ಸಲಕರಣೆಗಳ ಸಂಗ್ರಹ.**

ಒಂದು ಐಶಾರಾಮಿ ವಸತಿ ಕಟ್ಟಡದ ನಿರ್ಮಾಣ ಸಾಹಸದ ಕೆಲಸವೇ ಸರಿ. ಅದರಲ್ಲೂ ವಾಡೆಯಂತ ಅರಸೊತ್ತಿಗೆ ಕಟ್ಟಡ ಕಟ್ಟುವುದು ಇನ್ನೂ ಕಷ್ಟ. ವಾಡೆ ಕಟ್ಟುವುದೆಂದರೆ ಒಂದು ಕೋಟೆಕಟ್ಟಿದಂತೆ. ದೇಸಾಯಿ ಶ್ರೀಮಂತಿಕೆಗೆ ತಕ್ಕ ಹಾಗೆ ನವನಾವೀನ್ಯ ವಿನ್ಯಾಸವಲ್ಲಿ ನಿರ್ಮಾಣವಾಗಬೇಕು. ಈ ಕಾರ್ಯ ಒಂದೆರಡು ತಿಂಗಳಲ್ಲಿ ಮುಗಿಯುವ ಕೆಲಸವಲ್ಲ.

ವರ್ಷಗಟ್ಟಲೇ ಸಮಯ ಬೇಕು. ಸುಂದರ ವಾಡೆಗಳು ನಿರ್ಮಿಸುವುದು ಪ್ರತಿಯೊಬ್ಬ ದೇಸಾಯಿ ಕನಸು. ಅದಕ್ಕೆ ಬೇಕಾದ ಸಲಕರಣೆಗಳನ್ನು ಯಾವರೀತಿ ಹೊಂದಿಸುತ್ತಿದ್ದ ಎಂಬುದು ಇಲ್ಲಿ ಚರ್ಚಾವಿಷಯ. ಹಾಗೆ ನೋಡಿದರೆ ಅರಸೊತ್ತಿಗೆಯ ಭಾಗವಾದ ದೇಸಾಯಿಗೆ ಇದು ಸುಲಭವೂ ಕೂಡಾ. ವಾಡೆ ಕಟ್ಟಲು ವ್ಯವಸ್ಥೆಯನ್ನು ಎರಡು ರೀತಿ ವಿಭಾಗಮಾಡಿಕೊಂಡು ಅಭ್ಯಾಸ ಮಾಡುವುದು ಸರಿಯೆನಿಸುತ್ತದೆ. ಈ ವ್ಯವಸ್ಥೆ ಯಾವುದೆಂದರೆ ಒಂದು ಮಾನವ ಸಂಪನ್ಮೂಲ, ಎರಡು ಭೌತಿಕ ವಸ್ತುಗಳ ಸಂಪನ್ಮೂಲ.

**೧. ಮಾನವ ಸಂಪನ್ಮೂಲ**

ಮಾನವ ಸಂಪನ್ಮೂಲವನ್ನು ಕೂಡಿಹಾಕುವುದು ಕಷ್ಟದ ಕೆಲಸವೇನಲ್ಲ. ಕಟ್ಟಡ ಕಟ್ಟಲು, ಸಲಕರಣೆಗಳನ್ನು ತರಲು ತನ್ನ ದೇಸಗತಿಯಲ್ಲಿದ್ದ ಸೇವಕರನ್ನು, ರೈತರನ್ನು ಬಳಸಿಕೊಂಡಂತೆ ಕಾಣುತ್ತದೆ. ರಾಜಸತ್ತೆಯ ಕಾಲದಲ್ಲಿ ಇದು ಸರ್ವೇ ಸಾಮಾನ್ಯವಾಗಿದ್ದಿತು. ರೈತರು, ಸೇವಕರು ಅಥವಾ ಕೆಲಸಗಾರರು ಕಟ್ಟಡ ಕಟ್ಟಲು ಸಹಾಯ ಮಾಡಬಹುದಿತ್ತೇ ವಿನಹ: ಅದರ ನಿರ್ಮಾಣದ ಕೌಶಲ್ಯ ಅವರಿಗೆ ಇರಲಿಲ್ಲ. ಕಟ್ಟಡದ ಕೆಲಸ, ಕಟ್ಟಿಗೆಯ, ಕಬ್ಬಿಣದ ಮತ್ತು ಕಲ್ಲಿನ ಕೆಲಸಕ್ಕೆ ದೇಸಾಯಿ ಚಾಣಾಕ್ಷರನ್ನೇ ಅವಲಂಬಿಸಬೇಕಾಗಿತ್ತು. ಅವರಿಗಾಗಿ ವಿವಿಧ ಕಡೆ ಹುಟುಕಾಟ ನಡೆಸಿ, ಉತ್ತಮ ವೇತನ ನೀಡಿ ತನ್ನ ಅಂದದ ಅರಮನೆಯನ್ನು (ವಾಡೆ) ನಿರ್ಮಿಸಿಕೊಳ್ಳುತ್ತಿದ್ದ. ಸಾಮಾನ್ಯವಾಗಿ ಒಂದು ಸುಸಜ್ಜಿತ ವಾಡೆ ನಿರ್ಮಾಣವಾಗಲು ಐದು ವಿಧದ ವೃತ್ತಿ ನೈಪುಣ್ಯರು ಬೇಕಾಗಿದ್ದಿತು.

೧. ವಾಡೆಯ ವಿನ್ಯಾಸಕಾರ.
೨. ಕಟ್ಟಡದ ನಿರ್ಮಾಣಕಾರ (ಮೇಸ್ತ್ರಿ).
೩. ವಡ್ಡರು.
೪. ಕಮ್ಮಾರರು.
೫. ಬಡಿಗರು.

**೧. ವಾಡೆಯ ವಿನ್ಯಾಸಕಾರ.**

ವಾಡೆಗೆ ಸಂಬಂಧಪಟ್ಟ ನೀಲನಕ್ಷೆ ತಯಾರಿಸುವುದು ಇವನ ಕೆಲಸವಾಗಿತ್ತು. ಇವನು ಒಂದು ರೀತಿ ಅಭಿಯಂತರ (ಇಂಜಿನೀಯರ್)ನೇ ಸರಿ. ನಾಡಿನಲ್ಲರುವ ವಿವಿಧ ವಾಡೆಯ ಅಧ್ಯಯನ ಮಾಡಿ ಅವುಗಳಿಗಿಂತ ಹೊಸ ಮಾದರಿಯ ನೀಲನಕ್ಷೆಯನ್ನು ತಯಾರಿಸುವುದು ಮತ್ತು ಹೊಸ ಹೊಸ ವಿನ್ಯಾಸವನ್ನು ನೀಲ ನಕ್ಷೆಯಲ್ಲಿ ಇವನು ಸೇರಿಸುತ್ತಿದ್ದ. ಎಲ್ಲ ಜೈನ ವಾಡೆಗಳನ್ನು ಗಮನಿಸಿದಾಗ ಈ ಅಂಶ ಸ್ಪಷ್ಟವಾಗುತ್ತದೆ. ಹೊಸ ವಿನ್ಯಾಸಕ್ಕೆ ಮಾದರಿಗಳು ಎಲ್ಲ

ಜೈನ ವಾಡೆಗಳಲ್ಲಿ ಸಿಗುತ್ತವೆ. ಅಣ್ಣಿಗೇರಿ ದೇಶಪಾಂಡೆ ವಾಡೆಯಲ್ಲಿ ಸಭಾಂಗಣ, ಸದರ ಕಟ್ಟೆ, ಮೇಲಂತಸ್ತು, ಮುಳಗುಂದ ವಾಡೆಯಲ್ಲಿ ಕಾಷ್ಠಶಿಲ್ಪಯುಕ್ತ ಕುಸುರಿ ಕೆತ್ತನೆಯ ಚೌಸಪ್ಪಿಗಳು, ಹನಗಂಡಿ ವಾಡೆಯ ಪ್ರವೇಶದ್ವಾರ, ತೇರದಾಳ ವಾಡೆಯ ಇಸ್ಲಾಮಿಕ್ ಶೈಲಿಯ ಕಮಾನುಗಳು, ದರೂರು ವಾಡೆಯ ಚಿನ್ನದ ಅಂಬಾರಿ (ಕಣಜ)ಗಳು ಹೀಗೆ ಒಂದು ವಾಡೆಯಲ್ಲಿ ಕಾಣುವ ವಿಶೇಷ ನವೀನ ಮಾದರಿಗಳು ಇನ್ನೊಂದು ವಾಡೆಯಲ್ಲಿ ಕಾಣಸಿಗವು. ಈ ವಿಶೇಷ ವಿನ್ಯಾಸದ ಹಿಂದೆ ವಿನ್ಯಾಸಕಾರನ ಕೈಚಳಕ ಅಡಗಿದೆ. ಆದರೆ ಅವರ ಹೆಸರು ವಾಡೆಯಲ್ಲಿ ಎಲ್ಲಿ ದಾಖಲಿತವಾಗದಿರುವುದು ವಿಪರ್ಯಾಸ.

**೨. ಕಟ್ಟಡದ ನಿರ್ಮಾಣಕಾರರು (ಮೇಸ್ತ್ರಿ).**

ವಾಡೆಯ ವಿನ್ಯಾಸಕಾರನ ಅಮೂರ್ತ ರೂಪಕ್ಕೆ ಮೂರ್ತರೂಪ ಕೊಡುವವನೇ ನಿರ್ಮಾಣಕಾರ. ಇಡೀ ಕಟ್ಟಡದ ಸುಂದರತೆಗೆ ಕಾರಣ ಇವನು. ಯಾವ ಗೋಡೆಗೆ ಯಾವ ಕಲ್ಲು ಬಳಸಬೇಕು, ಗೋಡೆ ಕಟ್ಟುವಾಗ ಮಣ್ಣು ಎಲ್ಲಿ ಬಳಸಬೇಕು. ಗಾರೆಯನ್ನು ಎಲ್ಲಿ ಬಳಸಬೇಕು, ಯಾವ ಯಾವ ವಿನ್ಯಾಸದ ಕಲ್ಲುಗಳು ಎಲ್ಲಿ ಅಳವಡಿಸಿದರೆ ಚಂದದ ಮೆರುಗು ಬರಲಿಕ್ಕೆ ಸಾಧ್ಯವಿದೆ ಎಂದು ಕಂಡುಕೊಂಡು ಅದರಂತೆ ಕೆಲಸಗಾರರಿಂದ ಕಟ್ಟಡ ನಿರ್ಮಾಣ ಮಾಡುತ್ತಿದ್ದ. ಹನಗಂಡಿ ವಾಡೆಯ ಗೋಡೆಗಳು, ರಕ್ಷಣಾ ಗೋಡೆಗಳು, ದ್ವಾರದ ಗೋಡೆಗಳಿಗೆ ಬಳಸಿದ ಕಲ್ಲುಗಳ ವಿನ್ಯಾಸ ಗಮನಿಸಿದಾಗ ನಿರ್ಮಾಣಕಾರನ ನೈಪುಣ್ಯತೆಯ ಅರಿವಾಗದೆ ಇರದು.

**೩. ವಡ್ಡರು.**

ಕಟ್ಟಡದ ನಿರ್ಮಾಣಕ್ಕೆ ಬೇಕಾದ ಕಲ್ಲುಗಳನ್ನು ಸರಿಯಾಗಿ ಒಡೆದು ಕೊಡುವವರೆ ವಡ್ಡರು. ಇವರು ಅಲೆಮಾರಿಗಳಾಗಿದ್ದರೂ ವೃತ್ತಿಯಲ್ಲಿ ಕಲ್ಲು ಒಡೆಯುವವರಾಗಿದ್ದರು. ಈಗಲೂ ಈ ಜನಾಂಗದ ಮುಖ್ಯ ಕಸುಬು ಕಲ್ಲು ಒಡೆಯುವುದು. ಯಾವ ಕಲ್ಲನ್ನು ಹೇಗೆ ಒಡೆದು ಸಮಗೊಳಿಸಬಹುದು ಎಂಬ ಕಲೆ ಇವರಿಗೆ ಗೊತ್ತಿತ್ತು. ಕಲ್ಲುಗಳಿಗೆ ಹೊಡೆಯುವ ಹೊಡೆತದಲ್ಲಿ ನಾನಾ ವಿಧಗಳು ಇದ್ದವು. "ಬೂಚಿ ತೋಟಿ, ಸಡಕಿ ತೋಡಿ, ಕಡಮೂಲಿ, ಹಿತಾಡಿ, ಪಡತರ ಇವುಗಳ ಮೇಲೆ ಪುಟಾಣಿ ಹೊಡೆತ, ಸಾಸವಿ ಹೊಡೆತ, ನಾಗರ ಹೊಡೆತ"[೨] ಮುಂತಾದ ಹೊಡೆತಗಳಿಂದ ಕಲ್ಲನ್ನು ಸಮಗೊಳಿಸುವ ಕಾಯಕವನ್ನು ನಿಷ್ಠೆಯಿಂದ ಮಾಡಿ ವಾಡೆಯ ಸುಂದರತೆಗೆ ಈ ವಡ್ಡರು ಕಾರಣರಾಗಿದ್ದಾರೆ. ಅವರ ಕಲಾ ನೈಪುಣ್ಯತೆ ಈಗಲೂ ಇದೆ. ಅವರು ಮಾತ್ರ ಅಜ್ಞಾತವಾಗಿದ್ದಾರೆ.

## ೪. ಕಮ್ಮಾರರು.

ವಾಡೆಗೆ ಅಗತ್ಯವಿರುವ ಕಬ್ಬಿಣದ ಸಲಕರಣೆಗಳನ್ನು ಮಾಡಿಕೊಡುವವರು ಕಮ್ಮಾರರು. ಕಟ್ಟಿಗೆಯ ಬಾಗಿಲಿಗೆ ಉದ್ದನೆಯ ಮೊಳೆ, ಚಿಲಕ, ತಿರುಪು ಕಬ್ಬಿಣದ ಕಟಾಂಜನ ಇತ್ಯಾದಿಗಳನ್ನು ಇವರು ತಯಾರಿಸಿ ಕೊಡುತ್ತಿದ್ದರು. ಕಟಾಂಜನಕ್ಕೆ ಅಚ್ಚುಗಳಿಂದ ತಯಾರಿಸಿದ ಆಕೃತಿಗಳನ್ನು ಈಗಲೂ ಹನಗಂಡಿ ವಾಡೆಯಲ್ಲಿ ಕಾಣಬಹುದು. ಕಿಡಕಿಯ ಸರಳುಗಳು, ದಪ್ಪ ಮೊಳೆಗಳು, ಕಟಾಂಜನ ಈಗಲೂ ತುಕ್ಕು ಹಿಡಿಯದಂತೆ ಇರುವುದು ಇವರ ಕೈಚಳಕದಿಂದಲೆ. ಹನಗಂಡಿಯ ಮೇಲಂತಸ್ತಿನ ಕಟಾಂಜನದಲ್ಲಿ ಕುಸುರಿ ಕೆತ್ತನೆಗಳನ್ನು ಕಾಣಬಹುದು. ಇವು ಕೈಯಿಂದ ಕೆತ್ತಿದವಲ್ಲ ಅಚ್ಚುಗಳನ್ನು ಮಾಡಿ ಕಬ್ಬಿಣದ ರಸ, ಅರಗಿನ ರಸವನ್ನು ಮಿಶ್ರಣ ಮಾಡಿ ತಯಾರಿಸಿದವು ಉಳಿದ ವೃತ್ತಿಗಾರರಂತೆ ಇವರೂ ಅಜ್ಞಾತರು.

## ೫. ಬಡಿಗರು.

ಕಟ್ಟಿಗೆಯಲ್ಲಿ ಸುಂದರ ಕಲಾಕೃತಿ ಅರಳುವುದು ಅದು ಬಡಿಗೇರರಿಂದ ಮಾತ್ರ ಸಾಧ್ಯ. ಈ ಕಲಾವಿದರು ವಾಡೆಗೆ ಬೇಕಾದ ನಾವೀನ್ಯವಾದ ಕಂಬಗಳನ್ನು, ಬಾಗಿಲನ್ನು, ಚೌಸಪ್ಪಿಗಳನ್ನು, ಕಮಾನುಗಳನ್ನು ಇತ್ಯಾದಿ ಕಾಷ್ಠ ಶಿಲ್ಪಗಳನ್ನು ಮಾಡಿಕೊಡುವುದಾಗಿತ್ತು. ಒಂದು ರೀತಿಯಲ್ಲಿ ವಾಡೆಯನ್ನು ಕಟ್ಟಿಗೆಯಲ್ಲಿ ನವವಧುವಿನಂತೆ ಶೃಂಗರಿಸುವವರು ಇವರೇ ಆಗಿದ್ದರು. ಮರಗೆತ್ತನೆಯಲ್ಲಿ ಅತ್ಯುತ್ತಮ ಪ್ರಾವೀಣ್ಯತೆ ಪಡೆದ ಬಡಿಗೇರರನ್ನೇ ದೇಸಾಯಿ ಆಯ್ಕೆ ಮಾಡಿಕೊಳ್ಳುತ್ತಿದ್ದ. ಅವರಿಗೆ ಅನ್ನ, ಅರಿವೆ ಇತ್ಯಾದಿಗಳನ್ನು ಕೊಟ್ಟು ತಿಂಗಳಾನುಗಟ್ಟಲೇ ಕೆಲಸಮಾಡಿಸಿಕೊಳ್ಳುತ್ತಿದ್ದ. ಕೆಲಸ ಮುಗಿದ ನಂತರ ಅವರಿಗೆ ಒಪ್ಪಂದದಂತೆ ಧನ ಪ್ರಾಪ್ತಿಯು ದೇಸಾಯಿಯಿಂದ ಲಭ್ಯವಾಗುತ್ತಿತ್ತು. ದೇಸಾಯಿ ಇವರ ಜೊತೆಗೆ ಇನ್ನೊಂದು ಬಹು ಮುಖ್ಯವಾದ ಒಪ್ಪಂದ ಮಾಡಿಕೊಳ್ಳುತ್ತಿದ್ದ. ತನ್ನ ವಾಡೆಯಲ್ಲಿ ಕೆತ್ತಿದ ಕಾಷ್ಠ ಕಲಾ ನೈಪುಣ್ಯತೆಯನ್ನು ಬೇರೆ ಕಡೆ ಕೆತ್ತಬಾರದು ಎಂಬುದೆ ಆ ಒಪ್ಪಂದ. ಈ ಒಪ್ಪಂದದಂತೆ ಕಾಷ್ಠ ಕಲಾವಿದರೂ ನಡೆದುಕೊಳ್ಳುತ್ತಿದ್ದರು. ಇವರ ಕಟ್ಟಿಗೆಯ ಕಲಾ ನೈಪುಣ್ಯತೆ ಪರಾಕಾಷ್ಠೆಗೆ ಮುಳುಗುಂದ ವಾಡೆಯ ಚೌಸಪ್ಪಿಗಳು, ಕಂಬಗಳು, ಬೋದುಗೆಗಳು ಉದಾಹರಣೆಯಾಗಿ ನಿಲ್ಲುತ್ತವೆ.

ಒಂದು ಸುಂದರ ವಾಡೆಗೆ ರಚನೆಯಾಗಲು ಕೇವಲ ಹಣವಿದ್ದರಷ್ಟೇ ಸಾಲದು ಅತ್ಯುತ್ತಮ ಕೆಲಸಗಾರರೂ ಬೇಕು. ಜೈನ ವಾಡೆಯ ದೇಸಾಯಿಗಳಿಗೆ ಹಣವೂ ಇತ್ತು. ಉತ್ತಮ ಕೆಲಸಗಾರರೂ ಲಭ್ಯವಾದರು. ಅಂತೆಯೇ ಸುಂದರ ವಾಡೆಗಳೂ ನಿರ್ಮಾಣವಾದವು. ಇಂಥ ಸುಂದರ ವಾಡೆಯನ್ನು ನಿರ್ಮಿಸಿದ ಶ್ರಮಿಕರಿಗೆ ತಕ್ಕ ಫಲ ದೊರೆತಿದೆಯೋ ತಿಳಿದಿಲ್ಲ. ಆದರೆ ಅವರ ಶ್ರಮದ ಬದುಕು ವಾಡೆಗೆ ಸುಂದರತೆಯನ್ನು ತಂದುಕೊಟ್ಟಿದ್ದಂತೂ ನಿಜ. ಅವರು ಸತ್ತಿಲ್ಲ ವಾಡೆಯ ಕಲಾವಂತಿಯಲ್ಲಿ ಜೀವಂತವಾಗಿದ್ದಾರೆ ಎಂಬುದು ವಾಡೆಗಳನ್ನು ವೀಕ್ಷಣೆ ಮಾಡಿದಾಗ ಅನ್ನಿಸದೇ ಇರದು.

**೨. ಭೌತಿಕ ವಸ್ತುಗಳ ಸಂಪನ್ಮೂಲ.**

ಒಂದು ಕಟ್ಟಡ ನಿರ್ಮಾಣಕ್ಕೆ ಮೂಲಭೂತ ಸಂಪನ್ಮೂಲಗಳಾದ ಕಲ್ಲು, ಮಣ್ಣು, ಕಟ್ಟಿಗೆ ಇತ್ಯಾದಿಗಳ ಅಗತ್ಯ ಪೂರೈಕೆ ಬೇಕೇ ಬೇಕು. ಸದ್ಯದ ಕಟ್ಟಡಗಳಿಗೆ ಇಟ್ಟಿಗೆ ಮರಳು ಸೀಮೆಂಟು ಬಳಸುವ ಹಾಗೆ ಪ್ರಾಚೀನ ಕಟ್ಟಡಗಳಿಗೆ ಕಲ್ಲು, ಮಣ್ಣು, ಗಾರೆಯನ್ನು ಬಳಸುತ್ತಿದ್ದರು. ಇಡೀ ಕಲ್ಲಿನಿಂದಲೆ ಕಟ್ಟಡ ನಿರ್ಮಾಣ ಮಾಡುವುದು ಖರ್ಚಿನ ವಿಷಯ. ಆದ್ದರಿಂದ ಕಲ್ಲಿನ ಬಳಕೆ ಶ್ರೀಮಂತರ ಕಟ್ಟಡಗಳಿಗೆ ಬಳಕೆಯಾಗುತ್ತಿತ್ತು. ಬಡವರ ಮನೆಗಳಿಗೆ ಯಥೇಚ್ಛವಾಗಿ ದೊರೆಯಬಹುದಾದ ಮಣ್ಣೇ ಆಶ್ರಯವಾಗಿತ್ತು. ರಾಜರು, ಮಂತ್ರಿಗಳು, ದಂಡನಾಯಕರು, ಮಹಾಮಂಡಳೇಶ್ವರರು, ದೇಸಾಯಿಗಳು, ವ್ಯಾಪಾರಸ್ಥರು ತಮ್ಮ ಗೃಹ, ಕೋಟೆ ನಿರ್ಮಾಣಗಳಲ್ಲಿ ಕಲ್ಲನ್ನು ಬಳಸಿದ್ದಾರೆ. ಕಲ್ಲುಗಳ ಗೋಡೆ ರಕ್ಷಣಾ ಸಂಕೇತವೂ ಹೌದು. ಪ್ರಸ್ತುತ ಚರ್ಚೆ ವಾಡೆಗೆ ಸಂಬಂಧಿಸಿದ್ದರಿಂದ ಅದರ ನಿರ್ಮಾಣಕ್ಕೆ ಯಾವ ಯಾವ ಭೌತಿಕ ವಸ್ತುಗಳನ್ನು ಬಳಸುತ್ತಿದ್ದರೆಂಬುದನ್ನು ಈ ರೀತಿ ಅರಿಯಬಹುದೆ.

ಸುಸಜ್ಜಿತ ವಾಡೆಗಳು ಇನ್ನೂ ನಮ್ಮೊಂದಿಗೆ ಜೀವಂತವಾಗಿ ಇವೆ ಎಂದರೆ ಅವುಗಳ ನಿರ್ಮಾಣಕ್ಕೆ ಬಳಸಿದ ವಸ್ತುಗಳೇ ಕಾರಣ. ವಿವಿಧ ಜಾತಿಯ ಕಲ್ಲುಗಳು, ಕಟ್ಟಿಗೆಗಳು, ಮಣ್ಣು, ಇತ್ಯಾದಿಗಳ ಸಮರ್ಥ ಬಳಕೆ ವಾಡೆಗಳ ಜೀವಂತಿಕೆಗೆ ಸಾಕ್ಷಿ. ವಾಡೆಗೆ ಬಳಸುತ್ತಿದ್ದ ಮುಖ್ಯವಾದ ವಸ್ತುಗಳೆಂದರೆ.

೧. ಕಲ್ಲು.
೨. ಮಣ್ಣು.
೩. ಕಟ್ಟಿಗೆ.
೪. ಗಚ್ಚು.
೫. ಕಬ್ಬಿಣ.

**೧. ಕಲ್ಲು**

ವಾಡೆಗಳ ನಿರ್ಮಾಣದಲ್ಲಿ ಕಲ್ಲುಗಳ ಪಾತ್ರ ಮಹತ್ವದ್ದು. ರಕ್ಷಣಾ ಗೋಡೆ, ಬುರುಜು (ಹುಡೆ), ವಸತಿ ಕಟ್ಟಡದ ಗೋಡೆಗಳು, ವಾಡೆಯ ಬಾವಿ, ನೆಲಹಾಸು, ಬಾಗಿಲುಗಳಿಗೆ ವಿವಿಧ ಜಾತಿಯ ಕಲ್ಲುಗಳು ಬಳಕೆಯಾಗುತ್ತಿದ್ದುವು. ದೇಸಾಯಿಗೆ ಕಲ್ಲುಗಳನ್ನು ವಾಡೆ ನಿರ್ಮಿಸಲು ಕಷ್ಟದ ಕೆಲಸವೇನೂ ಅಲ್ಲ. ತನ್ನ ಪರಗಣದ ವ್ಯಾಪ್ತಿಗೆ ಬರುವ ಕಲ್ಲಿನ ಮೂಲ ಪತ್ತೆ ಹಚ್ಚಿ ಆ ಗುಡ್ಡದಿಂದ ಕಲ್ಲುಗಳನ್ನು ತನ್ನ ಕಟ್ಟಡ ನಿರ್ಮಾಣಕ್ಕಾಗಿ ಸಾಗಿಸುತ್ತಿದ್ದ. ಕೆಲವೊಂದು ವಿಶೇಷ ಕಲ್ಲುಗಳು ಸ್ಥಳೀಯವಾಗಿ ಲಭ್ಯ ಇರದೇ ಇದ್ದಾಗ ಪರಸ್ಥಳದಿಂದ ಹಣ ಖರ್ಚು ಮಾಡಿ ದೇಸಾಯಿ

ತರಿಸುತ್ತಿದ್ದ. ಉದಾಹರಣೆಗೆ ಸಂಗಮುರಿ ಕಲ್ಲು. ವಿವಿಧ ಜಾತಿಯ ಕಲ್ಲುಗಳು ಸಮರ್ಥವಾಗಿ ಹನಗಂಡಿ ವಾಡೆಯಲ್ಲಿ ಬಳಕೆಯಾಗಿವೆ. ಉಳಿದ ವಾಡೆಗಳಲ್ಲಿ ಕಲ್ಲುಗಳು ಬಳಕೆಯಾದರೂ ಕೂಡಾ ಹನಗಂಡಿ ವಾಡೆಯನ್ನು ಮೀರಿಸಲಾರವು. ಸಾಮಾನ್ಯವಾಗಿ ವಾಡೆಗೆ ಬಳಕೆಯಾಗುತ್ತಿದ್ದ ಕಲ್ಲುಗಳನ್ನು ಈ ರೀತಿಯಾಗಿ ಗುರುತಿಸಬಹುದು.

**ರಬ್ಬಗಲ್ಲು (ರಬಲಿ):–** ಈ ಕಲ್ಲು ಗೋಡೆಗಳ ನಿರ್ಮಿತಿಯಲ್ಲಿ ಬಳಸಿದ್ದು, ಒಳ ಮುಖದಲ್ಲಿ ಹೆಚ್ಚು ಬಳಸಲಾಗುತ್ತದೆ. ಈ ಕಲ್ಲು ಸಮಗೊಳಿಸಲು ಬಾರದಿದ್ದರಿಂದ ಈ ವ್ಯವಸ್ಥೆಯನ್ನು ಕಂಡುಕೊಳ್ಳಲಾಗಿದೆ.

**ದಿಂಡುಗಲ್ಲು:–** ಈ ಕಲ್ಲನ್ನು ದಿಂಡಿನ ಆಕೃತಿಯಲ್ಲಿ ಕೆತ್ತುವುದರಿಂದ ಈ ಹೆಸರು ಲಭ್ಯವಾಗಿದೆ. ಒಂದು ಘೂಟು, ಎರಡು ಘೂಟು ಹೀಗೆ ಬೇಕಾದಷ್ಟು ಅಳತೆಯಲ್ಲಿ ಇದನ್ನು ಕೆತ್ತಿಕೊಂಡು ವಾಡೆಯ ಬಾಗಿಲಿಗೆ ಬಳಸಬಹುದಾಗಿತ್ತು. ಇದು ಸ್ಥಳೀಯ ಪ್ರದೇಶದಲ್ಲಿ ಸಿಗುವಂತಹದಾಗಿತ್ತು. ಹನಗಂಡಿ, ದರೂರು ವಾಡೆಗಳಿಗೆ ಈ ಕಲ್ಲನ್ನು ಬಳಸಲಾಗಿದೆ.

**ಚಿಂಚಲಿ ಕಲ್ಲು:–** ಈ ಕಲ್ಲನ್ನು ಮುಳುಗುಂದ ವಾಡೆಯ ರಕ್ಷಣಾಗೋಡೆಗೆ ಬಳಸಲಾಗಿದೆ ಚಿಂಚಲಿಯಿಂದ ತಂದ ಈ ಕಲ್ಲಿಗೆ ಊರಿನ ಹೆಸರಿನಿಂದಲೇ ಸಂಬೋಧಿಸಲಾಗುತ್ತದೆ. ಇದಕ್ಕೆ ಸೈಜುಗಲ್ಲು ಎಂದೂ ಕರೆಯಲಾಗುತ್ತದೆ. ಒಂದು ಗೇಣು, ಒಂದು ಘೂಟುಗಳ ಆಕೃತ್ತಿಯಲ್ಲಿ ಕೆತ್ತಿ ಸ್ವಚ್ಛಂದವಾಗಿ ಜೋಡಿಸಿದಾಗ ಗೋಡೆಯ ಮೆರಗು ಅಧಿಕವಾಗುತ್ತದೆ.

**ಕಾಣಕಿ ಕಲ್ಲು:–** ನುಣುಪು ಕೆತ್ತನೆಯ ಅವಕಾಶ ಇರುವ ಕಲ್ಲೇ ಕಾಣಿಕೆ. ಆಕಾರಕ್ಕೆ ತಕ್ಕಂತೆ ಸಮಗೊಳಿಸಿ ಈ ಕಲ್ಲನ್ನು ಬಳಕೆ ಮಾಡಬಹುದಿತ್ತು. ಇದರ ಮುಂಭಾಗವನ್ನು ಸಮತಟ್ಟಾಗಿ ಕೆತ್ತಬಹುದಾದ್ದರಿಂದ ಈ ಕಲ್ಲನ್ನು ಬಹುತೇಕ ಬಾಗಿಲುಗಳಿಗೆ, ಬಾಗಿಲ ಕಮಾನುಗಳಿಗೆ, ಚೌಕಟ್ಟುಗಳಿಗೆ ಬಳಸಲಾಗುತ್ತಿತ್ತು. ಹನಗಂಡಿ ವಾಡೆಯಲ್ಲಿ ಇವುಗಳ ಬಳಕೆ ಹೆಚ್ಚಾಗಿ ಕಂಡುಬರುತ್ತದೆ.

**ಹಾಸಿಗೆ ಕಲ್ಲು:–** ಹೆಸರೆ ಹೇಳುವಂತೆ ವಿಶಾಲವಾಗಿರುವ ಕಲ್ಲೇ ಹಾಸಿಗೆಗಲ್ಲು. ಇವುಗಳನ್ನು ಸಭಾಂಗಣದ ಮುಂಚೂಣಿಯಲ್ಲಿ, ಸದರ ಕಟ್ಟೆಯ ಮುಂಚೂಣಿಯಲ್ಲಿ ಬಳಸಲಾಗಿದೆ. ಮೂರು, ನಾಲ್ಕು ಅಡಿಗಳಷ್ಟು ಅಗಲ ಐದು, ಹತ್ತು, ಹದಿನೈದು ಅಡಿಗಳಷ್ಟು ಉದ್ದವನ್ನು ಹಾಸಿಗೆಗಲ್ಲುಗಳು ಹೊಂದಿರುತ್ತವೆ ಎಲ್ಲ ಜೈನ ವಾಡೆಗಳಲ್ಲಿಯೂ ಇವುಗಳನ್ನು ಬಳಸಲಾಗಿದೆ.

**ಪಾಟಿಗ್ಗಲ್ಲು:-** ಪಾಟಿಯ ತರಹ ಸಮತಟ್ಟಾಗಿರುವುದರಿಂದ ಈ ಕಲ್ಲಿಗೆ ಪಾಟಿಗ್ಗಲ್ಲು ಎಂದು ಹೆಸರು. ವಾಡೆಯ ಪಡಸಾಲೆ, ಶಯ್ಯಾಗೃಹ, ಸದರ ಕಟ್ಟೆ ಇತ್ಯಾದಿಗಳಲ್ಲಿ ಇವುಗಳನ್ನು ಬಳಕೆ ಮಾಡಲಾಗಿದೆ. ಇದು ಚಾವಣಿಗೂ ಬಳಕೆಯಾಗುತ್ತಿದ್ದು, ಛಾವಣಿ ಕಲ್ಲು ಎಂಬ ಇನ್ನೊಂದು ಹೆಸರನ್ನು ಹೊಂದಿದೆ.

ಇವಷ್ಟೇ ಅಲ್ಲದೇ ಮಟ್ಟೀಕಲ್ಲು, ದುಂಡುಗಲ್ಲು, ಕಾಡುಗಲ್ಲು ಹೆಸರೇ ಗೊತ್ತಿರದ ಇನ್ನೂ ಅನೇಕ ಕಲ್ಲುಗಳನ್ನು ವಾಡೆಯ ತಳಪಾಯಕ್ಕೆ ಗೋಡೆಯ ಒಳಗೆ ಬಳಕೆ ಮಾಡಲಾಗಿದೆ ಎಂದು ಅಣ್ಣಿಗೇರಿಯ ಶ್ರೀ ಭೂಪಾಲ ನಾವಳ್ಳಿಯವರು ಹೇಳುತ್ತಾರೆ.[೩]

**೨. ಮಣ್ಣು.**

ವಾಡೆಯ ಕಟ್ಟಡಕ್ಕೆ ಹೆಚ್ಚಾಗಿ ಕಲ್ಲುಗಳನ್ನೇ ಬಳಸಿದ್ದರಿಂದ ಮಣ್ಣಿನ ಅವಶ್ಯಕತೆ ಬಹುತೇಕ ಕಡಿಮೆ ಇತ್ತು. ವಾಡೆಯ ಪ್ರಾಂಗಳಕ್ಕೆ, ಪಟಂಗಳಕ್ಕೆ, ಹಿತ್ತಲದ ನೆಲಗಳಿಗೆ ಮಣ್ಣಿನ ಬಳಕೆಯನ್ನು ಕಾಣಬಹುದು. ಸಾಮಾನ್ಯವಾಗಿ ಹಾಳು ಮಣ್ಣು, ಕೆಂಪು ಮಣ್ಣು, ಮಟ್ಟಿ ಮಣ್ಣನ್ನು ವಾಡೆಯ ವಿವಿಧ ವ್ಯವಸ್ಥೆಯ ನೆಲಗಳಿಗೆ ಹಾಕಿದ್ದು ಕಂಡು ಬರುತ್ತದೆ. ಹಾಳು ಮಣ್ಣು, ಕೆಂಪು ಮಣ್ಣು, ಮಟ್ಟಿ ಮಣ್ಣುಗಳು ಮಳೆ ಬಂದರೆ ಕೆಸರಾಗುವುದಿಲ್ಲ ಮತ್ತು ಗಟ್ಟಿತನ ಇವುಗಳಲ್ಲಿ ಇರುವುದರಿಂದ ಬಳಕೆ ಮಾಡಲಾಗಿದೆ. ಅಣ್ಣಿಗೇರಿಯಲ್ಲಿ ಮಣ್ಣಿನಲ್ಲಿಯೇ ರಕ್ಷಣಾ ಗೋಡೆಯನ್ನು ಕಟ್ಟಿದ್ದು ವಿಶೇಷ. ಹಾಳು ಮಣ್ಣನ್ನು ಗೋಡೆಗಳಿಗೆ ಬಳಸಲಾಗಿದೆ. ಉಳಿದಂತೆ ಪಟಂಗಳಕ್ಕೆ, ದನದ ಮನೆಯ ನೆಲಗಳಿಗೆ, ಹಿತ್ತಲುಗಳಿಗೆ, ಡಂಬಣಿ ಮನೆಯ ನೆಲಗಳಿಗೆ ಹಾಳು ಮಣ್ಣು ಬಳಕೆಯಾಗಿದ್ದು ಕಾಣಬಹುದು.

**೩. ಕಟ್ಟಿಗೆ.**

ವಾಡೆಗಳಿಗೆ ಕಲ್ಲುಗಳಿಗಿಂತ ಹೆಚ್ಚು ಕಟ್ಟಿಗೆ ಬಳಕೆಯಾಗುತ್ತಿತ್ತು ಎನ್ನುವುದು ಆಶ್ಚರ್ಯದ ಮಾತೇನಲ್ಲ. ಇಡೀ ವಾಡೆಯ ಸೊಬಗನ್ನು ಹೆಚ್ಚಿಸಲು ಕಟ್ಟಿಗೆಯಿಂದ ಸಾಧ್ಯ ಎಂಬುದು ದೇಸಾಯಿ ಅರಿತಿದ್ದ. ವಾಡೆಯ ಕಂಬಗಳು, ಮಡಿಗೆ, ನಾಗೊಂದಿಗೆ, ಜಂತಿ, ಚೌಸಪ್ಪಿ, ಮೇಲ್ಚಾವಣಿ, ಬಾಗಿಲುಗಳು, ಕದಗಳು, ತೂಗುಮಂಚ, ದನದ ಗೋದಲಿಗಳು ಹೀಗೆ ನಾನಾ ಕಡೆಗಳಲ್ಲಿ ಕಟ್ಟಿಗೆಯನ್ನು ಬಳಸಲಾಗಿದೆ. ಇಷ್ಟು ಪ್ರಮಾಣದ ಕಟ್ಟಿಗೆಯನ್ನು ಹೊಂದಿಸುವುದು ದೇಸಾಯಿಗೆ ಕಷ್ಟದ ಕೆಲಸವಾಗಿರಲಿಲ್ಲ. ತನ್ನ ಪರಗಣದ ವ್ಯಾಪ್ತಿಯಲ್ಲಿ ಬರುವ ಕಾಡುಗಳಿಂದ ಕಟ್ಟಿಗೆಗಳನ್ನು ಸಂಗ್ರಹಿಸುತ್ತಿದ್ದ. ಕಾಡುಗಳು ದೇಸಾಯಿಯ ಅಧೀನದಲ್ಲೇ ಇರುವುದರಿಂದ ವಿವಿಧ ಜಾತಿಯ ಮರಗಳನ್ನು ಕಡೆಯಿಸಿ ವಾಡೆಗೆ ಬಳಸುವುದು ಸರ್ವೇಸಾಮಾನ್ಯವಾಗಿತ್ತು.

ವಾಡೆಗೆ ಬಹುಭಾಗ ಸಾಗವಾನಿ ಕಟ್ಟಿಗೆಯನ್ನು ಬಳಸಲಾಗಿದೆ. ದೀರ್ಘಬಾಳಿಕೆ, ಕುಸುರಿ ಕೆತ್ತನೆಗಳಿಗೆ ಸಹಕರಿಸುವ ಗುಣ ಇದರಿಲ್ಲಿದ್ದರಿಂದ ಈ ಮರದ ಕಟ್ಟಿಗೆಯನ್ನೇ ಬಳಸಲಾಗಿದೆ. ದೇಸಾಯಿ ಕೋಣೆಯ ಕಪಾಟುಗಾಳಿಗೆ, ದೇವರ ಮನೆಯ ಬಾಗಿಲುಗಳಿಗೆ, ಮಂಟಪಗಳಿಗೆ, ದೇಸಾಯಿನಿಯ ಅಲಂಕರಣ ಪೆಟ್ಟಿಗೆಗಳಿಗೆ, ಪೂಜಾಗೃಹ, ಮುನಿಪೀಠಗಳಿಗೆ ಶ್ರೀ ಗಂಧದ ಕಟ್ಟಿಗೆಯನ್ನು ಬಳಸಲಾಗಿದೆ. ಶ್ರೀಗಂಧ ಖರ್ಚಿನ ದೃಷ್ಟಿಯಿಂದ ದುಬಾರಿಯಾಗಿದ್ದು ಸೀಮಿತ ಕಡೆಗಳಲ್ಲಿ ಬಳಕೆಯಾಗಿದ್ದನ್ನು ಕಾಣಬಹುದು. ಎಲ್ಲಾ ಜೈನವಾಡೆಗಳಲ್ಲೂ ಈ ಕಟ್ಟಿಗೆಗಳು ಬಳಕೆಯಾಗಿದ್ದು, ಇವುಗಳ ಜೊತೆಗೆ ಅಲ್ಲಲ್ಲಿ ನೀಲಗಿರಿ, ಬೇವು, ಮಾವಿನ ಮರದ ಕಟ್ಟಿಗೆಯನ್ನೂ ಬಳಕೆ ಮಾಡಲಾಗಿದೆ. ದನದ ಮನೆ, ಕುದುರೆ ಲಾಯ, ಸಾರೋಟದ ಕೋಣೆಗಳಲ್ಲಿ ಈ ತರಹದ ಕಟ್ಟಿಗೆಯ ಬಳಕೆಯನ್ನು ಕಾಣಬಹುದು.

**೪. ಗಚ್ಚು.**

ಕಟ್ಟಡಗಳ ಸುಭದ್ರತೆಗೆ ಗಾರೆ ಅಥವಾ ಗಚ್ಚನ್ನು ಬಳಸುವುದು ಬಿಜಾಪುರದ ಆದಿಲ್‌ಷಾಹಿಗಳ ಕಾಲದಲ್ಲಿ ಯಥೇಚ್ಛವಾಗಿ ಬಳಕೆಯಾಗಿದೆ. ಅಂತೆಯೇ ಅವರ ಕಾಲಾವಧಿಯಲ್ಲಿ ಅಧೀನ ಅಧಿಕಾರಿಗಳಾದ ದೇಸಾಯಿಗಳು ಈ ವಿಧಾನವನ್ನು ತಮ್ಮ ವಾಡೆಯ ನಿರ್ಮಾಣದಲ್ಲಿ ಅನುಸರಿಸಿದ್ದು ಕಂಡು ಬರುತ್ತದೆ. ಸಾಮಾನ್ಯವಾಗಿ ಗಚ್ಚು ಅಥವಾ ಗಾರೆಯನ್ನು ಮರಳು, ಸುಣ್ಣ, ಬೆಲ್ಲ, ಕಬ್ಬಿನ ಸೋಗೆಗಳನ್ನು ಹದವಾಗಿ ಮಿಶ್ರಣ ಮಾಡಿ ಕುದಿಸಲಾಗುತ್ತದೆ. ದ್ರವರೂಪದ ಈ ಮಿಶ್ರಣ ಅಂಟು ಅಂಟುಗೊಂಡು, ಗಟ್ಟಿಯಾದ ಅಂಬಲಿ ತರಹವಾಗುತ್ತದೆ. ನಂತರ ಇದನ್ನು ಗಾರೆ, ಗಚ್ಚು ಎಂದು ಕರೆದು ಮಾಳಿಗೆಗೆ, ಗೋಡೆ ಕಟ್ಟುವಾಗ ಕಲ್ಲುಗಳ ಮಧ್ಯ ಹಾಕಿ ಕಟ್ಟಲು ಬಳಕೆ ಮಾಡುತ್ತಾರೆ. ಅಣ್ಣಿಗೇರಿ ವಾಡೆಯ ಮಾಳಿಗೆ, ಹನಗಂಡಿ ವಾಡೆಯ ಮಾಳಿಗೆ, ರಕ್ಷಣಾ ಗೋಡೆಯ ಕೆಲವು ಕಡೆ, ಇದೇ ವಾಡೆಯ ಬಸದಿಯ ಮೇಲಂತಸ್ತಿನ ಮುಂದಿರುವ ಆವರಣಕ್ಕೆ ಬಳಸಲಾಗಿದೆ. ಮಾಳಿಗೆಗೆ ಗಚ್ಚನ್ನು ಹಾಕಿದರೆ ಅದು ಒಂದು ಹನಿ ನೀರನ್ನೂ ಹೀರದೇ ಜಾರಿಸಿ ಬಿಡುತ್ತದೆ. ಹೀಗೆ ಗಚ್ಚಿನ ಉಪಯೋಗ ಅರಿತ ದೇಸಾಯಿಗಳು ಅವಶ್ಯಕತೆ ಎನಿಸಿದಲೆಲ್ಲಾ ಬಳಸಿದ್ದಾರೆ. ಅದರಲ್ಲಿ ಪ್ರಮುಖವಾದವು ಗೋಡೆ ಮತ್ತು ಮಾಳಿಗೆ.

**೫. ಕಬ್ಬಿಣ.**

ವಾಡೆಯಲ್ಲಿ ಕಬ್ಬಿಣದ ಬಳಕೆ ಯಥೇಚ್ಛವಾಗಿ ಕಂಡು ಬರದಿದ್ದರೂ ಪ್ರಮುಖ ಎಂದಲ್ಲಿ ಬಳಕೆಯಾಗಿದೆ. ಬಾಗಿಲಿಗೆ ದಪ್ಪ ತಲೆ ಇರುವ ಕಬ್ಬಿಣದ ಮೊಳೆಗಳು, ಚಿಲಕಗಳು, ಕಟಾಂಜನಕ್ಕೆ ಪಡಸಾಲೆಯಲ್ಲಿ ಅಂಕಣಗಳಲ್ಲಿ 'ವಂಕಿ'ಗಳಾಗಿ, ತೂಗುಯ್ಯಾಲೆಯ ಸರಳುಗಳಾಗಿ, ಸೋಪಾನಗಳನ್ನು ಹತ್ತಲು ಆಸರೆಯಾಗಿ ಬಳಕೆಯಾಗಿದೆ. ಅಂಕಣಗಲ್ಲಿ 'ಉ' ಆಕಾರದ ವಂಕಿಗಳು ಸಾಕಷ್ಟು ಕಡೆ ಲಭ್ಯವಿದ್ದು ಉಯ್ಯಾಲೆ, ತೊಟ್ಟಿಲು ಕಟ್ಟಲು ಉಪಯೋಗವಾಗುತ್ತಿದ್ದವು.

ಕಿಡಕಿಗಳಿಗೆ ಗಟ್ಟಿಯಾದ ಕಬ್ಬಿಣದ ಸರಳುಗಳು ಎಲ್ಲ ಜೈನ ವಾಡೆಗಳಲ್ಲಿ ಕಂಡುಬರುವುದು ಸರ್ವೇಸಾಮಾನ್ಯ. ಕಟಾಂಜನ, ಮೇಲಂತಸ್ತಿನ ಕಟಾಂಜನಗಳನ್ನು ದೇಸಾಯಿ ಬೇರೆ ಬೇರೆ ನಗರ ಪ್ರದೇಶಗಳಿಂದ ತರಸಿದ್ದಾಗಿ ಕಂಡುಬರುತ್ತದೆ. ಸ್ಥಳೀಯ ಕಮ್ಮಾರರು ಈ ತರಹದ ಕುಸುರಿ ಕೆತ್ತನೆಯ ಕಟಾಂಜನ ತಯಾರಿಸುವ ಕುಶಲತೆ ಹೊಂದಿರಲು ಸಾಧ್ಯವಿರುತ್ತಿರಲಿಲ್ಲ. ಹಾಗೆ ನೋಡಿದರೆ ಕಟಾಂಜನದ ಕೆತ್ತನೆಯ ಸರಳುಗಳು ಸಂಪೂರ್ಣದ ಕಬ್ಬಿಣದಿಂದ ತಯಾರಿಸಿದವುಗಳಾಗಿರಲಿಲ್ಲ. ಅವು ಅರಗು ಮತ್ತು ಕಬ್ಬಿಣ ಮಿಶ್ರಣವನ್ನು, ಸಿದ್ಧ ಮಾದರಿಯ ಅಚ್ಚುಗಳಲ್ಲಿ ತಯಾರಿಸಿದವುಗಳಂತೆ ಕಂಡುಬರುತ್ತದೆ.

**೬.೬ ವಾಡೆಗಳ ಒಳರೂಪ ಸೌಲಭ್ಯಗಳು**

ಸ್ಥಳೀಯ ಆಡಳಿತದ ಪ್ರತಿಷ್ಠೆಯಾದ ವಾಡೆ ವಸತಿಯ ಜೊತೆಗೆ ಶ್ರೀಮಂತಿಕೆಯ ಪ್ರತೀಕವೂ ಹೌದು. ಇದು ಒಂದು ಪುಟ್ಟ ಅರಮನೆಯಂತಿದ್ದು ಅನೇಕ ಸೌಲಭ್ಯಗಳನ್ನು ಹೊಂದಿತ್ತು. ಈ ಹಿಂದೆ ಹೇಳಿದ ಹಾಗೆ ದೇಸಾಯಿಯ ವರಮಾನಕ್ಕೆ ತಕ್ಕಂತೆ ವಾಡೆ ನಿರ್ಮಿತಗೊಂಡಿರುತ್ತದೆ. ಸಾಮಾನ್ಯ ಮನೆಯಂತಿರುವ ವಾಡೆಯಿಂದ ಹಿಡಿದು ದೊಡ್ಡ ದೊಡ್ಡ ಮಹಲುಗಳ ರೀತಿಯ ವಾಡೆಗಳನ್ನು ಉತ್ತರ ಕರ್ನಾಟಕದಲ್ಲಿ ನೋಡಲು ಕಾಣಸಿಗುತ್ತವೆ. ಎಲ್ಲಿ ಸಂಪತ್ತು ಅಧಿಕವಾಗಿರುತ್ತದೆಯೇ; ಅಲ್ಲಿ ಅಲಂಕರಣವೂ ವಿಜೃಂಭಣೆವಾಗಿರುತ್ತದೆ. ಶ್ರೀಮಂತಿಕೆಯ ದ್ಯುತಕವಾದ ವಾಡೆಗಳು ಶ್ರೀಮಂತ ನವವಧುವಿನಂತೆ ಭಾಸಗೊಳ್ಳುವುದು ವಾಡೆಗೆ ಇರುವ ಅಧಿಕ ಆದಾಯದಿಂದಲೆ. ಒಂದು ಆಡಳಿತದ ಮುಖ್ಯ ಕೇಂದ್ರವಾಗಿದ್ದ ವಾಡೆಗೆ ವಿಸ್ತಾರತೆಯ ಮತ್ತು ವೈಭವದ ಅವಶ್ಯಕತೆ ಇದ್ದೇ ಇತ್ತು. ಪ್ರಜೆಗಳು, ದೇಸಾಯಿ ಮೇಲಾಧಿಕಾರಿಗಳು ಕೆಲವೊಮ್ಮೆ ಅರಸನೆ ಬಂದು ಹೋಗುವುದರಿಂದ ಅವರಿಗೆ ತಕ್ಕುದಾದ ಅಧಿಕ ಸೌಲಭ್ಯಗಳನ್ನು ವಾಡೆಗಳಲ್ಲಿ ಮಾಡಲೇಬೇಕಿತ್ತು. ಉದಾಹರಣೆಗೆ ಅತಿಥಿ ಕೋಣೆಗಳು, ಎತ್ತರವಾದ ಪ್ರವೇಶ ದ್ವಾರ.

ಪರಗಣದ ಅಧಿಕಾರಿಯಾದ ದೇಸಾಯಿ ಘನತೆಯು ಪ್ರಜೆಗಳ, ಮೇಲಾಧಿಕಾರಿಗಳ ಅರಸರ ಸಂಪರ್ಕದಿಂದ ಹೆಚ್ಚುತ್ತಾಹೋಯಿತು. ಜೊತೆಗೆ ಅವನ ವಸತಿಯ ಘನತೆಯು ಹೆಚ್ಚುತ್ತಾಹೋಯಿತು. ದೇಸಾಯಿಯು ತನಗೊಂದು ಸುಸಜ್ಜಿತ ಮತ್ತು ವೈಭವದ ವಾಡೆಯನ್ನು ಕಟ್ಟಲು ಸಾಕಷ್ಟು ಹಣವನ್ನು ವಿನಿಯೋಗಿಸಿದ. ಅಂತೆಯೇ ನಾನಾ ಕಡೆಯಿಂದ ಕುಶಲಕರ್ಮಿಗಳಾದ ಬಡಿಗೇರರು, ಚಿತ್ರಕಲಾವಿದರು, ಕಟ್ಟಡ ನಿರ್ಮಾಣಕಾರರು, ಕಬ್ಬಿಣ ಕೆಲಸಗಾರರು, ಕಟ್ಟಡ ವಿನ್ಯಾಸಕರನ್ನು ಕರೆಸಲಾಯಿತು. ಹೀಗೆ ನಾನಾ ಕಡೆಯಿಂದ ಬಂದ ಕುಶಲಕರ್ಮಿಗಳ ಕೈಚಳಕದಿಂದ ಸುಂದರ ವಾಡೆಯನ್ನು ದೇಸಾಯಿಗೆ ನಿರ್ಮಿಸಿಕೊಟ್ಟರು. ಅವು ಈಗಲೂ ನಮ್ಮೊಂದಿಗಿವೆ. ಮೂಲದಲ್ಲಿ ಇದ್ದ ವಾಡೆಗಳೇ ಸದ್ಯದ ವಾಡೆಗಳು ಎಂದು ಹೇಳಲಿಕ್ಕಾಗದು. ಯಾಕೆಂದರೆ ದೇಸಾಯಿಯ ಶ್ರೀಮಂತಿಕೆ ಹೆಚ್ಚುತ್ತಾ ಬಂದಂತೆ ವಾಡೆಯಲ್ಲಿ

ಸಾಕಷ್ಟು ಬದಲಾವಣೆ ಆಗುತ್ತಲೇ ಬಂದಿವೆ. ಹೀಗೆ ಬದಲಾಗುತ್ತಾ ಬಂದ ವೈಭವದ ವಾಡೆಯಲ್ಲಿ ಯಾವ-ಯಾವ ಸೌಲಭ್ಯಗಳಿದ್ದವು ಎಂಬುವುದನ್ನು ಈ ರೀತಿಯಾಗಿ ಪಟ್ಟಿಮಾಡಬಹುದು. ಅತಿ ಮುಖ್ಯವಾದವುಗಳನ್ನು ಮಾತ್ರ ವಿಸ್ತರಿಸುದು ಸೂಕ್ತ ಎನಿಸಿ ಕೆಲವೆ ಕೆಲವಾರು ಅಂಶಗಳನ್ನು ವಿಸ್ತರಿಸಲಾಗಿದೆ.

೧. ರಕ್ಷಣಾ ಗೋಡೆ.
೨. ದ್ವಾರಬಾಗಿಲು (ಪ್ರವೇಶ ದ್ವಾರ).
೩. ಪ್ರಾಂಗಣ.
೪. ದೇಸಾಯಿ ಮನೆ (ಅರಮನೆ).
೫. ಪಟಂಗಳ.
೬. ಸಭಾಂಗಣ
೭. ಸದರಕಟ್ಟೆ.
೮. ಅತಿಥಿ ಗೃಹ.
೯. ದೇಸಾಯಿ ಕೋಣೆ.
೧೦. ಶಸ್ತ್ರಾಗಾರ.
೧೧. ದಾಖಲಾತಿ ಕೋಣೆ.
೧೨. ಪೂಜಾ ಕೋಣೆ.
೧೩. ಮುನಿ ಹಜಾರ.
೧೪. ಹೆರಿಗೆ ಕೋಣೆ.
೧೫. ದನದ ಮನೆ.
೧೬. ಸ್ನಾನದ ಮನೆ.
೧೭. ಕೆಲಸಗಾರರ ಮನೆ.
೧೮. ಇತ್ಯಾದಿಗಳು.

**೧. ರಕ್ಷಣಾ ಗೋಡೆ.**

ವಾಡೆ ಆಡಳಿತ ಸಂಬಂಧಿತ ವಸತಿಯಾಗಿದ್ದು ಅಪಾರ ಪ್ರಮಾಣದ ಸಿರಿ-ಸಂಪತ್ತನ್ನು ತುಂಬಿಕೊಂಡಿರುತ್ತಿತ್ತು. ಇಡೀ ಪರಗಣಕ್ಕೆ ಸಂಬಂಧಿಸಿದ ದಾಖಲಾತಿಗಳು, ಅರಸನಿಗೆ ಸಲ್ಲಿಸುವ ಕಂದಾಯದ ಮೊತ್ತ, ಸಾಕಷ್ಟು ಆಹಾರ ಸಾಮಗ್ರಿಗಳು, ಧಾನ್ಯದ ಕಣಜಗಳು ಇದರಲ್ಲಿ ಅಡಕವಾಗಿದ್ದವು. ಈ ಎಲ್ಲ ಸಂಪತ್ತನ್ನು ಜತನದಿಂದ ರಕ್ಷಿಸಲು ಸೈನಿಕರು, ಕೆಲಸಗಾರರು ಇರುತ್ತಿದ್ದರಾದರೂ ಹೆಚ್ಚಿನ ರಕ್ಷಣೆಗೆಂದೇ ವಾಡೆಯ ಸುತ್ತಲೂ ಬೃಹತ್ ರಕ್ಷಣಾ ಗೋಡೆಗಳನ್ನು

ನಿರ್ಮಿಸಲಾಗಿದೆ. ಪರಗಣ ಮಟ್ಟದ ವಾಡೆಯಲ್ಲಿ ಹುಡೆ (ರಕ್ಷಣಾ ಚೌಕಿ) ಸಹಿತ ಕೋಟೆ ಮಾದರಿಯ ಬೃಹತ್ ರಕ್ಷಣಾಗೋಡೆಗಳಿದ್ದರೆ, ಕಸಾಬಾ ಮಟ್ಟದ ವಾಡೆಯ ರಕ್ಷಣಾ ಗೋಡೆಗಳು ಎರಡಾಳೆತ್ತರದಲ್ಲಿವೆ. ಈ ವ್ಯತ್ಯಾಸಕ್ಕೆ ಬಹುಮುಖ್ಯ ಕಾರಣ ಶ್ರೀಮಂತಿಕೆ. ಕಸಬಾ ಮಟ್ಟದ ವಾಡೆಯ ಆದಾಯ ಕಡಿಮೆ. ಪರಗಣದ ಮಟ್ಟದ ಆದಾಯ ಹೆಚ್ಚು. ಅಂತೆಯೇ ರಕ್ಷಣಾ ಗೋಡೆಗಳ ಬಲಿಷ್ಠತೆಯಲ್ಲಿಯೂ ವ್ಯತ್ಯಾಸಗಳಿವೆ.

ಹೆಸರೆ ಸೂಚಿಸುವಂತೆ ರಕ್ಷಣಾ ಗೋಡೆಯ ಉದ್ದೇಶ ವಾಡೆಯ ರಕ್ಷಣೆ ಮಾಡುವುದು. ಕಳ್ಳಕಾಕರು, ದರೋಡೆಕೋರರು, ದಂಗೆಕೋರರು, ಶತ್ರುಗಳು ಸುಲಭವಾಗಿ ಹತ್ತಲಾಗದ ಗೋಡೆಗಳು ವಾಡೆಗಳಿರುತ್ತವೆ. ಐದು ಅಡಿಯಿಂದ ಹತ್ತು ಅಡಿಗಳಷ್ಟು ದಪ್ಪ, ಹತ್ತರಿಂದ ಇಪ್ಪತ್ತು ಅಡಿಗಳಷ್ಟು ಎತ್ತರವಿರುವ ರಕ್ಷಣಾ ಗೋಡೆಗಳು ಜೈನವಾಡೆಗಳಲ್ಲಿ ಇಂದಿಗೂ ಕಂಡುಬರುತ್ತವೆ. ಕಲ್ಲು, ಮಣ್ಣು, ಗಾರೆ ಇತ್ಯಾದಿಗಳನ್ನು ಗೋಡೆ ಕಟ್ಟಲು ಬಳಸಿದ್ದು ಕಂಡುಬರುತ್ತದೆ. ಈ ಹಿಂದೆ ಇದ್ದ ರಾಜನ ಕೋಟೆಯ ರಕ್ಷಣಾ ಗೋಡೆಯ ಮಾದರಿಯನ್ನು ವಾಡೆಯ ರಕ್ಷಣಾ ಗೋಡೆಗಳು ಹೋಲುತ್ತವೆ.

ಉತ್ತರ ಕರ್ನಾಟಕದ ಇಡೀ ಜೈನವಾಡೆಗಳಲ್ಲಿ ಬೃಹತ್ ಮತ್ತು ಬಲಶಾಲಿ ರಕ್ಷಣಾ ಗೋಡೆಗಳಿರುವುದು ಹನಗಂಡಿ ದೇಸಾಯಿಯವರ ವಾಡೆಗೆ. ೨೦ ಅಡಿ ಎತ್ತರ ೮ ಅಡಿ ದಪ್ಪವನ್ನು ಗೋಡೆ ಹೊಂದಿದ್ದು ಸ್ಥಳೀಯವಾಗಿ ದೊರೆಯುವ ಕಲ್ಲುಗಳಿಂದ ನಿರ್ಮಿತವಾಗಿದೆ. ಹನಗಂಡಿಯಲ್ಲೆ ದೊರೆಯಬಹುದಾದ ದಿಂಡಗಲ್ಲನ್ನು ದ್ವಾರದ ಗೋಡೆಗೆ ಅದರ ಅಕ್ಕಪಕ್ಕದ ಗೋಡೆಗೆ ಬಳಸಲಾಗಿದೆ. ಸುತ್ತುಗೋಡೆಗೆ ರಬ್ಬಗಲ್ಲು (ರಬಲಿಕಲ್ಲು)ಗಳನ್ನು ಬಳಸಲಾಗಿದೆ. ದ್ವಾರದಲ್ಲಿ ಗಾರೆಯನ್ನು, ಸುತ್ತುಗೋಡೆಯ ಕಲ್ಲುಗಳನ್ನು ಹೊಂದಿಸಲು ಕೆಸರು ಮಣ್ಣನ್ನು ಬಳಸಲಾಗಿದೆ.

ಹನಗಂಡಿ ವಾಡೆಯ ರಕ್ಷಣಾ ಗೋಡೆಯ ನಾಲ್ಕು ದಿಕ್ಕಿಗೆ ಒಂದೊಂದರಂತೆ ೨೫ ಅಡಿಯ ಹುಡೆ (ಬುರುಜು ಅಥವಾ ರಕ್ಷಣಾ ಚೌಕಿ)ಗಳನ್ನು ಕಾಣಬಹುದು. ಈ ಹುಡೆಗಳಿಗೆ ಒಳಮುಖದಲ್ಲಿ ಮೆಟ್ಟಲು ಸಹಿತ ಬಾಗಿಲುಗಳನ್ನು ನಿರ್ಮಿಸಲಾಗಿದೆ. ರಕ್ಷಣಾ ಗೋಡೆಯಲ್ಲಿ ಸದೃಢವಾದ ಎರಡು ದ್ವಾರಗಳಿದ್ದು ಉತ್ತರ ಮತ್ತು ಪೂರ್ವ ದಿಕ್ಕಿಗೆ ಒಂದೊಂದರಂತೆ ಇವೆ. ಉತ್ತರ ದ್ವಾರದ ಅಕ್ಕ-ಪಕ್ಕ ಬಂಧಿಖಾನೆಗಳು ಗೋಡೆಯಲ್ಲಿಯೇ ಇರುವುದು ಇಲ್ಲಿನ ವಿಶೇಷ. ಹನಗಂಡಿಯೊಂದನ್ನು ಬಿಟ್ಟು ಉಳಿದ ಜೈನವಾಡೆಗಳು ಸಾಧಾರಣ ಮಟ್ಟದ ಬಲಶಾಲಿ ಗೋಡೆಗಳನ್ನು ಹೊಂದಿವೆ.

ಅಣ್ಣಿಗೇರಿ ದೇಶಪಾಂಡೆ ವಾಡೆಯೊಂದೆ ರಕ್ಷಣಾ ಗೋಡೆ ಮಣ್ಣಿನಿಂದ ನಿರ್ಮಿತವಾಗಿರುವುದು ವಿಶೇಷ. ಹಾಳುಕೋಟೆಯ ಬೂದು ಮಣ್ಣನ್ನು ಇಲ್ಲಿ ಬಳಸಲಾಗಿದ್ದು, ಬಹಳಷ್ಟು ಕಡೆ ಗೋಡೆ ಶಿಥಿಲಗೊಂಡಿದೆ. "ಹಾಳುಮಣ್ಣನ್ನು ತಂದು ಅದರಲ್ಲಿ ಹತ್ತಿ, ಭತ್ತದ ಹುಲ್ಲನ್ನು ಹಾಕಿ, ಕಾಲಿನಿಂದ ಮುದ್ದೆಯಾಗುವಂತೆ ತುಳಿದು ಎರಡು ದಿನ ಬಿಟ್ಟು ಗೋಡೆಯನ್ನು ಕಟ್ಟಿದ್ದಾರೆ" ಎಂದು ಇಲ್ಲಿನ ಕಾವಲುಗಾರ ಶ್ರೀ ಶಿವಪ್ಪ ಪೂಜಾರ[೪] ಅವರು ಹೇಳುತ್ತಾರೆ. ಈ

ರೀತಿಯ ಗೋಡೆ ಕಟ್ಟುವ ವಿಧಾನ ಪ್ರಾಚೀನ ಕಾಲದ ಮಾದರಿಯಾಗಿದ್ದು ಸದ್ಯದ ಅಣ್ಣಿಗೇರಿ ವಾಡೆಯು ಇಡೀ ಜೈನ ವಾಡೆಗಳಲ್ಲಿಯೇ ಅತ್ಯಂತ ಪುರಾತನವಾದದ್ದು ಎಂದು ಗುರುತಿಸಬಹುದು.

೨. ದ್ವಾರ ಬಾಗಿಲು (ಪ್ರವೇಶ ದ್ವಾರ).

ವಾಡೆಯ ರಕ್ಷಣೆಯಲ್ಲಿ ರಕ್ಷಣಾ ಗೋಡೆಗೆ ಇರುವ ಪ್ರಾಮುಖ್ಯದಷ್ಟೆ ವಾಡೆಯ ದ್ವಾರಬಾಗಿಲಿಗೆ ಮಹತ್ತರವಾದ ಪ್ರಾಮುಖ್ಯತೆ ಇರುತ್ತದೆ. ವಾಡೆಯ ಒಳಗೆ ಮತ್ತು ಹೊರಗೆ ಸಂಪರ್ಕ ಕಲ್ಪಿಸುವ ಏಕೈಕ ಮಾರ್ಗ ಇದಾಗಿದ್ದು, ಬಹಳಷ್ಟು ಭದ್ರವಾಗಿರುತ್ತದೆ. ದ್ವಾರದ ಬಳಿಯಲ್ಲಿ ಸೈನಿಕರು, ದ್ವಾರಪಾಲಕರಿರುತ್ತಿದ್ದು, ವಾಡೆಗೆ ಬರುವ ಹೊಸ ಮುಖಗಳನ್ನು ಮತ್ತು ಪ್ರತಿಯೊಬ್ಬರನ್ನೂ ತಪಾಸಣೆ ಮಾಡಿ ಒಳಗೆ ಮತ್ತು ಹೊರಹೋಗಲು ಬಿಡುತ್ತಿದ್ದರು. ಸಾಮಾನ್ಯವಾಗಿ ದೊಡ್ಡ ವಾಡೆಯ ಪ್ರವೇಶ ದ್ವಾರದ ಬಾಗಿಲುಗಳಿಗೆ ಜಿಡ್ಡಿ ಬಾಗಿಲು (ಸಣ್ಣ ಬಾಗಿಲು) ನಗಾರಿ ಖಾನೆ, ತುಬಾಕಿ ತೂತುಗಳು, ವೀಕ್ಷಣಾ ಕಿಟಕಿಗಳು ಇರುತ್ತವೆ. ಈ ವ್ಯವಸ್ಥೆ ಕಸಬಾ ಮಟ್ಟದ ವಾಡೆಗಳಲ್ಲಿ ಸಣ್ಣ ಪ್ರಮಾಣದ ವಾಡೆಯಲ್ಲಿ ಕಂಡುಬರುತ್ತಿರಲಿಲ್ಲ.

ಅಣ್ಣಿಗೇರೆ ದೇಶಪಾಂಡೆ ವಾಡೆಗೆ ಸಾಕಷ್ಟು ಪ್ರಾಚೀನತೆ ಇದ್ದರೂ ಇದೊಂದು ಕಸಬಾ ಮಟ್ಟದ ವಾಡೆಯಾದ್ದರಿಂದ ಜನರ ಸಂಪರ್ಕದ ವ್ಯಾಪ್ತಿಯೂ ಸೀಮಿತವಾಗಿತ್ತು. ಅಂತೆಯೇ ದ್ವಾರಬಾಗಿಲನ್ನೂ ಸಾಮಾನ್ಯವಾಗಿಯೇ ನಿರ್ಮಿಸಿದ್ದಾರೆ. ಎಂಟು ಅಡಿಯ ಎತ್ತರವಿರುವ ಪ್ರವೇಶದ್ವಾರ ಸಾಗವಾನಿ ಕಟ್ಟಿಗೆಯಿಂದ ನಿರ್ಮಿತವಾಗಿದೆ. ಬಾಗಿಲ ಚೌಕಟ್ಟಿನ ಎಡಬಲಗಳಲ್ಲಿ ಹೊರ ಚಾಚಿರುವ ಕಾಷ್ಠಶಿಲ್ಪದ ಕುದುರೆಗಳಿರುವುದು ಈ ದ್ವಾರದ ವಿಶೇಷ. ಇದೇ ರೀತಿ ಸರಳವಾಗಿರುವ ಇನ್ನೊಂದು ಪ್ರವೇಶ ದ್ವಾರವೆಂದರೆ ದರೂರು ವಾಡೆಯದ್ದು. ಚೌಕಟ್ಟುಗಳ ನಾಲ್ಕೂ ಕಡೆ ಹೂಗಳ ಕೆತ್ತನೆಯ ಅಲಂಕರಣ ಇಲ್ಲಿದ್ದು, ಬಲಶಾಲಿ ಕದಗಳನ್ನು ಹೊಂದಿದೆ. ಮುಳುಗುಂದ ವಾಡೆಯಲ್ಲಿ ಸಾಮಾನ್ಯ ದ್ವಾರವಿದ್ದು ಕಬ್ಬಿಣದ ಕದಗಳಿರುವುದು ವಿಶೇಷ. ಇನ್ನು ತೇರದಾಳ ವಾಡೆಯ ದ್ವಾರದ ಚೌಕಟ್ಟುಗಳಲ್ಲಿ ಅಲಂಕೃತ ಹೂಗಳ ಚಿತ್ರಗಳನ್ನು ಬಿಟ್ಟರೆ ಹೇಳಿಕೊಳ್ಳಬಹುದಾದ ಕೆತ್ತನೆಗಳಿರುವುದಿಲ್ಲ. ಸಾಗವಾನಿ ಕಟ್ಟಿಗೆ ಇಲ್ಲಿ ಬಳಕೆಯಾಗಿದೆ.

ಅತಿ ಎತ್ತರ ಮತ್ತು ಬಲಶಾಲಿ ಪ್ರವೇಶ ದ್ವಾರಗಳಿರುವುದು ಹನಗಂಡಿ ದೇಸಾಯಿಗಳ ವಾಡೆಯಲ್ಲಿ. ಇಲ್ಲಿ ಎರಡು ದ್ವಾರಗಳಿದ್ದು, ಒಂದು ಉತ್ತರಕ್ಕೆ ಇನ್ನೊಂದು ಪೂರ್ವಕ್ಕೆ ಇದೆ. ಮೂಲದ್ವಾರ ಉತ್ತರ ದಿಕ್ಕಿಗೆ ಇದೆ. ಹತ್ತು ಅಡಿ ಎತ್ತರ ಈ ದ್ವಾರಕ್ಕೆ ಸಾಗವಾನಿ ಕಟ್ಟಿಗೆಯನ್ನು ಬಳಸಲಾಗಿದೆ. ಚೌಕಟ್ಟಿನ ಎಡಬಲಗಳಲ್ಲಿ ಸುಂದರಗೆತ್ತನೆಯ ಹೊರಚಾಚಿದ ಎರಡು ಕಾಷ್ಠಶಿಲ್ಪದ ಕುದುರೆಗಳನ್ನು ಕೆತ್ತಲಾಗಿದ್ದು, ಬಾಗಿಲು ನಾಲ್ಕು ಅಡ್ಡಪಟ್ಟಿಕೆಯನ್ನು ಹೊಂದಿದೆ. ಈ ಅಡ್ಡಪಟ್ಟಿಯನ್ನು ಭೇದಿಸಿ ಒಳಹೋದ ಕಬ್ಬಿಣದ ಮೊಳೆಗಳನ್ನು ಸಾಕಷ್ಟು ಸಂಖ್ಯೆಯಲ್ಲಿ ಇಲ್ಲಿ

ಕಾಣಬಹುದು. ದ್ವಾರದ ಮೇಲುಗಡೆ ಅತ್ಯಾಕರ್ಷಕ ಮುಸ್ಲಿಂ ಶೈಲಿಯ ಕಮಾನು ಇರುವುದು ಮತ್ತೊಂದು ವಿಶೇಷ. ವಾಡೆಯ ಮನೆತನವು ಉತ್ತರೋತ್ತರವಾಗಿ ಬೆಳೆಯಲಿ ಎಂಬ ಆಶಯದಿಂದ ಪ್ರವೇಶ ದ್ವಾರವನ್ನು ಉತ್ತರಕ್ಕೆ ಇಡಲಾಗಿದೆ.

ಹನಗಂಡಿ ವಾಡೆಯ ಶ್ರೀಮಂತಿಕೆ ಹೆಚ್ಚುತ್ತಾಹೋದಂತೆ ಸಂಪರ್ಕವೂ ಹೆಚ್ಚಾಯಿತು. ರಾಜಮಹಾರಾಜರು ಯುದ್ಧದ ಸಂದರ್ಭದಲ್ಲಿ ವಾಡೆಯ ಪ್ರದೇಶಕ್ಕೆನಾದರೂ ಬಂದಿದ್ದರೆ ಅವರು ವಾಡೆಯಲ್ಲಿಯೇ ವಿಶ್ರಾಂತಿ ತೆಗೆದುಕೊಂಡು ಮುಂದೆ ಪ್ರಯಾಣ ಬೆಳೆಸುತ್ತಿದ್ದರು. ವಾಡೆಗೆ ಬರುವಾಗ ರಾಜ ಸಾಮಾನ್ಯವಾಗಿ ಆನೆ ಮೇಲೆ ಬರುವುದು ರೂಢಿ. ಒಮ್ಮೆ ರಾಜ ಆನೆಯ ಮೇಲೆ ಹನಗಂಡಿ ವಾಡೆಗೆ ಬಂದಾಗ, ಪ್ರವೇಶದ್ವಾರದಲ್ಲಿ ಹೋಗದಾದ ಕಾರಣ ಅವನು ಅಲ್ಲಿಯೇ ಇಳಿದು ವಾಡೆಯ ಒಳ ಹೋದನಂತೆ. ಈ ಸೂಕ್ಷ್ಮ ಅರಿತ ದೇಸಾಯಿಗಳು ಆನೆ ಪ್ರವೇಶ ಮಾಡಬಹುದಾದ ಮತ್ತೊಂದು ದ್ವಾರವನ್ನು ಪೂರ್ವಕ್ಕೆ ನಿರ್ಮಾಣಮಾಡಿದರು ಎಂದು ವಾಡೆಯ ಹಿರಿಯ ತಲೆ ಶ್ರೀ ಕೃಷ್ಣಗೌಡ ಅಲ್ಲಪ್ಪ ದೇಸಾಯಿಯವರು ಹೇಳುತ್ತಾರೆ.[೫]

ಸ್ಥಳೀಯವಾಗಿ ದೊರೆಯಬಹುದಾದ ಕುರಣಿಕಲ್ಲುಗಳಿಂದ ನಿರ್ಮಿತವಾದ ಹನಗಂಡಿ ವಾಡೆಯ ಪೂರ್ವದ್ವಾರವು ೨೫ ಅಡಿ ಎತ್ತರವಿದ್ದು ಬಾಗಿಲು ೨೦ ಅಡಿ ಎತ್ತರವಿದೆ. ಒಂದು ಆನೆ ಅದರ ಸವಾರ ಸುಲಭವಾಗಿ ಇಲ್ಲಿ ಪ್ರವೇಶ ಮಾಡಬಹುದು. ನಗಾರಿ ಖಾನೆ, ಗಂಟೆ ಖಾನೆ, ವೀಕ್ಷಣಾ ಕಿಡಕಿಗಳನ್ನು ಇಲ್ಲಿ ಕಾಣಬಹುದು. ೧೫ ಅಡಿಯ ಭದ್ರವಾದ ಬಾಗಿಲುಗಳು (ಕದಗಳು) ಗಟ್ಟಿಮುಟ್ಟಾದ ಸಾಗವಾನಿ ಕದಗಳನ್ನು ಹೊಂದಿದೆ. ಚೌಕಟ್ಟಿನ ಮೇಲೆ ಗಣೇಶನ ಕಾಷ್ಠಶಿಲ್ಪವನ್ನು ಹೊಂದಿದ್ದು, ಕದದಲ್ಲಿ ಜಿಡ್ಡಿ ಬಾಗಿಲಿದೆ. ಕದದ ಮೇಲ್ಗಡೆ ಕಬ್ಬಿಣದ ಸರಳುಗಳಿವೆ.

**ಜಿಡ್ಡಿ ಬಾಗಿಲು (ಅಪ್ಪಣೆಯ ಬಾಗಿಲು)**

ವಾಡೆಯ ದೇಸಾಯಿ ಒಳ-ಹೊರ ಹೋಗುವಾಗ ಪ್ರವೇಶದ್ವಾರವು ತೆರೆಯಲ್ಪಡುತ್ತಿತ್ತು. ಉಳಿದ ಸಮಯದಲ್ಲಿ ಸದಾ ಮುಚ್ಚಿರುತ್ತಿತ್ತು. ಬಾಗಿಲು ಮುಚ್ಚಿದಾಗ ದೇಸಾಯಿಯನ್ನು ಕಾಣಲು ಯಾರಾದರೂ ಬಂದರೆ ನೇರವಾಗಿ ಒಳ ಹೋಗುವಂತಿರಲಿಲ್ಲ. ದೇಸಾಯಿಯ ಅಪ್ಪಣೆ ದೊರೆತ ಮೇಲೆ ಅವರಿಗೆ ಒಳಗೆ ಪ್ರವೇಶ ಕಲ್ಪಿಸಲಾಗುತ್ತಿತ್ತು. ಬಾಗಿಲು ಹೊರಗೆ ನಿಂತ ಕಾವಲುಗಾರ ಹೊರಗಡೆ ಇದ್ದ ವ್ಯಕ್ತಿಯ ಪರಿಚಯವನ್ನು ಬಾಗಿಲು ತೆಗೆಯದೆ ಒಳಗಿರುವ ಕಾವಲುಗಾರನಿಗೆ ತಿಳಿಸುತ್ತಿದ್ದ. ಇದಕ್ಕಾಗಿಯೇ ದೊಡ್ಡ ಪ್ರವೇಶದ್ವಾರದ ಕೆಳಗಡೆ ಮೂರು ಅಡಿ ಅಗಲ, ಮೂರು ಅಡಿ ಉದ್ದದ ಜಿಡ್ಡಿ ಬಾಗಿಲು ಎಂಬ ವ್ಯವಸೆ ಇತ್ತು. ಒಳಗಿನ ಕಾವಲುಗಾರ ಬಂದ ವ್ಯಕ್ತಿಯನ್ನು ಒಳಗೆ ಬಿಡಲು ಅಪ್ಪಣೆಯನ್ನು ದೇಸಾಯಿಯಲ್ಲಿ ಕೇಳಿ ಅಪ್ಪಣೆಕೊಟ್ಟರೆ ಅವನನ್ನು ಒಳಗೆ ಬಿಡುತ್ತಿದ್ದರು. ಅಪ್ಪಣೆ ಇರದಿದ್ದರೆ ಬಂದವನು 'ಬಂದ ದಾರಿಗೆ ಸುಂಕವಿಲ್ಲ' ಎಂಬಂತೆ ಮರಳಬೇಕಿತ್ತು. ಒಂದೊಂದು ಸಾರಿ ಬಂದ ಅತಿಥಿಗಳ ಘನತೆಗೆ ತಕ್ಕಂತೆ ಪ್ರವೇಶ ದ್ವಾರ ತೆರೆಯಲಾಗುತ್ತಿತ್ತು. ಸಾಮಾನ್ಯ ವ್ಯಕ್ತಿ ಜಿಡ್ಡಿ ಬಾಗಿಲ ಮೂಲಕವೇ ಒಳಹೋಗಬೇಕಿತ್ತು. ಹನಗಂಡಿ

ವಾಡೆಯಲ್ಲಿ ಈ ವ್ಯವಸ್ಥೆ ಇದ್ದದ್ದು ಕಾಣಬಹುದು. ಈಗಲೂ ವಾಡೆಯ ಮಕ್ಕಳು ಶಾಲೆಯಿಂದ ಬಂದಾಗ ಜಿಡ್ಡಿ ಬಾಗಿಲ ಮೂಲಕವೇ ಪ್ರವೇಶ ಮಾಡುತ್ತಾರೆ. ಜಿಡ್ಡಿ ಬಾಗಿಲಿನ ವ್ಯವಸ್ಥೆಗೆ ಬಹುಮುಖ್ಯ ಕಾರಣ ವಾಡೆಯ ಚಟುವಟಿಕೆಗಳು ಹೊರಗೆ ನೇರವಾಗಿ ಕಾಣದಿರಲಿ ಎಂದೇ ಆಗಿತ್ತು.

**೩. ಪ್ರಾಂಗಣ (ಪ್ರಾಂಗಳ).**

ವಾಡೆಯ ರಕ್ಷಣಾಗೋಡೆ ಮತ್ತು ವಸತಿ ಕಟ್ಟಡದ ನಡುವೆ ಇರುವ ಜಾಗವೇ ಪ್ರಾಂಗಣ. ಈ ಪ್ರದೇಶದಲ್ಲಿ ಪಂಚರ ಕಟ್ಟೆ (ನ್ಯಾಯ ತೀರ್ಮಾನದ ಸ್ಥಳ) ವಾಡೆಯ ಕೆಲಸಗಾರರ ಮನೆಗಳು, ಸೈನಿಕರ ಮನೆಗಳು, ಕುದುರೆ ಲಾಯ, ದೇಸಾಯಿಯ ಸಾರೋಟ, ಕೃಷಿ ಚಟುವಟಿಕೆಯ ಉಪಕರಣಗಳು, ದನದ ಮನೆ ಚಕ್ಕಡಿ ಇತ್ಯಾದಿಗಳಿರುತ್ತಿದ್ದವು. ಹನಗಂಡಿ ವಾಡೆಯಲ್ಲಿ ಮೇಲಿನ ಅಂಶಗಳ ಜೊತೆಗೆ ವಾಡೆಗೆ ಸಂಬಂಧಿಸಿದ ಪಾರ್ಶ್ವನಾಥ ತೀರ್ಥಂಕರರ ಬಸದಿಯೊಂದು ಇದೆ.

ಪ್ರಾಂಗಣದಲ್ಲಿ ಸಾಕಷ್ಟು ಜನರು ನೆರೆಯುವಷ್ಟು ಜಾಗ ಇರುತ್ತಿದ್ದು, ಅಪಾರ ಪ್ರಮಾಣದ ರೈತರು ಗುಂಪಾಗಿ ಅಹವಾಲನ್ನು ತಂದಾಗ ದೇಸಾಯಿ ಈ ಸ್ಥಳದಲ್ಲಿಯೇ ನ್ಯಾಯ ತೀರ್ಮಾನ ಮಾಡುತ್ತಿದ್ದ. ನ್ಯಾಯ ತೀರ್ಮಾನ ಮಾಡುವ ಕಟ್ಟೆ ಪ್ರಾಂಗಣದಲ್ಲಿಯೇ ಇರುವುದರಿಂದ ಪ್ರಜೆಗಳು ನ್ಯಾಯ ತೀರ್ಮಾನ ಕೇಳಲು ಸಾಕಷ್ಟು ಪ್ರಮಾಣದಲ್ಲಿ ಬರಲು ಪ್ರಾಂಗಣದಲ್ಲಿ ಅವಕಾಶವಿರುತ್ತಿತ್ತು. ಈ ರೀತಿಯ ಮಾದರಿಯನ್ನು ಹನಗಂಡಿ ವಾಡೆಯಲ್ಲಿ ಕಾಣಬಹುದು. ಇಲ್ಲಿ ಮೊಹರಂ ಸಂದರ್ಭದಲ್ಲಿ ಅಲಂಕೃತಗೊಂಡ 'ಡೋಲಿ' ಬರುತ್ತದೆ. ಇದಕ್ಕೆ ಆದಿಲ್‌ಷಾಹಿಗಳ ಕಾಲದಿಂದಲೂ ವಾಡೆಯ ದೇಸಾಯಿಗಳು ಪೂಜೆ ಸಲ್ಲಿಸುತ್ತಾ ಬಂದಿದ್ದಾರೆ.

ಮಹಾವೀರ ಜಯಂತಿಯಂದು ಮಹಾವೀರನ ಭಾವಚಿತ್ರ ಸಹಿತ ಅಲಂಕರಣಗೊಂಡ ಟ್ರ್ಯಾಕ್ಟರ್‌ಗೆ ಪೂಜೆ ಸಲ್ಲಿಸುವುದು ಈ ಪ್ರಾಂಗಣದಲ್ಲಿಯೆ. ಗೌರಿಹುಣ್ಣಿಮೆಗೆ ಜನಗಳು ಸೇರುವುದು ಇದೇ ಪ್ರಾಂಗಣದಲ್ಲಿ. ಗೌರಿಹುಣ್ಣಿಮೆಯ ನಿಮಿತ್ತ ನಾಟಕ, ಕೋಲಾಟ, ಜನಪದ ಕುಣಿತ ಮುಂತಾದ ಕಾರ್ಯಕ್ರಮಗಳು ಪ್ರಾಂಗಣದಲ್ಲಿಯೇ ಜರುಗುತ್ತವೆ. ಹುಣ್ಣಿಮೆಯಂದು ಊರ ಜನರು ವಾಡೆಯ ಕಾರ್ಯಕ್ರಮದಲ್ಲಿ ಪಾಲ್ಗೊಳ್ಳಲು ಅವಕಾಶವಿದೆ. ಈ ಸಂಪ್ರದಾಯ ಒಂದು ಸಂಸ್ಕೃತಿಯ ಮುಂದುವರೆದ ರೂಪ. ವಾಡೆಯ ಈ ಸಂಸ್ಕೃತಿಯಲ್ಲಿ ಜನಸಾಮಾನ್ಯರಿಗೂ ಸ್ಥಾನ ಕಲ್ಪಿತವಾದದ್ದು ದೇಸಾಯಿಗಳಿಗಿರುವ ಉದಾರತೆಯ ಮತ್ತು ಪ್ರಜಾಸತ್ತಾತ್ಮಕ ಮೌಲ್ಯವನ್ನು ಎತ್ತಿತೋರುತ್ತದೆ.

**೪. ದೇಸಾಯಿ ಮನೆ (ಅರಮನೆ).**

ದೇಸಾಯಿ ವಾಸಿಸುವ ಸ್ಥಳ ಸುಲಭವಾಗಿ ವೀಕ್ಷಣೆಗೆ ದೊರೆಯದಾದಂತಹದು. ವಿಸ್ತಾರವಾದ ಪ್ರವೇಶದ್ವಾರ, ಬಲಶಾಲಿ ರಕ್ಷಣಾಗೋಡೆಯ ಒಳಗೆ ಇರುವುದೆ ದೇಸಾಯಿ ವಸತಿ.

ಇದಕ್ಕೆ ದೇಸಾಯಿಯ ಅರಮನೆಯೆಂದೂ ಕರೆಯಬಹುದು. ಅರಮನೆ ಮತ್ತು ರಕ್ಷಣಾಗೋಡೆಯ ಮಧ್ಯೆ ವಿಸ್ತಾರವಾದ ಪ್ರಾಂಗಣ ಇರುತ್ತದೆ. ಬಹುಶ: ಶತ್ರುಗಳ ನಿಯಂತ್ರಣಕ್ಕೆ ಮತ್ತು ಘನತೆಯ ಸಂಕೇತವಾಗಿ ಇದು ಕಂಡು ಬರುತ್ತದೆ. ಶತ್ರುಗಳು ಒಂದು ವೇಳೆ ರಕ್ಷಣಾ ಗೋಡೆ ದಾಟಿ ವಾಡೆ ಪ್ರವೇಶಿಸದರೂ ಪ್ರಾಂಗಣದಲ್ಲಿ ಸಾಕಷ್ಟು ಸಂಖ್ಯೆಯ ವಾಡೆಯ ಕಾವಲುಗಾರರು ಅವರು ಅರಮನೆಯನ್ನು ಪ್ರವೇಶಿಸಿದಂತೆ ಮಟ್ಟ ಹಾಕುತ್ತಿದ್ದರು. ಶತ್ರುಗಳು ಇವರನ್ನೂ ದಾಟಿ ಬಂದರೂ ಅರಮನೆಗೆ ಮತ್ತೆ ಬಲಿಷ್ಠವಾದ ಬಾಗಿಲು, ಕದಗಳು ಇರುತ್ತಿದ್ದವು. ಈ ಬಾಗಿಲಿಗೆ ಒಳಗಡೆಯಿಂದ ಬಲಶಾಲಿಯಾದ ಚಿಲಕಗಳು, ಕಟ್ಟಿಯೆ ಉದ್ದನೆಯ ಅಗುಳಿಗಳನ್ನು ಇರಿಸಲಾಗಿರುತ್ತಿತ್ತು. ಹನಗಂಡಿ ವಾಡೆಯಲ್ಲಿ ಈ ವ್ಯವಸ್ಥೆ ಇದೆ.

ವಾಡೆಯ ಅರಮನೆಯ ರಕ್ಷಣೆಗೆ ಇನ್ನೊಂದು ತಂತ್ರ ಅಳವಡಿಸಿರುವುದು ಅಣ್ಣಿಗೇರಿ ದೇಶಪಾಂಡೆ ವಾಡೆಯಲ್ಲಿ ಕಂಡುಬರುತ್ತದೆ. ಪ್ರವೇಶದ್ವಾರದಲ್ಲಿ ಯಾರೇ ಬಂದರೂ, ಮತ್ತು ಅಲ್ಲಿ ನಡೆಯುವ ಚಟುವಟಿಕೆಗಳನ್ನು ವೀಕ್ಷಿಸಲು ವಾಡೆಯ ಮೂಲೆಯಲ್ಲಿ ಇರುವ ಸ್ನಾನ ಗೃಹದ ಹುಸಿಯಲ್ಲಿ (ವಾಕ್ಪಥ) ಒಂದು ಸುರಂಗ ಕಿಂಡಿಯೊಂದನ್ನು ಮಾಡಲಾಗಿತ್ತು. ಹೀಗೆ ವೀಕ್ಷಣೆ ಮಾಡಲು ಒಬ್ಬ ಸೇವಕಿ ಸದಾ ಅದರ ಬಳಿ ಇರುತ್ತಿದ್ದಳು. ಒಂದು ವೇಳೆ ದ್ವಾರದಲ್ಲಿ ಘರ್ಷಣೆಗಳೇನಾದರೂ ಸಂಭವಿಸುತ್ತಿದ್ದರೆ ಸೇವಕಿ ನೇರವಾಗಿ ಬಂದು ದೇಸಾಯಿನಿಗೆ ತಿಳಿಸುತ್ತಿದ್ದಳು. ಈ ವಿಷಯವನ್ನು ದೇಸಾಯಿನಿ ದೇಸಾಯಿಗೆ ತಿಳಿಸುತ್ತಿದ್ದಳು. ತತ್‌ಕ್ಷಣವೇ ದೇಸಾಯಿ ಜಾಗೃತವಾಗಿ ಸೈನಿಕರ ಮೂಲಕ ಘರ್ಷಣೆ, ದಂಗೆ ಇತ್ಯಾದಿಗಳನ್ನು ನಿಯಂತ್ರಿಸುತ್ತಿದ್ದ. ರಹಸ್ಯ ಕಿಂಡಿ ಕೇವಲ ರಕ್ಷಣೆಗಷ್ಟೇ ಅಲ್ಲದೇ ಹೊರಹೋದ ದೇಸಾಯಿ, ಸಂಬಂಧಿಕರು ಬರುವುದನ್ನು ಕಂಡುಕೊಂಡು ವಾಡೆಯ ಸ್ತ್ರೀಯರು ಜಾಗೃತವಾಗಲೂ ಬಳಸಲ್ಪಡುತ್ತಿತ್ತು.

ಪ್ರಸ್ತುತ ದಿನಮಾನಗಳಲ್ಲಿ ವಾಡೆಯ ದ್ವಾರದ ಒಳಗೆ ಪ್ರವೇಶಿಸಿದರೆ ಜಂಘಾಬಲವೇ ಉಡುಗಿದಂತಾಗುತ್ತದೆ. ಅಷ್ಟು ದೊಡ್ಡದಾದ ಪ್ರವೇಶದ್ವಾರ, ಪ್ರಾಂಗಣ ಅದರ ಎದುರಿಗೆ ಗಕ್ಕನೆ ಕಂಡುಬರುವ ಅರಮನೆ ನೋಡಿದವರಿಗೆ ಭಯ ಹುಟ್ಟಿಸುವಂತಿವೆ. ಹೆದರುವಷ್ಟು ವಿಕಾರವಾಗಿವೆಯೇ ವಾಡೆಗಳು? ಎಂದಲ್ಲ. ಬಹಳ ಎತ್ತರ, ವಿಜೃಂಭಣೆಯೇ ಭಯಕ್ಕೆ ಕಾರಣ. ಇಂಥ ಕಟ್ಟಡವನ್ನು ಎಂದೂ ನೋಡದ ಸಾಮಾನ್ಯ ಮನುಷ್ಯ ಒಮ್ಮಲೇ ಈ ವೈಭೋಗ ನೋಡಿದಾಗ ಧೈರ್ಯ ಹೋದಂತಾಗಿ ಭಯ ಹುಟ್ಟಿ ಬಿಡುತ್ತದೆ. ಕಳ್ಳಕಾಕರಿಗೆ ಈ ಅನುಭವ ಇನ್ನೂ ಭಯಂಕರವಾಗಿರುತ್ತದೆ. ಈ ಅನುಭವ ಹನಗಂಡಿ ವಾಡೆಯಲ್ಲಿ ಭಾಸವಾಗುತ್ತದೆ.

**೫. ಪಟಂಗಳ.**

ದೇಸಾಯಿ ಅರಮನೆಯನ್ನು ಪ್ರವೇಶಮಾಡಿದ ನಂತರ ಸಿಗುವ ಜಾಗವೇ ಪಟಂಗಳ. ಅಣ್ಣಿಗೇರೆ ದೇಶಪಾಂಡೆ, ತೇರದಾಳ ನಾಡಗೌಡ, ಹನಗಂಡಿ ದೇಸಾಯಿ, ಮುಳುಗುಂದ ದೇಶಪಾಂಡೆ ವಾಡೆಗಳಲ್ಲಿ ಈ ವ್ಯವಸ್ಥೆಯನ್ನು ಕಾಣಬಹುದು. ಸಭಾಂಗಣ ಮತ್ತು ಸದರಕಟ್ಟೆಯ

ಎದುರಿಗೆ ಈ ಪ್ರದೇಶ ಇರುತ್ತದೆ. ಅಣ್ಣಿಗೇರೆ ದೇಶಪಾಂಡೆ ಹೊರತುಪಡಿಸಿ ಎಲ್ಲ ಜೈನ ವಾಡೆಗಳಲ್ಲಿ ಪಟಂಗಳದ ವಿಸ್ತಾರತೆ ಕಡಿಮೆ ಇದೆ. ಅಣ್ಣಿಗೇರೆಯ ಪಟಂಗಳ ವಿಸ್ತಾರವಾಗಿದ್ದು ೧೦ ಗುಂಟೆ ಪ್ರದೇಶದಲ್ಲಿ ನಿರ್ಮಿತವಾಗಿದೆ. ಒಂದು ಮದುವೆ ದಿಬ್ಬಣ ಬರುವಷ್ಟು ಜಾಗೆ ಇದಾಗಿದ್ದು, ಸಾಕಷ್ಟು ಜನರು ಇಲ್ಲಿ ನೆರೆಯಬಹುದು. ಉತ್ಸವ, ಮನರಂಜನಾ ಕಾರ್ಯಕ್ರಮಗಳು ಇಲ್ಲೇ ನಡೆಯುತ್ತಿದ್ದವು ಎಂದು ಶ್ರೀ ಭೂಪಾಲ ನಾವಳ್ಳಿಯವರು[೬] ಹೇಳುತ್ತಾರೆ.

ಪಟಂಗಳದಲ್ಲಿ ನಡೆಯುವ ಕಾರ್ಯಕ್ರಮಗಳನ್ನು ವಾಡೆಯ ಎಲ್ಲ ಜನರು ವೀಕ್ಷಣೆ ಮಾಡುತ್ತಿದ್ದರು. ದೇಸಾಯಿ ಸಭಾಂಗಣದಲ್ಲಿ ಕಾರ್ಯಕ್ರಮಗಳನ್ನು ವೀಕ್ಷಿಸಿದರೆ ದೇಸಾಯಿಣಿಯರು ಮತ್ತು ವಾಡೆಯ ಇತರ ಸ್ತ್ರೀಯರು ಸದರಕಟ್ಟೆಯ ಮೇಲೆ ಇರುವ ಮೇಲಂತಸ್ತು ಅಟ್ಟಣಿಗೆಯಲ್ಲಿ ಕುಳಿತು ವೀಕ್ಷಣೆ ಮಾಡುತ್ತಿದ್ದರಂತೆ. ಈ ವಾಡೆಯಲ್ಲಿ ಇನ್ನೂ ವಿಶೇಷವಾದ ಎರಡು ಅಟ್ಟಣಿಗೆಗಳು ಇದ್ದು ಸಭಾಂಗಣದ ಅಕ್ಕ-ಪಕ್ಕ ಗೋಡೆಗೆ ಅಂಟಿಕೊಂಡಿವೆ. ಇವುಗಳಲ್ಲಿ ನಾಲ್ಕರಿಂದ ಐದು ಜನ ನಿಂತುಕೊಳ್ಳುವಷ್ಟು ಜಾಗೆಯನ್ನು ಹೊಂದಿವೆ. ಕಟ್ಟಿಗೆ ಚಿತ್ತಾರದ ಕಂಬಗಳು ಇವುಗಳಿಗಿದ್ದು ಪಟಂಗಳದಲ್ಲಿ ನಡೆಯುವ ಕಾರ್ಯಕ್ರಮಗಳು ನಿಖರವಾಗಿ ಕಾಣದಿದ್ದಾಗ ಇಲ್ಲಿ ನಿಂತು ಸ್ಪಷ್ಟವಾಗಿ ವೀಕ್ಷಣೆ ಮಾಡಬಹುದಾಗಿತ್ತು.

ಸಾಮಾನ್ಯವಾಗಿ ಪಟಂಗಳವೂ ಮಣ್ಣಿನಿಂದ ಕೂಡಿದ ನೆಲವಾಗಿರುತ್ತದೆ. ಅಣ್ಣಿಗೇರಿ ವಾಡೆಯಲ್ಲಿ ಈ ರೀತಿಯ ಪಟಂಗಳ ಕಾಣಬಹುದು. ಮುಳುಗುಂದದಲ್ಲಿ ಅರ್ಧ ಮಣ್ಣು, ದಾರಿಗೆ ಸಿಮೆಂಟಿನ ನೆಲಹಾಸಿಗೆ ಇದೆ. ತೇರದಾಳದಲ್ಲಿ ಗಚ್ಚಿನಿಂದ ಕೂಡಿದ ಪಟಂಗಳವಿದೆ. ಪಟಂಗಳದಲ್ಲಿ ಧಾನ್ಯ ಸಂಗ್ರಹಿಸುವ ಹಗೆಗಳು ಇದ್ದದ್ದು ಅಣ್ಣಿಗೇರಿಯಲ್ಲಿ ಕಂಡುಬರುತ್ತವೆ. ಇದು ವಾಡೆಯ ಇತರ ಸ್ಥಳಗಳಿಗೆ ಹೋಗುವ ಕೊಂಡಿಯೂ ಆಗಿತ್ತು. ಅಣ್ಣಿಗೇರಿ ವಾಡೆಯ ಪಟಂಗಳದಕ್ಕೆ ಹೊಂದಿಕೊಂಡು ಪಲ್ಲಕ್ ಚಾವಡೀ (ಕಂದಾಯ ಕಟ್ಟುವ ಸ್ಥಳ) ದನದ ಮನೆ, ಡಂಬಣಿ ಮನೆ, ಕುದುರೆ ಲಾಯ, ಹಿತ್ತಲಕ್ಕೆ ಹೋಗುವ ಮಾರ್ಗಗಳಿವೆ. ಎಲ್ಲ ವಾಡೆಗಳ ಪಟಂಗಳವು ರಾಜಚಟುವಟಿಕೆಯ ಗಂಭೀರ ತಾಣವಾಗಿ, ವಾಡೆಯ ಮಕ್ಕಳ ಅಚ್ಚುಮೆಚ್ಚಿನ ಆಟದ ಸ್ಥಳವಾಗಿ ಬಹುಮುಖಿ ಕಾರ್ಯವನ್ನು ನಿರ್ವಹಿಸುತ್ತಿತ್ತು. ಒಂದೊಂಮ್ಮೆ ಬಹು ಚಟುವಟಿಕೆ ತಾಣವಾಗಿದ್ದ ಪಟಂಗಳಗಳು ಪ್ರಜಾಪ್ರಭುತ್ವ ಬಂದ ನಂತರ ಹಿಂದಿನ ವೈಭವವನ್ನು ಕಳೆದುಕೊಂಡಿದೆ.

**೬. ಸಭಾಂಗಣ.**

ಪಟಂಗಳದ ನಂತರ ದೇಸಾಯಿ ಅರಮನೆಯ ಮುಖ್ಯ ಭಾಗವಾದ ಸಭಾಂಗಣ ಕಂಡುಬರುತ್ತದೆ. ದೇಸಾಯಿಯನ್ನು ಕಾಣಲು ಬಂದ ಪ್ರಜೆಗಳು, ಕೆಲಸಗಾರರು, ರೈತರು ಸಭಾಂಗಣದಲ್ಲಿ ನಿಂತು ಮಾತನಾಡುತ್ತಿದ್ದರು. ಜರೂರಾದ ಸಂದರ್ಭದಲ್ಲಿ ಅಪರಾಧಿಗಳನ್ನು ಸಭಾಂಗಣದಲ್ಲಿ ನಿಲ್ಲಿಸಿ ವಿಚಾರಿಸಲಾಗುತ್ತಿತ್ತು. ಕುಲಕರಣಿಯ ಮುಖ್ಯ ಆಸೀನ ಸ್ಥಳವಿದು.

ಇವನು ಲೆಕ್ಕ ಪತ್ರಗಳನ್ನು ಇಲ್ಲಿಯೇ ಕುಳಿತು ಬರೆಯುತ್ತಿದ್ದ. ವಾಡೆಯ ಚಂದತೆಗೆ ಸಭಾಂಗಣ ನಿರ್ಮಿತವಾಗುತ್ತಿತ್ತು ಎಂದು ಅಣ್ಣಿಗೇರಿ ಸಭಾಂಗಣದ ಮುಖಮಂಟಪ ನೋಡಿದ ತಕ್ಷಣವೇ ಹೇಳಬಹುದು. ಆದ್ದರಿಂದ ಇದು ಅಲಂಕರಣಕ್ಕಾಗಿ ಇದ್ದರಿಂದ ಅಂತಹ ಚಟುವಟಿಕೆ ಕಂಡು ಬರದಿದ್ದರೂ ಮಹಾನವಮಿ, ಯುಗಾದಿ ದಿನ ಕೂರಿಗೆ (ಭೂಮಿಗೆ ಕಾಳು ಬಿತ್ತುವ ಸಾಧನ) ಬಂಡಿಗಾಲಿಗಳನ್ನಿಟ್ಟು ಪೂಜಿಸಲಾಗುತ್ತಿತ್ತು. ಪ್ರಜೆಗಳು ಸದರಕಟ್ಟೆಯಲ್ಲಿ ಕುಳಿತ ದೇಸಾಯಿಗೆ ಬನ್ನಿಕೊಟ್ಟು ಶುಭಕೋರುವುದು, ದರ್ಬಾರು ನಡೆಯುವಾಗ ವಾಡೆಯ ಸಿಬ್ಬಂದಿ ನಿಂತುಕೊಳ್ಳುವುದು ಸಭಾಂಗಣದಲ್ಲಿಯೆ. ದೇಸಾಯಿ ಸ್ನೇಹಿತರು, ಸಂಬಂಧಿಕರು, ಅತಿಥಿಗಳು ಬಂದಾಗ ಕುರ್ಚಿಯಲ್ಲಿ ಕುಳಿತು ಹರಟುತ್ತಿದ್ದದ್ದು, ಲೋಕಾಭಿರಾಮದ ಮಾತುಗಳನ್ನಾಡುತ್ತಿದ್ದದ್ದು ಇಲ್ಲಿಯೆ.

ಸಭಾಂಗಣ ವಾಡೆಯ ಸುಂದರತೆ ದೃಷ್ಟಿಯಿಂದ ನಿರ್ಮಾಣವಾಗಿರುವುದೆಂದು ಸರ್ವವಿಧಿತ. ಸಭಾಂಗಣದ ಪ್ರಾರಂಭಕ್ಕೆ ಹಣೆಗೆ ಕೈ ಇಟ್ಟು ನೋಡಬಹುದಾದ ಇಪ್ಪತ್ತರಿಂದ ಇಪ್ಪತ್ತೈದು ಅಡಿ ಎತ್ತರದ ನಿಲುಗಂಬಗಳಿರುತ್ತವೆ. ಇವು ಸಾಗವಾನಿ ಅಥವಾ ನೀಲಗಿರಿ ಕಟ್ಟಿಗೆಯಿಂದ ಕೂಡಿದವುಗಳಾಗಿರುತ್ತವೆ. ಇಪ್ಪತ್ತು ಅಡಿ ಎತ್ತರದ ಸಾಗವಾನಿ ಕಂಬಗಳನ್ನು ಹನಗಂಡಿ ಮತ್ತು ಅಣ್ಣಿಗೇರಿ ದೇಶಪಾಂಡೆ ವಾಡೆಯಲ್ಲಿ ಕಾಣಬಹುದು. ಹನಗಂಡಿ ವಾಡೆಯ ಕಂಬಗಳು ಚೌಕವಾಗಿ ಸರಳವಾಗಿದ್ದರೆ ಅಣ್ಣಿಗೇರಿ ವಾಡೆಯ ಕಂಬಗಳು ಷಟ್ಕೋನಾಕೃತಿಯನ್ನು ಹೊಂದಿದ್ದು, ಕಂಬದಲ್ಲಿ ಪೀಠ, ಘಟ, ಬೋಧಿಗೆ, ಅಲಂಕರಣದ ಚಾಚುಪಟ್ಟಿಯನ್ನು ಹೊಂದಿವೆ. ಇಲ್ಲಿನ ಬೋಧುಗೆಗಳಲ್ಲಿ ಪುಷ್ಪದ ಅಲಂಕಣ ಹೊಂದಿದ್ದು, ಸಾಧಾರಣ ರೀತಿಯೆ ಪ್ರಣಾಲಗಳನ್ನು ಹೊಂದಿವೆ. ಅತ್ಯಂತ ಕಲಾಕೃತಿಗಳಿಂದ ಕೂಡಿದ ಸಭಾಂಗಣದ ಕಂಬಗಳು ಮುಳುಗುಂದ ವಾಡೆಯಲ್ಲಿವೆ. ಕಂಬದ ಮೇಲ್ಭಾಗದ ಮಣಿಗಳನ್ನು ಅದರ ಮೇಲೆ ಷಟ್ಕೋನಾಕೃತಿಯ ಸುತ್ತಳಿಕೆ, ಅದರ ಮೇಲೆ ಅಲಂಕರಣ ನಂತರ ಅಡ್ಡತೋಲೆಯಲ್ಲಿ ಕುಸುರಿ ಕೆತ್ತನೆಯ ಚಾಚು ಪಟ್ಟಿಯನ್ನು ಹೊಂದಿವೆ.

ಸಭಾಂಗಣ ಸಾಮಾನ್ಯವಾಗಿ ಐದು ಅಂಕಣವನ್ನು ಹೊಂದಿರುತ್ತದೆ. ಹನಗಂಡಿ, ಅಣ್ಣಿಗೇರಿ, ಮುಳುಗುಂದ ವಾಡೆಯಲ್ಲಿ ಈ ರೀತಿಯ ಸಭಾಂಗಣವನ್ನು ನಿರ್ಮಿಸಲಾಗಿದೆ. ಈ ಎಲ್ಲ ವಾಡೆಗಳಲ್ಲಿ ಪಾಟಿಗಲ್ಲಿನ ನೆಲಹಾಸನ್ನು ಸಭಾಂಗಣಗಳಿಗೆ ಹಾಕಲಾಗಿದೆ. ಜೈನ ವಾಡೆಗಳಲ್ಲಿಯೇ ಸುಂದರ ಸಭಾಂಗಣವು ಅಣ್ಣಿಗೇರಿಯಲ್ಲಿ ಕಂಡುಬರುತ್ತದೆ. ವಿಶಾಲತೆ, ಅಚ್ಚುಕಟ್ಟುತನ ಇಲ್ಲಿ ಕಾಣಬಹುದು. ಇಲ್ಲಿ ಸಭಾಂಗಣ ಎಡಗಡೆಗೆ ಪಡಸಾಲೆ, ಅಡುಗೆ ಮನೆಗೆ, ಶಸ್ತ್ರಾಗಾರ, ಸ್ನಾನಾಗೃಹ, ಬಾಣಂತಿ ಕೋಣೆ ಇತ್ಯಾದಿಗಳಿಗೆ ಹೋಗುವ ಮುಖ್ಯದ್ವಾರ ಇದೆ.

೭. ಸದರ ಕಟ್ಟೆ

ಇಡೀ ವಾಡೆಯ ಹೃದಯಭಾಗ ಸದರ ಕಟ್ಟೆ. ದೇಸಾಯಿ ತನ್ನ ದರ್ಬಾರನ್ನು ನಡೆಸುವುದು ಇಲ್ಲಿಯೇ. ಇದಕ್ಕೆ ದೇಸಾಯಿ ಕೂಡುವ ಜಾಗ, ದೇಸಾಯಿ ಬೈಠಕ್ ಖಾನಾ, ದರ್ಬಾರ್, ರಾಜಾಂಗಣ ಎಂದೂ ಕರೆಯುತ್ತಿದ್ದರು. ಈ ಪದಗಳು ಪ್ರದೇಶಕ್ಕೆ ಅನುಗುಣವಾಗಿ ಬಂದಂತಹವು. ಸದರಕಟ್ಟೆ ದೇಸಾಯಿ ಆಸೀನನಾಗಿ ದರ್ಬಾರು ಮಾಡುವ ಸ್ಥಳ. ಇವನಿಗೆ ಪವಿತ್ರ ಸ್ಥಳವೂ ಹೌದು. ಪ್ರತಿ ದಿನ ಇದರ ಮೇಲೆ ದೇಸಾಯಿ ಆಸೀನನಾಗುವ ಮೊದಲು ಸ್ನಾನ ಮಾಡಿ, ಶುಭ್ರ ಮಡಿಬಟ್ಟೆಯನ್ನು ಧರಿಸಿ ಕುಳಿತುಕೊಳ್ಳುತ್ತಿದ್ದ, ಹಾಗೇ ಕುಳಿತುಕೊಳ್ಳುವಾಗ ಕಟ್ಟೆಗೆ ನಮಸ್ಕರಿಸುವುದು ಸಂಪ್ರದಾಯವಾಗಿತ್ತು. ಇದು ಗೌರವ ಸೂಚಕವೂ ಹೌದು. ಸಾಮಾನ್ಯವಾಗಿ ಸದರ ಕಟ್ಟೆಯಲ್ಲಿ ದೇಸಾಯಿ ಆಸೀನನಾಗುವುದು ಹತ್ತಿಯಿಂದ ಮಾಡಿದ ಗಾದೆಯ ಮೇಲೆ. ಈ ಗಾದೆಯ ಅಕ್ಕ-ಪಕ್ಕ ದುಂಡು ದಿಂಬುಗಳು, ಒರಗಲಿಕ್ಕೆ ಅಗಲವಾದ ದಪ್ಪನೆಯ ದಿಂಬುಗಳಿರುತ್ತಿದ್ದವು. ದಿಂಬುಗಳಿಗೆ ಕುತನಿ (ಮಕ್ಮಲ್) ಬಟ್ಟೆಯ ಹೊದಿಕೆ ಇರುತ್ತಿದ್ದವು. ಈ ಪದ್ಧತಿ ಆದಿಲ್‌ಷಾಹಿಗಳಿಂದ ಬಂದಂತೆ ತೋರುತ್ತದೆ. ಇಂಥ ದೇಸಾಯಿ ಆಸನ ಅಣ್ಣಿಗೇರಿ, ಹನಗಂಡಿ ವಾಡೆಗಳಲ್ಲಿ ಕಂಡುಬರುತ್ತವೆ.

ಪರಗಣಕ್ಕೆ ಸಂಬಂಧಿಸಿದ ದಾಖಲೆ ಪತ್ರಗಳ ಪರಿಶೀಲನೆ, ಕಲಾಪಗಳು ಕೆಲವೊಂದು ನ್ಯಾಯ ತೀರ್ಮಾನಗಳು ಸದರ ಕಟ್ಟೆಯಲ್ಲಿ ದೇಸಾಯಿ ನೆರವೇರಿಸುತ್ತಿದ್ದ. ದೇಸಾಯಿಯನ್ನು ಬಿಟ್ಟು ಗಾದೆಯಲ್ಲಿ ಯಾರೂ ಕುಳಿತುಕೊಳ್ಳುತ್ತಿರಲಿಲ್ಲ. ಇವನ ಮೇಲಾಧಿಕಾರಿ ಮತ್ತು ಸ್ವತಃ ಅರಸ ಬಂದಾಗ ಖುದ್ದಾಗಿ ದೇಸಾಯಿಯೇ ಅವರನ್ನು ಸದರ ಕಟ್ಟೆಗೆ ಆಹ್ವಾನಿಸಿ ತನ್ನ ಗಾದೆಯ ಮೇಲೆ ಕುಳ್ಳರಿಸಿ ಆತಿಥ್ಯವನ್ನು ನೆರವೇರಿಸುತ್ತಿದ್ದ. ಕೆಲವು ಪ್ರಸಂಗಗಳಲ್ಲಿ ಕುಲಕರಣಿ ಸದರ ಕಟ್ಟೆಯಲ್ಲಿ ಕುರಬಹುದಿತ್ತೇ ವಿನಹಃ ಗಾದಿ ಮೇಲಲ್ಲ, ಗಾದೆಯ ಮಾಲಿಕತ್ವ ದೇಸಾಯಿಗೆ ಮಾತ್ರ ಇದೆ. ವಾಡೆಗೆ ಉತ್ತರಾಧಿಕಾರಿಯನ್ನು ನಿಯಮಿಸುವಾಗ ಮತ್ತು ಹೊಸ ದೇಸಾಯಿಯ ಪದಗ್ರಹಣ ಗಾದಿಯ ಮೇಲೆ ಕೂರುವ ಮೂಲಕ ನೆರವೇರುತ್ತಿತ್ತು.

ಸದರ ಕಟ್ಟೆ ಚಿಕ್ಕ ಮತ್ತು ಚೊಕ್ಕಟವಾಗಿ ಕಟ್ಟಲ್ಪಡುತ್ತಿತ್ತು. ಇಲ್ಲಿ ಅಲಂಕರಣವೂ ಜಾಸ್ತಿ. ಇಲ್ಲಿನ ಕಂಭಗಳು ಚೌಸಪ್ಪಿಗಳು ಕುಸುರಿಕೆತ್ತನೆಯಿಂದ ಕೂಡಲ್ಪಟ್ಟಿರುತ್ತಿದ್ದುವು. ಈ ರೀತಿಯ ಅಲಂಕರಣವನ್ನು ಮುಳುಗುಂದ ವಾಡೆಯಲ್ಲಿ ಕಾಣಬಹುದು. ಇಲ್ಲಿನ ಚೌಸಪ್ಪಿಯಲ್ಲಿ ಅತ್ಯಾಕರ್ಷಕ ಕಾಷ್ಠ ಶಿಲ್ಪಗಳು, ಕುಸುರಿ ಕೆತ್ತನೆಗಳಿವೆ. ಇದೇ ರೀತಿಯ ಚೌಸಪ್ಪಿಗಳು ದರೂರು ವಾಡೆಯಲ್ಲಿಯೂ ವಿನ್ಯಾಸಗೊಂಡಿವೆ. ಸದ್ಯ ಸದರ ಕಟ್ಟೆಗಳಲ್ಲಿ ದೇಸಾಯಿನಿಯರು ಮಾಡಿದ ಕಸೂತಿ ಕಲೆಗಳ ಅನಾವರಣಗೊಳಿಸಲಾಗಿದೆ. ಅಲ್ಲದೇ ವಾಡೆಯ ಹಿರಿಯರ ಛಾಯಾಚಿತ್ರಗಳು, ತೈಲವರ್ಣದ ಚಿತ್ರಗಳನ್ನು ತೂಗುಹಾಕಲಾಗಿದೆ.

ಐದು ಅಂಕಣ ಹೊಂದಿರುವ ಜೈನ ವಾಡೆಗಳ ಸದರ ಕಟ್ಟೆಗಳು ಒಂದೊಮ್ಮೆ ವೈಭವದ ದಿನಗಳನ್ನು ತುಂಬಿಕೊಂಡು ಭೀಗುತ್ತಿದ್ದವು ಎಂದು ಅಲ್ಲಿ ನಡೆದಾಡಿದರೆ ಅನುಭವಕ್ಕೆ ಬಂದು

ಬಿಡುತ್ತದೆ. ದೇಸಾಯಿ ಸದರ ಕಟ್ಟೆಯಲ್ಲಿ ಕುಳಿತು ದರ್ಬಾರು ನಡೆಸುತ್ತಿದ್ದರು ರಾಜಪರಿವಾರ, ಊರ ಪ್ರಮುಖರು ಸಭಾಂಗಣದಲ್ಲಿ, ಪುರುಜನರು ಪಟಂಗಳದಲ್ಲಿ ನಿಂತು ಶಿರಸಾವಹಿಸಿ ಕೇಳಿ ಪಾಲಿಸುತ್ತಿದ್ದರು. ಇವರಿಗೆ ದೇಸಾಯಿ ಹೇಳಿದುದೇ ವೇದವಾಕ್ಯ ಎಂದೆನಿಸುತ್ತಿತ್ತು. ದೇಸಾಯಿ ದಾನ-ಧರ್ಮಾಧಿಗಳನ್ನು ಕೈಗೊಳ್ಳುವುದು ಇಲ್ಲಿಯೇ ಎಂದು ವಾಡೆಗಳ ಹಿರಿಯರು ಹೇಳುತ್ತಾರೆ. ದೇಸಾಯಿ ಸದರ ಕಟ್ಟೆಯ ತುದಿಗೆ ಇರುವ ಕಟಾಂಜನ ಬಳಿ ಕುಳಿತು ವಸ್ತ್ರ, ಧಾನ್ಯಗಳ ದಾನ ಮಾಡುತ್ತಿದ್ದರೆ, ಪ್ರಜೆಗಳು ಸಭಾಂಗಣದಲ್ಲಿ ನಿಂತು ಸ್ವೀಕರಿಸುತ್ತಿದ್ದರು. ಈ ರೀತಿಯ ಸಂಪ್ರದಾಯ ತಮ್ಮ ವಾಡೆಯಲ್ಲಿ ಪರಂಪರಾಗತವಾಗಿ ನಡೆದುಕೊಂಡು ಬಂದಿತ್ತು ಎಂದು ಅಣ್ಣಿಗೇರಿ ದೇಶಪಾಂಡೆ ವಾಡೆಯ ಶ್ರೀ ರಾಜೇಂದ್ರ ಭೀಮಪ್ಪಯ್ಯ ದೇಶಪಾಂಡೆಯವರು ಹೇಳುತ್ತಾರೆ.[೭]

ಪ್ರಸ್ತುತ ವಾಡೆಗಳ ಸದರ ಕಟ್ಟೆ ತನ್ನ ಹಿಂದಿನ ವೈಭವವನ್ನು ಕಳೆದುಕೊಂಡಿದೆ. ಇಲ್ಲಿ ಮಹಾನವಮಿಯ ಆಯುಧ ಪೂಜೆ ದಿನ ವಾಡೆಯ ಶಸ್ತ್ರಾಸ್ತ್ರಗಳಾದ ಬಂದೂಕು, ಕತ್ತಿ, ಖಡ್ಗ, ಗುರಾಣಿ, ಈಟಿ, ಭರ್ಜಿ ಮುಂತಾದವುಗಳನ್ನು ಇಟ್ಟು ಪೂಜಿಸುತ್ತಾರೆ. ಸದ್ಯದ ವಾರಸುದಾರರಿಗೆ ಬನ್ನಿ ಕೊಡುವ ಕಾರ್ಯಕ್ರಮ ಸದರ ಕಟ್ಟೆಯಲ್ಲಿಯೇ ನಡೆಯುತ್ತದೆ. ಎಲ್ಲ ಜೈನವಾಡೆಗಳಲ್ಲಿ ಈ ಸಂಪ್ರದಾಯ ಇನ್ನೂ ಜೀವಂತವಾಗಿದೆ.

ತೇರದಾಳ, ಹನಗಂಡಿ, ದರೂರು ವಾಡೆಗಳಲ್ಲಿ ಸದರ ಕಟ್ಟೆಯ ಗೋಡೆಗಳಲ್ಲಿ ಕಟ್ಟಿಗೆಯ ಅಲಂಕೃತ ಮಾಡುಗಳಿದ್ದು, ಅಲ್ಲಿ ತೀರ್ಥಂಕರರ ವಿಗ್ರಹಗಳನ್ನು ಇರಿಸಲಾಗಿದೆ. ಅಣ್ಣಿಗೇರಿ ದೇಶಪಾಂಡೆ ವಾಡೆಯ ಸದರ ಕಟ್ಟೆಯಲ್ಲಿ ಎಡ-ಬಲಗಳಲ್ಲಿ ಎರಡು ಅತಿಥಿ ಕೋಣೆಗಳನ್ನು, ಮುಳುಗುಂದ ವಾಡೆಯಲ್ಲಿ ಪಡಸಾಲೆಗೆ ಹೋಗುವ ಬಾಗಿಲು, ಉಳಿದ ವಾಡೆಗಳಲ್ಲಿ ವಿವಿಧ ಕೋಣೆಗಳ ಬಾಗಿಲುಗಳುಂಟು.

### ೮. ಅತಿಥಿ ಗೃಹ

'ಅತಿಥಿ ದೇವೋ ಭವ' ಎನ್ನುವ ವಾಕ್ಯದಂತೆ ವಾಡೆಗೆ ಬಂದ ಅತಿಥಿಗಳನ್ನು ಸರ್ವಸೌಲಭ್ಯಗಳಿಂದ ಸತ್ಕರಿಸಲಾಗುತ್ತಿತ್ತು. ಆಕಸ್ಮಿಕವಾಗಿ ಬಂದ ಅತಿಥಿಗಳು, ಅಭ್ಯಾಗತರಿಗಾಗಿಯೇ ವಿಶೇಷ ಕೋಣೆಗಳಿದ್ದದ್ದು ಕಂಡು ಬರುತ್ತವೆ. ಸಾಮಾನ್ಯವಾಗಿ ಅತಿಥಿ ಗೃಹಗಳು ಸದರ ಕಟ್ಟೆಗೆ ಅಂಟಿಕೊಂಡಿರುತ್ತಿದ್ದವು. ಅಣ್ಣಿಗೇರಿ ವಾಡೆಯಲ್ಲಿ ಈ ಮಾದರಿಯನ್ನು ಕಾಣಬಹುದು. ಇಲ್ಲಿನ ಅತಿಥಿ ಕೋಣೆಗೆ ಅಡುಗೆ ಮನೆ, ಪಡಸಾಲೆಯ ಸಂಪರ್ಕ ಇರುವುದಿಲ್ಲ. ವಾಡೆಯ ಸ್ತ್ರೀಯರು ಅನವಶ್ಯಕವಾಗಿ ಬಂದಂತವರ ಕಣ್ಣಿಗೆ ಬೀಳದಿರಲಿ ಎಂಬ ಪೂರ್ವಾಲೋಚನೆಯ ತಂತ್ರದ ನಿರ್ಮಾಣಗಳಿವು. ವಾಡೆಯ ಸ್ತ್ರೀಯರು ಶ್ರೀಮಂತಿಕೆಯ ಸುಪ್ಪತ್ತಿಗೆಯಲ್ಲಿ ಬೆಳೆದು ಬಿಸಿಲಿಗೆ ಮೈಯೊಡ್ಡದವರು. ವಾಡೆಯಿಂದ ಹೊರಗೆ ಹೋಗುತ್ತಲೂ ಇರಲಿಲ್ಲ. ಹೊರ ಹೋಗುವ ಸಂದರ್ಭ ಬಂದಾಗ ಬಂದೂಬಸ್ತಾದ ಮೇನೆ (ಮೇಣೆ)ಯಲ್ಲಿ ಹೋಗುತ್ತಿದ್ದರು. ಆದ್ದರಿಂದ ಬಿಸಿಲಿಗೆ ಬೀಳದ ಇವರು ಸುಂದರವಾಗಿಯೇ ಇರುತ್ತಿದ್ದರು.

ಆದ್ದರಿಂದ ಅತಿಥಿಗಳ ದೃಷ್ಟಿಗೆ ಇವರು ಕಾಣದಿರಲಿ ಎಂಬ ಉದ್ದೇಶವೇ ಅತಿಥಿ ಕೋಣೆಗಳನ್ನು ಪ್ರತ್ಯೇಕಿಸಲಾಗಿದೆ. ಯಾಕೆಂದರೆ ಬಂದಂತ ಅತಿಥಿಗಳ ಮನಸ್ಸು ಯಾವ ತರಹದ್ದೆಂದು ತಿಳಿಯದು. ಅದಕ್ಕಾಗಿಯೇ ಈ ರೀತಿಯ ವ್ಯವಸ್ಥೆ ಔಚಿತ್ಯಪೂರ್ಣವೆನಿಸಿತ್ತು. ಮುಳುಗುಂದ ವಾಡೆಯಲ್ಲಿಯೂ ಸದರ ಕಟ್ಟೆಯ ಪಕ್ಕಕ್ಕೆ ಅತಿಥಿಗೃಹಗಳಿರುವುದನ್ನು ಈಗಲೂ ಕಾಣಬಹದು.

ಅತಿಥಿ ಅಭ್ಯಾಗತರ ಕೋಣೆಗಳು ಅಚ್ಚುಕಟ್ಟಾಗಿರುತ್ತಿದ್ದವು. ಯಥೇಚ್ಛ ಗಾಳಿ, ಬೆಳಕು ಕೂಡಿರಲೆಂದು ಸಾಕಷ್ಟು ಕಿಡಕಿಗಳಿರುತ್ತಿದ್ದವು. ಕಟ್ಟಿಗೆಯ ಮಂಚ, ಕುರ್ಚಿಗಳು ಸುಸಜ್ಜಿತ ಹಾಸಿಗೆ ಇಲ್ಲಿದ್ದವು. ಹನಗಂಡಿ, ತೇರದಾಳ, ದರೂರು ವಾಡೆಗಳಲ್ಲಿಯೂ ಅತಿಥಿ ಕೋಣೆಗಳ ವ್ಯವಸ್ಥೆಗಳಿರುವುದು ಕಂಡುಬರುತ್ತವೆ.

**೯. ದೇಸಾಯಿ ಕೋಣೆ.**

ಸದರ ಕಟ್ಟೆಗೆ ಅಂಟಿಕೊಂಡಿರುವಂತೆ ಕಟ್ಟಲಾದ ದೇಸಾಯಿ ಕೋಣೆ ಪ್ರತಿಷ್ಠೆಯ ಸಂಕೇತ. ಪಟಂಗಳದಲ್ಲಿ ಅಥವಾ ಪ್ರಾಂಗಣದಲ್ಲಿ ನಡೆಯುವ ಚಟುವಟಿಕೆಗಳನ್ನು ವೀಕ್ಷಿಸಲು ಅನುವಾಗುವಂತೆ ದೇಸಾಯಿ ಕೋಣೆಯನ್ನು ವಿನ್ಯಾಸ ಮಾಡಲಾಗಿರುತ್ತಿತ್ತು. ಇದು ದೇಸಾಯಿಯ ಖಾಸಗಿ ಕೋಣೆಯಾಗಿದ್ದು ದೇಸಾಯಿನಿ ಹೊರತು ಬೇರೆಯವರಿಗೆ ಪ್ರವೇಶ ನಿಷಿದ್ಧ, ಮಕ್ಕಳಿಗೆ ಪ್ರವೇಶ ಇರುತ್ತಿದ್ದಿತು. ಸುಸಜ್ಜಿತ ಹಾಸಿಗೆ, ದಿಂಬುಗಳು, ಕುಸುರಿ ಕೆತ್ತನೆಯ ಮಂಚ, ಕುರ್ಚಿ, ನಿಲುಗನ್ನಡಿ ಇರುತ್ತಿದ್ದವು. ಅಣ್ಣಿಗೇರಿ ದೇಶಪಾಂಡೆಗಳಿಗೆ ಆದಿಲ್‌ಷಾಹಿಗಳು ಕೊಟ್ಟ ಕಪಾಟು, ಡ್ರಾಗಳು ಅಲಂಕಾರಯುಕ್ತ ನಿಲುಗನ್ನಡಿಯನ್ನು ಈಗಲೂ ನೋಡಬಹುದು.

ದೇಸಾಯಿ ಕೆಲವೊಂದು ಸಾರಿ ಪರಗಣದ ಲೆಕ್ಕ ಪತ್ರಗಳನ್ನು ತನ್ನ ಕೋಣೆಯಲ್ಲಿ ಪರಿಶೀಲನೆ ಮಾಡುತ್ತಿದ್ದನು. ಲೆಕ್ಕದಲ್ಲಿ ದೋಷ ಕಂಡುಬಂದಾಗ ಪಲ್ಲಕ ಚಾವಡಿಯಲ್ಲಿರುವ ಕುಲಕರಣಿಯನ್ನು ಸಭಾಂಗಣಕ್ಕೆ ಕರೆಯಿಸಿ ಚರ್ಚಿಸುತ್ತಿದ್ದ. ಉಳಿದಂತೆ ಈ ಕೋಣೆ ದೇಸಾಯಿ–ದೇಸಾಯಿನಿ ಮಲಗುವ ಕೋಣೆಯಾಗಿತ್ತು. ಹಣ, ಬಂಗಾರ, ಇತರೆ ಅಮೂಲ್ಯ ಸಂಪತ್ತು ಗಟ್ಟಿಯಾದ ಟ್ರಜ್ಯುರಿ ಮತ್ತು ಗುಪ್ತ ಅಂಬಾರಿ (ಬಂಗಾರವನ್ನು ಸಂಗ್ರಹಿಸುವ ವ್ಯವಸ್ಥೆ) ಮಹತ್ವದ ದಾಖಲಾತಿಗಳು ಈ ಕೋಣೆಯಲ್ಲಿ ಇರುತ್ತಿದ್ದುವು.

**೧೦. ಶಸ್ತ್ರಾಗಾರ.**

ಜೈನ ಧರ್ಮ ಅಹಿಂಸೆ ತಳಹದಿಯಲ್ಲಿ ಸ್ಥಾಪಿತವಾದದ್ದು. 'ಅಹಿಂಸೋ ಪರಮೋ ಧರ್ಮ:' ಎಂಬುದು ಈ ಧರ್ಮದ ಮೂಲಮಂತ್ರ. ಜೈನನಾದವನು ತನ್ನ ಜೀವಿತ ಅವಧಿಯಲ್ಲಿ ಪ್ರಾಣಿ ಹಿಂಸೆ, ಪ್ರಾಣಿ ವಧೆ ಮಾಡುವಂತಿಲ್ಲ. ಇದರಲ್ಲಿ ಮನುಷ್ಯ ಪ್ರಾಣಿಯೂ ಸೇರಿಕೊಳ್ಳುತ್ತಾನೆ. ಮನುಷ್ಯನನ್ನು ಕೊಲ್ಲುವುದು, ಗಾಯಗೊಳಿಸುವುದು ಅಷ್ಟೇ ಅಲ್ಲದೆ ಮನಸ್ಸನ್ನು ನೋಯಿಸುವುದು ಹಿಂಸೆ ಎನಿಸುತ್ತದೆ. ಒಂದು ವೇಳೆ ಜೈನನು ಈ ಪ್ರವೃತ್ತಿಗಳಲ್ಲಿ ಭಾಗಿಯಾದರೆ ಅವನಿಗೆ ಅಶುಭ

ಕರ್ಮ ಉಂಟಾಗುತ್ತದೆ. ಹೀಗಿರುವಾಗ ಅಹಿಂಸಾ ತತ್ವ ಪರಿಪಾಲಕರಾದ ಜೈನ ದೇಸಾಯಿಗಳ ವಾಡೆಯಲ್ಲಿ ಆಯುಧಗಳೇಕೆ ಎಂಬ ಪ್ರಶ್ನೇ ಮೂಡುವುದು ಸಹಜ.

ಜೈನ ಧರ್ಮ ಎರಡು ವಿಷಯಗಳಲ್ಲಿ ಅಹಿಂಸೆ ಪರಿಕಲ್ಪನೆಗೆ ವಿನಾಯ್ತಿ ನೀಡಿತ್ತು. ಒಂದು ಯುದ್ಧ, ಎರಡು ಕೃಷಿ. ಈ ವೃತ್ತಿಗಳು ಅಹಿಂಸೆ ಪರಿಕಲ್ಪನೆಗೆ ಹೊರತಾಗಿದ್ದವು. ಜೈನ ೨೪ ತೀರ್ಥಂಕರರು ಕ್ಷತ್ರೀಯರಾಗಿದ್ದರು ಎಂಬುದನ್ನು ಇಲ್ಲಿ ಸ್ಮರಿಸಬಹುದು. ರಾಜ್ಯಾಡಳಿತದಲ್ಲಿ ಹಿಂಸೆ ಅನಿವಾರ್ಯ ಮತ್ತು ಅವತ್ತಿನ ಕಾಲ ಧರ್ಮವೂ ಹೌದು. ಅಂತೆಯೇ ಕೃಷಿಯು ರಾಜ್ಯಾಡಳಿತದ ಪ್ರಧಾನ ಚಟುವಟಿಕೆಯಾದ್ದರಿಂದ ಅದರಲ್ಲಿಯೂ ಅಹಿಂಸೆ ಕಲ್ಪನೆಯನ್ನು ಕೈಬಿಡಲಾಯಿತು. ಹೀಗೆ ಯುದ್ಧ, ಆತ್ಮರಕ್ಷಣೆ, ಕೃಷಿ ಚಟುವಟಿಕೆಗಳಲ್ಲಾದ ಹಿಂಸೆಯ ಕರ್ಮ ಫಲವನ್ನು ಕಳೆದುಕೊಳ್ಳಲು ವ್ಯಕ್ತಿಯು ಬಸದಿ ನಿರ್ಮಾಣ, ಜೀರ್ಣೋದ್ಧಾರ, ಕೆರೆ ನಿರ್ಮಾಣ, ಸ್ವಾಧ್ಯಾಯ, ದಾನ, ತೀರ್ಥಕ್ಷೇತ್ರಗಳ ದರ್ಶನಗಳಿಂದ ತನಗಂಟಿದ ಕರ್ಮದ ಕ್ಷಯವನ್ನು ಮಾಡಿಕೊಳ್ಳುತ್ತಿದ್ದ. ಇತಿಹಾಸದಲ್ಲಿ ರಾಜ ಮಹಾರಾಜರು ಸಾಕಷ್ಟು ಬಸದಿಗಳನ್ನು ಕಟ್ಟಿಸಿದ್ದು ನೆನೆಯಬಹುದು. ದಂಡನಾಯಕನಾದ ಚಾವುಂಡರಾಯ ಶ್ರವಣಬೆಳಗೊಳದ ದೊಡ್ಡ ಬೆಟ್ಟದಲ್ಲಿ ಬಾಹುಬಲಿಯ ಬಯಲು ಬಸದಿಯನ್ನು ಕಟ್ಟಿದ್ದು ತಾನು ಯುದ್ಧದಲ್ಲಿ ಮಾಡಿದ ಹಿಂಸಾ ಕರ್ಮವನ್ನು ಕ್ಷಯ ಮಾಡಲು. ಅಣ್ಣಿಗೇರಿ ದೇಶಪಾಂಡೆ ಊರಲ್ಲಿದ್ದ ಪಾರ್ಶ್ವನಾಥ ಜಿನಾಲಯವನ್ನು, ಮುಳುಗುಂದ ದೇಶಪಾಂಡೆಗಳು ಮುಳುಗುಂದದ ಆಧಿನಾಥ ಜಿನಾಲಯ, ತೇರದಾಳ ನಾಡಗೌಡರು–ಹನಗಂಡಿ ದೇಸಾಯಿಗಳು ತೇರದಾಳದ ಗೊಂಕ ಜಿನಾಲಯವನ್ನು ಕಾಲಕಾಲಕ್ಕೆ ಜೀರ್ಣೋದ್ಧಾರಗೊಳಿಸಿದ್ದು ತಮಗಂಟಿದ ಹಿಂಸಾ ಕಾರ್ಯದ ಕರ್ಮವನ್ನು ಕ್ಷಯಿಸಲೇ ಆಗಿದೆ. ಇವರು ದಾನ–ಧರ್ಮ, ಮುನಿಸೇವೆ, ಕೆರೆ ನಿರ್ಮಾಣದಂತಹ ಸತ್ಕಾರ್ಯಗಳನ್ನೂ ಮಾಡಿದ್ದಾರೆ.

ಇತರ ಧರ್ಮದ ವಾಡೆಗಳಲ್ಲಿರುವಂತೆ ಜೈನ ವಾಡೆಗಳಲ್ಲಿಯೂ ಪ್ರತ್ಯೇಕವಾದ ಶಸ್ತ್ರಾಗಾರವಿದೆ. ವಾಡೆಯ ಸಿರಿವಂತಿಕೆ ಮತ್ತು ಆಡಳಿತದ ವ್ಯಾಪ್ತಿಗೆ ತಕ್ಕಂತೆ ಆಯುಧಗಳ ಸಂಗ್ರಹ ಇರುತ್ತಿತ್ತು. ಒಂದು ರಾಜಸತ್ತೆಯ ಘಟಕಕ್ಕೆ ಬೇಕಾದ ಎಲ್ಲಾ ಶಸ್ತ್ರಾಸ್ತ್ರಗಳು ವಾಡೆಯಲ್ಲಿರುತ್ತಿದ್ದವು. ಜೈನ ವಾಡೆಗಳಲ್ಲಿ ಪ್ರತ್ಯೇಕ ಶಸ್ತ್ರಾಸ್ತ್ರ ಕೊಠಡಿ ಇರುತ್ತಿದ್ದು ಈಗ ಅವು ಎಲ್ಲಿದ್ದವು ಎಂದು ತಿಳಿಯದೆಂಬಂತೆ ಬದಲಾಗಿವೆ. ಯಾಕೆಂದರೆ ಸ್ವಾತಂತ್ರ್ಯನಂತರ ವಾಡೆಯಲ್ಲಿದ್ದ ಶಸ್ತ್ರಾಸ್ತ್ರಗಳನ್ನು ಸರ್ಕಾರಕ್ಕೆ ಮರಳಿಸಲಾಗುತ್ತದೆ. ಸಂಸ್ಕೃತಿ ಮತ್ತು ಪೂಜಾ ಸಂಪ್ರದಾಯ ನಿಮಿತ್ತ ಕೆಲವೇ ಕೆಲವು ಆಯುಧಗಳನ್ನು ಇರಿಸಿಕೊಳ್ಳಲು ಅಂದಿನ ಸಂದರ್ಭದಲ್ಲಿನ ಸರ್ಕಾರ ಅವಕಾಶವನ್ನು ಕಲ್ಪಿಸಿಕೊಡುತ್ತದೆ. ಈಗಲೂ ಅಂಥಹ ಶಸ್ತ್ರಗಳು ವಾಡೆಗಳಲ್ಲಿವೆ. ಆಯುಧ ಪೂಜೆಯಲ್ಲಿ ಮಾತ್ರ ಇವು ಹೊರಕಾಣಸಿಗುತ್ತಿದ್ದು, ಉಳಿದ ಸಮಯದಲ್ಲಿ ಕಪಾಟು, ಸಂದೂಕ ಸೇರಿಬಿಡುತ್ತವೆ. ತೇರದಾಳ ವಾಡೆಯಲ್ಲಿ ಇವುಗಳಿಗಾಗಿಯೇ ಸುಸಜ್ಜಿತ ಕಪಾಟಿನ ವ್ಯವಸ್ಥೆ ಇದೆ. ಎಲ್ಲ ಜೈನ ವಾಡೆಗಳಲ್ಲಿ ಶಸ್ತ್ರಗಳು ಕಾಣಸಿಗುವುದಿಲ್ಲ. ಅಣ್ಣಿಗೇರಿ, ಹನಗಂಡಿ, ತೇರದಾಳ ವಾಡೆಯಲ್ಲಿ ಶಸ್ತ್ರಗಳು ಇನ್ನೂ ಇವೆ. ಇಲ್ಲಿರುವ ಆಯುಧ ಪಟ್ಟಿ ಈ ರೀತಿ ಮಾಡಬಹುದು.

**ಅಣ್ಣಿಗೇರಿ ದೇಶಪಾಂಡೆ ವಾಡೆ.**

೧ **ಜೋಡು ನಳಿಕೆಯ ಬಂದೂಕು:** ಡಬಲ್ ಬ್ಯಾರಲ್ ಗನ್ ಎಂದು ಕರೆಯುವ ಈ ಬಂದೂಕು ಜೋಡು ನಳಿಕೆಯನ್ನು ಹೊಂದಿದ್ದು, ೬ ಕೆ.ಜಿ. ತೂಕವಿದೆ. ಮೂರು ಇಂಚಿನ ಗುಂಡುಗಳನ್ನು ಇದರಲ್ಲಿ ಹಾಕಿ ಹೊಡೆಯಬಹುದು. ಹಿಡಿಕೆ ಮತ್ತು ನಳಿಕೆಯ ಮಧ್ಯೆ ಬಾಗಿಸುವ ತಂತ್ರ ಈ ಬಂದೂಕಿನಲ್ಲಿದೆ. ಕಬ್ಬಿಣದ ನಳಿಕೆ, ಕಟ್ಟಿಗೆಯ ಹಿಡಿಕೆ ಇದರಲ್ಲಿವೆ. ಇದು ದೇಶಪಾಂಡೆಯವರ ಗೌರವ ಸಂಕೇತವೂ ಹೌದು.

೨ **ಗನ್** : ೮ ಇಂಚು ಉದ್ದ, ೨ ಇಂಚು ಅಗಲದ ಎರಡು ಗನ್‌ಗಳು ಇಲ್ಲಿವೆ. ಒಂದೊಂದು ಗನ್ ೩ ಕೆ.ಜಿ. ಹೊಂದಿದ್ದು, ದೇಸಾಯಿ ಹೊರ ಸಂಚಾರ, ಪ್ರವಾಸ ಹೋದಾಗ ಆತ್ಮರಕ್ಷಣೆಗೆ ಬಳಸುತ್ತಿದ್ದ.

೩ **ಈಟಿಗಳು** : ಸೇವಕರ ಕೈಯಲ್ಲಿ ರಾರಾಜಿಸುವ ಈಟಿಗಳು ಐದರಿಂದ ಆರು ಅಡಿಗಳಿದ್ದು, ಶತ್ರುಗಳನ್ನು ಇದರಿಂದ ತಿವಿದು ಘಾಸಿಕೊಳಿಸಬಹುದಿತ್ತು. ಕೆಲವೊಂದು ಸಾರಿ ದೂರದಿಂದ ಒಗೆದಾಗ ಶತ್ರುವಿಗೆ ಚುಚ್ಚಿ ಸಾಯಿಸುವ ಗುಣವೂ ಇದರದಾಗಿತ್ತು. ಈ ತರಹದ ಎರಡು ಈಟಿಗಳು ವಾಡೆಯಲ್ಲಿವೆ.

**ಹನಗಂಡಿ ದೇಸಾಯಿ ವಾಡೆ.**

೧ **ಖಡ್ಗ** : ಇದು ತುಸು ಬಾಗಿದ್ದು ನಾಲ್ಕು ಅಡಿ ಉದ್ದವಿದೆ. ಎದುರಿಗಿರುವ ಶತ್ರುಗಳನ್ನು ಸುಲಭವಾಗಿ ಕತ್ತರಿಸುವ ಹರಿತ ಈ ಆಯುಧಕ್ಕಿರುತ್ತದೆ. ದಪ್ಪನೆಯ ಹಿಡಿಕೆ ಇದರಲ್ಲಿದ್ದು, ಖಡ್ಗ ಪಟ್ಟಿ ಹರಿತವಿದೆ. ಹನಗಂಡಿ ವಾಡೆಯಲ್ಲಿ ಇದೊಂದೆ ಆಯುಧ ಈಗ ಉಳಿದು ಬಂದಿದೆ. ಆಯುಧ ಪೂಜಾ ದಿನದಂದು ಬನ್ನಿ ಮುಡಿಯಲಿಕ್ಕೆ ಹೋಗುವಾಗ ಇದನ್ನು ಹಿಡಿದು ಹೋಗಲಾಗುತ್ತದೆ.

**ತೇರದಾಳ ನಾಡಗೌಡ ವಾಡೆ.**

ಜೈನವಾಡೆಗಳಲ್ಲಿ ಅತಿಹೆಚ್ಚು ಆಯುಧಗಳಿರುವುದು ತೇರದಾಳ ವಾಡೆಯಲ್ಲಿ. ಯುದ್ಧಕ್ಕೆ ಬೇಕಾಗುವ ಎಲ್ಲ ಆಯುಧಗಳ ವಿಧಗಳು ಇಲ್ಲಿದ್ದು, ಈಗಲೂ ಕಾಣಸಿಕ್ಕುತ್ತವೆ. ಇಲ್ಲಿ ಎಂಟು-ಹತ್ತು ಬಗೆಯ ಆಯುಧಗಳು ಕಂಡುಬರುತ್ತವೆ.

೧ **ಸೊಂಟಕತ್ತಿ** : ಕಟ್ಟಿಗೆ ಹಿಡಿಕೆಗೆ ಚಿತ್ತಾರವುಳ್ಳ ಎರಡು ಸೊಂಟ ಕತ್ತಿಗಳು ಈ ವಾಡೆಯಲ್ಲಿವೆ. ಇವುಗಳ ತುದಿಗೆ ಬೆಳ್ಳಿ ನೀರನ್ನು ಕುಡಿಸಿ ಬೆಳ್ಳಿಯ ಕತ್ತಿ ಎನ್ನುವ ತರಹ ಮಾಡಲಾಗಿದೆ. ಹಿಡಿಕೆಯ ಮುಂದಿನ ಪಟ್ಟಿಕೆಗಳು ತುಸು ಬಾಗಿದ್ದು, ಪಟ್ಟಿಯ ಮಧ್ಯದಲ್ಲಿ ದಪ್ಪನೆಯ ಉಬ್ಬುಗೆರೆ ತುದಿಯವರೆಗೆ ಇದೆ. ಎದುರಾಳಿಯನ್ನು ತೀಕ್ಷವಾಗಿ ಗಾಯಗೊಳಿಸಲಿಕ್ಕೆ ಈ ವ್ಯವಸ್ಥೆ ಮಾಡಲಾಗಿದೆ.

೨ **ಗುಪ್ತ ಭರ್ಚಿ** : ಗುಪ್ತ ಭರ್ಚಿ ವಾಡೆಯ ದೇಸಾಯಿಯ ಹತ್ತಿರ ಸದಾ ಇರುತ್ತಿದ್ದು ಹೆಸರೇ ಹೇಳುವಂತೆ ಗುಪ್ತವಾಗಿರುತ್ತದೆ. ಇದು ಋಷಿಮುನಿಗಳು ಬಳಸುವ ಪೀಠಿಕಾದಂತೆ ಕಾಣುತ್ತಿದ್ದು 'U' ಆಕಾರದ ಕೈ ಒತ್ತಿಗೆ ಇದೆ. ಇದರಲ್ಲಿ ಎರಡು ಗರುಡದ ಮುಖಗಳಿದ್ದು ಹಿತ್ತಾಳೆಯಿಂದ ಮಾಡಲಾಗಿದೆ. ಗರುಡಗಳ ಕಣ್ಣು, ಕೊಕ್ಕು ಗರಿಗಳು, ಕಂಠ ಇತ್ಯಾದಿ ಭಾಗಗಳ ರಚನೆಯನ್ನು ಗರುಡಗಳಲ್ಲಿ ಕಾಣಬಹುದು. ಗರುಡಗಳ ಕೆಳಗೆ ಉದ್ದನೆಯ ಹಿತ್ತಾಳೆಯ ಕವಚ ಇದೆ. ಕವಚವನ್ನು ತೆಗೆದಾಗ ಉದ್ದದ ಕಬ್ಬಿಣದ ಭರ್ಚಿ ಕಂಡುಬರುತ್ತದೆ. ಇದು ನೇರವಾಗಿದ್ದು ಆಕ್ರಮಣ ಮಾಡಿದ ಶತ್ರುವಿನ ಎದೆಗೆ ತಿವಿದರೆ ಎದೆ ಸೀಳಿ ಬೆನ್ನಿಗೆ ಬರುತ್ತದೆ. ಚುಚ್ಚಿಸಿಕೊಂಡವನ ಸಾವು ಖಚಿತ.

೩ **ಎಲೆಗತ್ತಿ** : ಗೇಣುದ್ದದ ಎರಡು ಎಲೆಗತ್ತಿಗಳು ಇಲ್ಲಿದ್ದು, ಈಟಿಯ ತರಹದ ಉದ್ದ ಕೋಲಿಗೆ ಮುಂಭಾಗದಲ್ಲಿ ಅಳವಡಿಸಿ ಬಳಸಲಾಗುತ್ತಿತ್ತು. ಇದರ ಆಕಾರ ಎಲೆಯ ಆಕೃತಿಯನ್ನು ಹೋಲುವುದರಿಂದ 'ಎಲೆಗತ್ತಿ' ಎಂಬ ಪದ ವಾಡೆಯಲ್ಲಿ ಬಳಕೆ ಇದೆ.

೪ **ಸೊಂಟ ಭರ್ಚಿ** : ೬೦ ಇಂಚು ಉದ್ದ, ೦೪ ಇಂಚು ಅಗಲದ ಎರಡು

ಸೊಂಟ ಭರ್ಚಿಗಳು ಈ ವಾಡೆಯಲ್ಲಿವೆ. ನಾಡಗೌಡರು ಅರಸನಿಗೆ ನಜರಾಣಾ ಸಲ್ಲಿಸುವಾಗ ಕುದುರೆಯ ಮೇಲೆ ಹೋಗುವುದು ರೂಢಿ. ಹಾಗೆ ಹೋಗುವಾಗ ಈ ಭರ್ಚಿಯನ್ನು ಜರೂರಾಗಿ ತೆಗೆದುಕೊಂಡು ಹೋಗುತ್ತಿದ್ದರು. ಎರಡು ಭರ್ಚಿಗಳಲ್ಲಿ ಒಂದನ್ನು ಆದಿಲ್‌ಷಾಹಿಗಳು ಕೊಟ್ಟಿದ್ದರೆ ಇನ್ನೊಂದನ್ನು ಬ್ರಿಟೀಷರು ಕೊಟ್ಟಿದ್ದಾರೆ.

ಆದಿಲ್‌ಷಾಹಿಗಳು ಕೊಟ್ಟ ಭರ್ಚಿಯಲ್ಲಿ ಅರ್ಧಚಂದ್ರ, ನಕ್ಷತ್ರಗಳ ಚಿನ್ಹೆ ಇದ್ದರೆ, ಬ್ರಿಟೀಷರು ಕೊಟ್ಟ ಸೊಂಟ ಭರ್ಚಿಯಲ್ಲಿ "IN SOLINGEN" ಎಂಬ ಹೆಸರಿದೆ. ಸ್ಟಾಲಿಂಗೆನ್ ಎಂಬುದು ಜರ್ಮನಿಯ ಒಂದು ನಗರದ ಹೆಸರು. ಈ ಸ್ಥಳ ಯುದ್ಧಕ್ಕೆ ಬೇಕಾದ ಶಸ್ತ್ರಾಸ್ತ್ರಗಳನ್ನು ತಯಾರಿಸುವಲ್ಲಿ ಹೆಸರುವಾಸಿಯಾಗಿತ್ತು. ಇಲ್ಲಿ ತಯಾರಾಗುವ ಆಯುಧಗಳು ಹರಿತ ಮತ್ತು ಬಾಳಿಕೆ ಬರುವಂತಾಗಿದ್ದುವು. ತೇರದಾಳದಲ್ಲಿರುವ "IN SOLINGEN" ಸೊಂಟ ಭರ್ಚಿಯು ಈಗಲೂ ಹರಿತವಾಗಿದ್ದು, ಸುಸ್ಥಿತಿಯಲ್ಲಿರುವುದನ್ನು ಗಮನಿಸಬಹುದು.

೫ **ಡೊಂಕು ಕತ್ತಿ** : ಒಂದು ಡೊಂಕು ಕತ್ತಿ ಇಲ್ಲಿದ್ದು, ೪೦ ಇಂಚು ಉದ್ದ, ೦೪ ಇಂಚು ಅಗಲವಿದೆ. ತುದಿ ಚೂಪಾಗಿದ್ದು ಹಿಡಿಕೆ ಅಚ್ಚುಕಟ್ಟಾಗಿದೆ. ಹಿಡಿಕೆಯ ಕೆಳಗೆ ೦೫ ಇಂಚು ಉದ್ದನೆಯ ಚೂಪಾದ ಸಲಾಕೆಯಿಂದ ಶತ್ರುಗಳನ್ನು ಸುಲಭವಾಗಿ ಚುಚ್ಚಬಹುದಿತ್ತು.

೬ **ಖಡ್ಗ** : ಕಾವಲುಗಾರರು ಬಳಸುವ ಆರು ಖಡ್ಗಗಳು ಪ್ರಸ್ತುತ ವಾಡೆಯಲ್ಲಿವೆ. ೪೦ ಇಂಚು ಉದ್ದ, ೦೪ ಇಂಚು ಅಗಲದ ೦೬ ಖಡ್ಗಗಳು ಅಚ್ಚುಕಟ್ಟಾದ ಹಿಡಿಕೆಯನ್ನು ಹೊಂದಿವೆ.

೭ **ಚೂರಿ** : ಚೂರಿ ತರಹದ ಎರಡು ಹತಾರಗಳು ೧೬ ಇಂಚು ಉದ್ದವನ್ನು ಹೊಂದಿದ್ದು. ಬಹುಶ: ನಾಡಗೌಡತಿಯರು ತಮ್ಮ ಆತ್ಮರಕ್ಷಣೆಗೆ ಬಳಸುತ್ತಿದ್ದಂತೆ ಕಾಣುತ್ತದೆ.

೮ **ಗುರಾಣಿ** : ಶತ್ರುವಿನಿಂದಾದ ದಾಳಿಯನ್ನು ಸಮರ್ಥವಾಗಿ ಎದುರಿಸುವ

ಎರಡು ಗುರಾಣಿಗಳಿವೆ. ಎದುರಾಳಿಯ ಖಡ್ಗದ ಹೊಡೆತ ಜಾರಿ ಹೋಗದಂತೆ ತಡೆಯಲು ಉಬ್ಬುಗಳನ್ನು ಗುರಾಣಿಗಳು ಹೊಂದಿವೆ. ಒಂದು ಗುರಾಣಿಯಲ್ಲಿ ಅರ್ಧಚಂದ್ರ ಇದ್ದುದ್ದನ್ನು ಗಮನಿಸಿದರೆ ಇದು ಆದಿಲ್‌ಷಾಹಿಯ ಕಾಲದಿಂದ ಬಂದಿದ್ದಿರಬೇಕು.

ಇವಷ್ಟೇ ಅಲ್ಲದೇ ಬಿಚ್ಚುಗತ್ತಿ, ಪುಟ್ಟಕತ್ತಿ ಮುಂತಾದವು ಇಲ್ಲಿ ಶಸ್ತ್ರಾಗಾರದಲ್ಲಿ ಇದ್ದು, ಎಲ್ಲ ಶಸ್ತ್ರಗಳಿಗೂ ಕಟ್ಟಿಗೆಯಿಂದ ಮಾಡಿದ ಕವಚ, ಮತ್ತು ಬಟ್ಟೆಯ ಕವಚಗಳನ್ನು ಇಲ್ಲಿ ಕಾಣಬಹುದು. ಚರ್ಮದ ಕವಚ ನಿಷಿದ್ಧ. ಪ್ರಾಣಿಹಿಂಸೆ ಮಾಡಿ ತಯಾರಾದ ಚರ್ಮದ ವಸ್ತುಗಳನ್ನು ಜೈನರು ಇಂದಿಗೂ ಬಳಸುವುದಿಲ್ಲ.

**೧೧. ದಾಖಲಾತಿ ಕೋಣೆ (ರೆಕಾರ್ಡ್ ರೂಮ್)**

ಒಂದು ಪರಗಣಕ್ಕೆ ಸಂಬಂಧಿಸಿದ ಪ್ರತಿಯೊಂದು ಲೆಕ್ಕಪತ್ರಗಳನ್ನು ಒಪ್ಪಓರಣವಾಗಿ ಇಡಲು ವಾಡೆಯಲ್ಲಿ ಒಂದು ಪ್ರತ್ಯೇಕ ವ್ಯವಸ್ಥೆ ಇರುತ್ತಿತ್ತು. ಪ್ರತಿಯೊಂದು ಪೈಸೆ ಖರ್ಚು ಜಮಾಗಳನಿಡುವ ಲೆಕ್ಕವನ್ನಿಡುವ ಪುಸ್ತಕದಿಂದ ಹಿಡಿದು ದಾನ ಪತ್ರಗಳು, ದತ್ತು ಪುತ್ರ ಸ್ವೀಕಾರ, ಕಂದಾಯ ವಸೂಲಾತಿ ಪತ್ರಗಳು ಮತ್ತು ಪುಸ್ತಕಗಳು, ಅರಸನ ಆದೇಶ, ಕೋರ್ಟು ಕಛೇರಿಯ ಪತ್ರಗಳು ಹೀಗೆ ಹತ್ತು ಹಲವಾರು ದಾಖಲೆಗಳು ದಾಖಲಾತಿ ಕೋಣೆಯಲ್ಲಿ ಇರುತ್ತಿದ್ದವು. ಇವು ವಾಡೆಯ ಬಹು ಮುಖ್ಯ ಸ್ಥಳವಾದ ಸದರಕಟ್ಟೆಯ ಹಿಂದೆ ಅಥವಾ ಪಡಸಾಲೆಗೆ ಅಂಟಿ ಕೊಂಡಿರುತ್ತಿದ್ದವು. ಈಗಲೂ ಎಲ್ಲ ಜೈನವಾಡೆಗಳಲ್ಲಿ ದಾಖಲಾತಿ ಕೋಣೆಗಳಿದ್ದು ಅದನ್ನು ಯಾರೂ ತೆಗೆದು ತೋರಿಸಲಿಲ್ಲ.

ಒಂದು ವಾಡೆಗೆ ಸಂಬಂಧಿಸಿದ ದೇಸಗತಿಯ ಎಲ್ಲ ಕಸಬಾಗಳ, ಹಳ್ಳಿಗಳ ದಾಖಲೆಗಳು ಇನ್ನೂ ವಾಡೆಗಳಲ್ಲಿ ಕಂಡುಬರುತ್ತವೆ. ಆದರೆ ಅವುಗಳು ಯಾವವು ಇಲ್ಲ ಎಂಬ ಉತ್ತರ ಎಲ್ಲ ವಾಡೆಗಳಿಂದ ಬಂದಿತು. ಇತರೆ ಅಧ್ಯಯನ ಮೂಲಗಳಿಂದ ವಾಡೆಯಲ್ಲಿ ಯಾವ ಯಾವ ದಪ್ತರಗಳು ಇರುತ್ತಿದ್ದವೆಂಬುದನ್ನು ಸಂಗ್ರಹಿಸಬಹುದು. ದಪ್ತರ ಎಂದರೆ ದಾಖಲೆ ಪುಸ್ತಕ, ಕಟ್ಟು ಎಂದಾಗುತ್ತದೆ.

**ದಪ್ತರ್ ಶಾಖೆ**

ವಾಡೆಗೆ ಸಂಬಂಧಿಸಿದ ದಾಖಲಾತಿಗಳನ್ನು ಅಚ್ಚುಕಟ್ಟಾಗಿ ಬರೆಯಲು ಕುಲಕರ್ಣಿ ಅಥವಾ ಶಾನುಭೋಗ ಇರುತ್ತಿದ್ದರು. ದೇಸಾಯಿ ಇವರ ಜೊತೆ ಅನ್ಯೋನ್ಯವಾಗಿರುತ್ತಿದ್ದ. ಪತ್ರಗಳ ಭಾಷೆ ಕನ್ನಡ, ಮರಾಠಿ, ಇಂಗ್ಲೀಷ್, ಮೋಡಿಯಲ್ಲಿರುತ್ತಿತ್ತು. ಮೋಡಿ ಲಿಪಿಯು ಕನ್ನಡ ಮತ್ತು ಮರಾಠಿ

ಭಾಷೆಯನ್ನು ಅಳವಡಿಸಿಕೊಂಡು ರಚಿತವಾಗುತ್ತಿತ್ತು. ಇದು ಒಂದು ಗುಪ್ತ ಬರಹವಾಗಿತ್ತು. ವಾಡೆಯ ವಿವರ ಯಾರಿಗೂ ತಿಳಿಯಬಾರದೆಂದು ಕುಲಕರಣಿ ಮಾಡಿದ ತಂತ್ರ ಇದು. ವಾಡೆಯ ಮುಖ್ಯ ಕುಲಕರಣಿ ಹತ್ತಾರು ದಾಖಲಾತಿ ಪತ್ರಗಳನ್ನು ಬರೆಯುತ್ತಿದ್ದು, ಕೆಲವುಗಳನ್ನು ಇಲ್ಲಿ ಹೆಸರಿಸಬಹುದು.

೧. ಮೌಜೆ ಲಾವಣಿ ಆಕಾರಗಳ ಪತ್ರ
೨. ಮೌಜೆ ಜಮಾ ಖರ್ಚಿನ ಪಾವತಿಸಹಿತ ಟಿಪ್ಪಣಿ ಪುಸ್ತಕ
೩. ಲೇವಾದೇವಿ ಕಾಗದಗಳು
೪. ಮೌಜೆ ಕಸಬೆಗಳ ಲಾವಣೆ, ಕಮ್ಮಿಜಾಸ್ತಿ ಜಮಾಬಂದಿ ಪತ್ರಗಳು
೫. ದೇಸಗತಿ ಜೂಡಿ ಭರಣಾ ಪತ್ರ
೬. ಮೌಜೆ ಲಾವಣಿ ರೋಜಖತ
೭. ದೇಸಗತಿ ಜೂಡಿ ಬಾಬತ ಪತ್ರ
೮. ಕಬೂಲಾಯತಿಗಳು
೯. ಕೋಠಿ ಜಮಾ ಖರ್ಚು
೧೦. ಗಾವಠಾನ ವಸೂಲ ಕಾಗದ

**ದಪ್ತರ ಶಾಖೆ**

<table>
<tr><th>೧. ಸುಂಕದ ದಪ್ತರ</th><th colspan="4">೨. ಜಮೀನುಗಳ ದಪ್ತರ</th><th colspan="4">೩. ಅಧಿಕಾರಿಗಳ ನೇಮಕದಪ್ತರ</th><th colspan="2">೪. ರಕ್ಷಣಾ ಖಾತೆ ದಪ್ತರ</th><th colspan="6">೫. ಇತರೆ</th></tr>
<tr><td rowspan="2">ಜೂಡಿ ದಪ್ತರ</td><td colspan="3">ಆಯಾ ಭಾಗದ ಜಮೀನ ದಪ್ತರ</td><td rowspan="2">ಅಡವಿ ಜಮೀನ ದಪ್ತರ</td><td rowspan="2">ಸರಕಾರಿ ನೇಮಕ ಅಧಿಕಾರಿಗಳ ದಪ್ತರ</td><td rowspan="2">ಸರಕಾರೇತರ ಅಧಿಕಾರಿಗಳ ನೇಮಕ ರಿಜಿಸ್ಟರ್</td><td colspan="2">ಇತರೆ</td><td rowspan="2">ಹತಾರೆಗಳ ದಪ್ತರ</td><td rowspan="2">ಭರ್ಚಿಜಂಬೆಗಳ ದಪ್ತರ</td><td colspan="3">ದಾನದ ದಪ್ತರ</td><td colspan="3">ಗಣತಿ ದಪ್ತರ</td></tr>
<tr><td>ಸರ್ವಮಾನ್ಯ ದಪ್ತರ</td><td>ಅಪ್ಪಗೋಳ ಪಾವ ದಪ್ತರ</td><td>ತಂಗಿ ಪಾವ ದಪ್ತರ</td><td>ಹೊಲೆಯಾಳು ದಪ್ತರ</td><td>ಸೇತಸನದಿಗಳ ದಪ್ತರ</td><td>ಸೇತನದಿ ದಪ್ತರ</td><td>ಧರ್ಮದಯಾ ದಪ್ತರ</td><td>ದೇವದಯಾ ದಪ್ತರ</td><td>ಜನಗಣತಿ</td><td>ದನಗಣತಿ</td><td>ಇತರೆ</td></tr>
</table>

೧೧. ಮೌಜೆವಾರ ಜಮೀನ ಜಾಡ

೧೨. ವತನ ಸಂಬಂಧ ಸವಾಲ ಜವಾಬ

೧೩. ಹೊಲಿತಾನ ಬಾಬತ ವಸೂಲ ಟಿಪ್ಪಣಿ

೧೪. ಶೆರೆ ಸಿಂದಿ ಪ್ರಕರ್ಣ

೧೫. ಸರಕಾರಿ ಪತ್ರ

೧೬. ಮುಖತ್ಯರಿ ಪತ್ರ

೧೭. ಜಮೀನ ಪತ್ರ

೧೮. ಖರೀದಿ ಪತ್ರ

೧೯. ಇನಾಮತ ತಾಳೆಬಂದ

೨೦. ಇನಾಮತಿ ಚಾವರಾತ ಚೀಟಿ

೨೧. ಸೇತಸನದಿ ರಿಲಿಸಮವಾರ ಪಟ್ಟಿ

೨೨. ಇನಾಮತಿ ಚಾವರಾತ ಚಿಡ್ಡಾ

೨೩. ಮೌಜೆವಾರ ಖಾತೆ ಬುಕ್

೨೪. ಸರಕಾರಿ ಹುಕುಮಿನಿ ಕಾಗದ

೨೫. ದೇಸಗತಿ ಹದ್ದಿನಲ್ಲಿರುವ ಜಂಗಲ್ ಖರ್ಡಾ ಹಾಗೂ ಘೋಷವಾರ

೨೬. ಹೋದ ಬಂದ ಜನರ ಗಣತಿ

೨೭. ಪ್ರತಿಗ್ರಾಮದ ದನಗಣತಿ

೨೮. ಪ್ರತಿಗ್ರಾಮದ ಮನಿಗಳ ಯಾದಿ ಅದರ ಸ್ವರೂಪ ವಿವರಣೆ

೨೯. ಟೆಂಟು, ಶೆಡ್ಡು ಮನಿ ಬಿರಾಡಗಳ ವಹಿ

೩೦. ಗೌಡ ಕುಲಕರ್ಣೇರ ನೇಮಿಸಿಕೊಂಡ ಪತ್ರಿಕೆ

೩೧. ಪ್ರಮುಖ ಮನೆತನಗಳ ವಂಶಾವಳಿ ಕಾಗದ

೩೨. ಕರಾರ ಪತ್ರಗಳು

೩೩. ರಾಜೀನಾಮೆ ಪತ್ರ

೩೪. ಕೌಲ ಕಾಗದಗಳು

೩೫. ಹೊಲಗಳ ಸಾಗುವಳಿ, ಬೀಳು, ಸಾಗುವಳಿಯಲ್ಲಿ ಏನು ಬಿತ್ತಿದ್ದು ಅದರ ಬಗ್ಗೆ ವಿವರಣೆ

೩೬. ಆವಕ ಜಾವಕ ಬಾರನೀಸ

೩೭. ಕಸಬಾದಲ್ಲಿ ಇನಾಮತಿ ಮನಿಗಳು ವ.ಕಾಲಿ, ವ ಮನಿಗಳ ತಪಶೀಲ ವಾರ ಪತ್ರಿಕೆ

೩೮. ತಳ ಝಡತಿ ತಾಳೆಬಂದ

೩೯. ವಾಲೀಕಾರ ಜನರ ನೌಕರಿ ಪತ್ರಗಳು

೪೦. ಮನಿಗಳ ಗರ್ಪಟ್ಟಿ ವಹಿ (ಘರಪಟ್ಟಿ)

೪೧. ಪಹಣಿ ಪತ್ರಕೆ ನಮೂನಾ ನಂ ೯

೪೨. ಮನಿ ದಾವೇದ ಸಂಬಂಧ ಖರ್ಚಿನ ವಹಿ

೪೩. ಮೈಲಿ–ಬುಕ್

೪೪. ಇನಾಂ ಗ್ರಾಮದ "ಮುಲಕಿ" ಪ್ರಕರ್ಣ ಕಾಗದ

೪೫. ದಸ್ತಾವೀಜ ಕಾಗದಗಳು

೪೬. ಚಾವರಾತ ಗ್ರಾಮಗಳಲ್ಲಿ ದೇಸಗತಿ ವತನೀ ಮನಿಗಳ ವಸೂಲ ಮಾಡುವ ಪತ್ರಿಕೆ

೪೭. ಪೋಲೀಸ್ ಖಾತ್ಯ ಕಡಿಲಗೆ ರೂಳ

೪೮. ಎರಡಣೆ ಗ್ರಾಮದಿಂದ ಗ್ರಾಮಕ್ಕೆ ವಲಸೆ ಬಂದು ಇರುವವರ ಜನರ ಪತ್ರಿಕೆ

೪೯. ಜೋಳದ ಜಮಾ ಖರ್ಚಿನ ವಹಿ

೫೦. ಮನೀ ಖರೀದಿ ಪತ್ರ

೫೧. ಕಮೆ ಲಾವಣಿ ಪತ್ರಿಕೆ ವಹಿ

೫೨. ದೇಸಾಯಿಗಳ ಪರಿಶೀಲನೆ ಮಾಡಿಬಂದ ರಜಿಸ್ಟರ್

೫೩. ಭಾಡೆಪತ್ರ

೫೪. ಪ್ರತಿಗ್ರಾಮ ಜೌಜೆ, ಹಾಗೂ ಇನಾಂ ಗ್ರಾಮದ ಠರಾವ ಬಂದ

೫೫. ಚೌಕರೀ ಜನರ ಗೈರ ಹಾಜರ ದಿವಸದ ಬುಕ್

೫೬. ಪೌಜದಾರಿ ಕಾಗದ, ಕಾಣೆ, ಕೊಲೆ, ಖಟ್ಲೆ ನಾಡದ ಪ್ರಾಕರ್ಣ

೫೭. ದೇಸಗತಿ ಚಿಲ್ಲರ ಪ್ರಕರಣಗಲು

೫೮. ನಿವೃತ್ತ ನಂತರ ಚಾರ್ಜ ಕೊಟ್ಟ ಪತ್ರಕೆ

೫೯. ಬೆಳ್ಳಿ ಬಂಗಾರ ಸಾಮಾನುಗಳ ವಹಿ

೬೦. ಕಿರುಕಳ ಟಿಪ್ಪಣೆ

೬೧. ದೇಸಗತಿ ವಂಶಾವಳಿ ವಹಿ

೬೨. ಗಡ್ಡಿಯೊಳಗೆ ಹುಲ್ಲು ಗೋಮಾಳಕ್ಕೆ ಕಳಿಸಿದ್ದ ಯಾದಿ

೬೩. ನೋಟಿಸಗಳ ಯಾದಿ

೬೪. ಯಿಂಗ್ರೇಜ ಸರಕಾರ ನೀಡಿದ ದಾಖಲೆಗಳು

೬೫. ಈ ಪತ್ರಕ್ಕೆ ನೀಡಿದ ಉತ್ತರಗಳು

೬೬. ಮೋಡಿ ದಾಖಲೆಗಳು

೬೭. ಖಾನೆ ಸುಮಾರಿ ೩ ವರ್ಷಕ್ಕೊಮ್ಮೆ ಇರುವ ಯಾದಿ

೬೮. ದೇಸಗತಿ ಖಾತೆವಾರ ಉತ್ಪನ್ನ ಪತ್ರಕೆ

೬೯. ನವಕರಿ ನಾಮೆ ಪತ್ರಿಕೆ

೭೦. ದೇಸಗತಿ ಸಾಮಾನುಗಳ ಯಾದಿ

೭೧. ದಂಡಿನ ಖಾತೆದ ಸರ್ಕ್ಯುಲರಗಳು

೭೨. ಗ್ರಾಮದಲ್ಲಿ ದೇವಸ್ಥಾನಕ್ಕೆ ಭೂಮಿ, ರಥ, ಮನಿ ಕಟ್ಟಿಸಿದ್ದ ವಹಿ
೭೩. ದೇಸಾಯಿ, ದೇಸಾಯಿಣಿಯರು ವಾಡೇ ಬಿಟ್ಟು ಹೋಗಿ ಬಂದ ವಿವರಣೆ, ಹಾಗೂ ದೇವಸ್ಥಾನಕ್ಕೆ ಹೋಗಿ ಬಂದ ಖರ್ಚು ಪ್ರತ್ಯೇಕ ಪ್ರತ್ಯೇಕ.
೭೪. ಕುರಿಗಳ ಸಂಖ್ಯಾ ಪತ್ರಕೆ
೭೫. ಅಥಾವೆ ಪತ್ರಕೆ
೭೬. ದೇಸಗತಿ ಪಾಗಾ ಕಟ್ಟಿಸುವುದು
೭೭. ಕೂಲಿ ಜನರ ಹಾಜರಿ ಹಾಗೂ ಕಮಿಬುಕ್
೭೮. ಹತ್ತಿ, ಸೆಂಗಾ, ಜೋಳ, ವಿವಿಧ ಬೆಳೆಗಳು
೭೯. ಕಳುವಾದ ವಿವರಣೆ ಪ್ರಸ್ತಾಪ
೮೦. ಹಬ್ಬ ಹುಣ್ಣಿವೆ ಖರ್ಚು ಪುಸ್ತಕ
೮೧. ದಿವಾನಿ ಮೊಕದ್ದಮೆ ಪತ್ರ
೮೨. ರೋಜ ಕಿರ್ದಿ ಬೆಳ್ಳಿ, ಬಂಗಾರ, ತಾಮ್ರ ಇತ್ಯಾದಿ ಸಾಮಾನುಗಳ ಯಾದಿ
೮೩. ಕಟಗಿ ವಿಕರಿ
೮೪. ಮದುವೆ ಮುಂಜಿ ಇತ್ಯಾದಿಗೆ ಖರ್ಚಿನ ಯಾದಿ
೮೫. 'ಕುಸ್ತಿ' ಜನರ ಯಾದಿ
೮೬. ಗ್ರಾಮದಿಮದ ವಿಶೇಷ ಸೈನ್ಯ ವ್ಯವಸ್ಥೆ ಇದ್ದವರ ಯಾದಿ
೮೭. ಅಹೇರ ಯಾದಿ
೮೮. ಶ್ರೀಮಂತರ ಫಲ ಶೋಭನದಲ್ಲಿ ಆದ ಅಹೇರ ಪತ್ರಿಕೆ
೮೯. ಗ್ರಾಮಸ್ಥರಿಗೆ ವಿಶೇಷ ಹುಕುಂಗಳ ಯಾದಿ
೯೦. ಗ್ರಾಮಸ್ಥರಿಂದ ಬಂದ ರಿಫರ್ಟಗಳ ಉತಾರಿಸಿದ ಯಾದಿ
೯೧. ಸರಕಾರಕ್ಕೆ ಬರಕೊಂಡ ಯಾದಿಗಳ ಉತಾರಿಸಿದ ನಕಲುಗಳು
೯೨. ಇತ್ತೀಚಿನ ಲೋಕಲ್ ಬೋರ್ಡ ಕಾಗದಗಳು
೯೩. ಬಂದೂಕಿನ ಕಾಗದ
೯೪. ಖಡ್ಗ, ಕಠಾರಿಗಳ ಸಂಖ್ಯೆ
೯೫. ಮುದ್ದತ್ತು ಬಳಕೆ ಮಾಡಿದ್ದು ಸಂಖ್ಯೆ
೯೬. ದೇಸಗತಿಯಿಂದ ದೇಸಗತಿಗೆ ಸಂಬಂಧಪಟ್ಟ ಯಾದಿ
೯೭. ಗವರ್ನರ ಸಾಹೇಬರಿಗೆ ಮಾಡಿದ ಅರ್ಜಿಗಳು
೯೮. ದೇಸಗತಿ ಡಾಯರಿ
೯೯. ಭಕ್ಷೀಸ ಪತ್ರಗಳು
೧೦೦. ಪ್ರತಿಗ್ರಾಮ ಮೌಜೆಗಳ ನಕಾಶೆ, ಹದ್ದು ಇತರೆ ಮಾಹಿತಿ
೧೦೧. ಮುಂಬಯಿ ಕಾಯಿದೆ ಕೌನ್ಸಿಲ್ ಕಾಗದ

೧೦೨. ರೆಡ್ ಕ್ರಾಸ್
೧೦೩. ಸರಕಾರಕ್ಕೆ ಬರಕೊಂಡ ಅರ್ಜಿ
೧೦೪. ಶೀಮಿ ಕಾಗದ
೧೦೫. ದತ್ತಕ ಪ್ರಕರಣ ಕಾಗದ್

**೧೨. ಪೂಜಾಕೋಣೆ.**

ಪ್ರತಿಯೊಂದು ಜೈನವಾಡೆಯಲ್ಲಿ ಪ್ರತ್ಯೇಕವಾದ ಹಳೆಯ ಮಾದರಿಯ ಪೂಜಾಗೃಹವಿದ್ದು. ಮುಳುಗುಂದ ವಾಡೆಯಲ್ಲಿ ಮಾತ್ರ ಬಿಳಿಟೈಲ್ಸ್‌ನಿಂದ ನವೀಕರಣಗೊಂಡ ದೇವರ ಮನೆ ಇದೆ. ಹನಗಂಡಿ ಮತ್ತು ತೇರದಾಳ ವಾಡೆಯಲ್ಲಿ ಮಾತ್ರ ಎರಡೆರಡು ಪೂಜಾಗೃಹಗಳನ್ನು ಕಾಣಬಹುದು. ಒಂದು ವಾಡೆಯ ಜಿನದೇವತೆಗಳಿರುವ ಮುಖ್ಯ ಪೂಜಾಗೃಹ. ಇನ್ನೊಂದು ಹಿಂದೂ ದೇವರುಗಳಿರುವ ಪೂಜಾಗೃಹ.

**ಅಣ್ಣಿಗೇರಿ ವಾಡೆಯ ಪೂಜಾಗೃಹ.**

ಕೇಸರಿ ಬಣ್ಣದ ಜಗುಲಿಯ ಮೇಲೆ ಶ್ರವಣಬೆಳಗೊಳ ಬಾಹುಬಲಿ, ಹುಂಚದ ಪದ್ಮಾವತಿ ದೇವಿ, ಸ್ತವನಿಧಿಯ ಬ್ರಹ್ಮದೇವರ ಭಾವಚಿತ್ರಗಳಿವೆ. ಎರಡು ಹಿತ್ತಳೆಯ ತೂಗುದೀಪಗಳು, ನಾಲ್ಕು ಯಂತ್ರಗಳ ಪೋಟೋ, ಒಂದು ಮುನಿಪೀಠ ಸಾಕಷ್ಟು ಜೈನ ಆರಾಧನ ಗ್ರಂಥಗಳನ್ನು ಇಲ್ಲಿನ ಪೂಜಾಗೃಹದಲ್ಲಿ ಕಾಣಬಹುದು. ಇಲ್ಲಿರುವ ಮೂಲ ವಿಗ್ರಗಳು ಸದ್ಯದ ಊರಿನ ಪಾರ್ಶ್ವನಾಥ ಬಸದಿಯಲ್ಲಿವೆ. ವಾಡೆಯಿಂದ ಸಂಪೂರ್ಣವಾಗಿ ದೇಶಪಾಂಡೆ ಕುಟುಂಬ ಕೊಲ್ಹಾಪುರಕ್ಕೆ ಹೋದನಂತರ ದೇವತಾ ಮೂರ್ತಿಗಳು ನಿತ್ಯಪೂಜೆಗೊಳ್ಳಲಿ ಎಂದು ಈ ಕ್ರಮ ಕೈಗೊಳ್ಳಲಾಗಿದೆ. ಹಿತ್ತಾಳೆಯ ನವದೇವತಾ ವಿಗ್ರಹ, ಬಾಹುಬಲಿ, ಪದ್ಮಾವತಿ, ಜಿನಬಿಂಬ ವಿಗ್ರಹಗಳ ಜೊತೆಗೆ ಒಂದು ಪಾರ್ಶ್ವನಾಥ ತೀರ್ಥಂಕರ ಶಿಲಾವಿಗ್ರಹ ಈಗಲೂ ಬಸದಿಯಲ್ಲಿ ನಿತ್ಯ ಪೂಜೆಗೊಳ್ಳುತ್ತವೆ. ವಾಡೆಯ ಈ ವಿಗ್ರಹಗಳನ್ನು ನಿತ್ಯ ಪೂಜೆಗೈಯಲು ಬಸದಿಯ ಪಂಡಿತರಿಗೆ ದೇಶಪಾಂಡೆಯವರು ಪ್ರತಿವರ್ಷ ಹಣವನ್ನು ಕೊಡುತ್ತಾರೆ.

**ಮುಳುಗುಂದ ವಾಡೆಯ ಪೂಜಾಗೃಹ.**

ವಿಶಾಲವಾದ ಬಿಳಿ ಟೈಲ್ಸ್‌ನಿಂದ ನಿರ್ಮಿತವಾದ ಇಲ್ಲಿನ ಪೂಜಾಗೃಹದಲ್ಲಿ ಪರಂಪರೆಯಿಂದ ಬಂದ ಹಿತ್ತಾಳೆಯ ಮೂಲ ನಾಯಕ ಆದಿನಾಥ ತೀರ್ಥಂಕರ ಸಹಿತ ೨೪ ತೀರ್ಥಂಕರರ ಬಿಂಬ, ಬೆಳ್ಳಿಯ ಸುತ್ತಿಗೆ ಚಾಮರ ಸಹಿತ ಪದ್ಮಾವತಿ ಯಕ್ಷಿಯ ಹಿತ್ತಾಳೆಯ ವಿಗ್ರಹ, ಸ್ತವನಿಧಿ ಬ್ರಹ್ಮದೇವರು, ಪಾರ್ಶ್ವನಾಥ, ಶ್ರೀಚಕ್ರದ ಭಾವಚಿತ್ರಗಳು, ಗಣೇಶನ ಪುಟ್ಟ ವಿಗ್ರಹ

ಇಲ್ಲಿವೆ. ಇವುಗಳೆಲ್ಲವುಗಳ ಜೊತೆಗೆ ಪರಂಪರೆಯಿಂದ ಪೂಜೆಗೆ ಒಳಪಟ್ಟ ಸುಮಾರು ಆರು ಇಂಚು ಎತ್ತರದ ಬೆಳ್ಳಿಯ ನಾಗರ ವಿಗ್ರಹವಿದೆ. ಈ ವಾಡೆಯವರು ನಾಗಾರಾಧಕರಾಗಿದ್ದರು ಎಂಬುದಕ್ಕೆ ಇಲ್ಲಿರುವ ನಾಗರ ವಿಗ್ರಹದ ಪೂಜೆ ಮತ್ತು ವಾಡೆಯ ದೇಸಾಯಿಗಳಿಗೆ ಇಟ್ಟ ನಾಗಪ್ಪಯ್ಯ ನಾಗರಾಜ ಎಂಬ ಹೆಸರುಗಳು ಆಧಾರವಾಗಿ ನಿಲ್ಲುತ್ತವೆ.

**ಹನಗಂಡಿ ವಾಡೆಯ ಪೂಜಾಗೃಹ.**

ಕುಸುರಿಕೆತ್ತನೆಯ ಚೌಕಟ್ಟು ಬಾಗಿಲುಗಳಿಗೆ ಹೂವಿನ ಚಿತ್ತಾರವಿರುವ ಮತ್ತು ಕಬ್ಬಿಣದ ಸರಳುಗಳು ಹೊಂದಿರುವ ಪೂಜಾಗೃಹ ಇಲ್ಲಿದ್ದು ಕಂಚಿನ ಜಿನದೇವತೆಗಳಿವೆ. ೨೦ನೆಯ ತೀರ್ಥಂಕರರಾದ ಮುನಿಸುವ್ರತ, ಕಾಯೋತ್ಸರ್ಗದ ಚತುರ್ಮುಖ ಬಿಂಬ, ಪದ್ಮಾಸನಸ್ಥ ಪಾರ್ಶ್ವನಾಥ ಬಿಂಬ, ಜಿನಬಿಂಬ, ನವದೇವತಾ ಬಿಂಬ, ಗುಳ್ಳಕಾಯಜ್ಜಿ ಮತ್ತು ಪದ್ಮಾವತಿ ಯಕ್ಷಿಯ ಕಂಚಿನ ವಿಗ್ರಹಗಳನ್ನು ಇಲ್ಲಿ ಕಾಣಬಹುದು. ಈ ಜಗುಲಿಯ ಪಕ್ಕದ ಕೋಣೆಯಲ್ಲಿ ತೇರದಾಳದ ಅಲ್ಲಮಪ್ರಭುಸ್ವಾಮಿ ಮಠದಿಂದ ತಂದ ಮಗಿ ಮತ್ತು ಬೆತ್ತಗಳನ್ನು ಇಟ್ಟು ಪೂಜಿಸಲಾಗುತ್ತಿದೆ. ಇಲ್ಲಿ ಹಿತ್ತಾಳೆಯ ಕವಚದಿಂದ ಆವೃತವಾದ ಶಿವಲಿಂಗವನ್ನೂ ಪೂಜಿಸಲಾಗುತ್ತದೆ.

ರಾಜಸತ್ತೆಯ ಕಾಲದಲ್ಲಿ ಎಲ್ಲ ಧರ್ಮದ ದೇವರುಗಳನ್ನು ಪೂಜಿಸುವ ಅಗತ್ಯತೆ ಇತ್ತು. ವಾಡೆಯ ದೇಸಾಯಿಗಳು ಸ್ಥಳೀಯ ರಾಜರಾದ್ದರಿಂದ ಇವರು ಈ ತತ್ವವನ್ನು ಅನುಸರಿಸಿ ಪರಧರ್ಮ ಸಹಿಷ್ಣುತಾ ಭಾವವನ್ನು ಮೆರೆದಿದ್ದಾರೆ. ಅಂದಿನ ಸಂಪ್ರದಾಯ ಈಗಲೂ ಮುಂದುವರೆದುಕೊಂಡು ಬಂದಿದೆ. ಇಲ್ಲಿಯಂತೆ ತೇರದಾಳ ವಾಡೆಗಳಲ್ಲೂ ಜೈನದೇವತೆಗಳ ಜೊತೆ ಹಿಂದೂ ದೇವತೆಗಳನ್ನೂ ಆರಾಧಿಸಲಾಗುತ್ತದೆ.

**೧೩. ಮುನಿ ಹಜಾರ**

ಜಿನಮುನಿಗಳಿಗೆ ಆಹಾರ (ಊಟ) ಕೊಡುವುದು ಪ್ರತಿ ಶ್ರಾವಕನ ಕರ್ತವ್ಯವಾಗಿದೆ. ಒಬ್ಬ ಮುನಿಗೆ ಆಹಾರ ಕೊಡುವುದು ಜೈನಧರ್ಮದಲ್ಲಿ ಶ್ರೇಷ್ಠವಾದ ಆಚಾರವೆನಿಸುತ್ತದೆ. ಜೈನ ವಾಡೆಗಳಲ್ಲಿ ಸಾಕಷ್ಟು ಮುನಿಗಳಿಗೆ ಆಹಾರ ನೀಡಿದ್ದಾಗಿ, ಈಗಲೂ ತೇರದಾಳ, ಹನಗಂಡಿ, ದರೂರು, ಮುಳುಗುಂದ ವಾಡೆಗಳಲ್ಲಿ ಮುನಿಗಳಿಗೆ ಆಹಾರ ಕೊಡುವ ಸೇವೆ ನಡೆಯುತ್ತದೆ ಎಂದು ವಾಡೆಯ ಸದಸ್ಯರು ಹೇಳುತ್ತಾರೆ. ಈ ನಾಲ್ಕೂ ವಾಡೆಗಳಲ್ಲಿ ಮುನಿಗಳಿಗೆ ಆಹಾರ ಕೊಡಲಿಕ್ಕೆ ಪ್ರತ್ಯೇಕವಾದ ಕೊಠಡಿಯ ವ್ಯವಸ್ಥೆ ಇರುವುದಿಲ್ಲ. ಸದರ ಕಟ್ಟೆಯಲ್ಲಿಯೇ ಆಹಾರ ಕೊಡುವ ಪದ್ಧತಿ ಚಾಲ್ತಿಯಲ್ಲಿದೆ.

ಮುನಿಗಳಿಗೆ ಆಹಾರ ಕೊಡಲಿಕ್ಕೆ ಎಂದೇ ಪ್ರತ್ಯೇಕವಾದ ಹಜಾರ ಇರುವುದು ಅಣ್ಣಿಗೇರಿ ದೇಶಪಾಂಡೆ ವಾಡೆಯಲ್ಲಿ ಮಾತ್ರ. ದೇವರ ಮನೆ ಎದುರು ಸುಮಾರು ೫೦ ಜನ ಕೂರುವಷ್ಟು

ಜಾಗೆ ಇದೆ. ಇದುವೇ ಮುನಿ ಹಜಾರ. ಮುನಿಗಳಿಗೆ ಆಹಾರ ಕೊಡುವ ಕ್ರಿಯೆಯಲ್ಲಿ ವಾಡೆಯ ಸರ್ವ ಸದಸ್ಯರೂ ನೆರೆದಿರುತ್ತಿದ್ದರು. ಎಂದು ವಾಡೆಯ ವಾರಸುದಾರರಾದ ಶ್ರೀ ರಾಜೇಂದ್ರ ದೇಶ ಪಾಂಡೆಯವರು[೧೦] ಹೇಳುತ್ತಾರೆ. ಇವರ ಕುಟುಂಬ ಕೊಲ್ಲಾಪುರದಲ್ಲಿ ನೆಲೆಸಿದ ನಂತರ ಮುನಿಗಳಿಗೆ ಆಹಾರ ಕೊಡುವ ಚಟುವಟಿಕೆಗಳು ವಾಡೆಯಲ್ಲಿ ಸ್ಥಗಿತಗೊಂಡಿವೆ. ಈ ಪದ್ಧತಿಯನ್ನು ಕೊಲ್ಲಾಪುರದ ಮನೆಯಲ್ಲಿ ನಡೆಸಿಕೊಂಡು ಹೋಗುತ್ತಿರುವುದಾಗಿ ಶ್ರೀ ರಾಜೇಂದ್ರ[೧೧] ಅವರು ಹೇಳುತ್ತಾರೆ.

### ೧೪. ಹೆರಿಗೆ ಕೋಣೆ.

ವಾಡೆಯ ಸ್ತ್ರೀಯರಿಗೆ ನಿರ್ಮಾಣವಾದ ಹೆರಿಗೆ ಕೋಣೆ ಎಲ್ಲಾ ಜೈನ ವಾಡೆಗಳಲ್ಲಿ ಕಂಡು ಬರುತ್ತದೆ. ಕತ್ತಲು ಕತ್ತಲು ಎನಿಸುವ ಈ ಕೋಣೆಯ ಬಾಗಿಲು ಚಿಕ್ಕದಾಗಿರುತ್ತದೆ. ಬಾಣಂತಿ ತಾಯಿ ಮತ್ತು ಮಗುವಿನ ಸುರಕ್ಷತೆಗಾಗಿ ಈ ವ್ಯವಸ್ಥೆ ಮಾಡಲಾಗುತ್ತಿತ್ತು. ಪಡಸಾಲೆಗೆ ಅಂಟಿಕೊಂಡಿರುವ ಈ ಕೋಣೆಯಲ್ಲಿ ಮನೆಯ ಸದಸ್ಯರು ಅನವಶ್ಯಕವಾಗಿ ಒಳಹೋಗುತ್ತಿರಲಿಲ್ಲ. ಹೊರಗಿನಿಂದ ಬಂದ ಸದಸ್ಯರು ಈ ಕೋಣೆಯನ್ನು ಪ್ರವೇಶಿಸಬೇಕೆಂದರೆ ಕಡ್ಡಾಯವಾಗಿ ಸಗಣಿಯ ನೀರಿನಲ್ಲಿ ಕಾಲನ್ನು ಅದ್ದಿ ಹೋಗಬೇಕಿತ್ತು ಎಂದು ಶ್ರೀಮತಿ ಜಯಶ್ರೀ ಅಮ್ಮ ನಾಡಗೌಡರು[೧೨] ಹೇಳುತ್ತಾರೆ. ಸಗಣಿಯಲ್ಲಿ ರೋಗನಿರೋಧ ಶಕ್ತಿ ಇದೆ ಎಂಬುದು ಜನಪದರ ನಂಬಿಕೆ. ಈಗಲೂ ಹಳ್ಳಿಗಳಲ್ಲಿ ಬೆಳಿಗ್ಗೆ ಬಾಗಿಲು ಮುಂದೆ ಸಗಣಿಯಿಂದ ನೆಲ ಸಾರಿಸುವುದು ಪ್ರತಿನಿತ್ಯದ ಕೆಲಸವಾಗಿದೆ. ಗೋಮೂತ್ರವನ್ನು ಮನೆಗೆ ಸಿಂಪಡಿಸುವುದು, ಊಟ ಆದ ಮೇಲೆ ಗೋವಿನ ಸಗಣಿಯಿಂದ ನೆಲಸಾರಿಸುವುದು ಶಿಷ್ಟ ಸಂಪ್ರದಾಯ ಆಗಿರುವುದು ಅವುಗಳಲ್ಲಿರುವ ರೋಗ ನಿರೋಧಕ ಶಕ್ತಿಯಿಂದಲೇ ಈ ವಿಷಯನ್ನು ಜನಪದರು ಬಹು ಹಿಂದಯೇ ಅರಿತಿದ್ದರು. ಅದು ಮುಂದುವರೆದುಕೊಂಡು ವಾಡೆಗೂ ಬಂತು. ವಾಡೆಯೂ ಜನಪದರ ಅವಿಭಾಜ್ಯ ಅಂಗವೇ ಆಗಿದೆ.

### ೧೫. ದನದ ಮನೆ

ನೂರಾರು ಎಕರೆಯ ಮಾಲೀಕರು, ವತನದಾರರೂ ಆದ ದೇಸಾಯಿಗಳ ವಾಡೆಯಲ್ಲಿ ಸಾಕಷ್ಟು ದನಕರುಗಳು ಇರುತ್ತಿದ್ದವು. ಕೃಷಿ ಪ್ರಧಾನ ಚಟುವಟಿಕೆ ವಾಡೆಯ ಪ್ರಮುಖ ಆದಾಯವೂ ಹೌದು. ಅಂತೆಯೇ ಹತ್ತಾರು ಜೋಡಿ ಎತ್ತುಗಳು, ಹತ್ತಾರು ಆಕಳು, ಎಮ್ಮೆ, ಕರುಗಳು ಇರುತ್ತಿದ್ದವು. ಇವುಗಳಿಗಾಗಿಯೇ ವಾಡೆಯಲ್ಲಿ ವಿಶಾಲವಾದ ದನದ ಮನೆಯ ವ್ಯವಸ್ಥೆಯನ್ನು ಕಾಣಬಹುದು. ಐದು ಅಂಕಣದಿಂದ ಹಿಡಿದು ಹದಿನೈದು ಅಂಕಣಗಳ ದನದ ಮನೆಗಳು ವಾಡೆಯಲ್ಲಿದ್ದದ್ದು ಕಂಡು ಬರುತ್ತದೆ. ಉದ್ದನೆಯ ಕಟ್ಟೆಗೆ ಗೋದಲಿ ವ್ಯವಸ್ಥೆ ಇಲ್ಲಿದ್ದು, ಒಂದು ಗೋದಲಿಯ ಸಾಲಿಗೆ ಎದುರು-ಬದುರು ಹತ್ತು ದನಗಳನ್ನು ಕಟ್ಟಬಹುದು.

ಅಣ್ಣಿಗೇರಿಯಲ್ಲಿ ಒಟ್ಟು ಮೂರು ಉದ್ದನೆ ಗೋದಲಿಗಳಿದ್ದು ಐದು ಅಂಕಣ ಅಗಲ ಮೂರು ಅಂಕಣ ಉದ್ದವಿದೆ. ಇಲ್ಲಿ ಒಟ್ಟು ೩೦ ದನಕರುಗಳನ್ನು ಕಟ್ಟಬಹುದಾದ ವ್ಯವಸ್ಥೆಯಿದೆ. ದನಗಳಿಗೆ ನೀರು ಕುಡಿಯು ದೋಣಿಯೂ ದನದ ಮನೆಯಲ್ಲಿಯೇ ಇದ್ದು ದನಗಳು ಒಳ-ಹೊರ ಹೋಗುವಾಗ ಕುಡಿದು ಹೋಗುತ್ತಿದ್ದವು. ತೇರದಾಳದಲ್ಲಿ ೩೦, ಹನಗಂಡಿಯಲ್ಲಿ ೫೦, ಮುಳುಗುಂದದಲ್ಲಿ ೩೦, ದರೂರಲ್ಲಿ ೩೦ ದನಗಳನ್ನು ಕಟ್ಟುವ ದನದ ಮನೆಗಳಿವೆ.

**೧೬. ಸ್ನಾನದ ಮನೆ.**

ವಾಡೆಯ ಹಿತ್ತಲಿಗೆ ಹೋಗುವಲ್ಲಿ ಸ್ನಾನಗೃಹಗಳು ಇರುತ್ತವೆ. ಬಚ್ಚಲು ಮನೆ ಎಂದರೂ ಇದೆ. ಸಾಮಾನ್ಯವಾಗಿ ಬಚ್ಚಲ ಮನೆಯೊಳಗೆ ದೊಡ್ಡ ತಾಮ್ರದ ಹಂಡೆಯನ್ನು ಕಟ್ಟೆಯಲ್ಲಿ ಹೂಳಲ್ಪಟ್ಟಿದ್ದು, ಐದರಿಂದ ಆರು ಜನ ಜಳಕ (ಸ್ನಾನ) ಮಾಡುವಷ್ಟು ದೊಡ್ಡದಿರುತ್ತದೆ. ಇದರ ಒಲೆಯು ಬಚ್ಚಲ ಮನೆಯಿಂದ ಹೊರಗೆ ಇರುತ್ತದೆ. ಒಳಗೆ ಹೊಗೆಯಾಗದಿರಲೆಂದು ಈ ವ್ಯವಸ್ಥೆ ಮಾಡಲಾಗಿದೆ. ನೀರು ಕಾಯಿಸಲಿಕ್ಕೆ ಒಬ್ಬ ಆಳು ಇರುತ್ತಿದ್ದು, ಸಾಮಾನ್ಯವಾಗಿ ಸ್ತ್ರೀಯಾಗಿರುತ್ತಿದ್ದಳು. ಈ ತರಹದ ವ್ಯವಸ್ಥೆ ಅಣ್ಣಿಗೇರಿ ದೇಶಪಾಂಡೆ ವಾಡೆಯಲ್ಲಿ ಕಾಣಬಹುದು. ನೀರು ಕಾಯಿಸಲಿಕ್ಕೆ ಕಟ್ಟಿಗೆಯನ್ನು ಉರುವಲಾಗಿ ಬಳಸುತ್ತಿದ್ದು ಇಲ್ಲಿ ಕಾಣಬಹುದು. ಬಚ್ಚಲಲ್ಲಿ ಸಾಕಷ್ಟು ನೀರು ಹಿಡಿಯುವ ಹೌದು (ಟ್ಯಾಂಕ್)ನ್ನು ಉಳಿದ ವಾಡೆಗಳಲ್ಲಿ ನೋಡಬಹುದು. ಸ್ನಾನಗೃಹದಲ್ಲಿ ಬಾವಿಗಳು ಇರುವ ವ್ಯವಸ್ಥೆಯು ಇರುವುದನ್ನು ಹಾವೇರಿ ಜಿಲ್ಲೆಯ ಹಂದಿಗನೂರು ವಾಡೆಯಲ್ಲಿ ನೋಡಿದ್ದೆ.

**೧೭. ಕೆಲಸಗಾರರ ಮನೆಗಳು.**

ದೊಡ್ಡ ವಾಡೆಯಲ್ಲಿ ಕೆಲಸಗಾರರಿಗೆ ಪ್ರಾಂಗಳದಲ್ಲಿ ಮನೆಗಳ ವ್ಯವಸ್ಥೆ ಇರುವುದನ್ನು ಜೈನವಾಡೆಗಳಲ್ಲಿ ಕಾಣಬಹುದು. ಹನಗಂಡಿ ದೇಸಾಯಿಗಳ ವಾಡೆಯಲ್ಲಿ ಈ ವ್ಯವಸ್ಥೆಯಿದೆ. ಪಾಗನೀಸ (ಕುದುರೆ ಸೇವಕರು), ಪಕಾಲಿ (ಮುಸ್ಲಿಂ ಸೇವಕರು), ಚಿಮುಟೆ ಅಪ್ಪೆ, ಬರಗಾಲಿ (ಸೇವಕರು) ಮುಂತಾದವರು ತಂಗಲು ಇಲ್ಲಿ ವಸತಿಗಳಿವೆ. ಪಕಾಲಿಯವರನ್ನು ಹೊರತುಪಡಿಸಿ ಉಳಿದವರೆಲ್ಲ ಹಿಂದುಗಳು. ಪಕಾಲಿಯವರು ಆದಿಲ್‌ಷಾಹಿಯ ಕಡೆಯಿಂದ ಬಂದವರು. ಇವರು ಸೇವಕರೂ ಹೌದು ರಾಜನಿಗೆ ವಾಡೆಯ ಸುದ್ದಿಗಳನ್ನು ಕೊಡುವ ಗುಪ್ತಚರರೂ ಹೌದು. ಇಂದಿಗೂ ಇವರು ವಾಡೆಯಲ್ಲಿ ಇದ್ದು, ಕೂಲಿಕಾರರಾಗಿ ವಾಡೆಯ ಕೆಲಸ ಮಾಡುತ್ತಾರೆ. ಸದ್ಯ ಬರಗಾಲಿಯವರನ್ನು ಹೊರತುಪಡಿಸಿ ಉಳಿದ ವಾಡೆ ಕೆಲಸಗಾರರು ವಾಡೆಯಿಂದ ಹೊರಗೆ ಮನೆ ಮಾಡಿಕೊಂಡು, ವಾಡೆಯ ಜೊತೆ ನಂಟು ಇಟ್ಟುಕೊಂಡಿದ್ದಾರೆ. ತನ್ನ ವಾಡೆಯ ಕೆಲಸಗಾರರಿಗೆ ವಾಡೆಯಲ್ಲಿಯೇ ಮನೆ ಕಟ್ಟಿಕೊಟ್ಟ ಉದಾರತೆ ದೇಸಾಯಿಗಳಿಗೆ ಸಲ್ಲುತ್ತದೆ. ಯಾವಾಗಲೂ ಕೆಲಸಗಾರರು ಲಭ್ಯವಾಗಲಿ ಎಂಬ ಇನ್ನೊಂದು ತಂತ್ರವೂ ಇದರಲ್ಲಿ ಅಡಗಿದೆ.

ಒಂದು ವಾಡೆಯ ಬಹುಮುಖ್ಯ ಸೌಲಭ್ಯಗಳು ಇವು. ಇವುಗಳಷ್ಟೆ ಅಲ್ಲದೆ ಅಡುಗೆಮನೆ, ಗುಪ್ತಸುರಂಗ, ಶಯ್ಯಾಗಾರ, ಕುದುರೆಲಾಯ, ಡಂಬಣಿಮನೆ, ಹೆಚ್ಚುವರಿ ದನದ ಮನೆಗಳು, ಪಡಸಾಲೆ, ಇತ್ಯಾದಿಗಳ ಒಂದು ದೊಡ್ಡ ಪ್ರಮಾಣದ ವಸತಿ ವಾಡೆ. ಇಂಥಹ ಅಚ್ಚುಕಟ್ಟಾದ ಸಂಸ್ಕೃತಿಯ ಸಂಪತ್ತುಗಳಾದ ವಾಡೆಗಳು ಈಗಲೂ ನಮ್ಮೊಂದಿಗಿವೆ.

**೬.೭ ಕಾಷ್ಠ ವೈಭವ**

ವಾಡೆಗಳು ಅನುಪಮವಾಗಿ ಕಾಣಲು ಅದರಲ್ಲಿರುವ ಚಮತ್ಕಾರಿ ಕಾಷ್ಠ ವೈಭವವೇ ಕಾರಣ. ಕಲಾವಿದನ ಕೈಚಳಕದಲ್ಲಿ ತರತರಹದ ಕುಶಲತೆ ಕಟ್ಟಿಗೆಯಲ್ಲಿ ಇಲ್ಲಿ ಅರಳಿದೆ. ಇಲ್ಲಿರುವ ಬೋದುಗೆ, ಕಂಭಗಳು, ಮೇಲಂತ್ತಸ್ತು ಇತ್ಯಾದಿಗಳಲ್ಲಿ ಕಲಾವಿದನ ಕೈಚಳಕ ಕಾಣಬಹುದು. ವಾಡೆಯ ಕಟ್ಟಿಗೆ ಕೆಲಸಮಾಡಲು ಅನೇಕ ಬಡಿಗೇರ ವೃತ್ತಿಯ ಕಾಷ್ಠ ಕಲಾವಿದರು ತಿಂಗಳಾನುಗಟ್ಟಲೇ ಶ್ರಮಪಡುತ್ತಿದ್ದರು ಎಂದು ತೇರದಾಳದ ಶ್ರೀ ಭೂಪಾಲ ನಾರಿಗೊಂಡ[೧೩] ಅವರು ಹೇಳುತ್ತಾರೆ. ಹನಗಂಡಿ, ಅಣ್ಣಿಗೇರಿ ವಾಡೆಯನ್ನು ನೋಡಿದರೆ ಇದು ನಿಜ ಎನ್ನಿಸುತ್ತದೆ. ಕಲಾವಿದರು ಕೈಯಾಡಿಸಿ ಅರಳಿಸಿದ ಕಲೆಗಳನ್ನು ಇಡಿಯಾಗಿ ಅಭ್ಯಸಿಸುವುದಕ್ಕಿಂತ ಬಿಡಿಯಾಗಿ ಅಭ್ಯಸಿಸುವುದೇ ಸೂಕ್ತ. ಕಾಷ್ಠ ವೈಭವದ ಭಾಗಗಳನ್ನು ಈ ರೀತಿಯಾಗಿ ಪಟ್ಟಿಕರಿಸಬಹುದು.

೧. ಬಾಗಿಲ ಚೌಕಟ್ಟು.
೨. ಕಂಬಗಳು.
೩. ಚೌಸಪ್ಪಿ ಕಮಾನುಗಳು.
೪. ಬೋದುಗೆಗಳು.
೫. ಕಟಾಂಜನ.
೬. ಮೇಲಂತಸ್ತು.

**೧. ಬಾಗಿಲ ಚೌಕಟ್ಟು.**

ವಾಡೆಯ ಚೆಲುವು ಪ್ರತಿಯೊಂದು ಹಂತದಲ್ಲಿ ಉನ್ನತ ಮಟ್ಟದ್ದಾಗಿದ್ದು ಅದು ಬಾಗಿಲ ಚೌಕಟ್ಟುಗಳಲ್ಲಿಯೂ ಪ್ರವಹಿಸಿದೆ. ವಾಡೆಯ ಬಾಗಿಲ ಚೌಕಟ್ಟುಗಳು ಚಿತ್ತಾಕರ್ಷತೆಯಿಂದ ಕೂಡಿದವುಗಳಾಗಿದ್ದು ಮೂರರಿಂದ ನಾಲ್ಕು ಪಟ್ಟಿಕೆಗಳಲ್ಲಿ ಕೆತ್ತನೆಗಳಿವೆ. ಅಕ್ಕಪಕ್ಕದ ತೋಳುಗಳ ಪಟ್ಟಿಕೆಯು ಒಂದೇ ತರಹದ ಕಲೆಯನ್ನು ಹೊಂದಿದ್ದು ಮೇಲ್ಪಟ್ಟಿಕೆ ಅಂದರೆ ಲಲಾಟವೇ ವಿಭಿನ್ನ ಕೆತ್ತನೆಯಿಂದ ಕೂಡಿರುತ್ತದೆ. ಹನಗಂಡಿ ಲಲಾಟದಲ್ಲಿ ಹೂವಿನ ಅರಳು ಕೆತ್ತನೆ, ಬಳ್ಳಿಯ ಅಲಂಕರಣ, ಮುಂಚಾಚಿದ ಕುದುರೆಯ ಶಿಲ್ಪ ಕಂಡುಬರುತ್ತವೆ. ಕುದುರೆ ವಿಜಯದ ಸಂಕೇತವೂ ಹೌದು. ಹನಗಂಡಿ, ಅಣ್ಣಿಗೇರಿಯಲ್ಲಿ ಈ ರೀತಿಯ ಕುದುರೆಯ ಶಿಲ್ಪಗಳನ್ನು ಕಾಣಬಹುದು.

ಹನಗಂಡಿಯಲ್ಲಿ ಎರಡು ವಾಡೆಗಳು ಇದ್ದು ಹಳೆಯ ವಾಡೆಯ ಬಾಗಿಲು ಸಾಧಾರಣವಾಗಿದೆ. ನಂತರ ಕಟ್ಟಿದ ವಾಡೆಯ ತಲಬಾಗಲಿನ ಚೌಕಟ್ಟಿನಲ್ಲಿ ಮಂಟಪಯುಕ್ತ ಗಣೇಶನ ಉಬ್ಬು ಶಿಲ್ಪವನ್ನು ಕೆತ್ತಲಾಗಿದೆ. ಇದು ಅನ್ಯಧರ್ಮದ ಪ್ರಭಾವ ಅಥವಾ ಕಾಷ್ಠಶಿಲ್ಪಿ ಹಿಂದೂವಾಗಿದ್ದು ಅವನ ಧರ್ಮ ಪರಂಪರೆಗೆ ಅನುಗುಣವಾಗಿ ಗಣೇಶ ಶಿಲ್ಪವನ್ನು ಕೆತ್ತಿದಂತೆ ಕಾಣುತ್ತದೆ. "ಗಣೇಶನನ್ನು ಜೈನರು ೧೧ನೆಯ ಶತಮಾನದಲ್ಲಿ ಸ್ವೀಕರಿಸಿದ್ದರು." ಎಂಬುದಾಗಿ ಮಾರುತಿ ನಂದನಪ್ರಸಾದ ತಿವಾರಿಯವರು ಅಭಿಪ್ರಾಯ ಪಡುತ್ತಾರೆ.[೧೪] ಆದರೆ ಅದು ದಕ್ಷಿಣ ಭಾರತದಲ್ಲಿ ಅನುಷ್ಠಾನಗೊಳ್ಳಲಿಲ್ಲ ಎಂದು ಡಾ.ಎಸ್.ಪಿ. ಪದ್ಮಪ್ರಸಾದ ಅವರು ಹೇಳುತ್ತಾರೆ.[೧೫] ಬಹುಶ: ಹಿಂದೂ ಧರ್ಮ ಸಂಸ್ಕೃತಿಯ ಪ್ರಭಾವದಿಂದ ಗಣೇಶ ಜೈನರ ದೇವರೂ ಆದ. ಉದಾಹರಣೆಗಾಗಿ ಗಣೇಶ ಚತುರ್ಥಿಯಲ್ಲಿ ಗಣೇಶನನ್ನು ಜೈನರೂ ಕೂರಿಸುವುದನ್ನು ಕಾಣಬಹುದು. ಮೂಲ ಹನಗಂಡಿ ವಾಡೆಯ ಚೌಕಟ್ಟು ಮತ್ತು ಹಳೆಯ ಪ್ರವೇಶ ದ್ವಾರ ಜೈನ ಸಂಪ್ರದಾಯದಂತೆ ನಿರ್ಮಾಣಗೊಂಡಿದ್ದು, ವಿಸ್ತೀರ್ಣಗೊಂಡ ವಾಡೆ ಮತ್ತು ಪೂರ್ವ ಪ್ರವೇಶ ದ್ವಾರಗಳಲ್ಲಿ ಗಣೇಶನ ಶಿಲ್ಪ ಕಾಣಬಹುದು. ಗಣೇಶನ ಕೆಳಭಾಗದಲ್ಲಿ ಎರಡು ಮೀನಿನ ಕೆತ್ತನೆಗಳಿರುವುದು ಇಲ್ಲಿನ ಬಾಗಿಲ ವಿಶೇಷ.

**೨. ಕಂಬಗಳು.**

ಇಡೀ ವಾಡೆಗಳಿಗೆ ಅಲ್ಲಿರುವ ಕಂಬಗಳೇ ಆಧಾರ. ವಾಡೆಯ ಬಹುತೇಕ ಚೆಲುವು ಕಂಬಗಳಲ್ಲಿ ಕಂಡುಬರುತ್ತದೆ. ಸಾಮಾನ್ಯವಾಗಿ ಚೌಸಪ್ಪಿಯ ಕಂಬಗಳು ಹೆಚ್ಚು ಅಲಂಕರಣಗೊಂಡಿದ್ದು ಎಲ್ಲ ವಾಡೆಗಳಲ್ಲಿ ಕಾಣಬಹುದು. ರಾಜಾಂಗಣ ಮತ್ತು ಸದರ ಕಟ್ಟೆ ಎರಡೂ ಸೇರಿ ಚೌಸಪ್ಪಿ ಎಂದೆನಿಸಿಕೊಳ್ಳುತ್ತದೆ. ಇಲ್ಲಿ ಗರುಡಗಂಬಗಳು, ಮಧ್ಯಕಂಬಗಳು, ಗೋಡೆಯಲ್ಲಿದ್ದ ಅರ್ಧಗಂಬಗಳು ಎಂದು ಮೂರು ವಿಧಗಳನ್ನು ಕಾಣಬಹುದು. ಚೌಸಪ್ಪಿಯ ಪ್ರಾರಂಭದಲ್ಲಿ ಗರುಡಗಂಬಗಳಿದ್ದು ೨೦ ಅಡಿ ಎತ್ತರವಿರುತ್ತವೆ. ಇವು ಸಾಮಾನ್ಯವಾಗಿದ್ದು ವಾಡೆಯ ಛತ್ತಿನ ಭಾರವನ್ನು ಹೊತ್ತಿರುತ್ತವೆ. ಮಧ್ಯದ ಕಂಬಗಳಲ್ಲಿ ಕಲಾವಿದ ಕೈಚಳ ಅಡಗಿದ್ದು ಕಂಡುಬರುತ್ತದೆ.

ಒಂದು ಕಂಬವನ್ನು ಕೆಳಗಿಂದ ನೋಡಿದಾಗ ಅಲ್ಲಿ ಪೀಠ, ಪಾದ, ದಂಡ, ಕೀರ್ತಿಮುಖ, ಲಕುನ, ತಾಟಿಕಾ, ಘಟ, ಮಂಡಿ, ವೀರಕಂಠ, ಬೋದಿಗೆಗಳನ್ನು ಕಲೆಗಾರ ಕೆತ್ತಿರುತ್ತಾನೆ.[೧೬] ಮುಳುಗುಂದ, ದರೂರು, ಅಣ್ಣಿಗೇರಿ ವಾಡೆಯಲ್ಲಿ ಈ ರೀತಿಯ ಕಲಾತ್ಮಕ ಕಂಬಗಳಿರುವುದನ್ನು ಕಾಣಬಹುದು. ಮುಳುಗುಂದ ವಾಡೆಯ ಮಧ್ಯಕಂಬಗಳು ೧-೬, ೨-೫, ೩-೪ ಕಂಬಗಳು ಪರಸ್ಪರ ಸಮನಾಗಿದ್ದು ಒಂದೇ ತರಹದ ಕೆತ್ತನೆಗಳನ್ನು ಹೊಂದಿವೆ. ಸಾಮಾನ್ಯವಾಗಿ ದಂಡದಲ್ಲಿ ಅಡ್ಡ ಪಟ್ಟಿಗಳು, ಅದರ ಮೇಲೆ ಹೂವಿನ ಕುಸುರಿ ಕೆತ್ತನೆ ಕೀರ್ತಿಮುಖ, ಲಕುನದಲ್ಲಿ ಕಟ್ಟಿಗೆಯ ಸರಪಳಿ, ಘಟದಲ್ಲಿ ವಜ್ರದಾಕೃತಿಯ ಗಂಟುಗಳೂ, ವೀರಕಂಠದಲ್ಲಿ ಕೆತ್ತನೆಗಳನ್ನು ಕಾಣಬಹುದು.

೩–೪ ಕಂಬಗಳು ಇದೇ ಕಲಾವಿನ್ಯಾಸ ಹೊದಿದವುಗಳಾಗಿದ್ದು, ತಾಟಿಕಾ ಮತ್ತು ಲಕುನ ಭಾಗದಲ್ಲಿ ಉದ್ದದಳಗಳಯುಕ್ತ ಕಮಲದ ಹೂವುಗಳನ್ನು ಕೆತ್ತಲಾಗಿದೆ. ಇಡೀ ಜೈನವಾಡೆಗಳಲ್ಲಿಯೇ ಸುಂದರ ಕೆತ್ತನೆಯ ಕಂಬಗಳಿವು.

**೩. ಚೌಸಪ್ಪಿ ಕಮಾನುಗಳು.**

ದರ್ಬಾರ ಸ್ಥಳಕ್ಕೆ ಮೆರಗನ್ನು ನೀಡುವ ಚೌಸಪ್ಪಿಗಳು ಎಲ್ಲ ವಾಡೆಗಳಲ್ಲಿ ಕಂಡುಬರುವುದಿಲ್ಲ. ಬಹುಶ: ಕಲಾಚಲುವನ್ನು ಅರಿತಿದ್ದ ದೇಸಾಯಿಯು ಈ ತರಹದ ವೈಭವವನ್ನು ತನ್ನ ವಾಡೆಯಲ್ಲಿ ನಿರ್ಮಿಸಿದ್ದಾನೆ. ಸಾಮಾನ್ಯವಾಗಿ ಇಂಡೋಸಾರ್ಸೆನಿಕ್ ಮಾದರಿಯಲ್ಲಿ ಚೌಸಪ್ಪಿ ಕಮಾನುಗಳು ಕೆತ್ತನೆಯಾಗಿವೆ. ಇಂಥ ಕಮಾನುಗಳು ದರೂರು ವಾಡೆಯ ಪಡಸಾಲೇಗಳಲ್ಲೂ ಕಾಣಬಹುದು. ಮುಳುಗುಂದ ವಾಡೆ, ಹನಗಂಡಿ ವಾಡೆಗಳಲ್ಲಿ ಕಮಾನುಗಳ ರಚನೆ ಕಾಣಬಹುದು. ಇದರಲ್ಲಿ ಮುಳುಗುಂದ ವಾಡೆಯ ಕಮಾನುಗಳು ಮೇಲ್ಮಟ್ಟದವು. ಬೋದಿಗೆಯಿಂದ ಹೊರಟಿರುವ ಕಮಾನುಗಳ ಅಂಚು ಆನೆ ಸೊಂಡಿಲನ್ನು ಎತ್ತಿದ ಹಾಗೆ ರಚಿತವಾಗಿದೆ. ಅರ್ಧಚಂದ್ರಾಕೃತಿಗಳು ಇಲ್ಲಿದ್ದು ಬಳ್ಳಿಯ ಅಲಂಕರಣದಿಂದ ಕೂಡಿವೆ. ಮಧ್ಯ ಗೋಪುರದಲ್ಲಿ ಕೊನೆಗೊಂಡಂತೆ ಕಾಣುತ್ತವೆ.

**೪. ಬೋದುಗೆಗಳು.**

ಕಲಾವಿದನ ಅತೀಯಾದ ಕೈಚಳಕದ ಕಲೆ ಮೂಡಿ ಬಂದುದು ಬೋದುಗೆಗಳಲ್ಲಿ. ಕಂಬಕ್ಕೆ ತಲೆಯ ಆಕಾರದಂತೆ ಇರುವ ಇವುಗಳು ಕಂಬಕ್ಕೂ ತೊಲೆಗಳ ಮಧ್ಯದ ಸೇತುಕೊಂಡಿಗಳು. ಇದರ ಅಂಗ ಹೊರಚಾಚಿದ್ದರಿಂದ ಕಲಾಕೃತಿಯನ್ನು ಕೆತ್ತಲು ಅವಕಾಶ ಇರುತ್ತಿತ್ತು. ಇದನ್ನು ಅರಿತ ಕಲಾವಿದ ಸಮರ್ಥವಾಗಿ ಬೋದುಗೆಗಳಲ್ಲಿ ಕಲಾಕೃತಿಗಳನ್ನು ಒಡಮೂಡಿಸಿದ್ದಾನೆ.

ಬೋದುಗೆಗಳು ವಿಶೇಷ ಕಲಾಕೃತಿಗಳ ತಾಣವಾಗಿದ್ದು ಕಲೆಗಾರ ತನ್ನ ಜಾಣ್ಮೆ ವ್ಯಕ್ತಪಡಿಸಲು ಪ್ರಶಸ್ತವಾದವುಗಳು. ನಾಲ್ಕು ಕಡೆ ಚೌಕ ಅಡ್ಡ ತೊಲೆಗಳು ಒಂದರ ಮೇಲೆ ಒಂದರಂತೆ ಜೋಡಿಸಲಾಗಿರುತ್ತದೆ. ಇವುಗಳಲ್ಲಿ ಕಂಬದ ಮೇಲೆ ಇರುವ ತೊಲೆ ಒಟ್ಟು ಉದ್ದ ಸುಮಾರು ನಾಲ್ಕು ಅಡಿ, ಅದರ ಮೇಲಿರುವ ತೊಲೆ ಆರು ಅಡಿ ಉದ್ದವಿರುತ್ತದೆ. ಇದರ ಮೇಲೆ ಒಂದು ಕಂಬದಿಂದ ಇನ್ನೊಂದು ಕಂಬವನ್ನು ಕಚ್ಚಿಕೊಂಡ ತೊಲೆಗಳಿರುತ್ತವೆ. ಈ ನಾಲ್ಕು ಮತ್ತು ಆರು ಅಡಿಯ ಅರ್ಧತೊಲೆಗಳ ಬೋದುಗೆಗಳು, ಸಾಮಾನ್ಯವಾಗಿ ಬೋದುಗೆಗಳ ಮುಂಚಾಚಿದ ಭಾಗದಲ್ಲಿ ಪ್ರಣಾಲಗಳನ್ನು ಕೆತ್ತಲಾಗಿರುತ್ತದೆ. ಈ ಪ್ರಣಾಳ ಪ್ರಾಣಿಗಳ ಕಲಾಕೃತಿಗಳಿಂದ ಕೂಡಿದ್ದು ಅವುಗಳೇ ತೊಲೆಯನ್ನು ಹೊತ್ತಂತೆ ಕಾಣುತ್ತವೆ. ಪ್ರಣಾಲಗಳಲ್ಲಿ

೧. ಗಜವಕ್ತ್ರ ಪ್ರಣಾಲ.
೨. ಗೋಮುಖ ಪ್ರಣಾಲ.
೩. ಮಕರ ವಕ್ತ್ರ ಪ್ರಣಾಲ.
೪. ಸಿಂಹ ವಕ್ತ್ರ ಪ್ರಣಾಲ.

ಎಂಬುವುಗಳ ಮಾದರಿಗಳನ್ನು ವಾಡೆಗಳಲ್ಲಿ ಕಾಣಬಹುದು. ಬೋದುಗೆಗಳ ಅಲಂಕರಣವನ್ನು ದರೂರು ಮತ್ತು ಮುಳುಗುಂದ ವಾಡೆಗಳಲ್ಲಿ ಮಾತ್ರ ಕಾಣಬಹುದು. ದರೂರು ವಾಡೆಯಲ್ಲಿ ಏಕಮುಖದಲ್ಲಿ ಮಾತ್ರ ಅಲಂಕರಣದ ಬೋದುಗೆಗಳಿವೆ. ಇಲ್ಲಿ ಕೀಳ್ಮುಖದ ಬುಗುರಿ ಕೆತ್ತನೆಗಳು, ನವಿಲಿನ ಹೊಟ್ಟೆಯ ಉಬ್ಬು ಕೃತಿಗಳನ್ನು, ಹೂ ಬಳ್ಳಿಗಳು, ಹೂಗಳ ಚೆಲುವನ್ನು ಚಿತ್ರಿಸಲಾಗಿದೆ.

ಮೇಲ್ಮಟ್ಟದ ಬೋದುಗೆಗಳಿರುವುದು ಮುಳುಗುಂದ ವಾಡೆಯಲ್ಲಿ. ಈ ಸಭಾಂಗಣ, ಸದರದಲ್ಲಿ ಸರಳ ಬೋದುಗೆಗಳು ಇಲ್ಲಿದ್ದು, ಅಲಂಕಾರಿಕ ಬೋದುಗೆಗಳು ಸಲಕರಣೆಗಳ ಸಂಗ್ರಹ ದೊಡ್ಡ ಕೊಠಡಿಯಲ್ಲಿ ಇವೆ. ಇಲ್ಲಿರುವ ಎಲ್ಲ ಕಂಬಗಳು, ಬೋದುಗೆಗಳ, ತೊಲೆಗಳು ಹಳೆಯ ವಾಡೆಗೆ ಸಂಬಂಧಿಸಿದುವು ಎಂದು ಶ್ರೀ ರಂಗಪ್ಪಯ್ಯ ನಾಗಪ್ಪಯ್ಯ ದೇಶಪಾಂಡೆಯವರು[೧೭] ಹೇಳುತ್ತಾರೆ. ಇವರ ಹಳೇಯವಾಡೆ ಇಲ್ಲಿರುವ ಗುಡ್ಡದ ಬದಿಯಲ್ಲಿದ್ದು, ಭೀಕರ ಕಾಲರಾ ಭೀತಿಯಿಂದ ತತ್ತರಿಸಿ ವಾಡೆಯನ್ನು ಇವರ ಪೂರ್ವಿಕರು ಊರ ಒಳಗೆ ಸ್ಥಳಾಂತರಗೊಳಿಸಿದರು. ಅಲ್ಲಿಯ ಕಟ್ಟಿಗೆಗಳನ್ನು ಹೊಸ ವಾಡೆಯನ್ನು ಕಟ್ಟುವಾಗ ಬಳಸಿಕೊಂಡಿದ್ದಾರೆ.

ಇಲ್ಲಿರುವ ಬೋದಿಗೆಗಳಲ್ಲಿ ಗೋಮುಖ ಪ್ರಣಾಲ, ಸಿಂಹ ಮುಖ ಪ್ರಣಾಲಗಳನ್ನು, ಹೂದಳಗಳ ಕೆತ್ತನೆಗಳು, ಬುಗುರಿಗಳು ಖಂಡ ಖಂಡವಾಗಿ ಕೆತ್ತನೆಗಳಾಗಿವೆ. ಬಹುಶಃ ಕೆಚ್ಚು ಇರುವ ಸಾಗವಾನಿ ಕಟ್ಟಿಗೆಯಲ್ಲಿ ಮಾತ್ರ ಈ ಕೆತ್ತನೆಗಳನ್ನು ಮಾಡಲು ಸಾಧ್ಯ ಎಂದು ಶ್ರೀ ನಾಗರಾಜ ರಂಗಪ್ಪಯ್ಯ ದೇಶಪಾಂಡೆಯವರು ಹೇಳುತ್ತಾರೆ.[೧೮] ಪ್ರಣಾಲದ ಹಿಂದಿನ ಜಾಗೆಯಲ್ಲಿ ವಿಶೇಷ ಕಾಷ್ಠ ಶಿಲ್ಪಗಳನ್ನು ಇಲ್ಲಿ ಕಾಣಬಹುದು. ನಾಲ್ಕು ಉಬ್ಬುಗೆತ್ತನೆಯ ಕಾಷ್ಠ ಶಿಲ್ಪಗಳು ಇಲ್ಲಿವೆ.

೧ **ಮುನಿ ಉಬ್ಬು ಶಿಲ್ಪ** ಇಲ್ಲಿ ಒಬ್ಬ ಜಿನಮುನಿ ಅಂಜಲಿಭದ್ಧನಾಗಿ ಯೋಗಪಟ್ಟಿಕೆ ಧರಿಸಿ ಕುಳಿತ್ತಿದ್ದಾನೆ. ಇನ್ನೊಂದು ಭಾಗದಲ್ಲಿ ಒಬ್ಬ ವ್ಯಕ್ತಿ ಕಮಂಡಲ ರೀತಿಯ ಸಾಧನವನ್ನು ಕೈಯಲ್ಲಿ ಹಿಡಿದು ಮುನಿಗಳ ಬಳಿ ಬರುತ್ತಿದ್ದಾನೆ.

೨ **ಬೇಟೆ ಉಬ್ಬು ಶಿಲ್ಪ** ವೀರನೊಬ್ಬ ತನ್ನ ಮೇಲೆ ಎರಗಿದ ಹುಲಿಯೊಂದನ್ನು ಗುರಾಣಿಯ ರಕ್ಷಣೆ ಪಡೆದು ಕತ್ತಿಯನ್ನು ಬಲಗೈಲಿ ಹಿಡಿದು ಎದುರಿಸುತ್ತಿದ್ದಾನೆ. ಹುಲಿಯ ಬಾಲ ಉದ್ದವಾಗಿ ಚಿತ್ರಿತವಾಗಿದ್ದು ವೀರನ ಮೇಲೆ ಏರಿದಂತೆ

ಕೆತ್ತಲಾಗಿದೆ. ವೀರನ ತುರುಬು, ಸೊಂಟಪಟ್ಟಿ ಇಲ್ಲಿ ಕಾಣಬಹುದು.

೩ **ವಾದ್ಯಕಾರರ ಉಬ್ಬು ಶಿಲ್ಪ** ನಂದಿಮುಖದ ಮನುಷ್ಯ ಮತ್ತು ಬಹುಶಃ ಸನ್ಯಾಸಿಯೊಬ್ಬನ ಉಬ್ಬುಗೆತ್ತನೆಯ ಶಿಲ್ಪಗಳು ವಾದ್ಯವನ್ನು ನುಡಿಸುತ್ತಿವೆ. ನಂದಿ ತಬಲ ಹಿಡಿದಿದ್ದರೆ ಸನ್ಯಾಸಿ ತಂಬೂರಿ ಹಿಡಿದಂತಿದೆ. ನಂದಿ ಕೊರಳಲ್ಲಿ ದಪ್ಪನೆ ಸರ, ಮುನಿಯ ಕೈಗಳಲ್ಲಿ ಕಡಗ, ತುರುಬು, ಕರ್ಣಾಭರಣ, ಉಡುಪುಗಳ ಚಿತ್ರಣವನ್ನು ಕಾಣಬಹುದು.

೪ **ಮಿಥುನ ಶಿಲ್ಪ** ಸ್ತ್ರೀ-ಪುರುಷ ಸಮಾಗಮದ ಮಿಥುನ ಶಿಲ್ಪದ ಉಬ್ಬು ಕಲಾಕೃತಿಯೊಂದಿದ್ದು, ಸ್ತ್ರೀಯ ಯೋನಿ ಭಾಗ, ಸ್ತನಗಳು ಮತ್ತು ಪುರುಷನ ಉದ್ದನೆಯ ಶಿಶ್ನ ಭಾಗವನ್ನು ಚಿತ್ರಿಸಲಾಗಿದೆ. ಸ್ತ್ರೀಯ ವಾಲಿದ ತುರುಬು, ಕೊರಳ ಸರಗಳನ್ನು ಕಾಣಬಹುದು. ವಾಡೆಯ ಚೆಲುವಿನ ಮೇಲೆ ದೃಷ್ಟಿ ತಾಗದಿರಲೆಂದು ಈ ತರಹದ ಶಿಲ್ಪಗಳನ್ನು ಕೆತ್ತಲಾಗುತ್ತಿತ್ತು.

**೫. ಕಟಾಂಜನ.**

ರಕ್ಷಣಾ ಸೂಚಕವಾಗಿ ಕಟಾಂಜನ ಬಳಕೆಯಾಗುತ್ತಿದ್ದು, ಗ್ರಾಮ್ಯ ಭಾಷೆಯಲ್ಲಿ ಇದಕ್ಕೆ ಕಟಂಜರಿ ಎನ್ನುತ್ತಾರೆ. ಸದರ ಕಟ್ಟೆ ಪ್ರಾರಂಭಕ್ಕೆ ಮೇಲಂತಸ್ತಿನ ಮೆಟ್ಟಿಲುಗಳ ಸೋಪಾನಗ ಬದಿಯಲ್ಲಿ ಕಟಾಂಜನವಿರುತ್ತದೆ. ಕಟ್ಟಿಗೆ ಮತ್ತು ಅರಗು ಕಬ್ಬಿಣ ಮಿಶ್ರಿತ ಕಟಾಂಜನ ಬಗೆಗಳನ್ನು ವಾಡೆಯಲ್ಲಿ ಕಾಣಬಹುದು. ಅರಗು-ಕಬ್ಬಿಣದ ಕಟಾಂಜನಗಳ ಅಚ್ಚಿನಲ್ಲಿ ತಯಾರಾಗುತ್ತಿದ್ದು ಒಂದೇ ಮಾದರಿಯದ್ದಾಗಿರುತ್ತವೆ. ಹನಗಂಡಿ ವಾಡೆಯಲ್ಲಿ ಈ ತರಹದ ಮಾದರಿಗಳನ್ನು ಕಾಣಬಹುದು. ಸಾಮಾನ್ಯವಾಗಿ ಇದರಲ್ಲಿ ಮೇಲೆ ಕೆಳಗೆ ಬಳ್ಳಿಗಳ ಅಲಂಕರಣ, ಮಧ್ಯದಲ್ಲಿ ಮೊಗ್ಗಿನಲ್ಲಿ ನೇರವಾಗಿ ಹೋದಂತಿರುವ ದಂಟಿನ ರೀತಿಯ ಕಂಬಿಗಳು ಅದರ ಮೇಲೆ ಕಮಾನುಗಳನ್ನು ಕಾಣಬಹುದು.

ಅಣ್ಣಿಗೇರಿ ವಾಡೆಯ ಮೇಲಂತಸ್ತಿನಲ್ಲಿ ಸುಂದರ ಕಟಾಂಜನಗಳಿದ್ದು, ಕಟ್ಟಿಗೆಯಲ್ಲಿ ರಚನೆಯಾಗಿವೆ. ಸದರ ಕಟ್ಟೆಯಲ್ಲಿ ಚಿಕ್ಕ-ಚಿಕ್ಕ ಕಂಬಗಳ ವಿನ್ಯಾಸದ ಮೇಲೆ ದಪ್ಪನೆಯ ಅಡ್ಡ ಪಟ್ಟಿ ರಚನೆಯನ್ನು ಮಾಡಲಾಗಿದೆ. ಮೇಲಂತಸ್ತಿನಲ್ಲಿ ದುಂಡು ಕಂಬಗಳ ವಿನ್ಯಾಸ, ಅದರ ಕೆಳಗೆ ಹೂಗಳು, ಬಳ್ಳಿಗಳನ್ನು ಮಾಡಲಾಗಿದೆ ಈ ಕ್ರಮವನ್ನು ಮುಂಚಾಚಿದ ಮೇಲಂತಸ್ತಿನಲ್ಲಿ ಕಾಣಬಹುದು. ಇದರ ಪಕ್ಕದ ವಾಕ್ಪಥಕ್ಕೆ ಉದ್ದ ಹಲಗೆಯಲ್ಲಿ ಕೆಳಪಟ್ಟಿಕೆಯಲ್ಲಿ ಆಯತಾಕಾರದ

ರಚನೆಯ ಕಿಂಡಿಯಲ್ಲಿ ಅಧಿಕ ಚಿನ್ನೆಯ ಕೆತ್ತನೆಗಳಿವೆ. ಇದರ ಮೇಲ್ಪಟ್ಟಿಕೆಯಲ್ಲಿ ಸಾಲುಮಂಟಪದ ಆಕೃತಿಗಳನ್ನು ಕಾಣಬಹುದು. ಅತೀ ಅಚ್ಚುಕಟ್ಟಾದ ಕಟಾಂಜನ ದರೂರು ವಾಡೆಯಲ್ಲಿ ಕಾಣಸಿಗುತ್ತವೆ. ಪಾದ, ದಂಡ ಇವೆರಡರ ಮಧ್ಯ ಎರಡು ವೃತ್ತಾಕಾರದ ಬಳೆಗಳು, ದಂಡದ ಮೇಲೆ ಮತ್ತೊಂದು ಬಳೆ ಇದೇ ವಿನ್ಯಾಸದಲ್ಲಿ ಉಳಿದರ್ಧ ಕಂಬ ರಚನೆಯಾಗಿದೆ. ಅಚ್ಚುಕಟ್ಟಾದ ಬಂಧುರತೆ ಈ ಕಂಬಗಳಲ್ಲಿ ಕಂಡುಬರುತ್ತಿದ್ದು ನೋಡುವುದಕ್ಕೆ ಸೋಗಸಾಗಿವೆ.

**೬. ಮೇಲಂತಸ್ತು.**

ಪಟಂಗಳದಲ್ಲಿ ನಡೆಯುವ ಕಾರ್ಯಕ್ರಮಗಳನ್ನು ವಾಡೆಯ ಸ್ತ್ರೀಯರು ವೀಕ್ಷಿಸಲು ಸಹಾಯಕವಾದವುಗಳು ಈ ಮೇಲಂತಸ್ತುಗಳು. ಇವುಗಳ ರಚನೆಯ ಮೂಲ ಉದ್ದೇಶ ವಾಡೆಯ ಚೆಲುವು ಹೆಚ್ಚಿಸಲಿಕ್ಕೆ ಆಗಿತ್ತು. ಹನಗಂಡಿ ಮತ್ತು ಅಣ್ಣಿಗೇರಿ ದೇಶಪಾಂಡೆ ವಾಡೆಗಳಲ್ಲಿ ಮಾತ್ರ ಈ ವ್ಯವಸ್ಥೆಯಿದ್ದು ಅತ್ಯಂತ ಚೆಲುವಾದ ಮೇಲಂತಸ್ತು ಅಣ್ಣಿಗೇರಿ ವಾಡೆಯದು. ಹನಗಂಡಿ ಮೇಲಂತಸ್ತು ಸಾಧಾರಣವಾಗಿದ್ದು ಕಟಾಂಜನ ವ್ಯವಸ್ಥೆಯನ್ನು ಹೊಂದಿದೆ.

ಎದುರಿಗೆ ಐದು ಅಂಕಣ, ಅಕ್ಕ-ಪಕ್ಕ ಒಂದೊಂದು ಅಂಕಣದಂತೆ ಒಟ್ಟು ಏಳು ಅಂಕಣದ ಮೇಲಂತಸ್ತು ಅಣ್ಣಿಗೇರೆ ವಾಡೆಯದ್ದು. ಇಡೀ ವಾಡೆಯ ಚೆಲುವು ಎಂದು ಬಿಂಬಿತವಾಗುವ ಇಲ್ಲಿನ ಮೇಲಂತಸ್ತು ವಿವಿಧ ವಿನ್ಯಾಸದಲ್ಲಿ ರಚನೆಯಾಗಿದೆ. ಐದು ಅಂಕಣದಲ್ಲಿ ಕಮಾನು ಹೊಂದಿದ ಚಿತ್ತಾರ ಬಾಗಿಲು, ಕಮಾನುಗಳುಳ್ಳ ಕಟಾಂಜನಗಳು, ಅಲಂಕಾರಯುಕ್ತ ಕಂಬಗಳು, ಅಕ್ಕ-ಪಕ್ಕದಲ್ಲಿ ಮೂರು, ಮೂರು ಕಿಡಕಿಯ ರೀತಿಯ ಬಾಗಿಲುಗಳು ಕಂಡುಬರುತ್ತವೆ. ಇಡೀ ಮೇಲಂತಸ್ತಿನ ಪ್ರಮುಖ ಆಕರ್ಷಣೆ ಎಂದರೆ ಮಧ್ಯದ ಅಂಕಣದ ಮುಂಚಾಚಲ್ಪಟ್ಟ ಅಟ್ಟಣಿಗೆ ಇದು ರಾಜ ದರ್ಬಾರು ನಡೆಸುವ ರೀತಿ ಕಂಡುಬರುತ್ತಿದ್ದು ಅತ್ಯಾಕರ್ಷಕ ಕಟಾಂಜನವನ್ನು ಹೊಂದಿದೆ. ಕೆಳಗಿನ ಕಂಬದ ಬೋದುಗೆಗಳು ಈ ಭಾಗವನ್ನು ಹೊತ್ತು ನಿಂತಿವೆ. ಅಲ್ಲಿಯೇ ಮೂರು ಹಾರುವ ಪಕ್ಷಿಗಳ ಕೆತ್ತನೆಗಳೂ ಇವೆ. ಎರಡರಿಂದ ಮೂರು ಕುರ್ಚಿ ಹಾಕಿ ಕುಳಿತುಕೊಳ್ಳುವ ವ್ಯವಸ್ಥೆ ಇಲ್ಲಿದೆ.

ದೇಸಾಯಿಯ ವಯ್ಯುಕ್ತಿಕ ಪ್ರತಿಷ್ಠೆ, ಅವನ ಶ್ರೀಮಂತಿಕೆಯನ್ನು ಬಿಂಬಿಸುವ ವಾಡೆಗಳು ಇನ್ನು ನಮ್ಮೊಂದಿಗಿವೆ. ಇಲ್ಲಿನ ಕಲಾ ಚೆಲುವಿಗೆ ಕಾರಣಿಕರ್ತನಾದವನು ದೇಸಾಯಿಯೇ ಆದರೂ ಅದೇಷ್ಟೊ ಚತುರಮತಿ ಕಲಾವಿದರು, ಶ್ರಮದ ಬದುಕಿನ ಕೆಲಸಗಾರರ ಬೆವರಿನ ಕಂಪಿನ ಫಲವೆ ವಾಡೆಗಳು. ಅವರು ಅಜ್ಞಾತವಾಗಿದ್ದರು ಅವರ ಪರಿಶ್ರಮ ಇನ್ನೂ ಜೀವಂತವಾಗಿದ್ದು ನಾಡಿನ ಸಾಂಸ್ಕೃತಿಕ ಪರಂಪರೆಯ ಭಾಗವಾದಂತಿದೆ.

**ಅಡಿಟಿಪ್ಪಣೆಗಳು.**

೧. ಡಾ. ಸಂತೋಷ ಹಾನಗಲ್ಲ, ಬೆಳಗಾವಿ ಜಿಲ್ಲೆ ಲಿಂಗಾಯತ ವಾಡೆಗಳು, ವರ್ಷ:೨೦೦೯, ಪುಟ ೧೦೫-೧೦೬.

೨. ಸಂಗಪ್ಪ ಚ ಕಲ್ಯಾಣಿ, ಬಾಗಲಕೋಟೆ ಜಿಲ್ಲೆಯ ದೇಸಗತಿಗಳು, ವರ್ಷ ೨೦೦೬, ಪುಟ-೧೭೭.

೩. ಶ್ರೀ ಭೂಪಾಲ ನಾವಳ್ಳಿ, ವಯಸ್ಸು-೮೫, ಸಂದರ್ಶನ ದಿನಾಂಕ: ೧೩-೦೧-೨೦೧೫, ಅಣ್ಣಿಗೇರಿ.

೪. ಶ್ರೀ ಶಿವಪ್ಪ ಪೂಜಾರ, ವಯಸ್ಸು-೮೦, ಸಂದರ್ಶನದ ದಿನಾಂಕ: ೧೩-೦೧-೨೦೧೫, ಅಣ್ಣಿಗೇರಿ.

೫. ಶ್ರೀ ಕೃಷ್ಣಗೌಡ ಅಲ್ಲಪ್ಪ ದೇಸಾಯಿ, ವಯಸ್ಸು-೮೦, ಸಂದರ್ಶನ ದಿನಾಂಕ: ೦೩-೧೧-೨೦೧೪, ಹನಗಂಡಿ.

೬. ಶ್ರೀ ಭೂಪಾಲ ನಾವಳ್ಳಿ, ವಯಸ್ಸು-೮೫, ಸಂದರ್ಶನ ದಿನಾಂಕ: ೧೩-೦೧-೨೦೧೫, ಅಣ್ಣಿಗೇರಿ.

೭. ಶ್ರೀ ರಾಜೇಂದ್ರ ಭೀಮಪ್ಪಯ್ಯ ದೇಶಪಾಂಡೆ, ವಯಸ್ಸು-೫೫, ಸಂದರ್ಶನ ದಿನಾಂಕ: ೧೩-೦೧-೨೦೧೫, ಅಣ್ಣಿಗೇರಿ.

೮. ಸಂಗಪ್ಪ ಚ ಕಲ್ಯಾಣಿ, ಪೂರ್ವೋಕ್ತ, ಪುಟ-೧೫೮.

೯. ಅದೇ ಪುಟ, ೧೬೦-೧೬೪.

೧೦. ಶ್ರೀ ರಾಜೇಂದ್ರ ಭೀಮಪ್ಪಯ್ಯ ದೇಶಪಾಂಡೆ, ವಯಸ್ಸು-೫೫, ಸಂದರ್ಶನ ದಿನಾಂಕ: ೧೩-೦೧-೨೦೧೫, ಅಣ್ಣಿಗೇರಿ.

೧೧. ಶ್ರೀ ರಾಜೇಂದ್ರ ಭೀಮಪ್ಪಯ್ಯ ದೇಶಪಾಂಡೆ, ವಯಸ್ಸು-೫೫, ಸಂದರ್ಶನ ದಿನಾಂಕ: ೧೩-೦೧-೨೦೧೫, ಅಣ್ಣಿಗೇರಿ.

೧೨. ಶ್ರೀಮತಿ ಜಯಶ್ರಿ ಪಾರ್ಶ್ವನಾಥ ನಾಡಗೌಡ, ವಯಸ್ಸು-೭೦, ಸಂದರ್ಶನ ದಿನಾಂಕ: ೦೧-೧೧-೨೦೧೪, ತೇರದಾಳ.

೧೩. ಶ್ರೀ ಭೂಪಾಲ ನಾರಿಗೊಂಡ, ವಯಸ್ಸು-೭೧, ಸಂದರ್ಶನ ದಿನಾಂಕ: ೦೧-೧೧-೨೦೧೪, ತೇರದಾಳ.

೧೪. ಹನ್ನೊಂದನೇ ಶತಮಾನದಲ್ಲಿ ಜೈನರು ಹಿಂದೂ ಧರ್ಮದ ಗಣೇಶನನ್ನು ಸ್ವೀಕರಿಸಿ ಆರಾಧಿಸತೊಡಗಿದರು ಎಂದು ಶ್ರೀ ಮಾರುತೀ ನಂದನ ಪ್ರಸಾದ ತಿವಾರಿಯವರು ತಮ್ಮ ಒಂದು ಲೇಖನದಲ್ಲಿ ಬರೆದಿದ್ದಾರೆ. ಒರಿಸ್ಸಾದ ರಾಜಧಾನಿ ಭುವನೇಶ್ವರಕ್ಕೆ ಸಮೀಪದ ಉದಯಗಿರಿ, ಖಂಡಗಿರಿ ಗುಹೆಗಳಲ್ಲಿ ಗಣೇಶ ಶಿಲ್ಪವನ್ನು ಕಾಣಬಹುದು. "ಗಣೇಶ-ಜೈನ ಸಾಹಿತ್ಯ ಔರ್ ಶಿಲ್ಪಮೆ" ಮಾರುತೀನಂದನ ಪ್ರಸಾದ ತಿವಾರಿ 'ನವನೀತ' ಹಿಂದಿ

ಮಾಸಪತ್ರಿಕೆ, ಜನವರಿ ೧೯೭೮. ಈ ಲೇಖನದ ಅನುವಾದ ಮೇ ೧೯೭೮ರ ಪ್ರಸ್ತುತ ಪ್ರಪಂಚದಲ್ಲಿ ಪ್ರಕಟವಾಗಿದೆ. ಅನುವಾದ ಮಂಜುಳಾ ಸುಂದರ್ ರಾಜ್.

೧೫. ಡಾ. ಎಸ್.ಪಿ. ಪದ್ಮಪ್ರಸಾದ್, ಜೈನ ಜನಪದ ಸಾಹಿತ್ಯ ಸಂಪಾದನೆ ಮತ್ತು ಅಧ್ಯಯನ, ೧೯೮೭, ಪುಟ-೩೧೭.

೧೬. ಶ್ರೀ ಚಿದಂಬರ ಶೇಷಪ್ಪ ಕಮ್ಮಾರ, ವಯಸ್ಸು-೪೨, ಸಂದರ್ಶನ ದಿನಾಂಕ: ೧೫-೧೧-೨೦೧೫, ಕೋಡ.

೧೭. ಶ್ರೀ ರಂಗಪ್ಪಯ್ಯ ನಾಗಪ್ಪಯ್ಯ ದೇಶಪಾಂಡೆ, ವಯಸ್ಸು-೭೦, ಸಂದರ್ಶನ ದಿನಾಂಕ: ೧೦-೦೧-೨೦೧೫, ಮುಳಗುಂದ.

೧೮. ಶ್ರೀ ನಾಗರಾಜ ರಂಗಪ್ಪಯ್ಯ ದೇಶಪಾಂಡೆ, ವಯಸ್ಸು-೩೫, ಸಂದರ್ಶನ ದಿನಾಂಕ: ೧೦-೦೧-೨೦೧೫, ಮುಳಗುಂದ.

## ಅಧ್ಯಾಯ–ಏಳು

# ಮತಾಂತರವಾದ ಜೈನ ವಾಡೆಗಳು

೭.೧ ಧಾರ್ಮಿಕ ದಾಳಿಗೊಳಗಾದ ಜೈನ ಧರ್ಮ.

೭.೨ ಜೈನರ ಮತಾಂತರ ಪ್ರಕ್ರಿಯೆ.

೭.೩ ಮತಾಂತರವಾದ ಜೈನ ವಾಡೆಗಳು.

## ಅಧ್ಯಾಯ–ಏಳು

# ಮತಾಂತರವಾದ ಜೈನ ವಾಡೆಗಳು

ಕರ್ನಾಟಕದಲ್ಲಿ ಹತ್ತನೆಯ ಶತಮಾನ ಜೈನಧರ್ಮದ ಉಚ್ಛ್ರಾಯ ಕಾಲ. ಈ ಹಂತದವರೆಗೂ ರಾಜಧರ್ಮ ಮತ್ತು ಪ್ರಜಾಧರ್ಮವಾಗಿ ಜೈನಧರ್ಮವು ತನ್ನ ಧಾರ್ಮಿಕ, ರಾಜಕೀಯ, ಸಾಂಸ್ಕೃತಿಕ ರೆಂಬೆ ಕೊಂಬೆಗಳನ್ನು ವಿಸ್ತಾರವಾಗಿ ಚಾಚಿಕೊಂಡಿತ್ತು. ತನ್ನ ಸಂಸ್ಕೃತಿಯ ಮೂಲಸೆಲೆಗಳನ್ನು ಪಸರಿಸಿದ ಜಿನಧರ್ಮ; ಅನೇಕ ಶ್ರದ್ಧಾ ಕೇಂದ್ರಗಳನ್ನು ಸ್ಥಾಪಿಸಿದ್ದು ಈ ಅವಧಿಯಲ್ಲಿಯೇ ಶ್ರವಣಬೆಳಗೊಳ, ಕೊಪ್ಪಳ ಮುಂಚೂಣಿಯ ಶ್ರದ್ಧಾಕೇಂದ್ರಗಳಾದರೆ, ಬಂಕಾಪುರ, ಲಕ್ಕುಂಡಿ, ಲಕ್ಷ್ಮೇಶ್ವರ, ಮುಳುಗುಂದ ಇತ್ಯಾದಿಗಳು ಪ್ರಾದೇಶಿಕ ಶ್ರದ್ಧಾಕೇಂದ್ರಗಳಾಗಿದ್ದುವು.

ಹನ್ನೆರಡನೆಯ ಶತಮಾನದ ಹೊತ್ತಿಗೆ ಜೈನಧರ್ಮದ ಔನತ್ಯ ಕುಂದಿತು. ಹೊಳಪನ್ನೂ ಕಳೆದುಕೊಂಡಿತು. ಹೊಳಪು ಎಂದರೆ ಮೂಲ ಧಾರ್ಮಿಕ ಹೊಳಪಲ್ಲ; ಜನಮಾನಸದಲ್ಲಿ ಬಳಕೆಯಲ್ಲಿದ್ದ ಹೊಳಪು ಎಂದರ್ಥ. ಈ ಕ್ರಿಯೆಗೆ ಬಹುಮುಖ್ಯ ಕಾರಣ ಧಾರ್ಮಿಕ ಸ್ಥಿತ್ಯಂತರಗಳು. ಒಂದು ಕಡೆ ರಾಮಾನುಜಾಚಾರ್ಯರ ವೈಷ್ಣವ ಧರ್ಮದ ತದನಂತರ ವಚನಕಾರರ ಸಮಾಜೋ–ಧಾರ್ಮಿಕ ಕ್ರಾಂತಿ, ಪ್ರಭಾವ, ಏಕಾಂತರಾಮಯ್ಯ, ವೀರಗೊಗ್ಗಿದೇವ, ವೀರಮಾಹೇಶ್ವರರು ಮುಂತಾದ ಧರ್ಮನಿಷ್ಠರ ದಾಳಿಗಳು, ಧರ್ಮಪರಾಕಾಷ್ಠೆಯ ಕವಿಗಳ ಕೃತಿಗಳು ಈ ಎಲ್ಲ ಕಾರಣದಿಂದಾಗಿ ಕರ್ನಾಟಕದಲ್ಲಿ ಜೈನಧರ್ಮದ ಪ್ರಭಾವ ತಗ್ಗಿತು. ಜೊತೆಗೆ ಸಾಕಷ್ಟು ಜನ ಮತಾಂತರದ ಪ್ರಭಾವಕ್ಕೆ ಸಿಲುಕಿದರು, ಆದರೆ ಜೈನಧರ್ಮದ ಅಸ್ಮಿತೆ ಮಾತ್ರ ಕುಗ್ಗಲಿಲ್ಲ. ಮತಾಂತರದ ಪ್ರಕ್ರಿಯೆ ೧೨–೧೩ನೆಯ ಶತಮಾನದಲ್ಲಿ ರಭಸವಾಗಿತ್ತು. ಆ ರಭಸದ ಅಲೆಗಳ ದೂರ ೧೬ನೆಯ ಶತಮಾನದವರೆಗೂ ಕ್ರಮಿಸಿದಂತೆ ಕಾಣುತ್ತವೆ. ಈ ಅಲೆಗಳ ಅಪ್ಪಳಿಕೆಯೆ ಕರ್ನಾಟಕದಲ್ಲಿದ್ದ ಸಾಕಷ್ಟು ಜೈನ ದೇಸಗತಿ ಮನೆತನಗಳ ಮತಾಂತರಕ್ಕೆ ಕಾರಣವಾಯ್ತು. ಜೈನಧರ್ಮದ ದೇಸಗತಿ ಮನೆತನಗಳು ವೀರಶೈವ ದೇಸಗತಿಗಳಾದದ್ದು ಆ ಧರ್ಮದ ಪ್ರಭಾವದ ರಭಸದಿಂದಲೆ.

### ೭.೧ ಧಾರ್ಮಿಕ ದಾಳಿಗೊಳಗಾದ ಜೈನಧರ್ಮ

ಬಸವಾದಿ ಶರಣರ ವಚನಕ್ರಾಂತಿ ಕರ್ನಾಟಕದ ಇತಿಹಾಸ ಮತ್ತು ಸಾಹಿತ್ಯದಲ್ಲಿ ಒಂದು ದೊಡ್ಡ ಮೈಲುಗಲ್ಲು. ಶರಣರ ಧಾರ್ಮಿಕ ಆಚರಣೆಗಳಾದ ಇಷ್ಟಲಿಂಗದ ಕಲ್ಪನೆ, ಶುದ್ಧಾತ್ಮನೆ ದೇವ, ಜಂಗಮ, ಧರ್ಮಸಮಾನತೆ ಜೊತೆಗೆ 'ಕಾಯಕವೇ ಕೈಲಾಸ' 'ದೇಹ–ದೇಗುಲ' 'ದಾಸೋಹ' ಮುಂತಾದ ಸರಳ ಆಚರಣೆಗಳು ಬಹುಜನರ ಆಕರ್ಷಣೆಗೆ ಕಾರಣವಾದುವು. ಈ ಎಲ್ಲ ಅಂಶಗಳೂ ವೀರಶೈವ ಧರ್ಮಕ್ಕೆ ನವನಾವೀನ್ಯತೆಯನ್ನು ತಂದುಕೊಟ್ಟವು. ಈ ನಾವೀನ್ಯತೆ

ಕರ್ನಾಟಕದಲ್ಲಿ ಮತ್ತೇ ವೀರಶೈವ ಧರ್ಮಕ್ಕೆ ಆನೆಬಲವನ್ನು ತಂದುಕೊಟ್ಟಿತು. ಸಾಕಷ್ಟು ಜನ ಈ ಧರ್ಮವನ್ನು ಒಪ್ಪಿದರು, ಅಪ್ಪಿದರು. ಶರಣರ ಆದರ್ಶಮಯ ಜೀವನವೂ ಸಾಕಷ್ಟು ಅನುಯಾಯಿಗಳಿಗೆ ಮಹಾಮಾರ್ಗವಾಗಿ ತೋರಿತು. ಶರಣೋತ್ತರ ಕಾಲದಲ್ಲಿ ಶರಣರು ದೈವದಂತೆ ಕಂಡರು. ಅವರ ಮೌಲ್ಯಗಳು ಕಾವ್ಯವಾದವು, ಕಥೆಗಳಾದವು "ಕ್ರಿ.ಶ. ಸುಮಾರು ೧೨ನೆಯ ಶತಮಾನದಿಂದೀಚೆಗೆ ಹಲವು ಶೈವ-ವೀರಶೈವ ಕವಿಗಳು ತಮ್ಮ ಪುರಾಣಾದಿ ಕೃತಿ ಕಾವ್ಯಗಳಲ್ಲಿ ಶಿವಭಕ್ತಿ ಶಿವಧರ್ಮದ ಮಾರ್ಗದಲ್ಲಿ ನಡೆದು ಶಿವಪದವನ್ನು ಪಡೆದು ಮಾನವ ಜನ್ಮದ ಸಾರ್ಥಕ್ಯವನ್ನು ಮಾಡಿಕೊಂಡ ಪುರಾತನ-ನೂತನ ಗಣಗಳ (ಶಿವಶರಣರು) ಮೂಲಕ ಭಕ್ತಿ ಮತ್ತು ಶಿವಪಾರಮ್ಯವನ್ನು ಬಲವಾಗಿ ಪ್ರತಿಪಾದಿಸುತ್ತ ಬಂದಿದ್ದಾರೆ"[೧]

"ಪ್ರಾರಂಭದಲ್ಲಿ ತಮ್ಮ ಧರ್ಮದ ಪ್ರಚಾರಕ್ಕಾಗಿ ಶಿವಶರಣರ ಆದರ್ಶಮಯ ಜೀವನವನ್ನು ಚಾರಿತ್ರರೂಪದ ರಚನೆಯತ್ತ ತೊಡಗಿದರು. ಕ್ರಮೇಣ ರಾಜಕೀಯ, ಸಾಮಾಜಿಕ, ಸಾಂಸ್ಕೃತಿಕವಾಗಿ ಪ್ರಬಲರಾಗುವತ್ತ ಗಮನ ಹರಿಸಿ, ಪರಮತ ಖಂಡನೆ ಮತ್ತು ಸ್ವಮತ ಪ್ರತಿಷ್ಠಾಪನೆಯನ್ನು ತಮ್ಮ ಪುರಾಣಗಳ ಅವಿಭಾಜ್ಯ ಅಂಗವನ್ನಾಗಿಸಿಕೊಂಡರು. ವೀರಮಾಹೇಶ್ವರ ನಿಷ್ಠೆಯ ಕೆಲವರು ತಮ್ಮ ಪುರಾಣಗಳಾದಿ ಕೃತಿ-ಕಾವ್ಯಗಳಲ್ಲಿ ಹಲವು ಪಾತ್ರಗಳ ಮುಖೇನ ಜೈನರೊಂದಿಗೆ ಸಂವಾದಕ್ಕಿಳಿದಿರುವುದು ಗೋಚರಿಸುತ್ತದೆ."[೨] ಹರಿಹರನ ಆದಯ್ಯನ ರಗಳೆ; ರಾಘವಾಂಕನ ಸೋಮನಾಥ ಚಾರಿತ್ರದಲ್ಲಿ ಆದಯ್ಯನ ಪಾತ್ರದ ಮೂಲಕ ಶಿವಪಾರಮ್ಯವನ್ನು ಸಾರಿದ್ದು ಈ ನಿದರ್ಶನಕ್ಕೆ ಸ್ಪಷ್ಟ ಉದಾಹರಣೆ. ಸೌರಾಷ್ಟ್ರದ ಶಿವಭಕ್ತ ಆದಯ್ಯ ವ್ಯಾಪಾರದ ನಿಮಿತ್ತ ಪುಲಿಗೆರೆ ಬಂದು, ಇಲ್ಲಿಯ ಜೈನ ಪಾರಿಸಸೆಟ್ಟಿಯ ಮಗಳು ಪದ್ಮಾವತಿಯನ್ನು ಮೋಹಿಸಿ ಮದುವೆಯಾಗಿ ಅವಳಿಗೆ ಹೋಜೇಶ್ವರ ದೇವಾಲಯದಲ್ಲಿ ಶಿವದೀಕ್ಷೆ ಸ್ವೀಕರಿಸುವಂತೆ ಮಾಡಿದ. ಆದಯ್ಯನಿಗೂ ಮತ್ತು ಅವನ ಮಾವನಿಗೂ ಸ್ವಮತದ ಭಿನ್ನಾಭಿಪ್ರಾಯ ಮೂಡಿ, ಮಾವನು ಆದಯ್ಯನಿಗೆ ನಿನ್ನ ಕುಲದೇವರನ್ನು ಹುಲಿಗೆರೆಯ ಸುರಹೊನ್ನೆಯ ಬಸದಿಯಲ್ಲಿ ಸ್ಥಾಪಿಸಿ ಊಟಮಾಡು ಎಂದಾಗ, ಆದಯ್ಯ ಸೌರಾಷ್ಟ್ರದಿಂದ ಸೋಮೇಶ್ವರನನ್ನು ತಂದು ಸುರಹೊನ್ನೆಯಲ್ಲಿದ್ದ ಜಿನಬಿಂಬವನ್ನು ಕಿತ್ತು ಸೋಮನಾಥನನ್ನು ಪ್ರತಿಷ್ಠಾಪಿಸಿದನು. ಜೊತೆಗೆ ಸಾವಿರಾರು "ಜೈನರನ್ನು ಸಂಹರಿಸಿ ಶಿವಮತದ ಶ್ರೇಷ್ಠತೆಯನ್ನು ಸಾರಿದನು"[೩] ಆದಯ್ಯನ ರೀತಿ ಶಿವ ಧರ್ಮದ ಅನನ್ಯತೆ ಸಾರುವಲ್ಲಿ ಜೈನಧರ್ಮಿಯರ ಮೇಲೆ ದಾಳಿ ಮಾಡಿದವರಲ್ಲಿ ಏಕಾಂತರಾಮಯ್ಯ, ವೀರ ಗೊಗ್ಗಿದೇವ, ವೀರ ಮಾಹೇಶ್ವರರು ಪ್ರಮುಖರಾಗಿ ನಿಲ್ಲುತ್ತಾರೆ.

### ವೀರ ಗೊಗ್ಗಿದೇವ (ಗೊಗ್ಗರಸ)

ಅಣ್ಣಿಗೇರಿಯ ಪುರದ ವೀರಪ್ಪ ದೇವಾಲಯದಲ್ಲಿ ಚಾಲುಕ್ಯ ಚಕ್ರವರ್ತಿ ನಾಲ್ಕನೆಯ ಸೋಮೇಶ್ವರನ ಕಾಲದ (ಕ್ರಿ.ಶ. ೧೧೮೪) ಶಾಸನವೊಂದಿದೆ. ಇದರಲ್ಲಿ ಅಣ್ಣಿಗೇರಿಯ ಉಗ್ರ ಶಿವಭಕ್ತನಾದ ಗೊಗ್ಗರಸನ ಪ್ರಸ್ತಾಪವಿದೆ. ಇವನು ಜೈನ ಧರ್ಮದ ಪ್ರಬಲ ವಿರೋಧಿಯಾಗಿದ್ದ

ಎನ್ನುವುದಕ್ಕೆ ಅವನಿಗೆ ಬಳಕೆಯಾದ ಅತಿಶಯ ವಿಶೇಷಣಗಳೆ ಕಾರಣ. ಜೈನ ಎಂಬ ಮೃಗದ ಬೇಟೆಗಾರ, ಜೈನ ಧರ್ಮದ ಆಗಮಗಳಿಗೆ ಧೂಮಕೇತು, ಜೈನ ಧರ್ಮಕ್ಕೆ ಕೊಡಲಿ ಪೆಟ್ಟುಕೊಟ್ಟವನು, ಜೈನರಿಗೆ ಸರ್ಪದಂತೆ ಕಾಡಿದವನು, ಜೈನರಿಗೆ ಅಂತ್ಯ ಕಾಣಿಸಿದವನು ಎಂದು ಪ್ರಸಿದ್ಧಿಯನ್ನು ಪಡೆದಿದ್ದ ಗೊಗ್ಗರಸ. ಕವಿ ಮಾತುಗಳಲ್ಲೆ ಗಮನಿಸುವುದಾದರೆ

ಜಯಿನಮ್ರಿಗ ಬೇಂಟ್ಟೆಕಾರಂ
ಜಯಿನಾಗಮ ಧೂಮಕೇತು ಜಯಿನ ಕು[ಠಾ]ರಂ
ಜಯಿನಫಣಿ ವಯಿನತೇಯಂ
ಜಯಿನಾನ್ತಕನೆನಿಸಿ ನೆಗಳ್ದನೀ ಗೊಗ್ಗರಸ.[೪]

ಧಾರ್ಮಿಕ ಪರಾಕಾಷ್ಠೆಯ ಅತಿಶಯನೆನಿಸಿದ್ದ ಗೊಗ್ಗರಸ ಬಸದಿಯನ್ನೂ ಹಾಳುಮಾಡಿ ಇಕ್ಕಿ ಮೆಟ್ಟಿದ ಎಂಬ ಪ್ರಶಸ್ತಿಯೂ ಇದೇ ಶಾಸನದಲ್ಲಿ ವರ್ಣಿತವಾಗಿದೆ.

ಅಗ್ಗದ ಘಟಾಂತಿಕೆಯಂ ಅದ
ನುರ್ಗ್ಗಾಗಿರೆಯೊಡೆದು ಕಳೆದು ಜಿನನಂ ತಾಗಲೆ
ದುರ್ಗ್ಗತೆಯೊಳಿಕ್ಕೆ ಮೆಟ್ಟಿದ
ಗೊಗ್ಗರಸಾಗ್ರಣಿ ಕೊಮಾರ ಅಹವಧೀರಂ[೫]

**ಅಸಂಖ್ಯಾತ ಗಣ**

ತಾಳಿಕೋಟೆಯ ಕೋಟೆಯಲ್ಲಿರುವ ತ್ರುಟಿತ ಒಂದು ಶಾಸನದಲ್ಲಿ ವೀರ ಅಸಂಖ್ಯಾತಗಣಗಳ ಪ್ರಸ್ತಾಪ ಬರುತ್ತದೆ. ಹೆಸರೆ ಹೇಳುವಂತೆ ಇವರು ಮಹೇಶ್ವರನ ಪರಮ ಭಕ್ತರಾಗಿದ್ದು, ಉಗ್ರ ಭಕ್ತಿಯನ್ನು ಹೊಂದಿದ್ದರು. ಈ ಶಾಸನ ಚಾಲುಕ್ಯ ಚಕ್ರವರ್ತಿ ನಾಲ್ಕನೆಯ ಸೋಮೇಶ್ವರನ ಕಾಲದ್ದಾಗಿದ್ದು ಕ್ರಿ.ಶ. ೧೧೮೪ರಲ್ಲಿ ರಚನೆಯಾಗಿದೆ. ಈ ಶಾಸನದಲ್ಲಿ ಪುರಾತನ ನೂತನರೆನಿಸಿದ ಅಸಂಖ್ಯಾತಗಣದವರು (ಶಿವಗಣ) ಜಿನಧರ್ಮ ದಹನದಂತಿರುವರು, ಬೌದ್ಧಧರ್ಮ ವಿಧ್ವಂಸನ ಪ್ರವೀಣರೂ ಮುಂತಾಗಿ ಸಾಕಷ್ಟು ಕಡೆಗಳಲ್ಲಿರುವ ಜೈನರ ಬಸದಿಗಳನ್ನು ಹೊಸೆದು ಮುಕ್ಕಿ ಅಲ್ಲಿ ಶಿವಲಿಂಗವನ್ನು ಪ್ರತಿಷ್ಠಾಪಿಸಿದರು ಎಂಬುದನ್ನು ಉಲ್ಲೇಖಿಸಲಾಗಿದೆ.

೧. ದಿಂ ಮುರಿವರುಂ ಪರಸಮಯ ಗಿರಿವಜ್ರದಂಡರುಂ ಜಗ
೨. ಡರುಂ ಜಿನಸಮಯವನ ದಹನದಾವಾನಳರುಂ ಮುನಿದರ್ಗ್ಗೆ
೩. ಹಾಳಾಹಳರುಂ ಬೌದ್ಧಸಮಯ ವಿಧ್ವಂಸನ ಪ್ರವೀಣರುಂ ಬಗೆ

೪. ಯಲು ಜಾಣರುಂ ಅನ್ಯಸಮಯಿಗಳ ಬೆನ್ನಬಾರ ನೆತ್ತುವರುಂ ಸೆ
೫. ಣಸುವರ ನೆತ್ತರಂ ಮರಳ್ಗಳಿಂ ಕುಡಿಸುವರುಂ ಪರಸಮಯ
೬. ಘರಟ್ಟರುಂ ವೀರಕು [ಪ್ಪ]ರವಟ್ಟರುಂ ಕಾಲನ ನಾಲಗೆಯಂ ಕೀಳ್ವರುಂ
೭. [ಬಾರಿಯಂ ಕೂರದರ್ಗ್ಗಿವರುಂ ನಂಜನಂಜದುಂಬರುಂ
೮. . . . . . . . . . . . . . . . . . . . . . . . . . . . . . .
೯. . . . . . . . . . . . . . . . . . . . . . . . . . . . . . .
೧೦. . . . . . . . . . . . . . . . . . . . . . . . . . . . . . .
೧೧. . . . . . . . . . . . . . . . . . . . . . . . . . . . . . .
೧೨. . . . . . . . . . . . . . . . . . . . . . . . . . . . . . .
೧೩. ಲೆ ಗಂಡರುಂ ಪರಿಯಳಿಗೆ ಅಣಿಲೆವಾಡ ಉಣಕಲ್ಲು ಸಂ
೧೪. ಪಗಾವಿ ಅಬ್ಬಲೂರು ಮಾರುಡಿಗೆ ಅಣಂಪೂರು ಕರಹಾಡ ಕೆಂ
೧೫. ಬಾವಿ ಬಮ್ಮುಕೂರು ಮೊದಲಾಗಿ ಅನನ್ತದೇಶ ದೇಶಾನ್ತರದಲಿದಿ
೧೬. ರಾದ ಪರಸಮಯಿಗಳಂ ಪಡಲ್ಪಡ್ಸಿ ಲೋಕಮನಾಕಂಪಂ ಗೊ
೧೭. ಳಿ ಬಸದಿಗಳಿಂ ಹೊಸೆದು ಮುಕ್ಕಿ ಶಿವಲಿಂಗ ಸಿಂಹಾನಸಮಂ
೧೮. ಣ್ಗೊಳ್ಸಿ ಚಲಮಂ ಮೆರೆದು ಧೀರರೊಳು ಸೆರೆದು ಸ್ವರ್ಗ್ಗಮರ್ತ್ಯ
೧೯. ಪಾತಾಳದೊಳನಂಗಾರಿಯ ಹೆಮ್ಮೆಯ್ಮಂ ತಮ್ಮ ಭ್ರಿ
೨೦. ತ್ಯಾಚಾರದ ತೊಮ್ಮೆಯ್ಮಂ ತಳದಲಿಕ್ಕಿ ತೋರ್ಪ್ಪನ್ತ ತೋರಿದ ಪುರಾತ
೨೧. ನನೂತನರೆನಿಸಿದ ಅಸಂಖ್ಯಾತಗಣಂಗಳ ನಾಮಾದಿ ಸ
೨೨. ಮಸ್ತ ಪ್ರಶಸ್ತಿ ಸಹಿತಂ।

ಪರಿಯಳಿಗೆ, ಅಣಿಲೆವಾಡ, ಉಣಕಲ್ಲು, ಸಂಪಗಾವಿ, ಅಬಲೂರು, ಮಾರುಡಿಗೆ ಅಣಂಪೂರು, ಕರಹಾಡ, ಕೆಂಬಾವಿ, ಬಮ್ಮುಕೂರು ಹತ್ತು ಊರುಗಳಲ್ಲಿದ್ದ ಬಸದಿಗಳನ್ನು ಇನ್ನೂ ಸಾಕಷ್ಟು ಊರುಗಳಲ್ಲಿದ್ದ ಬಸದಿಗಳನ್ನು ನಾಶಮಾಡಿದ ಉಲ್ಲೇಖ ಮತ್ತು ಆ ಬಸದಿಗಳಲ್ಲಿ ಶಿವಲಿಂಗಗಳನ್ನು ಪ್ರತಿಷ್ಠಾಪಿಸಿದ ಮಾಹಿತಿ ಈ ಶಾಸನದಲ್ಲಿ ಲಭ್ಯವಾಗುತ್ತದೆ.

**ಏಕಾಂತ ರಾಮಯ್ಯ**

ಇಂದಿಗೂ ಹಾವೇರಿ ಜಿಲ್ಲೆ, ಹಿರೇಕೆರೂರು ತಾಲ್ಲೂಕಿನ ಅಬಲೂರಿಗೆ ಹೋಗಿ ಯಾರನ್ನಾದರೂ ಊರಿನ ವಿಶೇಷತೆ ಏನು? ಎಂದಾಗ ಅವರು ಹೇಳುವುದು ಏಕಾಂತರಾಮಯ್ಯ ದೇವರ ಬಗ್ಗೆ. "ಏಕಾಂತರಾಮಯ್ಯ ಶಿವನ ಮಗನು, ಜೈನರ ಉಪಟಳ ಹೆಚ್ಚಾದಾಗ ತನ್ನ ತಲೆಯನ್ನು ಕಡಿದುಕೊಂಡು ಶಿರಸ್ಸು ಪವಾಡ ಮಾಡಿ, ಕಡಿದ ತಲೆಯನ್ನು ಮತ್ತೇ ಹಚ್ಚಿಕೊಂಡು

ಜೀವಂತವಾಗಿ ಬಂದು ಜೈನರನ್ನು ಸೋಲಿಸಿದ. ಅಲ್ಲದೇ ಇಲ್ಲಿದ್ದ ಬಸದಿಯನ್ನು, ಜಿನ ಮೂರ್ತಿಗಳನ್ನು ನಾಶ ಮಾಡಿದ, ಜೊತೆಗೆ ಮತ್ತೆ ವೀರಶೈವ ಧರ್ಮ ತಲೆಯೆತ್ತುವಂತೆ ಮಾಡಿದ" ಎಂಬ ಮಾತುಗಳು ಜನಜಿತವಾಗಿವೆ.

ಏಕಾಂತರಾಮಯ್ಯ ಒಬ್ಬ ಮಹಾನ್ ಶಿವಭಕ್ತ. ಅವನ ಕಾಲದಲ್ಲಿ ಜೈನರ ಪ್ರಾಬಲ್ಯವಿತ್ತು. ಅದನ್ನು ಸಹಿಸದ ಏಕಾಂತರಾಮಯ್ಯ ಅವರನ್ನು ಸೋಲಿಸಬೇಕು ಎಂದು ಪಣತೊಟ್ಟು ತನ್ನ ಹುಟ್ಟೂರಾದ ಆಳಂದೆಯಿಂದ ಅಬ್ಬಲೂರಿಗೆ ಬರುತ್ತಾನೆ. ಊರತುಂಬ ಜೈನರಿದ್ದು ಬ್ರಹ್ಮೇಶ್ವರ ದೇವಾಲಯ ಅಲಕ್ಷೆಗೊಳಗಾಗಿದ್ದನ್ನು ಕಂಡು ದುಃಖಿಸುತ್ತಾನೆ. ನಂತರ ಇವನಿಗೂ ಜೈನ ಅಧಿಕಾರಿಯಾದ ಸಂಕಗೌಂಡನಿಗೂ ಮತ್ತು ಜೈನರಿಗೆ ತಮ್ಮ ತಮ್ಮ ದೈವಗಳ ಶ್ರೇಷ್ಠತೆಯ ಪರಾಕಾಷ್ಠೆಯ ಗುಣಗಾನಗಳು ನಡೆಯುತ್ತವೆ. ಆವಾಗ ಜೈನರು ಏಕಾಂತರಾಮಯ್ಯನ ಕುರುತಾಗಿ "ನಿಮ್ಮಯ ಸಿ (ಶೀ)ರಮಂ ಜನಮರುಯಲರಿದು ಕೊಟ್ಟಾತನೊಳಿಂ ಪಡೆ ನೀನೆ ಭಕ್ತನಾತನೇ ದೇವಂ ಎನಲೇಕಾಂತದ ರಾಮಂ ಮನಸಿಜರಿಪುಗಿತ್ತು ತಲೆಯ ನಾಂ ಪಡೆದರೆ ನೀವೆನಗೀವ ಪಣಮದೇನೆನೆ ಮುನಿದೆಂದರ್ಜ್ಜಿನನ ಕಿತ್ತು ಶಿವನಂ ನಿಲಿಪೆವು"[೭] ಎಂಬ ನಿಲುವುಗಳು ವ್ಯಕ್ತವಾದವು. ರಾಮಯ್ಯ ತಾನು ಹೇಳಿದಂತೆ ತಲೆ ಕಡಿದುಕೊಂಡು ಮರಳಿ ಪಡೆದ. ನಂತರ ಅಲ್ಲಿರುವ ಬಸದಿಯನ್ನು ಜಿನಬಿಂಬಗಳನ್ನೂ ನಾಶಮಾಡಿದ.

ಬಡಿಗೊಂಡರ್ಬನೆ ಸೊಕ್ಕಿ ಬಾಳೆವನಮಂ ಕಾಡಾನೆ ಪೊಕ್ಕಂತಿರು
ಕ್ಕಡಗಲು ಕಾಪಿನ ವೀರರಂ ತುರಗಮಂ ಸಾಮಂತರಂ ತೂಳ್ದು ಮಾಮ
ರ್ಪಡೆಗಳು ಜೈನರ ಮಾರಿಬಂದುದೆನುತುಂ ಬೆಂಗೊಟ್ಟು ಪೋಗಲು ಜಿನಂ
ಕೆಡೆವನ್ನಂಬಡದಲ್ಲಿ ಕೈಕೊಳಿಸಿದ ಶ್ರೀ ವೀರಸೋಮೇಶನಂ.[೮]

ಬಾಳೆವನದಂತೆ ಜೈನರಿಂದ ತುಂಬಿತುಳುಕುತ್ತಿದ ಅಬ್ಬಲೂರಿನಲ್ಲಿ ಏಕಾಂತರಾಮಯ್ಯ ಕಾಡಾನೆ ಹೊಕ್ಕಂತೆ ಹೊಕ್ಕು ಅಲ್ಲಿರುವ ಎಲ್ಲ ಅರಸೊತ್ತಿಗೆ ಪ್ರತಿನಿಧಿಗಳನ್ನು ಜೈನರನ್ನೂ ತೂಳ್ದು, ಜಿನಬಿಂಬವನ್ನು ನಾಶಮಾಡಿ ವೀರಸೋಮೇಶ್ವರನನ್ನು ಸ್ಥಾಪನೆಗೊಳಿಸಿದ. ಹೀಗೆ ಜಿನಬಿಂಬವನ್ನು ನಾಶಮಾಡದಿರು ಎಂದು ಅಂಗಲಾಚಿದರೂ ಏಕಾಂತರಾಮಯ್ಯ ಕೇಳಲಿಲ್ಲ.

ಬೆರಗಾಗಿ ಜೈನರೆಲ್ಲಂ ಮರುಗಿ ಜಿನಪ್ರಳಯವೆಂಬುದಂ
ಮಾಡದಿರಿನ್ನೆಡರ್ಗಿ ಕಾಲ್ವಿಡಿಯೆ ಮಾಣದೆ ಬಲಿಸಿಡಿಲಂತೆರಗಿ
ಜಿನನ ತಲೆಯಂ ಮುರಿದಂ[೯]

ಇದಷ್ಟೇ ಅಲ್ಲದೇ ಅಬ್ಬಲೂರಿನಲ್ಲಿರುವ ಸೋಮೇಶ್ವರ ದೇವಾಲಯದ ತೆರೆದ ನವರಂಗ ಮಂಟಪದ ಹೊರಭಿತ್ತಿಯಲ್ಲಿ ಜೈನರಿಗೂ–ಏಕಾಂತರಾಮಯ್ಯನಿಗೂ ಧಾರ್ಮಿಕ ಯುದ್ಧ ನಡೆಯುವ ಉಬ್ಬು ಶಿಲ್ಪಗಳಿವೆ. ಇದರಲ್ಲಿ ಏಕಾಂತರಾಮಯ್ಯ ಜಿನನನ್ನು ಒಡೆಯುವಾಗ, ಯುದ್ಧ ಮಾಡುವಾಗ ಜಿನಮುನಿಗಳು ಈ ಕೃತ್ಯವನ್ನು ಮಾಡಬೇಡ ಎಂದು ಬೇಡಿಕೊಳ್ಳುವ ದೃಶ್ಯಗಳಿವೆ ಆದರೂ ಏಕಾಂತರಾಮಯ್ಯ ತನ್ನ ಕಾರ್ಯವನ್ನು ಸ್ಥಗಿತಗೊಳಿಸುವುದಿಲ್ಲ. ಜಿನ ಬಿಂಬಗಳನ್ನು ಒಡೆಯುವ, ಜೈನರನ್ನು ಸಾಯಿಸುವ ಉಬ್ಬು ಶಿಲ್ಪಗಳು ಈ ದೇವಾಲಯದಲ್ಲಿವೆ. ಏಕಾಂತರಾಮಯ್ಯನ ಈ ಕಾರ್ಯಕ್ಕೆ ಅರಸೊತ್ತಿಗೆಗೂ ಮೂಕ ಪ್ರೇಕ್ಷಕವಾದ ವಿವರಗಳು ಶಾಸನದಲ್ಲಿ ಲಭ್ಯವಿವೆ.

ಅಬಲೂರಿನಲ್ಲಿ ತುಂಬಿ ತುಳುಕುತ್ತಿದ್ದ ಜೈನರು ಏಕಾಂತರಾಮಯ್ಯನ ದಾಳಿಯ ನಂತರ ಎಲ್ಲಿ ಹೋದರು. ಬಹುಶ: ಹೊಡೆತ ತಾಳಲಾರದೆ, ಜೀವಭಯದಿಂದ ಅವರು ಮತಾಂತರವಾದಂತೆ ತೋರುತ್ತದೆ. ಈಗ ಒಬ್ಬರೂ ಇಲ್ಲಿ ಜೈನರಿಲ್ಲ. ಈ ಮತಾಂತರ ಪ್ರಕ್ರಿಯೆ ಬಲತ್ಕಾರದಿಂದ ಆಗಿದ್ದು, ಇಷ್ಟಪಟ್ಟಿದ್ದಲ್ಲ. ಅಬ್ಬಲೂರಿನಲ್ಲಿ ನಡೆದ ಈ ಘಟನೆ ಮುಂದೆ ಐತಿಹ್ಯವಾಗಿದ್ದು, ಕಾವ್ಯವಸ್ತುವಾದದು, ಚರಿತ್ರೆಯಾದುದು ಬಹುಶ: ಆ ಧರ್ಮದ ಪಾರಮ್ಯ ಸಾರಲು ಮಾಡಿದ ತಂತ್ರ.

ಏಕಾಂತ ರಾಮಯ್ಯನ ಕಥೆಯು ಹದಿನೇಳನೆಯ ಶತಮಾನದವರೆಗೂ ವಿವಿಧ ಕಾವ್ಯಗಳಲ್ಲಿ ಪ್ರಸರಣಗೊಂಡಿದ್ದು, ಶಿವಭಕ್ತೆಯ ತೀವ್ರತೆ, ಪರಾಕಾಷ್ಠೆಗಳನ್ನು ಹೆಚ್ಚಿಸುತ್ತದೆ. ಈ ಕಥೆಯು ಸಾಕಷ್ಟು ಕೃತಿಗಳಲ್ಲಿ ಕಂಡುಬರುತ್ತದೆ. ಅದರಲ್ಲಿ ಮುಖ್ಯವಾಗಿ

೧. ಅಬಲೂರು ಸೋಮೇಶ್ವರ ದೇವಾಲಯದ ಒಳಗಡೆ ಆನಿಸಿಟ್ಟ ಶಾಸನ.
೨. ಏಕಾಂತದ ರಾಮಯ್ಯನ ರಗಳೆ – ಹರಿಹರ.
೩. ಬಸವ ಪುರಾಣ – ಭೀಮಕವಿ
೪. ಶಿವತತ್ವ ಚಿಂತಾಮಣಿ – ಲಕ್ಕಣ್ಣ ದಂಡೇಶ
೫. ವೀರಶೈವಾಮೃತ ಪುರಾಣ – ಗುಬ್ಬಿಯ ಮಲ್ಲಣಾರ್ಯ
೬. ಪಾಲ್ಕುರಿಕೆ ಸೋಮೇಶ್ವರ ಪುರಾಣ – ವಿರಕ್ತ ತೋಂಟದಾರ್ಯ
೭. ಬಸವೇಶ್ವರ ಪುರಾಣದ ಕಥಾಸಾಗರ – ಬಸವಲಿಂಗ
೮. ವೃಷಭೇಂದ್ರ ವಿಜಯ – ಷಡಕ್ಷರಿ
೯. ಪ್ರಭುದೇವರ ಪುರಾಣ – ಹರೀಶ್ವರ
೧೦. ಭೈರವೇಶ್ವರ ಕಾವ್ಯ – ಶಾಂತಲಿಂಗ
೧೧. ತೆಲುಗು ಬಸವಪುರಾಣ – ಪಾಲ್ಕುರಿಕೆ ಸೋಮೇಶ್ವರ
೧೨. ಅಬ್ಬಲೂರು ಚರಿತೆ – ಶಾಂತನಿರಂಜನ

ಕೃತಿಗಳಲ್ಲಿ ಕಂಡುಬರುತ್ತದೆ. ಈ ಎಲ್ಲ ಕೃತಿಗಳು ಕಾಲ ಕಾಲಕ್ಕೆ ಏಕಾಂತರಾಮಯ್ಯನ ಕಥೆಯನ್ನು ಪಸರಿಸುತ್ತಾ ಶೈವ ಪ್ರಾಬಲ್ಯವನ್ನು ಮೆರೆಯುತ್ತಾ ಬಂದವು. ಈ ರೀತಿ ಶಿವಧರ್ಮದ ಪರಾಕಾಷ್ಠೆಯನ್ನು ಮತ್ತು ಏಕಾಂತರಾಮಯ್ಯನ ಶಿರಸ್ಸು ಪವಾಡದ ಪಾರಮ್ಯತೆಯನ್ನು ಸಾರುವ ಮೇಲಿನ ಎಲ್ಲ ಕೃತಿಗಳುಮೂಲ ಸೆಲೆ ಅಬ್ಬಲೂರಿನ ಏಕಾಂತರಾಮಯ್ಯನ ಶಾಸನ. ಈ ಕಥೆಯು ಅಬ್ಬಲೂರಿನಿಂದ ಸಂಚರಿಸಿ ನಾಡಿನಾದ್ಯಂತ ಹರಡಿ ಐತಿಹ್ಯವಾಯ್ತು. ಐತಿಹ್ಯ ಕವಿಗಳ ಕೈಗೆ ಸಿಕ್ಕಿ ರಸವತ್ತಾಗಿ ನಿರೂಪಣೆಯಾಯ್ತು. ಹರಿಹರ ಕವಿಯಂತೂ ಒಂದು ಹೆಜ್ಜೆ ಮುಂದೆ ಹೋಗಿ ಜಿನಮುನಿಗಳನ್ನು ಹೀನಾಯವಾಗಿ ವಿಡಂಬಿಸುತ್ತಾನೆ.

ಇಂತು ನೆರೆದಿರ್ದುದೊಂದೆಸೆಯೊಳಭವನ ಗಣಂ
ಮುಂತೆ ಮತ್ತೊಂದೆಸೆಗೆ ಸಾರ್ದು ಜೈನರ ಗಣಂ

ನೆರೆದು ಬರುತಿರ್ದುದು ಜಿನವ್ರತಿಗಳಲ್ಲಲ್ಲಿ
ಹರಿದು ಸಡಗರಿಸಿ ಸಾಲ್ವಿಡಿದು ಬರುತಲ್ಲಲ್ಲಿ.

ಕೆಯ್ಯ ಗುಂಡಿಗೆ ಮೋಟ ಕುಂಚದ ಹರಿದ ತಟ್ಟು
ಮೆಯ್ಯ ಗೇಣುದ್ದದ ಮಲಂ ಹರಿದ ತಲೆ ಕಟ್ಟು

ಮಿಂಚುದಲೆ ಹಡಿಕೆವಾಯ್ ಹಗೆ ಹಲ್ಲುಗಳ ಮೋರೆ
ಸಂಚಿಸಿದ ಹಲವು ಮಲವೆತ್ತು ಹೊಲಸುಂ ನಾರೆ

ಕುರುಡರುಂ ಕುಂಟರುಂ ಡಂಭರುಂ ಸೀತರುಂ
ಬರಡರುಂ ನಿಃಕರಡರುಂ ನಿಜದ ಹುಸಿಕರುಂ

ಕ್ಷುದ್ರರುಂ ವಚಾಳರುಂ ಕೆಟ್ಟ ಸವಣರುಂ
ನಿಧ್ರಯಿಂದೆದ್ದು ಬಂದಿತಿಪ್ಪ ಜಾಡ್ಯರುಂ

ಬತ್ತಲೆಗರುಂ ಬಡಕರುಂ ವೀತರಾಗರುಂ
ಕತ್ತಲಿಪ ಮುಖದ ಭಾಗ್ಯದ ಭೋಗಹೀನರುಂ

ಮುತ್ತ ಮುದನರಿಯಂತೆ ಬುಳ್ಳುಗರೆವರ್ ಕೆಲರು
ಕತ್ತೆಯೆಂತರುಚಿ ಕಾಳ್ಗೆಡೆವುತಿರ್ಪರ್ ಕೆಲರು

ಗೂಗೆಯಂತಿರೆ ಮಿಗೆ ಪಲುಂಬಿತಿರ್ಪರ್ ಕೆಲರು
ಕಾಗೆಯಂತಿರೆ ಕಾಕುಗಡೆಯುತಿರ್ಪರ್ ಕೆಲರು

ಉಮ್ಮಳಿಪ ಕಪಿಯಂತೆ ಸುಮ್ಮನಿರ್ಪರ್ ಕೆಲರು
ತಮ್ಮೊಳಕೆ ತಾವು ಗುಜುಗುಜುಗುಟ್ಟುವರ್ ಕೆಲರು[೧೧]

ಸವಣರ ಕಮಂಡಲ, ಪಿಂಛ, ಅನ್ಯೈರ್ಮಾಲ್ಯ, ಧ್ಯಾನ, ಮೌನ ಮುಂತಾದವುಗಳನ್ನು ಇಲ್ಲಿ ವಿಡಂಬಿಸಲಾಗಿದೆ. ಒಬ್ಬ ಕವಿಯ ವಯ್ಯುಕ್ತಿಕ ಅಭಿಪ್ರಾಯ ಮುಂದೆ ಸಮಾಜದ ಮೇಲೂ ಪರಿಣಾಮ ಬೀರಿರಲಿಕ್ಕೂ ಸಾಧ್ಯವಿದೆ. ಹೀಗೆ ವ್ಯಕ್ತಿಗಳಿಂದ, ವ್ಯಕ್ತಿಗಳ ಕೃತಿಗಳಿಂದ, ದೈಹಿಕ ಮತ್ತು ಮಾನಸಿಕ ಹಲ್ಲೆಗಳಿಂದ ಜೈನ ಧರ್ಮದ ಮೇಲೆ ಒಂದು ದೊಡ್ಡ ಪ್ರಹಾರವೇ ನಡೆಯಿತು. ಅಂತೆಯೇ ಜೈನಧರ್ಮ ೧೨ನೆಯ ಶತಮಾನದ ನಂತರ ಸಂಖ್ಯಾದೃಷ್ಟಿಯಿಂದ ಕ್ಷೀಣಿಸುತ್ತಾ ಹೋಯಿತು. ಆದರೆ ಇಷ್ಟೆಲ್ಲಾ ದಾಳಿಗೆ ಒಳಗಾದ ಜೈನಧರ್ಮ ತನ್ನ ಮೂಲ ಸಿದ್ಧಾಂತಗಳನ್ನೂ ಬದಲಿಸಿಕೊಳ್ಳದೆ ಇನ್ನೂ ಹಾಗೆ ಉಳಿದು ಬಂದಿರುವುದು ಆಶ್ಚರ್ಯದ ಸಂಗತಿ.

**೭.೨ ಜೈನರ ಮತಾಂತರ ಪ್ರಕ್ರಿಯೆ.**

ಮತಾಂತರ ಪ್ರಕ್ರಿಯೆ ಬಹುದಿಂದಿನಿಂದಲೂ ಬಂದಿದ್ದು. ಈಗಲೂ ನಡೆಯುತ್ತಿದೆ. ತಮ್ಮ ಧರ್ಮವೇ ಶ್ರೇಷ್ಠ ಎಂಬ ಧರ್ಮವಾದಿಗಳು ಮಾಡುವ ಕೆಲಸವಿದು. ಮತಾಂತರ ಪ್ರಕ್ರಿಯೆ ಸಾಮಾನ್ಯವಾಗಿ ಎರಡು ವಿಭಾಗವನ್ನಾಗಿ ಮಾಡಿಕೊಳ್ಳಬಹುದು. ಒಂದು ಬಲಾತ್ಕಾರದ ಮತಾಂತರ ಇನ್ನೊಂದು ಸ್ವಇಚ್ಛಾ ಮತಾಂತರ. ಹಾಗೆ ನೋಡಿದರೆ ಒಬ್ಬ ವ್ಯಕ್ತಿ ಒಂದು ಧರ್ಮದ ತತ್ವಗಳಿಗೆ ಮೆಚ್ಚಿ ಅದನ್ನು ಅಪ್ಪಿಕೊಂಡಿದ್ದು ಮತಾಂತರವಾಗುವುದಿಲ್ಲ. ಅದು ಧಾರ್ಮಿಕ ವಲಸೆಯಾಗುತ್ತದೆ. ಧಾರ್ಮಿಕ ವಲಸೆ ವ್ಯಕ್ತಿಯ ಇಷ್ಟದಂತೆ ನಡೆಯಬೇಕು ಬಲಾತ್ಕರಿಸಿದರೆ ಅದು ಮತಾಂತರ.

೧೨ನೆಯ ಶತಮಾನದಲ್ಲಿ ಪುನರುತ್ಥಾನಗೊಂಡ ವೀರಶೈವ ಧರ್ಮದ ಸರಳ ಆಚರಣೆಗಳಿಗೆ ಸಾಕಷ್ಟು ಜಾತಿ ಧರ್ಮದ ಜನರು ಆಕರ್ಷಣೆಗೊಂಡು ಈ ಧರ್ಮಕ್ಕೆ ಮತಾಂತರವಾದರು ಎಂದೂ ಹಾಗೆ ಮತಾಂತರವಾದ ವ್ಯಕ್ತಿಗಳಲ್ಲಿ ಸಾಕಷ್ಟು ಜೈನರೂ ಬಂದರೂ ಎಂದು ಸ್ವಧರ್ಮನಿಷ್ಠ ಜನಪದರು ಅಲ್ಲಲ್ಲಿ ಮಾತನಾಡುತ್ತಾರೆ. ಜೈನರು ವೀರಶೈವಕ್ಕೆ ಮತಾಂತರವಾಗಲು ಬಹು ಮುಖ್ಯ ಕಾರಣ ಆ ಧರ್ಮದ ಕಠೋರ ಆಚರಣೆಗಳು ಎಂಬ ಅಭಿಪ್ರಾಯಗಳೂ ಇವೆ. ನಿಜ ಜೈನರ ಆಚರಣೆಗಳು ಕಠೋರ. ಇವರಲ್ಲಿ ಮುನಿಗಳಿಗೆ ಮತ್ತು ಶ್ರಾವಕರಿಗೆ ಬೇರೆ ಬೇರೆಯಾದಂತಹ ನಿಯಮಗಳಿವೆ. ಮುನಿಯ ಕಠೋರತೆ ಶ್ರಾವಕರಿಗಿಲ್ಲ. ನೀರನ್ನು ಶುದ್ಧೀಕರಿಸಿ ಕುಡಿಯುವುದು, ಸೂರ್ಯಾಸ್ಥದ ಮುಂಚೆ ಉಣ್ಣುವುದು ವೈಜ್ಞಾನಿಕವಾಗಿ

ದೇಹಕ್ಕೆ ಒಳ್ಳೆಯದು. ಇನ್ನು ಪ್ರಾಣಿ ಹಿಂಸೆ ಮಾಡಬಾರದೆಂಬ ಕಲ್ಪನೆ ಇತ್ಯಾದಿಗಳು ಪ್ರಕೃತಿಯ ಬಗ್ಗೆ ಇರುವ ಕಾಳಜಿಯಲ್ಲವೇ ಎಂದು ಜೈನ ಜನಪದರು ಅಂಬೋಣ. ಹಾಗೆ ನೋಡಿದರೆ ಕಠೋರ ಧಾರ್ಮಿಕಾಚರಣೆಗಳಿಗೆ ಹೆದರಿ ಪರಧರ್ಮಕ್ಕೆ ಮತಾಂತರವಾದದ್ದೆ ಆದರೆ ಜೈನಧರ್ಮ ಇಂದಿಗೂ ತನ್ನ ಆಸ್ಮಿತೆಯನ್ನು ಉಳಿಸಿಕೊಳ್ಳುತ್ತಿರಲಿಲ್ಲ.

'ಜೈನ ಕೆಟ್ಟು ಬಣಜಿಗನಾದ' ಎಂಬುದು ಜೈನನು ವೀರಶೈವ ಧರ್ಮಕ್ಕೆ ಮತಾಂತರವಾದ ಎಂಬರ್ಥವನ್ನು ಸೂಚಿಸುವ ಗಾದೆ. ಇವರು ಮೂಲ ವೀರಶೈವರೆ ಆಗಿದ್ದು, ಜೈನಧರ್ಮದ ಪ್ರಭಾವದಿಂದ ಆ ಧರ್ಮಕ್ಕೆ ವಲಸೆ ಹೋಗಿ ಮತ್ತೆ ವೀರಶೈವ ಪ್ರಾಬಲ್ಯವಾದಾಗ ಮೂಲ ಧರ್ಮಕ್ಕೆ ಬಂದರು ಎಂಬಿತ್ಯಾದಿ ವಾದಗಳಿವೆ. ಜೈನ ಧರ್ಮಕ್ಕೆ ಬಂದು ಮತ್ತೆ ಬೇರೆ ಧರ್ಮಕ್ಕೆ ಹೋದ ಉದಾಹರಣೆಗಳು ಕಡಿಮೆ (ನನ್ನ ಗಮನಕ್ಕೆ ಲಭ್ಯವಿಲ್ಲ). ಬ್ರಾಹ್ಮಣ ಜಾತಿಯಿಂದ ವಲಸೆ ಬಂದ ಭೀಮಪ್ಪಯ್ಯ ಮತ್ತೆ ಜೈನ ಧರ್ಮದಿಂದ ವಿಮುಖವಾಗಲಿಲ್ಲ. "ಜಾತಿಗಳಲ್ಲಿ ಬ್ರಾಹ್ಮಣವೇ ಉತ್ತಮ; ತಾನು ಇನ್ನೂ ಉತ್ತಮನಾಗಬೇಕಾದರೆ ಸ್ವೀಕರಿಸಬಹುದಾದ ಬೇರೆ ಜಾತಿ ಯಾವುದು? ಎಂದು ಆಲೋಚಿಸಿ ತಂದೆಯಾದ ಭೀಮಪ್ಪಯ್ಯ ಜೈನ ಧರ್ಮವನ್ನು ಸ್ವೀಕರಿಸಿದ ಎಂದು ಹೇಳುತ್ತಾನೆ."[೧೨] ಬಹುಶ: ಜೈನ ಧರ್ಮಕ್ಕೆ ಬಂದು ಸ್ವಇಚ್ಛೆಯಿಂದ ಬೇರೆ ಧರ್ಮಕ್ಕೆ ವಲಸೆ ಹೋಗಿದ್ದು ಕಡಿಮೆ. ಹಾಗಾದರೆ ಜೈನರು ಕೆಟ್ಟು ಬಣಜಿಗರು ಆದದು ಹೇಗೆ. ಅದು ಬಲವಂತದ ಮತಾಂತರ ಕ್ರಿಯೆ. ಈ ಹಿಂದೆ ಚರ್ಚಿಸಿದಂತೆ ಉಗ್ರ ಶಿವಭಕ್ತರ ದಾಳಿಗೆ ತತ್ತರಿಸಿ, ಹೆದರಿ ಜೈನರು ಶಿವಧರ್ಮವನ್ನು ಒಪ್ಪಕೊಂಡರು, ಕಾಲಾನಂತರ ಅಪ್ಪಿಕೊಂಡರು.

ಏಕಾಂತರಾಮಯ್ಯ, ಗೊಗ್ಗಿದೇವ, ಅಸಂಖ್ಯಾತ ಶಿವಗಣಗಳು, ಆದಯ್ಯರ ದಾಳಿ ಪ್ರಖರತೆ ಈ ಹಿಂದೆ ಚರ್ಚಿಸಲಾಗಿದೆ. ಸಮಾಜದಲ್ಲಿ ಇವರ ಕತೆಗಳು ಚರ್ವಿತ ಚರ್ವಣವಾಗಿ ಹಿಂದಿನ ಭಯವನ್ನು ನೆನಪಿಸಲೆಂದೆ ರಚಿತವಾದಂತೆ ತೋರುತ್ತದೆ. ಈ ಕಾರಣದಿಂದಾಗಿ ಒಮ್ಮೆ ಶಿವಧರ್ಮವನ್ನು ಒಪ್ಪಿಕೊಂಡವರು ಮತ್ತೆ ಅನ್ಯಧರ್ಮಗಳಿಗೆ ವಲಸೆ ಹೋಗುವ ಆಸೆ ಕೈಬಿಟ್ಟರು. ಯಾಕೆಂದರೆ ೧೭ನೆಯ ಶತಮಾನದವರೆಗೂ ಏಕಾಂತರಾಮಯ್ಯನ ಪಾರಮ್ಯವನ್ನು ಸಾರುವ ಕೃತಿಗಳು ಬಂದವು. ಅದರಲ್ಲಿ ಶಾಂತನಿರಂಜನನ 'ಅಬ್ಬಲೂರು ಚರಿತೆ' ಪ್ರಮುಖ. ಇದರಲ್ಲಿ ಜೈನರನ್ನು ಏಕಾಂತರಾಮಯ್ಯ ಮತ್ತು ಅವನ ಬೆಂಬಲಿಗರು ದಾಳಿ ಮಾಡಿದ ರೀತಿಯನ್ನು ಕಣ್ಣಿಗೆ ಕಟ್ಟುವಂತೆ ಚಿತ್ರಿಸಲಾಗಿದೆ. ಏಕಾಂತರಾಮಯ್ಯ ಜೈನರೊಡನೆ ಶಿರಪಣಕ್ಕಿಟ್ಟು ಗೆದ್ದು ಬಸದಿಯಲ್ಲಿ ಸೋಮೇಶ್ವರನನ್ನು ಪ್ರತಿಷ್ಠಾಪಿಸಿದಾಗ ಈ ರೀತಿಯ ಮಾತುಗಳು ಬರುತ್ತವೆ.

ಎಳೆತನ್ನಿ ಮೂಲಜಿನೇಶ್ವರ ಶ್ರವಣರ
ಎಳೆತನ್ನಿ ಗುರುಗುಡ್ಡರುಗಳ
ಎಳೆತನ್ನಿರೆಂದು ಪೇಳಲು ಚಾರರುಗಳಿಗೆ
ಎಳೆದಂದು ಕೊಡುತಿರ್ದರವರು

ಇರಿವುತ ತರಿವುತ ಕೊನೆಮೂಗನರಿವುತ
ಕರಗಳ ಕಡಿದು ನಾಲಿಗೆಯ
ನರಿಸುತ ರಾಮಯ್ಯಾರುಹ್ಯರ ಪಡೆದನು
ಒರಸಿದ ಕಾಲಾಳ್ಗಳೊಡನೆ

ಬತ್ತಿದ ಕೈಕಾಲು ಹತ್ತಿದ ಹೊಟ್ಟೆಯು
ಮೊತ್ತ ಭೂತಗಳೆಲ್ಲ ನೆರೆದು
ತುತ್ತು ತುತ್ತಿಗೆ ರಕ್ತ ಸುರಿದು ಶಾಕಿನಿಯರು
ಎತ್ತಿ ಕರಗಳ ಮುಗಿದರು

ಹದ್ದು ಕಾಗೆಯು ತಿಂದು ದಣಿದು ಮಾಂಸದ ಮಜ್ಜೆ
ಮುದ್ದೆಯ ತೆಗೆದು ಬಚ್ಚಿಟ್ಟು
ಮೆದ್ದು ಚಪ್ಪರಿದು ಡಾಕಿನಿಯರು ದಣಿದು ಪ್ರ
ಸಿದ್ಧರಾಮನ ಹೊಗಳಿದರು

ಎತ್ತ ನೋಡಲು ರಕ್ತ ಪಾನಗಳಿಲ್ಲದೆ
ತುತ್ತು ತುತ್ತಿಗೆ ಸತಿಸುತರ
ಮುತ್ತಿ ಹಿಡಿವ ಪಿಶಾಚಿಗಳ ಬಯಕೆಯ
ಇತ್ತ ರಾಮಯ್ಯ ಪುಷ್ಕಳವ

ಬಟ್ಟೆ ಬಟ್ಟೆಯೊಳೆಲ್ಲ ಹರಿವ ರಕ್ತದ ತೊರೆ
ಅಟ್ಟೆ ಮುಂಡವು ತೇಲಿ ಮುಳುಗೆ
ಕಟ್ಟಿಳಿಲ್ಲದೆ ಪೆಣಗಳ ಕಂಡು ಶ್ರವಣರು
ಘಟ್ಟದ ಕೆಳಯಿಕೆ ಸರಿಯೆ

ಗುರು ಗುಡ್ಡರುಗಳ ಮೂಗಿಗೆ ಮೂಗನೂರಿಸಿ
ನೆರೆದಿರ್ದ ಸತಿಯರ. ಕರೆಸಿ
ಬರಸಿಯು ಲಿಂಗಮುದ್ರೆಯ ಬಸವೆಯರ ಮಾಡಿ
ಹರುಷದಿಂದಿರ್ದ ರಾಮಯ್ಯ[೧೩]

ಇಷ್ಟೆಲ್ಲಾ ರಕ್ತಪಾತಗಳನ್ನು ನೋಡಿ ಕಂಗಾಲಾದ ಜೈನರು ಭಯಭೀತರಾಗಿ ರಾಮಯ್ಯನ ಹತ್ತಿರ ಪ್ರಾಣಭಿಕ್ಷೆ ಬೇಡುವರು ಅದರಲ್ಲಿಯೂ ಶಂಕಪಾಲನ ಹೆಂಡತಿ (ಇವನೊಬ್ಬ ಜೈನ ಅಧಿಕಾರಿ) ತನ್ನ ಮಾಂಗಲ್ಯ ಭಾಗ್ಯವ ಉಳಿಸಿಕೊಳ್ಳಲು

ಶೈವರಾಹೆವು ವಾಲೆಭಾಗ್ಯ ಪಾಲಿಸಿ
ದೇವ ರಾಮನೆಯೆಮ್ಮ ಸಲಹು
ದೇವರ ಕಟ್ಟಿ ನಿಮ್ಮಡಿಗಂಟು ಬದುಕೇವು
ಶ್ರಾವಕವತವ ನಿಷ್ಕರಿಸಿ

ಮಡದಿಗೆ ವಾಲೆಭಾಗ್ಯವ ಪ್ರತಿಪಾಲಿಸೆ
ಸಡಗರದಲಿ ಶಂಖಪಾಲ
ಗಡಣವೆಲ್ಲಕೆ ಲಿಂಗವ ಕಟ್ಟಿ ನಿಮ್ಮಡಿ
ಒಡಗೂಡಿಸೆಂದು ಸೈಗೆಡೆದ[೧೪]

ಹೀಗೆ ಜೈನರು ಸ್ವಪ್ರೇರಣೆಯಿಂದ ಮತಾಂತರವಾಗಲಿಲ್ಲ. ಜೀವ ಭಯಕ್ಕೆ ಹೆದರಿ ಶಿವಧರ್ಮವನಪ್ಪಿದರು. ನಾಡೋಜ ಹಂಪ ನಾಗರಾಯ್ಯ ಅವರು 'ಜೈನ ಸಮಾಜ ಮತ್ತು ಮತಾಂತರ' ಕುರಿತು ಬರೆಯುತ್ತಾ "೧೨ನೆಯ ಶತಮಾನದ ಉತ್ತರಾರ್ಧದಲ್ಲಿ ಸಂಭವಿಸಿ ಮತೀಯ ಘರ್ಷಣೆಯಲಿ . . . . . . ತತ್ತರಿಸಿ ಹೋದ ಲಕ್ಷಾಂತರ ಜೈನರು ಜೀವ ಉಳಿದರೆ ಸಾಕೆಂದು ಲಿಂಗಧಾರಣೆ ಮಾಡಿದರು. ಜೈನ ಮಠಗಳು ವೀರಶೈವ ಮಠಗಳಾದುವು. ಇದು ಪ್ರಾಣಭಯ ಜೀವಭೀತಿಯಿಂದ ಆದ ಸಾಮೂಹಿಕ ಮತಾಂತರಕ್ಕೆ ಜೀವಂತ ದೃಷ್ಟಾಂತವಾಯಿತು"[೧೫] ಎಂದಿದ್ದಾರೆ. ಈ ಜೀವಭಯದ ಭೀತಿ ೧೭ನೆಯ ಶತಮಾನದವರೆಗೂ ನಡೆದುಕೊಂಡು ಬಂದು ಕೆಲವೊಂದು ಜೈನ ವಾಡೆಗಳ ಮತಾಂತರಕ್ಕೂ ಕಾರಣವಾಗುತ್ತದೆ.

**೭.೩ ಮತಾಂತರವಾದ ಜೈನ ವಾಡೆಗಳು**

ವಾಡೆಗಳು ಆಯಾ ಪ್ರದೇಶದ ಸಂಸ್ಕೃತಿಯ ತೊಟ್ಟಿಲು. ಕರ್ನಾಟಕದಲ್ಲಿರುವ ನೂರಾರು ವಾಡೆಗಳು ಇನ್ನೂ ಕೆಲವೊಂದು ವಿಶಿಷ್ಟ ಸಂಸ್ಕೃತಿಯನ್ನು ಜತನದಿಂದ ಕಾಪಾಡಿಕೊಂಡು ಬಂದಿವೆ. ಶೈವ, ವೀರಶೈವ, ಬ್ರಾಹ್ಮಣ, ಜೈನ ಎನ್ನದೆ ಆದಿಲ್‌ಷಾಹಿ, ಮರಾಠ, ಪೇಶ್ವೆ, ಬ್ರಿಟೀಶ್ ಆಡಳಿತದ ಕಾಲಾವಧಿಯಲ್ಲಿ ಅನುಸರಿಸಲ್ಪಡುತ್ತಿದ್ದ ಹಬ್ಬ ಹರಿದಿನಗಳನ್ನು ಇನ್ನೂ ಆಚರಿಸುತ್ತಿರುವುದು ಸಂತಸದ ಸಂಗತಿ. ಅಧಿಕಾರ ರಹಿತವಾಗಿದ್ದರೂ ದಸರಾ, ದೀಪಾವಳಿ, ಮೊಹರಂ, ಗೌರಿ ಹುಣ್ಣಿಮೆ ಮುಂತಾದ ಹಬ್ಬಗಳನ್ನು ಜಾತ್ಯಾತೀತವಾಗಿ ಆಚರಿಸುತ್ತಿವೆ. ಇಂತಹ ಪರಧರ್ಮ ಸಹಿಷ್ಣುತಾ ಮನೋಭಾವದ ವಾಡೆಗಳ ಮೇಲೆ ಮತಾಂತರ ಎಂಬ ಧಾರ್ಮಿಕ ದಾಳಿಗಳು ನಡೆದಿರುವುದುಂಟು. ಈ ದಾಳಿಗಳು ದೈಹಿಕವಾಗಿ ನಡೆಯಲಿಲ್ಲ. ಬಹುಶಃ ಮಾನಸಿಕವಾಗಿ ನಡೆದಿವೆ. ದಾಳಿಗೆ ಒಳಗಾದ ಪ್ರಮುಖ ವಾಡೆಗಳು ಜೈನಧರ್ಮಕ್ಕೆ ಸೇರಿದವಾಗಿವೆ. ಕೆಲವೊಂದು ಜೈನ ವಾಡೆಗಳಲ್ಲಿ ಅನ್ಯಧರ್ಮ ಪ್ರಭಾವವೂ ಇದೆ.

ಇದೂವರೆಗೂ ಕೈಗೊಂಡ ಕ್ಷೇತ್ರಕಾರ್ಯ ಹಾಗೂ ಅಧ್ಯಯನದಿಂದ ಉತ್ತರ ಕರ್ನಾಟಕದ ಜೈನ ದೇಸಗತಿ ಮನೆಗನಗಳ ಸಂಖ್ಯೆ ೧೯ ಇವುಗಳನ್ನು ಹೀಗೆ ಪಟ್ಟಿಮಾಡಬಹುದು. (ಜೈನ ದೇಸಗತಿಗಳಿದ್ದ ಊರು, ತಾಲ್ಲೂಕು, ಜಿಲ್ಲೆಗಳನ್ನು ಮಾತ್ರ ಇಲ್ಲಿ ಕೊಡಲಾಗಿ, ಮನೆತನದ ಹೆಸರನ್ನು ಕೊಡಲಾಗಿಲ್ಲ.)

೧. ತೇರದಾಳ – ತೇರದಾಳ ತಾಲ್ಲೂಕು, ಬಾಗಲಕೋಟೆ ಜಿಲ್ಲೆ
೨. ಹನಗಂಡಿ – ತೇರದಾಳ ತಾಲ್ಲೂಕು, ಬಾಗಲಕೋಟೆ ಜಿಲ್ಲೆ
೩. ಹಳ್ಳಿಂಗಳಿ – ಜಮಖಂಡಿ ತಾಲ್ಲೂಕು, ಬಾಗಲಕೋಟೆ ಜಿಲ್ಲೆ
೪. ದರೂರು – ಅಥಣಿ ತಾಲ್ಲೂಕು, ಬೆಳಗಾವಿ ಜಿಲ್ಲೆ.
೫. ಸಪ್ತಸಾಗರ – ಅಥಣಿ ತಾಲ್ಲೂಕು, ಬೆಳಗಾವಿ ಜಿಲ್ಲೆ.
೬. ತೀರ್ಥ – ಅಥಣಿ ತಾಲ್ಲೂಕು, ಬೆಳಗಾವಿ ಜಿಲ್ಲೆ.
೭. ಸಾಸಲಟ್ಟಿ – ಅಥಣಿ ತಾಲ್ಲೂಕು, ಬೆಳಗಾವಿ ಜಿಲ್ಲೆ.
೮. ಹುಕ್ಕೇರಿ – ಹುಕ್ಕೇರಿ ತಾಲ್ಲೂಕು, ಬೆಳಗಾವಿ ಜಿಲ್ಲೆ.
೯. ಐನಾಪುರ – ಅಥಣಿ ತಾಲ್ಲೂಕು, ಬೆಳಗಾವಿ ಜಿಲ್ಲೆ.
೧೦. ಆನಿಗೋಳ – ಕಿತ್ತೂರು ತಾಲ್ಲೂಕು, ಬೆಳಗಾವಿ ಜಿಲ್ಲೆ.
೧೧. ಉಗಾರ ಬುದ್ರುಕ – ಅಥಣಿ ತಾಲ್ಲೂಕು, ಬೆಳಗಾವಿ ಜಿಲ್ಲೆ.
೧೨. ಸಿಂದಿ ಕುರಬೆಟ್ಟ – ಕಿತ್ತೂರು ತಾಲ್ಲೂಕು, ಬೆಳಗಾವಿ ಜಿಲ್ಲೆ.
೧೩. ಅಣ್ಣಿಗೇರಿ – ನವಲಗುಂದ ತಾಲ್ಲೂಕು, ಧಾರವಾಡ ಜಿಲ್ಲೆ.
೧೪. ಅಮ್ಮಿನಬಾವಿ – ಧಾರವಾಡ ತಾಲ್ಲೂಕು, ಧಾರವಾಡ ಜಿಲ್ಲೆ.
೧೫. ಮುಳುಗುಂದ – ಗದಗ ತಾಲ್ಲೂಕು, ಗದಗ ಜಿಲ್ಲೆ.
೧೬. ಹೊಸೂರು – ಗದಗ ತಾಲ್ಲೂಕು, ಗದಗ ಜಿಲ್ಲೆ.
೧೭. ಹಳಿಯಾಳ – ಉತ್ತರ ಕನ್ನಡ ಜಿಲ್ಲೆ.
೧೮. ಬಾಬಾನಗರ – ವಿಜಯಪುರ ಜಿಲ್ಲೆ.
೧೯. ಶಾಲಿಬಿದರಿ – ಬೀದರ್ ಜಿಲ್ಲೆ.

ಮೇಲಿನ ೧೯ ದೇಸಗತಿಗಳಲ್ಲಿ ತೇರದಾಳ, ಹನಗಂಡಿ, ದರೂರು, ಅಣ್ಣಿಗೇರಿ, ಮುಳುಗುಂದಗಳಲ್ಲಿ ಈಗಲೂ ವಾಡೆಗಳು ಇವೆ. ಉಳಿದ ದೇಸಗತಿಗಳಲ್ಲಿ ವಾಡೆಗಳು ಮನೆಯ ರೂಪದಲ್ಲಿವೆ. ಬಹುಶಃ ಹಳೆಯವಾಡೆಗಳು ನೆಲಸಮವಾಗಿರಬೇಕು. ವಾಡೆಗಳಿದ್ದ ಕುರುಹು ಕೂಡ ಈಗ ಅಲಭ್ಯ. ಮೇಲೆ ಉಲ್ಲೇಖಿಸಿದ ಐದೂ ವಾಡೆಗಳ ಹೊರತಾಗಿ ಉಳಿದ ದೇಸಗತಿಗಳ ಮಾಹಿತಿ ಲಭ್ಯವಿರದ ಕಾರಣ ಅವುಗಳನ್ನು ಅಧ್ಯಯನದಿಂದ ಹೊರತುಪಡಿಸಲಾಗಿದೆ. ಇನ್ನು

ಕಾಕತಿ (ಬೆಳಗಾವಿ ಜಿಲ್ಲೆ), ಚಚಡಿ (ಬೆಳಗಾವಿ ಜಿಲ್ಲೆ), ಅಣ್ಣಿಗೇರಿ ಸಿಕ್ಕೇದೇಸಾಯಿ ವಾಡೆ (ಧಾರವಾಡ ಜಿಲ್ಲೆ)ಗಳು ಮತಾಂತರ ಹೊಂದಿ ವೀರಶೈವ ದೇಸಗತಿಗಳಾದವು.

ಹಿಂದೆ ಚರ್ಚಿಸಿದ ಮತಾಂತರ ಪ್ರಕ್ರಿಯೆ ೧೯-೧೭ನೆಯ ಶತಮಾನದವರೆಗೂ ಪ್ರವಹಿಸಿತು ಎಂಬುದು ಸಾಹಿತ್ಯ ಕೃತಿಗಳಿಂದ ಮತ್ತು ಜನಪದರಿಂದ ಲಭ್ಯವಾಗುತ್ತದೆ. ಈ ಕಾಲಾವಧಿಯಲ್ಲಿ ಮತಾಂತರ ಪ್ರಕ್ರಿಯೆ ದೈಹಿಕದಾಳಿಯದ್ದಾಗಿರಲಿಲ್ಲ. ಮಾನಸಿಕ ಪ್ರಭಾವ ಬೀರುವ ಮೂಲಕ ಆದದ್ದು. ಕೆಲವೊಬ ಸಾಧು, ಸನ್ಯಾಸಿಗಳು, ವೀರಮಹೇಶ್ವರರು, ಶಿವಧರ್ಮದ ಶ್ರೇಷ್ಠತೆಯ ಬಗ್ಗೆ, ಸ್ವಧರ್ಮದ ಪರಾಕಾಷ್ಠೆಯ ಗುಣಗಾನ ಮಾಡುವ ಮೂಲಕ ತಮ್ಮ ಧರ್ಮದತ್ತ ಸೆಳೆದಂತೆ ಕಾಣುತ್ತದೆ. ಇದರಲ್ಲಿ ಜೈನ ವಾಡೆಯ ಅಧಿಕಾರಿಗಳು ಪರಧರ್ಮ (ವೀರಶೈವ) ಸೆಳತಕ್ಕೆ ಒಳಗಾಗಿದ್ದಾರೆ. ಕೆಲವೊಂದು ಸಾರಿ ಅನ್ಯಧರ್ಮದವರು ವೀರಶೈವ ಧರ್ಮಕ್ಕೆ ಮಣೆಹಾಕದಿದ್ದಾಗ ಗಣಸಮೂಹ ಅಂಥವರನ್ನು ಬಹಿಷ್ಕರಿಸಿದ್ದು ಇದೆ. 'ನಿರಂಜನ ವಂಶ ರತ್ನಾಕರ' ಎಂಬ ಕೃತಿಯಲ್ಲಿ "ಶಿವಾನುಭವ ಚರಂತಿಗೆ ಪಟ್ಟದ ಬಸವಪ್ರಭು ಸ್ವಾಮಿಗಳು ೭೨ ಬಿರುದುಗಳು ಮುಂತಾದ ಗಣಸಂದಣಿಯಿಂದ ಕೆಳದಿ ದೇಶ ಮುಂತಾದ ಸಕಲ ದೇಶಂಗಳಂ ಸಂಚರಿಸುತ್ತ ತಿರುಗಿ ಬಿದ್ದ ಭಕ್ತರಿಗೆ ಬಹಿಷ್ಕಾರವಂ ಕೊಡಿಸುತ್ತ ಮತ್ತವರು ಶರಣಾಗತರಾದಲ್ಲಿ ಅಪರಾಧಗಾಣಿಕೆಯಂ ತಕ್ಕೊಳ್ಳುತ್ತ ಶಿವಭಕ್ತರು ಮುಂತಾದ ಗಣಂಗಳಿಗೆ ಸದಾಚಾರವಂ ನೆಲೆಗೊಳಿಸಿ ಷಟ್ಥಲ ಜ್ಞಾನೋಪದೇಶವಂ ಮಾಡಿ ಮೋಕ್ಷ ಮಾರ್ಗವನೀವುತ್ತ ಅನೇಕ ಮಹಿಮೆಗಳು ತೋರಿ ಹಿರೆಸೂರ, ಕಿರೆಸೂರಿಗೆ ಚಿತ್ತೈಸಿ ಅಲ್ಲಿ ತಮ್ಮ ಕುರುಹುಗಳಂ ಇಟ್ಟು ಅಲ್ಲಿಂದ ಹುಕ್ಕೇರಿ ನಾಡಿಗೆ ದಯಮಾಡಿಸಿ ಅಲ್ಲಿರುವ ಜೈನ ಮತಸ್ಥರಿಗೆ ಶಾಸ್ತ್ರ ಮುಖದಿಂ ಶಿವಮತವೇ ವಿಶೇಷವೆಂದು ಒಡಂಬಡಿಸಿ ಅವರುಗಳ ಭಕ್ತರಂ ಮಾಡಿಕೊಂಡು ಅಲ್ಲಿಂದ ಹನಗಂಡಿಯೆಂಬ ಗ್ರಾಮಕ್ಕೆ ಚಿತ್ತೈಸಿ ಅಲ್ಲಿರುವ ಜೈನ ಅರಸನಿಗೆ ಲಿಂಗಧಾರಣವಂ ಮಾಡಿಸಿ ಆ ಮೇಲೆ ತೇರದಾಳವೆಂಬ ಊರಿಗೆ ದಯಮಾಡಿಸಿ ಅಲ್ಲಿಯ ಭಕ್ತಗಣಂಗಳನ್ನು ಕರೆಯಿಸಿಕೊಂಡು ತಮ್ಮಯ ಶಿವಾನುಭವ ಚರಂತಿಗೆಯನ್ನು ಆದಿಲಿಂಗೇಶನೆಂಬ ಗಣವರರಿಗೆ ಮಾಡಿ ಅವರಿಗೆ ತಮ್ಮಯ ೭೨ ಬಿರುದುಗಳು ಗಣಸಮೂಹವಂ ಕೊಟ್ಟು ಕಳುಹಿಸಿ ಅನಂತರ ಅಲ್ಲಿಯ ಭಕ್ತಿಯೊಳು ಸ್ವಲ್ಪ ದಿವಸವಿರ್ದು ಆ ಬಳಿಕ ಅಲ್ಲಿಯ ದೇವ ಭಕ್ತರ ಕರೆಯಿಸಿಕೊಂಡು ಅವರಿಗೆ ತಾವು ಕಾಯಸಹಿತವಾಗಿ ಈ ಸ್ಥಳದಿ ನಿರ್ವಯಲಾಗುವೆವು. ನಾಳಿನ ಉದಯಕ್ಕೆ ನೀವು ಸರ್ವರೂಬಾಹುದು ಎಂದು ನಿರೂಪವಾಗಲು"[೧೯]

ಬಸವಪ್ರಭು, ಅಲ್ಲಮಪ್ರಭು ಎಂದು ಕರೆಯಲ್ಪಡುವ ವೀರಮಹೇಶ್ವರ ಅಗ್ರ ಗಣ್ಯನಾದ ಶಿವಭಕ್ತ ೧೬-೧೭ನೆ ಶತಮಾನದಲ್ಲಿ ಬದುಕಿದ್ದಂತೆ ಕಾಣುತ್ತದೆ. ಯಾಕೆಂದರೆ "ನಿರಂಜನವಂಶ ರತ್ನಾಕರ' ಕೃತಿಯು ಕ್ರಿ.ಶ. ೧೬೬೭ರ ಸುಮಾರಿನಲ್ಲಿದ್ದ ಷಡಕ್ಷರ ದೇವನನ್ನು ಸೂಚಿಸುತ್ತದೆ".[೧೭] ಗ್ರಂಥ ಕ್ರಿ.ಶ. ೧೬೫೫ ರಿಂದ ೧೭೦೦ ಕಾಲಾವಧಿಯಲ್ಲಿ ರಚನೆಯಾಗಿರಬಹುದು. ಅಂತೆಯೇ ಬಸವಪ್ರಭುವೂ ಸಹ ಈ ಕೃತಿ ರಚನೆಯ ಕಾಲದ ೫೦-೧೦೦ ವರ್ಷದ ಹಿಂದಿನವನಾಗಿರಬೇಕು. ಬಸವಪ್ರಭು ನಿರಂಜನ ಜಗದ್ಗುರು ಪರಂಪರೆಗೆ ಸೇರಿದವನು. ಈ ಮುನಿ

ನಾಡಿನಾದ್ಯಂತ ಸಂಚರಿಸಿ ಅನೇಕ ಜನರನ್ನು ಶಿವಭಕ್ತರನ್ನಾಗಿ ಮಾಡಿದ ನಿದರ್ಶನ ಮೇಲಿನ ಉಲ್ಲೇಖದಿಂದ ಸಾದೃಶ್ಯವಾಗುತ್ತದೆ.

ಬಸವಪ್ರಭು ನಾಡಿನ ಸಂಚಾರದ ಸಮಯದಲ್ಲಿ ತನ್ನ ತತ್ವ ಸಿದ್ಧಾಂತಗಳಿಗೆ ಒಪ್ಪಿಕೊಳ್ಳದವರಿಗೆ ಬಹಿಷ್ಕಾರ ಹಾಕಿದ್ದು ಸ್ಪಷ್ಟ. ಯಾವ ರೀತಿ ಬಹಿಷ್ಕಾರ ತಿಳಿಯದು. ನಂತರ ಹುಕ್ಕೇರಿಯಲ್ಲಿದ್ದ ಜೈನರನ್ನು ಮತಾಂತರ ಮಾಡಿದನು. ತೇರದಾಳ, ಹನಗಂಡಿ ದೇಶಮುಖರಿಗೂ ಇವನ ಪ್ರಭಾವ ತಟ್ಟದೇ ಬಿಡಲಿಲ್ಲ. ಇವರು ಕೆಲವು ಕಾಲ ಪ್ರಭುಸ್ವಾಮಿಯ ಪ್ರಭಾವಕ್ಕೆ ಒಳಗಾಗಿ ವೀರಶೈವರಾಗಿದ್ದರು ಎಂಬುದು ಜನಪದರ ಆಡೊಂಬೋಲ. ಸದ್ಯ ಈ ಎರಡೂ ಮನೆತನದವರು ಜೈನಮತಸ್ಥರೇ ಆಗಿದ್ದಾರೆ.

ಬಸವಪ್ರಭು ಅಥವಾ ಅಲ್ಲಮಪ್ರಭುಸ್ವಾಮಿಯ ಪ್ರಭಾವ ಒಂದು ಕಾಲಕ್ಕೆ ನಾಡಿನಾದ್ಯಂತ ಪಸರಿಸಲ್ಪಟ್ಟು ಈಗಲೂ ಈ ಪ್ರಭಾವದ ಕೆಲವು ಮಠಗಳು ಉಳಿದುಬಂದಿವೆ. ಅದರಲ್ಲಿ ಡಂಬಳದ ತೋಂಟದಾರ್ಯ ಮಠವೂ ಒಂದು. 'ಶ್ರೀಮನ್ನಿರಂಜನ ಜಗದ್ಗುರು' ಎಂಬ ವಿಶೇಷಣದಿಂದ ಪ್ರಾರಂಭವಾಗುವ ಎಲ್ಲ ಮಠಗಳೂ ಪ್ರಭುಸ್ವಾಮಿಯ ಪರಂಪರೆಗೆ ಸಂಬಂಧಿಸಿದವುಗಳೇ ಆಗಿವೆ. ಬಸವಪ್ರಭು ಕೆಳದಿ ಮುಂತಾದ ಪ್ರದೇಶದಲ್ಲಿ ಸಂಚರಿಸಿದ ಪ್ರಭಾವದಿಂದಾಗಿ ಕೆಳದಿ ಅರಸರು ಡಂಬಳ ತೋಂಟದಾರ್ಯ ಮಠಕ್ಕೆ ರಾಜಭಕ್ತರಾದರು. ಅಂತೆಯೇ ಶ್ರೀ ಮಠಕ್ಕೆ "ಬಂಗಾರದ ಪಾದುಕೆಗಳು, ಚಿನ್ನದ ರಾಜಗೊಂಡೆಗಳು, ಮೊಗ್ಗಿಗಳು, ಬಂಗಾರದ ಕಿರೀಟ, ಪಂಚಕಳಸ, ಬೆಳ್ಳಿಯ ಬೆತ್ತಗಳು, ಬಂಗಾರದ ಕಳಸ, ಅಪಾರ ಪ್ರಮಾಣದ ಭೂಮಿ ದಾನದ ರೂಪದಲ್ಲಿ ಸಂದುವು."[೧೮] ಇಷ್ಟೇ ಅಲ್ಲದೇ ಜೈನ ಮತಸ್ಥರಾಗಿದ್ದ ಬೀಳಗಿ ಅರಸರು ಅಲ್ಲಮಪ್ರಭುಗಳ ಧರ್ಮಸಂಚಾರದ ಪ್ರಭಾವನೆಗೆ ಒಳಗೊಂಡು ಡಂಬಳದ ತೋಂಟದಾರ್ಯ ಮಠದ ರಥೋತ್ಸವ ಮತ್ತು ಗಣಾರಾಧನೆಗೆ ದಾನ ನೀಡಿದ್ದಾರೆ "ಅನಾದಿ ನಿರಂಜನ ಅಲ್ಲಮಾಪ್ರಭುಸ್ವಾಮಿ ಸಾಂಪ್ರದಾಯಕರಾದ ಶಿವತತ್ವ ಶಿವಾನುಭಾವಿಗಳಾದ ಶ್ರೀ ತೋಂಟದ ಸಿದ್ಧೇಶ್ವರ ಸ್ವಾಮಿ ಕೃಪಾಪ್ರಸಂನರಾದ ಶ್ರೀ ರಾಚವಟ್ಟಿಸ್ವಾಮಿಯವರಿಗೆ ಶ್ರೀಮನ್ಮಹಾಪ್ರಭು ಬಿಳಿಗಿ ಬಸವಪ್ಪನಾಯಕರು । ಬರಶಿಕೊಟ್ಟ ದಾನ ಪಟ್ಟಿ ಕ್ರಮವೆಂತೆಂದರೆ"[೧೯] ಹೀಗೆ ಕೆಳದಿ ಮತ್ತು ಬೀಳಗಿ ಅರಸರಂತವರೆ ನಿರಂಜನ ಪರಂಪರೆಯ ಪ್ರಭಾವಕ್ಕೆ ಒಳಗಾದಾಗ ದೇಸಗತಿಯವರಿಗೆ ಇದು ಸಹಜವೇ ಆಗಿತ್ತು. ಅಂತೆಯೇ ಅಣ್ಣಿಗೇರಿ ದೇಸಾಯಿಗಳು, ಕಾಕತಿ ಮತ್ತು ಚಚಡಿ ವಾಡೆಗಳು ಪ್ರಮುಖವಾಗಿ ಮತಾಂತರ ಪ್ರಕ್ರಿಯೆಗೋ ಅಥವಾ ಧರ್ಮದ ತತ್ವ ಸಿದ್ಧಾಂತಗಳ ಪ್ರಭಾವಕ್ಕೆ ಒಳಗಾಗಿ ವೀರಶೈವ ಮತಕ್ಕೆ ಪರಿವರ್ತಿತವಾದವು.

### ಅಣ್ಣಿಗೇರಿ ಸಿಕ್ಕೇ ದೇಸಾಯಿ ವಾಡೆ

ಅಣ್ಣಿಗೇರಿಯಲ್ಲಿ ಎರಡು ದೇಶಗತಿಗಳಿದ್ದು ಅಂತೆಯೇ ಎರಡೂ ವಾಡೆಗಳೂ ಇವೆ. ಒಂದು ಪಂಪನ ವಂಶಜರ ದೇಶಪಾಂಡೆ ವಾಡೆ, ಇನ್ನೊಂದು ಇದೇ ವಂಶದ ಕವಲು ಎಂದು

ಕರೆಯಲ್ಪಡುವು ಸಿಕ್ಕೇ ದೇಸಾಯಿ ವಾಡೆ. ದೇಸಪಾಂಡೆ ವಾಡೆ ಕಾಲದ ದೃಷ್ಟಿಯಿಂದ ಹಳೆಯದು. ವಾಡೆ ನೋಡಿದ್ದಾಗ ಈ ಅಂಶ ಸ್ಪಷ್ಟ. ಸರಳ ಕಲಾತ್ಮಕತೆ, ಸಹಜ ಸೊಬಗು ಈ ವಾಡೆಯ ವಿಶೇಷ. ದೇಸಾಯಿವಾಡೆ ಸ್ವಲ್ಪ ಆಧುನಿಕವಾದದ್ದು. ಭವ್ಯವಾಗಿ ನಿರ್ಮಾಣವಾಗಿದೆ. ಮುಗಿಲೆತ್ತರದ ಕಂಭಗಳು (ಸದರಕಟ್ಟಿ) ಮೇಲ್ಛಾವಣಿಯ ಕುಸುರಿ ಕೆತ್ತನೆಗಳು ಅದ್ಭುತ. ಈ ವಾಡೆ ಸದ್ಯ ವೀರಶೈವ ಮತಕ್ಕೆ ಸೇರಿದ್ದು, ಈ ಮನೆತನದವರನ್ನು ದೇಸಾಯಿಗಳು, ಸಿಕ್ಕೇ ದೇಸಾಯಿಗಳೆನ್ನುತ್ತಾರೆ.

ಸಿಕ್ಕೇ ದೇಸಾಯಿ ಮನೆತನದ ಬಗ್ಗೆ ಡಾ. ಎಂ.ಎಂ. ಕಲಬುರ್ಗಿಯವರು "ಜೈನ ದೇಶಪಾಂಡೆ ಮನೆತನದ ಒಂದು ಶಾಖೆ ನೂರಿನ್ನುರು ವರ್ಷಗಳ ಹಿಂದೆ ವೀರಶೈವಕ್ಕೆ ಮತಾಂತರಗೊಂಡಿದ್ದು, ದೇಸಾಯಿ ಇಲ್ಲವೇ 'ಸಿಕ್ಕೇ ದೇಸಾಯಿ' ಈ ಮನೆತನದ ಹೆಸರು. ಈ ದೇಶಪಾಂಡೆ ಮನೆತನ ಜೈನರಲ್ಲಿ ಪಂಚಮವಾದರೆ, ಈ ದೇಸಾಯಿ ಮನೆತನ ವೀರಶೈವರಲ್ಲಿ ಪಂಚಮಸಾಲಿಯಾಗಿರುವುದು"[೨೦] ಎಂದು ಹೇಳುತ್ತಾರೆ. ವಿದ್ವಾಂಸರ ಈ ಹೇಳಿಕೆಯಿಂದ ಸಿಕ್ಕೇದೇಸಾಯಿಯವರು ಮನೆತನ ದೇಶಪಾಂಡೆ ವಾಡೆಯ ಒಂದು ಶಾಖೆ ಎನ್ನುವುದು ದಿಟ. ಅಂತೆಯೇ ಎರಡೂ ವಾಡೆಯವರು ಸಹೋದರರು.

ಆಡಳಿತದ ದೃಷ್ಟಿಯಿಂದ ಎರಡು ವಾಡೆಗಳು ಒಂದೇ ಊರಲ್ಲಿ ಇರಲಾರವು. ಇರುವುದು ಕಡಿಮೆ. ರಾಜ್ಯಕ್ಕೆ ಒಬ್ಬನೆ ರಾಜನಿದ್ದಂತೆ; ಪರಗಣಕ್ಕೆ ಒಬ್ಬನೆ ದೇಶಮುಖ ಅಲ್ಲವೆ. ಅಪವಾದ ಎನ್ನವಂತೆ ಅಣ್ಣಿಗೇರಿಯಲ್ಲಿ ಎರಡು ವಾಡೆಗಳಿವೆ ಭಾಗಶಃ ಒಂದೇ ಕುಟುಂಬದವರು ಎಂದು ಹೇಳಲಾಗಿದೆ. ಯಾವುದೋ ಕೌಟುಂಬಿಕ ಕಾರಣದಿಂದ ಈ ಮನೆತನ ಎರಡು ಹೋಳಾದಂತೆ ಕಾಣುತ್ತದೆ. ಮೂಲ ಮನೆತನದಿಂದ ಹೊರ ಹೋದ ಸಿಕ್ಕೇ ದೇಸಾಯಿ ಅದೇ ಊರಲ್ಲಿ ನೆಲೆನಿಂತು, ವಾಡೆಯನ್ನೂ ಕಟ್ಟಿಕೊಂಡಿತು. ತೇರದಾಳ ದೇಸಗತಿಯು ಇಬ್ಭಾಗವಾದಾಗ ಮೂಲವಾಡೆಯಲ್ಲಿಯೇ ದೇಸಾಯಿಗಳು ಮತ್ತು ನಾಡಗೌಡರು ಸುಮಾರು ವರ್ಷ ಆಡಳಿತ ನಡೆಸಿದರು. ಕಾಲಾನಂತರ ದೇಸಾಯಿಗಳು ಪ್ರತ್ಯೇಕ ವಾಡೆಯನ್ನು ಸಮೀಪದ ಹನಗಂಡಿಯಲ್ಲಿ ನಿರ್ಮಿಸಿಕೊಂಡರು. ಆದರೆ ಸಿಕ್ಕೇ ದೇಸಾಯಿಯವರು ಅಣ್ಣಿಗೇರಿಯಲ್ಲಿಯೇ ವಾಡೆ ನಿರ್ಮಾಣ ಯಾಕೆ ಮಾಡಿದರು ಎಂಬ ಮುಖ್ಯ ಕಾರಣ ತಿಳಿದು ಬರುವುದಿಲ್ಲ. ಬಹುಶಃ ಆಡಳಿತ ದೃಷ್ಟಿಯಿಂದ ಅಣ್ಣಿಗೇರಿ ಪ್ರಶಸ್ತವಾದ ಸ್ಥಳವಾಗಿದ್ದರಿಂದ ಅಲ್ಲಿಯೇ ನೆಲೆನಿಂತಂತೆ ಕಾಣುತ್ತದೆ. ಇವರು ಯಾವಾಗ ವೀರಶೈವ ಮತಕ್ಕೆ, ಹೇಗೆ ಪರಿವರ್ತನಗೊಂಡರು ಎಂಬುದೊಂದು ಮುಖ್ಯ ಪ್ರಶ್ನೆಯಾಗುತ್ತದೆ.

ಸಿಕ್ಕೇ ದೇಸಾಯಿ ಮನೆತನ ವೀರಶೈವ ಧರ್ಮಕ್ಕೆ ಮತಾಂತರವಾದ ನೇರ ಆಧಾರಗಳು ಲಭ್ಯವಿಲ್ಲ. ಕೆಲವು ಸಾಹಿತ್ಯಿಕ ಮತ್ತು ಪ್ರಾಚೀನ ಅವಶೇಷಗಳು, ಆರಾಧನ ದೈವಗಳು, ಧರ್ಮದ ಒಳಪಂಗಡಗಳು ಜನಪದರ ಹೇಳಿಕೆಗಳಿಂದ ಈ ಅಂಶವನ್ನು ಗುರುತಿಸಬಹುದು. ಈ ಹಿಂದೆ ಚರ್ಚೆಮಾಡಿದ ಹಾಗೆ ಬಸವಪ್ರಭು ಪ್ರಭುಸ್ವಾಮಿ, ಅಲ್ಲಮಪ್ರಭು ಎಂದೆಲ್ಲ ಕರೆಯಲ್ಪಡುವ ಶಿವಗಣ ಪರಂಪರೆಯ ವೀರಮಾಹೇಶ್ವರ ಧರ್ಮಪ್ರಚಾರ ನಿಮಿತ್ತ ನಾಡಿನಾದ್ಯಂತ ಸಂಚರಿಸಿದ್ದು ಸರಿಯಷ್ಟೆ.

ಈ ಸಂದರ್ಭದಲ್ಲಿ ಜೈನರನ್ನು ಶಿವನ ಆರಾಧಕರನ್ನಾಗಿ ಮಾಡಲಾಯಿತು. ಇದೇ ಸಂದರ್ಭದಲ್ಲಿ ಅಣ್ಣಿಗೇರಿ ದೇಸಾಯಿಗಳು ವೀರಶೈವರಾಗಿರಬಹುದು ಅಥವಾ ಈ ಮುನಿ ಪರಂಪರೆಯ ಡಂಬಳದ ತೋಂಟದಾರ್ಯ ಮಠದ ಪ್ರಭಾವದಿಂದಾಗಿ ಜೈನ ದೇಸಾಯಿಗಳು; ವೀರಶೈವ ದೇಸಾಯಿಗಳಾದರು. ಈ ಮನೆತನದ ದೇಸಾಯಿ ವೀರಬಸಪ್ಪ ದೇಸಾಯಿಗಳು ತೋಂಟದಾರ್ಯ ಮಠಕ್ಕೆ ಬರೆದ ಪತ್ರದಲ್ಲಿ ಕೆಲವು ಆಧಾರಗಳು ಲಭ್ಯವಿವೆ.

ಪವಿತ್ರತ ಚತುರ್ದಶ ಭುವನ ಮಂಡಲ ಷಟುಸ್ಥಲ
ಮಾರ್ಗ ಸಂಚಾರ ವೀರ ಮಹೇಶ್ವರಗ್ರಗಂಣ್ಯ ಪುಂಣ್ಯ
ಪುಂಣ್ಯಕೀರ್ತಿ ಪರಮ ಗುರುಮೂರ್ತಿಯಾದ ಅನಾದಿ
ನಿರಂಜನ ಅಲ್ಲಮಾಪ್ರಭು ಸ್ವಾಮಿಯವರ ಸಾಂಪ್ರದಾಯಿಕ
ರಾದಂತ ಶ್ರೀ ತೋಂಟದ ಕರ್ತೃ ಸ್ವಾಮಿಗಳವರ
ಚರಣಾರವಿಂದಗಳಿಗೆ

ತಂಮ್ಮ ಅತ್ಯಂತ ಕಾರುಂಣ್ಯ ಪ್ರೀತಿ ಬಾಲಕರಾದಂಥ ಕ ॥ ಅಂಣ್ಣಿಗೇರಿ ಸೀಮೆ ದೇಸಾಯಿಗಳಾದಂಥ ವೀರಬಸಪ್ಪ ಗೌಡರು ತ್ರಿಕಾಲದಲ್ಲಿ ಮಾಡುವ ಧೀರ್ಘದಂಡ ಬಿನ್ನಹಉ. ಆದಾಗಿ ಯೀಗ ನಾವು ರುಧೀರೋದ್ಗಾರಿ ನಾಮ ಸಂವತ್ಸರದ ಮಾರ್ಗಸಿರ ಸುಧ ೧೪ ಪರಿಯಂತ್ರ ತಂಮ್ಮ ಆಶೀರ್ವಾದದಿಂದ ಸಮಸ್ತರು ಕ್ಷೇಮದಿಂದೆ ಯಿಥೆವೆ. ತಂಮ್ಮ ಶಿವಲಿಂಗಾನಂದ ವೈಭವಗಳನ್ನು ವೇಳೆ ವೇಳೆಕ್ಕೆ ಪತ್ರ ಮುಖದಿಂದ ತಿಳಿಸಿಯಿತ್ತಳ ಪರಂಬರಿಕೆ ತದಗು ಕೊಂಬುವಲ್ಲಿಗೆ ಕರ್ತೃಗಳೆಯಿಧಿರಿ. ಸಾಂಪ್ರತು ತಾವು ಆಶೀರ್ವಾದ ನಿರೂಪಿಸಿದಲ್ಲಿಗೆ ಕೃತಾರ್ಥರಾದೆಉ. ಯಿನ್ನು ನಮಗೆ ಬಂದಂಥ ವಿಗ್ನ ತಂಮ್ಮ ಆಶೀರ್ವಾದದ ಬಲದಿಂದ ಪರಿಹಾರವಾಯಿತು. ಅದಕ್ಕೆ ತಮ್ಮ ಪಾದ ದರಷಣವಾಗದೆ ಬಾಹಳ ದಿವಸವಾಯಿತು. ನಮ್ಮ ಮೇಲೆ ದಯಮಾಡಿ ಆಗಮನ ಮಾಡಿ ದರುಷಣಲಾಭ ಕೊಟ್ಟು, ಕೃತಾರ್ಥ ಮಾಡುವಲ್ಲಿಗೆ ಕರ್ತೃಗಳೆಯಿದಿರಿ ಗಹಿಮಾಡಲಾಗದು, ಯೀ ವಿಷಯಕ್ಕೆ ನೂತನ ಉಪಚಾರಾರ್ಥವಾಗಿ ತೋರಿ ಬರಕೊಳ್ಳಲಿಕ್ಕೆ ಶಕ್ತರಲ್ಲು. ಬಂದರೆ ಪಾದಕ್ಕೆ ಬಿಂನಹ ಮಾಡಲಾಗಿ ಸಕಲಉ ವೈದ್ಯವಾದಿತು."[೨೧]

ವೀರಬಸಪ್ಪ ದೇಸಾಯಿಯವರ ಪತ್ರದಲ್ಲಿ ತೋಂಟದಾರ್ಯ ಮಠವು ವೀರಮಹೇಶ್ವರ ಪರಂಪರೆಗೆ ಸೇರಿದ ನಿರಂಜನ ಅಲ್ಲಮಪ್ರಭು ಸ್ವಾಮಿಗಳ ಸಂಪ್ರದಾಯದ ಮಠ ಎಂಬುದು ದಾಖಲಾಗಿದೆ. ಬಹುಶಃ ಮಠದ ಮತ್ತು ಅಲ್ಲಮಪ್ರಭುಸ್ವಾಮಿಗಳ ಪ್ರಭಾವ ಸಿಕ್ಕೇ ದೇಸಾಯಿ ಮನೆತನದ ಮೇಲಾಗಿ ವೀರಶೈವರಾಗುವಂತೆ ಮಾಡಿದೆ. ಪತ್ರದಲ್ಲಿರುವ ಇರುವ ಇನ್ನೊಂದು ಬಹುಮುಖ್ಯ ವಿಚಾರ "ಯಿನ್ನು ನಮಗೆ ಬಂದಂಥ ವಿಗ್ನ ತಂಮ್ಮ ಆಶೀರ್ವಾದದ ಬಲದಿಂದ ಪರಿಹಾರವಾಯಿತು" ಎಂಬ ವಾಕ್ಯ ತೋಂಟದಾರ್ಯ ದೇಸಾಯಿಗಳಿಗೆ ಬಂದಿರುವ ಬಹುದೊಡ್ಡ ವಿಪತ್ತು ಪರಿಹಾರವಾಯಿತ್ತೆಂದು ಕಾಣುತ್ತದೆ. ಈ ಕೃತಜ್ಞಾಭಾವದಿಂದ ವೀರಶೈವ ಧರ್ಮವನ್ನು

ವೀರಬಸಪ್ಪ ದೇಸಾಯಿಯವರು ಅಪ್ಪಿದರು. ಕಷ್ಟದಲ್ಲಿ ಸಹಾಯವಾದ ಬಗೆ, ಮಠದ ಜೊತೆಗಿನ ನಿರಂತರ ಒಡನಾಟದಿಂದ ಅಲ್ಲಿ ಆಚರಣೆಗಳು ಸಂಗತವಾಗಿ ದೇಸಾಯಿಯವರು ವೀರಶೈವ ಧರ್ಮಕ್ಕೆ ಮತಾಂತರವಾದದ್ದಾಗಿ ತೋರುತ್ತದೆ. ಅಥವಾ ಮಠದ ಪ್ರಭಾವಕ್ಕೆ ಹೆದರಿ ಆಗಿರಬಹುದು. ಯಾಕೆಂದರೆ ಮಠದ ಪೀಠಕ್ಕೆ ಅಗೌರವ ತೋರಿದಾಗ ನೈತಿಕ ಬಹಿಷ್ಕಾರವು ಕೆಲವೊಂದು ಜನರಿಗೆ ಶ್ರೀಮಠವು ಹೇರಿದ್ದಿದೆ. ಅದನ್ನು ವೀರಬಸಪ್ಪ ದೇಸಾಯಿಯವರ ಗಮನಕ್ಕೂ ತಂದಿದೆ.

". . . . . . ನಂಮ ಕಾರುಣ್ಯಪ್ರಿಯ ಸದ್ಭಕ್ತರಾದ ಅಣ್ಣಿಗೇರಿ ದೇಸಾಯಿ ವೀರಬಸಪ್ಪನವರಿಗೆ . . . . . ತರುವಾಯ ಗದಿಗಿನ ನಾಲವಾದರ ಕೊಟೂರಪ್ಪ ಜಿನಗ ಸಿದರಾಮಪ ತೆಂಗಿನಕಾಯಿ ರಾಚಣ ವ ಚನಿವೀರಪನು ನಂಮ ಸಂಗತ ಅಹಂಕಾರ ಮಾಡಿದರು. ಅದರ ಮೂಲ ನಾವು ಗದಿಗೆ ನಂಮ ಮಟದ ಅವರಿಗೆ ಅವರ ಮನಿಕಡಿಗೆ ಹೋಗಬೇಡಿರಿ ಅಂತ ಹೇಳಿ ಕಳಿಸಿದಿವು. ಅದರಂತೆ ಅಣ್ಣಿಗೇರಿ ಮಟಕ ಅವರ ಮನಿಗೆ ಹೋಗಬೇಡ ಅಂತ ಹೇಳಿ ಕಳಿಸಿದಿವು. ನಿಮಗೆ ಸ್ಮುತಯಿರಬೇಕು."[೨೨]

ಒಮ್ಮೆ ಜೈನ ಧರ್ಮದಿಂದ ಹೊರಬಂದ ದೇಸಾಯಿಗಳು ಮತ್ತೆ ಅದಕ್ಕೆ ಹಿಂದಿರುಗಲು ಪ್ರಯತ್ನಿಸಲಿಲ್ಲ. ಅನಿವಾರ್ಯವೂ ಅಲ್ಲ. ಹಾಗೆ ಮಾಡಿದರೆ ರಾಜಕೀಯವಾಗಿ ಮತ್ತು ಸಾಮಾಜಿಕವಾಗಿ ಭದ್ರವಾಗಿರಲಿಕ್ಕೆ ಸಾಧ್ಯವೂ ಆಗುತ್ತಿರಲಿಲ್ಲ. ಶ್ರೀಮಠವನ್ನು ಅಪಮಾನ ಮಾಡಿದ ವ್ಯಕ್ತಿಗಳಿಗೆ ಆದ ಶಿಕ್ಷೆ ಮೇಲಿನ ಪತ್ರದಲ್ಲಿದೆ. ಶ್ರೀಮಠಕ್ಕೆ ಅಗೌರವ ತೋರಿದ ಎಂದರೆ ಅದು ಆ ಧರ್ಮಕ್ಕೂ ತೋರಿದ ಅಗೌರವವಾಗುತ್ತದೆ ಮೇಲಿನ ಎರಡೂ ಪತ್ರಗಳ ಕಾಲ ತಿಳಿಯದು ಹಾಗೆಯೇ ವೀರಬಸಪ್ಪ ಅವರ ಕಾಲವೂ ಸಹ. ವಾಡೆಯಿಂದಲೂ ಮಾಹಿತಿ ಅಲಭ್ಯ.

ಪ್ರಾಚೀನ ಜೈನ ಅವಶೇಷ ಸಿಕ್ಕೇ ದೇಸಾಯಿಯವರ ಹೊಲದಲ್ಲಿ ಕಂಡುಬಂದಿದ್ದು, ಇವರು ಜೈನರಾಗಿದ್ದರು ಎಂಬುದಕ್ಕೆ ಇನ್ನೊಂದು ಆಧಾರ. "ಮಣಕವಾಡಕ್ಕೆ ಹೋಗುವ ದಾರಿಯ ಪಕ್ಕ ಇರುವ ಸಿಕ್ಕೇ ದೇಸಾಯಿಯರವ ಹೊಲದಲ್ಲಿ ಒಂದು ಚತುರ್ಮುಖ ಜಿನ ಬಿಂಬವಿದೆ".[೨೩] ಇದನ್ನು ಈಗ ಜನಪದರು ಕೊರವ್ವನೆಂದು ಪೂಜಿಸುತ್ತಾರೆ. ಅಂತೆಯೇ ಇದಕ್ಕೆ ಕೊರವ್ವನ ಮಾನ್ಯದ ಹೊಲವೆಂದೇ ಕರೆಯಲಾಗುತ್ತದೆ ಎಂದು ಶ್ರೀಭೂಪಾಲ್ ನಾವಳ್ಳಿ[೨೪] ಅವರು ಹೇಳುತ್ತಾರೆ. ಸಿಕ್ಕೇ ದೇಸಾಯಿಗಳು ಕೊರೆವ್ವನಿಗೆ ಪೂಜೆಸಲ್ಲಿಸುವುದಾಗಯೂ ಅವರು ಹೇಳಿದರು. ಮೂಲ ಪೂರ್ವಿಕರು ಮಾಡುವ ಪೂಜೆಯನ್ನು ಇವರು ಮುಂದುವರೆಸಿದ್ದಾರೆ. ಕೊರೆವ್ವ ಮೂರ್ತಿ ಮಾತ್ರ ಚತುರ್ಮುಖ ಜಿನಬಿಂಬ. ಎಷ್ಟೋ ಜನ ಜೈನರು ಇಂದಿಗೂ ಅನ್ಯಧರ್ಮ ಸವದತ್ತಿ ಎಲ್ಲಮ್ಮನನ್ನು ಪೂಜಿಸಿದ ಹಾಗೇ ದೇಸಾಯಿಗಳು ಕೊರೆವ್ವನನನ್ನು ಪೂಜಿಸುತ್ತಿದ್ದಾರೆ. ಆದರೆ ಎಲ್ಲಮ್ಮ ಜೈನಯಕ್ಷಿ ಪದ್ಮಾವತಿ ಎಂಬುದು ಸಾಕಷ್ಟು ಜನಕ್ಕೆ ತಿಳಿದಿಲ್ಲ. ದೇವರು ಮತಾಂತರವಾದರೂ ನಂಬಿಕೆ ಶ್ರದ್ಧೆಗಳು ಮುಂದುವರಿಯುತ್ತ ಬಂದಿವೆ. ಆಶ್ಚರ್ಯದ ಸಂಗತಿಯೆಂದರೆ ದೇಶಪಾಂಡೆ ವಾಡೆಯ ಮನೆದೇವರು ಸವದತ್ತಿ ಎಲ್ಲಮ್ಮ, ಮತ್ತು ದೇಸಾಯಿಯವರ ಮನೆದೇವರು ಮುನಿರಾಬಾದು ಹುಲಿಗೆಮ್ಮ, ಹುಲಿಗೆಮ್ಮ-ಎಲ್ಲಮ್ಮ ಎಂಬ

ಜಾನಪದ ದೇವತೆಗಳು ಅಕ್ಕ-ತಂಗಿಯರ. ಎಲ್ಲಮ್ಮ ಜೈನ ಯಕ್ಷಿ ಪದ್ಮಾವತಿ ಎಂಬದು ನಿರ್ವಿವಾದ[೨೫] ಎಲ್ಲಮ್ಮ ಅಕ್ಕನಾದರೆ; ಹುಲಿಗೆಮ್ಮ ತಂಗಿ. ಹಾಗೆಯೇ ದೇಶಪಾಂಡೆ ಮತ್ತು ದೇಸಾಯಿಯವರು ಅಣ್ಣತಮ್ಮಂದಿರೆ ಎಂಬ ಜನಪದರ ನುಡಿ ಪ್ರಮಾಣಬದ್ಧವಾಗಿ ನಿಲ್ಲುತ್ತದೆ.

**ಚಚಡಿ ದೇಸಾಯಿಗಳ ವಾಡೆ**

ಸುಮಾರು ೧೦ ಎಕರೆ ಜಾಗೆಯಲ್ಲಿ ನಿರ್ಮಾಣವಾದ ಚಚಡಿ ದೇಸಾಯಿಯವರ ವಾಡೆ ಇರುವುದು ಬೆಳಗಾವಿ ಜಿಲ್ಲೆ ಬೈಲಹೊಂಗಲ ತಾಲ್ಲೂಕಿನಲ್ಲಿ. ೧೫ ಚಾವರಾತ್ ಹಳ್ಳಿಗಳನ್ನು ಹೊಂದಿದ್ದ ಈ ವಾಡೆ ೪೦೦ ವರ್ಷಗಳಷ್ಟು ಹಳೆಯದು. ಚಚಡಿ ದೇಸಾಯಿಗಳು ಮತದಿಂದ ಲಿಂಗಾಯತರು. ಈ ವಾಡೆಯು ಹಿಂದೆ ಜೈನ ದೇಸಗತಿಯಾಗಿತ್ತು. ಪ್ರಮುಖ ಆಧಾರವಾಗಿ ವಾಡೆಯ "ಜಿಡ್ಡಿ ಬಾಗಿಲ ಹಣೆಪಟ್ಟಿಯ ಮೇಲೆ ಜೈನ ತೀರ್ಥಂಕರನ ಶಿಲ್ಪವಿದೆ."[೨೬] ಅಂತೆಯೇ ದೇಸಾಯಿಗಳು ಪೂರ್ವದಲ್ಲಿ ಜೈನರಿರಲಿಕ್ಕೆ ಸಾಧ್ಯವಿದೆ.

ಬಾಗಿಲು ಹಣೆಪಟ್ಟಿಯ ಮೇಲೆ ತೀರ್ಥಂಕರರನ್ನು ಸಾಮಾನ್ಯವಾಗಿ ಬಸದಿಯ ಬಾಗಿಲುವಾಡ ಅಥವಾ ದ್ವಾರಭಂಧದ ಲಲಾಟ ಪಟ್ಟಿಕೆಯಲ್ಲಿ ಕೆತ್ತಿರುತ್ತಾರೆ. ಮನುಷ್ಯನ ಹಣೆಯ ಮೇಲೆ ತಿಲಕ ಹೇಗೆ ಇರುತ್ತದೆಯೇ ಹಾಗೆ ದೇವಾಲಯದ ಲಲಾಟದಲ್ಲಿ ಒಂದು ದೇವತಾ ವಿಗ್ರಹವಿರುತ್ತದೆ. ಸಾಮಾನ್ಯವಾಗಿ ಪ್ರಾಚೀನ ದೇವಾಲಯಗಳಲ್ಲಿ ಆಯಾ ಧರ್ಮಕ್ಕೆ ಅನುಗುಣವಾದ ದೇವತಾ ವಿಗ್ರಹಗಳಿರುತ್ತವೆ. ಮುಂಚೆ ಜೈನ, ವೈಷ್ಣವ, ಶೈವ ದೇವಾಲಯಗಳಲ್ಲಿ ಗಜಲಕ್ಷ್ಮಿ ಶಿಲ್ಪ ಇರುತ್ತಿತ್ತು. ತದನಂತರ ಬಸದಿಯಲ್ಲಿ ಜಿನ, ದೇವಾಲಯಗಳಲ್ಲಿ ಗಣೇಶನ ಶಿಲ್ಪಗಳು ರಚನೆಯಾಗತೊಡಗಿದಂತೆ ತೋರುತ್ತದೆ. ಬಹುಶ: ಈ ವ್ಯವಸ್ಥೆಯಿಂದಲೇ ಪ್ರಾಚೀನ ಹಾಳಾದ ದೇವಾಲಯಗಳು ಯಾವ ಧರ್ಮಕ್ಕೆ ಸೇರಿದ್ದವು ಎಂದೂ ತಿಳಿಯಬಹುದು. ನೂರಾರು ಬಸದಿಗಳು ಅನ್ಯಧರ್ಮದ ದೇವಾಲಯಗಳಾದರೂ ಇಂದಿಗೂ ಅವುಗಳ ಲಲಾಟದಲ್ಲಿರುವ ಜಿನ ಬಿಂಬ ಅದು ಮೊದಲು ಬಸದಿಯಾಗಿತ್ತು ಎಂದು ಸಾರುತ್ತದೆ. ಲಲಾಟದಲ್ಲಿ ಜಿನಬಿಂಬವಿದೆಯೆಂದರೆ ಗರ್ಭಗುಡಿಯಲ್ಲಿ ತೀರ್ಥಂಕರನ ಶಿಲ್ಪವಿದೆ ಎಂದರ್ಥ; ಅದೇ ರೀತಿ ವಾಡೆಯ ಬಾಗಿಲ ಲಲಾಟದಲ್ಲಿ ತೀರ್ಥಂಕರನ ಶಿಲ್ಪವಿದೆ ಎಂದರೆ ಆ ವಾಡೆಯಲ್ಲಿ ವಾಸವಾಗಿದ್ದವರು ಜೈನರೇ ಎಂದರ್ಥವಲ್ಲವೆ.

**ಕಾಗತಿ ವಾಡೆ**

ಬ್ರಿಟೀಷರಿಗೆ ಸಿಂಹಸ್ವಪ್ನವಾಗಿದ್ದ ವೀರರಾಣಿ ಕಿತ್ತೂರು ಚೆನ್ನಮ್ಮನ ತವರು ಕಾಗತಿ ಚೆನ್ನಮ್ಮ ಹುಟ್ಟಿದ ಕಾಗತಿ ದೇಸಗತಿಯ ವಾಡೆ ಈಗ ನೆಲಸಮವಾಗಿದೆ. ಸದ್ಯ ವೀರಶೈವ ಮನೆತನಕ್ಕೆ ಸೇರಿದ ಕಾಗತಿ ದೇಶಗತಿ ವಂಶಸ್ಥರು ಹಿಂದೆ ಜೈನರಾಗಿದ್ದರು ಎಂಬ ಆಧಾರಗಳು ಲಭ್ಯವಿವೆ. ಒಟ್ಟು ೧೭ ತಲೆಮಾರುಗಳನ್ನು ಕಂಡ ಕಾಗತಿ ದೇಸಗತಿಯ ಮೂಲಪುರಷ ಮಡೆ(೮)

ಮಾಮನಗೌಡ ಅಥವಾ ಮಾಮಗೌಡ. ಇವನ ನಂತರ ಸಿದ್ಧಗೌಡ, ಭರಮಗೌಡ, ಕಲ್ಲಗೌಡ, ದೇಮಗೌಡ, ಸಿದ್ಧಗೌಡ, ದೊಡ್ಡಗೌಡ, ರಾಯಗೌಡ, ಧೂಳಪ್ಪಗೌಡ೧, ರಾಯಗೌಡ ಎಂಬ ಹನ್ನೊಂದು ತಲೆಮಾರುಗಳ ವ್ಯಕ್ತಿಗಳು ಆಗಿಹೋದರು.

ರಾಯಗೌಡನಿಗೆ ಧೂಳಪ್ಪಗೌಡ, ಖಾನಗೌಡ, ಪ್ರಭುಲಿಂಗಪ್ಪ ಎಂಬ ಮೂರು ಮಕ್ಕಳು. ಇದರಲ್ಲಿ ಖಾನಗೌಡ ಶೂರ ವ್ಯಕ್ತಿಯಾಗಿದ್ದನು. ಆದಿಲ್‌ಷಾಹಿಗಳ ಕೃಪಾಪೋಷಿತ ಸರದಾರ ಸುಬೇದಾರರ ಉಪಟಳವನ್ನು ಇವನು ಬಗ್ಗುಬಡಿದ. ಈ ಪ್ರದೇಶ ಪೇಶ್ವೆಗಳಿಗೆ ಸಲ್ಲುತ್ತಿದ್ದರಿಂದ ಖಾನಗೌಡನಿಗೆ ಪೇಶ್ವೆಗಳಿಗೆ ಅಧೀನರಾದ ಸಾಂಗಲಿಯ ಪಟವರ್ಧನರು ಕ್ರಿ.ಶ. ೧೭೬೫ರಲ್ಲಿ ಕಾಗತಿ ದೇಸಗತಿಯನ್ನು ಉಂಬಳಿಯಾಗಿ ಕೊಟ್ಟರು ಎಂದು ಜನಪದರು ಹೇಳುತ್ತಾರೆ. ಖಾನಗೌಡ ತನಗೆ ದೊರೆತ ಅಧಿಕಾರವನ್ನು ಒಬ್ಬನೇ ಅನುಭವಿಸದೆ ಸಹೋದರರಿಗೂ ಹಂಚಿದನಂತೆ.

ಖಾನಗೌಡನ ಕಾಲಾವಧಿಯಲ್ಲಿ ಈ ಮನೆತನ ಜೈನಧರ್ಮಕ್ಕೆ ಸೇರಿದಂತೆ ಕಾಣುತ್ತದೆ. ಸ್ವಪ್ರೇರಣೆಯಿಂದಲೇ ಅಥವಾ ಅನ್ಯ ಪ್ರಭಾವದಿಂದಲೋ "ಈತ ವೀರಶೈವ ಮತದತ್ತ ವಿಶೇಷ ಒಲವು ತೋರಿಸಿದ, ಈ ಕಾಲಘಟ್ಟಕ್ಕಾಗಲೇ ಈ ವಂಶದ ಹಲವರು ವೀರಶೈವರಾಗಿದ್ದರೂ ಇನ್ನೂ ಕೆಲವು ಮನೆತನಗಳು ಜೈನರಾಗಿಯೇ ಮುಂದುವರಿದಂತೆ ಕಂಡುಬರುತ್ತದೆ. ಖಾನಗೌಡನ ಅಧಿಕಾರಾವಧಿಯಲ್ಲಿ ಇವರ ಬಹಳಷ್ಟು ಮನೆತನಗಳು ವೀರಶೈವ ಮತಕ್ಕೆ ಪರಿವರ್ತಿತವಾದವು."[೨೭] ಖಾನಗೌಡನಿಗೆ ವೀರಶೈವ ಧರ್ಮದ ಮೇಲೆ ವಿಶೇಷ ಒಲವು ಬರಬೇಕಾದರೆ ಯಾವುದೋ ವ್ಯಕ್ತಿಯೀಂದಲೋ ಅಥವಾ ಶಿವಮತದ ಸನ್ಯಾಸಿಯಿಂದಲೋ ಘನವಾದ ಪ್ರಭಾವ ಆಗಿದ್ದಂತೆ ಇದೆ. ಆದ್ದರಿಂದಲೇ ಇವನು ಜೈನ ಧರ್ಮವನ್ನು ತ್ಯಜಿಸಿದ. ಅಲ್ಲದೆ ಈ ಊರಲ್ಲಿರುವ "ಪ್ರಾಚೀನವಾದ ಬಸದಿಯೊಂದನ್ನು ಈ ಖಾನಗೌಡನೇ ಒಡೆದು ಹಾಕಿದನೆಂದು ಸ್ಥಳೀಯರು ಹೇಳುತ್ತಾರೆ. ಈ ಕಾಲಾವಧಿಯಲ್ಲಿ ಹಾಲಗಿ, ನಾವಗಿ ಮುಂತಾದ ಕೆಲವು ಮನೆತನಗಳನ್ನು ಹೊರತುಪಡಿಸಿ ಉಳಿದೆಲ್ಲ ದೇಸಾಯಿಗೌಡರು ವೀರಶೈವರಾಗಿ ಪರಿವರ್ತನಗೊಂಡರು."[೨೮]

ಖಾನಗೌಡನ ಮತಾಂತರವಾದ ನಿರ್ಧಾರಕ್ಕೆ ಅಣ್ಣ ಧೂಳಪ್ಪಗೌಡ ಮತ್ತು ತಮ್ಮ ಪ್ರಭುಲಿಂಗಪ್ಪ ಅಡ್ಡಿಪಡಿಸದೇ ಹೋದರು. ಯಾಕೆಂದರೆ ಅಧಿಕಾರ, ಅಂತಸ್ತು ಅವನಿಂದಲೇ ದೊರೆತದ್ದಾದರಿಂದ ಅವರು ಸಹ ಖಾನಗೌಡನೊಂದಿಗೆ ವೀರಶೈವರಾದಂತೆ ತೋರುತ್ತದೆ. ಅಂತೆಯೇ ಧೂಳಪ್ಪಗೌಡ ಅವನ ಹೆಂಡತಿ ಪದ್ಮಾವತಿದೇವಿಯೂ ವೀರಶೈವರಾದರು. ಪದ್ಮಾವತಿ ಎಂಬುದು ಜೈನ ಸ್ತ್ರೀನಾಮವಾಚಕ. ಈ ನಾಮವಾಚಕ ಪದ್ಮಾವತಿ ವೈದಿಕರಲ್ಲಿಯೂ ಇದೆ. ಇಲ್ಲಿ ಧೂಳಪ್ಪಗೌಡನ ಹೆಂಡಿತಿಯ ಹೆಸರು ಸ್ಥಳೀಯ ದೇವಿ ಜೈನ ಯಕ್ಷಿ ಪದ್ಮಾವತಿಯಿಂದ ಬಂದದ್ದು. ರಟ್ಟರ ಪಟ್ಟಜಿನಾಲಯವಾದ ಸವದತ್ತಿ ಜಿನಾಲಯದಲ್ಲಿ ಪ್ರಧಾನ ಯಕ್ಷಿ ಪದ್ಮಾವತಿಗೂ ಆರಾಧನೆ ನಡೆಯುತ್ತಿತ್ತು. ರಟ್ಟರ ರಾಜದೇವತೆಯಾಗಿದ್ದಂತೆ ತೋರುತ್ತದೆ ಈ ಯಕ್ಷಿ. ಅಂತೆಯೇ ಈ ಪ್ರದೇಶದಲ್ಲಿ ಪದ್ಮಾವತಿ ಯಕ್ಷಿ ಪ್ರಸಿದ್ಧಳಾಗಿ ಮನೆಮಕ್ಕಳಿಗೆ ತನ್ನ ಹೆಸರನ್ನೇ ಇಡುವಷ್ಟು

ಪ್ರಸಿದ್ಧಳಾದಳು. ಈಗಲೂ ಪದ್ಮಾವತಿ ಎಲ್ಲಮ್ಮಳಾದರೂ ಜೈನ ಕುಟುಂಬಗಳಲ್ಲಿ ಪದ್ಮಾವತಿ ಎಂಬ ಹೆಸರನ್ನು ಹೆಣ್ಣು ಕೂಸುಗಳಿಗೆ ಇಡುವುದು ರೂಢಿ. ಅಂತೆಯೇ ಧೂಳಪ್ಪಗೌಡರ ಹೆಂಡತಿಯೂ ಪದ್ಮಾವತಿದೇವಿಯಾದ್ದರಿಂದ ಇವರು ಸ್ಪಷ್ಟವಾಗಿ ಜೈನರೇ ಆಗಿದ್ದರು.

ಧೂಳಪ್ಪಗೌಡ ಮತ್ತು ಪದ್ಮಾವತಿದೇವಿ ದಂಪತಿಗಳಿಗೆ ಗಂಡು ಸಂತಾನವಿರಲಿಲ್ಲ. ಆದರೆ ನಾಡು ಮೆಚ್ಚುವಂತಹ ಹೆಣ್ಣುಕೂಸು ಇವರ ಉದರದಲ್ಲಿ ಜನಿಸಿತು. ಅವಳೇ ಕಿತ್ತೂರು ರಾಣಿ ಚೆನ್ನಮ್ಮ. ತಂದೆ–ತಾಯಿಗಳು ಜೈನತ್ವ ತೊರೆದು ವೀರಶೈವರಾಗಿದ್ದರಿಂದ ಅನಿವಾರ್ಯವಾಗಿ ಚೆನ್ನಮ್ಮ ಅದೇ ಹಾದಿ ಹಿಡಿದಳು. ಅಂತೆಯೇ ಇವಳನ್ನು ಆ ಕಾಲದ ಪ್ರಸಿದ್ಧ ವೀರಶೈವ ಕುಟುಂಬ ಕಿತ್ತೂರು ಸಂಸ್ಥಾನದ ಮಲ್ಲಸರ್ಜನಿಗೆ ಮದುವೆ ಮಾಡಿಕೊಡಲಾಯಿತು. ಚೆನ್ನಮ್ಮ ಬ್ರಿಟೀಷರ ವಿರುದ್ಧ ಹೋರಾಟ ನಡೆಸಿದ್ದು, ಅವರ ಕುತಂತ್ರಕ್ಕೆ ಬಲಿಯಾದದ್ದು ಈಗ ಇತಿಹಾಸ.

ಕರ್ನಾಟಕ ಸಂಸ್ಕೃತಿ ಮತ್ತು ತಮ್ಮ ರಾಜ್ಯದ ಉಳಿವಿಗಾಗಿ ಪರಕೀಯರ ದಾಳಿಯ ವಿರುದ್ಧ ತೊಡೆತಟ್ಟಿದ ಮೂರು ದಿಟ್ಟ ಮಹಿಳೆಯರಾಗಿದ್ದರು ಎಂಬುದು ವಿಶೇಷ. ಅದರಲ್ಲಿ ಮೊದಲನೆಯ ರಾಣಿ ಪೋರ್ಚುಗೀಸರ ವಿರುದ್ಧ ರಣತಂತ್ರ ಹೆಣೆದು ಗೆದ್ದ ಗೆರುಸೊಪ್ಪೆಯ 'ಕರಿಮೆಣಸಿನ ರಾಣಿ' ಮಹಾಮಂಡಲೇಶ್ವರಿ ರಾಣಿ ಚೆನ್ನಭೈರಾದೇವಿ.[೨೯] ಎರಡನೆಯ ರಾಣಿ ಬೆಳವಡಿ ಮಲ್ಲಮ್ಮ. ಈ ರಾಣಿ ಮುಸ್ಲಿಂ ರಾಜರನ್ನು ಸೋಲಿಸಿ, ದಂಡೆತ್ತಿಬಂದ ಶಿವಾಜಿಯನ್ನು ಯುದ್ಧದಿಂದ ಹಿಂದಿರುಗುವಂತೆ ಮಾಡಿದಳು.[೩೦] ಇನ್ನು ಮೂರನೆಯ ರಾಣಿ ಬ್ರಿಟೀಷರ ವಿರುದ್ಧ ತೊಡೆತಟ್ಟಿ ಪ್ರಥಮ ಸ್ವಾತಂತ್ರ ಸಂಗ್ರಾಮದ ರಣಕಹಳೆ ಊದಿ, ಕೆಚ್ಚೆದೆಯಿಂದ ಹೋರಾಡಿದ ಕಿತ್ತೂರು ರಾಣಿ ಚೆನ್ನಮ್ಮ. ಇವರಲ್ಲಿ ಚನ್ನಭೈರಾದೇವಿ ಜೈನಳೆ ಆಗಿದ್ದು, ಉಳಿದಿಬ್ಬರು ಪೂರ್ವದಲ್ಲಿ ಜೈನರಾಗಿದ್ದು ಉತ್ತರ ಜೀವನದಲ್ಲಿ ವೀರಶೈವರಾದರು.

ಶಿವಗಣ ಸಂಚಾರ, ಉಗ್ರಶಿವಭಕ್ತರ ಧರ್ಮನಿಷ್ಠೆ, ಮಠಗಳ ಪ್ರಭಾವ ಹೀಗೆ ಬಹುಮುಖಿ ಆಯಾಮದಿಂದ ಜೈನ ದೇಸಗತಿಗಳು ವೀರಶೈವ ದೇಸಗತಿಗಳಾದುವು. ಮತಾಂತರ ಪ್ರಕ್ರಿಯೆ ಎನ್ನುವುದು ಆಯಾ ಕಾಲದ ಸಾಮಾಜಿಕ, ಧಾರ್ಮಿಕ ಮತ್ತು ರಾಜಕೀಯ ಅವಸ್ಥೆಯ ಪ್ರಕ್ರಿಯೆ. ಜನರಿಗೂ ಅದು ಅನಿವಾರ್ಯ ಮತ್ತು ಅವಶ್ಯ ಆದ್ದರಿಂದ ಸಾಕಷ್ಟು ವಾಡೆಗಳು ಪೂರ್ವದಲ್ಲಿ ಒಂದು ಧರ್ಮವನ್ನು ಅನುಸರಿಸುತ್ತಿದ್ದು, ತದನಂತರ ಪ್ರಚಲಿತ ಧರ್ಮವನ್ನು ಅಪ್ಪಿಕೊಂಡವು. ಹೊಯ್ಸಳ ಚಕ್ರವರ್ತಿ, ಬಿಟ್ಟಿದೇವ ಜೈನತ್ವ ತೊರೆದು ವಿಷ್ಣುವರ್ಧನನಾಗಿ ವೈಷ್ಣವನಾಗಿದ್ದು ರಾಜಕೀಯ ಅನಿವಾರ್ಯತೆಯಿಂದಲೆ. ವಾಡೆಗಳು ಯಾವುದೇ ಮತಧರ್ಮಗಳಿಗೆ ಸೇರಿದ್ದರು ಅವು ಎಲ್ಲ ಧರ್ಮಗಳಿಗೂ ಸೇರಿದ್ದವೇ ಆಗಿದ್ದವು. ಅದುವೇ ರಾಜಧರ್ಮ. ವಾಡೆಗಳು ಸಂಸ್ಕೃತಿಯ ತೊಟ್ಟಿಲುಗಳು. ನಾಡಿನ ಸಂಸ್ಕೃತಿಗೆ ಅವುಗಳ ಕೊಡುಗೆ ಅನನ್ಯ.

**ಅಡಿಟಿಪ್ಪಣಿಗಳು**

೧. ವಿದ್ಯಾಶಂಕರ ಎಸ್ – ವೀರಶೈವ ಪುರಾಣಗಳು: ಒಂದು ಅಧ್ಯಯನ. ೨೦೦೬. ಪುಟ–೧೧೧–೨೧೫.

೨. ಡಾ.ಅಪ್ಪಣ್ಣ ಎನ್ ಹಂಜೆ – ಸಮವಸರಣ. ೨೦೧೫. ಪುಟ–೧೧೭.

೩. ಅದೇ ಪುಟ–೨೨೭.

೪. ಸೌತ್ ಇಂಡಿಯನ್ ಇನ್‌ಸ್ಕ್ರಿಪ್ಷನ್ ಸಂಪುಟ–೧೫. ನಂ ೫೯ ಕ್ರಿ.ಶ. ೧೧೮೪ ಅಣ್ಣಿಗೇರಿ (ನವಲಗುಂದ ತಾಲ್ಲೂಕು, ಧಾರವಾಡ ಜಿಲ್ಲೆ) ಪು–೮೫.

೫. ಅದೇ ಪುಟ–೮೫.

೬. ಅದೇ ಪುಟ ನಂ–೫೬. ಕ್ರಿ.ಶ. ೧೧೮೪. ತಾಳೀಕೋಟೆ (ಮುದ್ದೇಬಿಹಾಳ ತಾಲ್ಲೂಕು, ಬಿಜಾಪುರ ಜಿಲ್ಲೆ) ೧೯೭೩. ಪುಟ–೭೩–೭೪.

೭. ಎನ್ ಬಸವಾರಾಧ್ಯ (ಸಂ)–ಶಾಂತನಿರಂಜನ ವಿರಚಿತ ಅಬ್ಬಲೂರು ಚರಿತೆ. ೧೯೭೩. ಅನುಬಂಧ ಪುಟ–೧೧೮.

೮. ಅದೇ ಪುಟ–೧೧೮.

೯. ಅದೇ ಪುಟ–೧೧೮.

೧೦. ಕಲಚೂರಿ ಅರಸ ಬಿಜ್ಜಳ, ಚಾಳುಕ್ಯ ಚಕ್ರೇಶ್ವರ ತ್ರಿಭುವನಮಲ್ಲ ಸೋಮೇಶ್ವರದೇವ ಹಾನಗಲ್ಲು ೫೦೦ರ ಮಹಾಮಂಡಲೇಶ್ವರ ಕಾಮದೇವರಸ ಏಕಾಂತರಾಮಯ್ಯನ ಸಾಹಸ ಕೇಳಿ ಹಲವು ಗ್ರಾಮಗಳನ್ನು ದತ್ತಿ ಇತ್ತರು. ಧರ್ಮಕಲಹವನ್ನು ನಿಯಂತ್ರಿಸಿ ಸಮಾನ ನ್ಯಾಯ ಕೊಡುವ ಬದಲು ಬಲಿಷ್ಠರಾದ ವ್ಯಕ್ತಿಗಳಿಗೆ ಮಣೆಹಾಕಿದ ಅರಸೊತ್ತಿಗೆಯನ್ನು ಇಲ್ಲಿ ನೋಡಬಹುದು. ಈ ವಿವರಗಳು ಅಬ್ಬಲೂರು ಶಾಸನದಲ್ಲಿ ದಾಖಲಾಗಿವೆ.

೧೧. ಬಸವಾರಾಧ್ಯ ಎನ್ (ಸಂ) ಶಾಂತನಿರಂಜನ ವಿರಚಿತ ಅಬಲೂರು ಚರಿತೆ–೧೯೭೩. ಅನುಬಂಧ ಪುಟ–೧೩೦–೧೩೧.

೧೨. ಡಾ, ಎಂ.ಎಂ. ಕಲಬುರ್ಗಿ– ಮಾರ್ಗ– ಸಂಪುಟ–೩ ಪರಿಷ್ಕೃತ ಮುದ್ರಣ ೨೦೧೦. ಪುಟ–೩೯೮.

೧೩. ಅದೇ ಪುಟ ೯೨–೯೪.

೧೪. ಅದೇ ಪುಟ ೯೫.

೧೫. ಹಂಪ ನಾಗರಾಜಯ್ಯ: ಅನನ್ಯ. ೧೦೦೨. ಪುಟ ೭೩–೭೪.

೧೬. ಬುದ್ಧಯ್ಯಸ್ವಾಮಿ ಪುರಾಣಿಕ: ಶ್ರೀಮದನಾದಿ ಶ್ರೀ ಅಲ್ಲಮಪ್ರಭು, ದ್ವಿತೀಯ ಮುದ್ರಣ–೨೦೦೮. ಪುಟ–೨೦.

೧೭. ಅದೇ ಪುಟ–೯.

೧೮. ಡಾ. ಎಂ.ಎಂ. ಕಲಬುರ್ಗಿ, ಡಾ. ಪಿ.ಕೆ. ರಾಠೋಡ (ಸಂ) ಶ್ರೀ ಜಗದ್ಗುರು ತೋಂಟದಾರ್ಯ ಸಂಸ್ಥಾನಮಠದ ದಾಖಲು ಸಾಹಿಯ್ಯ ಸಂಪುಟ: ಒಂದು-೨೦೦೮. ಇದರಲ್ಲಿನ ಛಾಯಾಚಿತ್ರಗಳು ಮತ್ತು ದಾನಪತ್ರಗಳಲ್ಲಿ ಈ ವಿಷಯ ದಾಖಲಿತವಾಗಿದೆ.

೧೯. ಅದೇ ಪುಟ ೫೯.

೨೦. ಡಾ. ಎಂ.ಎಂ. ಕಲಬುರ್ಗಿ ಮಾರ್ಗ-೩ ಪರಿಷ್ಕೃತ ಮುದ್ರಣ-೨೦೧೦. ಪುಟ-೫೮.

೨೧. ಡಾ. ಎಂ.ಎಂ. ಕಲಬುರ್ಗಿ, ಡಾ.ಪಿ.ಕೆ. ರಾಠೋಡ, ಪೂರ್ವೋಕ್ತ, ಪುಟ ೭೭-೭೮.

೨೨. ಹನುಮಾಕ್ಷಿ ಗೋಗಿ, ಡಾ.ಪಿ.ಕೆ. ರಾಠೋಡ (ಸಂ): ಶ್ರೀ ಜಗದ್ಗುರು ತೋಂಟದಾರ್ಯ ಸಂಸ್ಥಾನಮಠದ ದಾಖಲು ಸಾಹಿತ್ಯ ಸಂಪುಟ-೨, ೨೦೦೯. ಪುಟ-೧೬೩-೧೬೪.

೨೩. ಪಿ.ಜಿ. ಕೆಂಪಣ್ಣವರ, ಟಿ.ಆರ್. ಜೋಡಟ್ಟಿ (ಸಂ): ಜೈನಕ್ಷೇತ್ರಗಳ ಐತಿಹ್ಯ-೧೯೯೦. ಪುಟ-೨೭.

೨೪. ಶ್ರೀ ಭೂಪಾಲ ನಾವಳ್ಳಿ ವಯಸ್ಸು-೭೫. ಅಣ್ಣಿಗೇರಿ.

೨೫. ಪದ್ಮಾವತಿ "ಯಕ್ಷಿಯೇ ಜಕ್ಕಿ>ಜಕ್ಕಲೆ>ಎಕ್ಕಲೆ> ಎಕ್ಕಲದೇವಿಯೆಂದು ರೂಪಾಂತರಗೊಂಡು, ಆ ಮೇಲೆ ಎಕ್ಕಲಮ್ಮ> ಎಕ್ಲಮ್ಮ ಆಗಿ, ಅಪರಿಚಿತ ಪದವನ್ನು ಪರಿಚಿತ ಪದವನ್ನಾಗಿರುವ ತತ್ವದಂತೆ "ಎಲ್ಲಮ್ಮ" ಆಗಿರಬಹುದು. ಡಾ. ಎಂ.ಎಂ. ಕಲಬುರ್ಗಿ, ಸಂಸ್ಕೃತಿ ವಿಕೃತಿ ೨೦೦೬. ಪುಟ-೫೯.

೨೬. ಡಾ. ಸಂತೋಷ ಹಾನಗಲ್ಲ, ಬೆಳಗಾವಿ ಜಿಲ್ಲೆಯ ಲಿಂಗಾಯತ ವಾಡೆಗಳು. ೨೦೦೯. ಪುಟ-೧೪.

೨೭. ಡಾ. ಎಂ.ಬಿ. ನೇಗಿನಹಾಳ-ನೇಗಿನಹಾಳ ಪ್ರಬಂಧಗಳು-೧೯೯೯. ಪುಟ-೧೯೯-೩೦೦.

೨೮. ಅದೇ ಪುಟ-೩೦೦.

೨೯. ಮಹಾಮಂಡಳೇಶ್ವರಿ ರಾಣಿ ಚೆನ್ನಭೈರಾದೇವಿಯು (೧೫೫೪-೧೬೦೩) ಜೈನರಾಣಿಯಾಗಿದ್ದು ನಗಿರೆ, ಹಾಡುವಳ್ಳಿ, ಗೇರುಸೊಪ್ಪೆ ಮುಂತಾದ ಪ್ರದೇಶಗಳನ್ನು ಆಳುತ್ತಿದ್ದಳು. ಇವಳಿಗೆ ಕರಿಮೆಣಸಿನ ರಾಣಿ ಎಂದು ವಿಶೇಷಣವಿತ್ತು. ಕರಿಮೆಣಸಿನ ವ್ಯಾಪಾರಕ್ಕಾಗಿ ಪಶ್ಚಿಮ ಕರಾವಳಿಗೆ ಬಂದ ಪೋರ್ಚುಗೀಸರು ರಾಣಿಯನ್ನು ತಮ್ಮ ಅಂಕೆಯಲ್ಲಿಟ್ಟುಕೊಳ್ಳಲು ಹವಣಿಸತೊಡಗಿದರು. ಕ್ಷುಲ್ಲಕ ಕಾರಣಕ್ಕಾಗಿ ಅವಳ ಮೇಲೆ ಯುದ್ಧ ಮಾಡತೊಡಗಿದರು. ೧೫೬೯ರಲ್ಲಿ ಇವರಿಬ್ಬರು ಮಧ್ಯೆ ಯುದ್ಧ ನಡೆಯಿತು. ರಾಣಿ ಪೋರ್ಚುಗೀಜರ ಸೈನ್ಯ ಸದೆ ಬಡಿದು ಅವರನ್ನು ಸೋಲಿಸಿದಳು. ನಾಡೋಜ ಪ್ರೊ ಕಮಲಾ ಹಂಪನಾ: ಮಹಾಮಂಡಲೇಶ್ವರಿ ರಾಣಿಚೆನ್ನಭೈರಾದೇವಿ ಮತ್ತು ಇತರ ಕರಾವಳಿ ರಾಣಿಯರು: ೨೦೧೧. ಪುಟ-೫೬.

೩೦. "ಮಲ್ಲವ್ವ ಮಹಾರಾಣಿಯ ವಂಶವು ಪ್ರಸಿದ್ಧವಾದ ರಾಷ್ಟ್ರಕೂಟ ರಾಜರಿಂದ ಬಂದ ರಟ್ಟ ರಾಜರ ವಂಶವಂತಲೂ ಈ ರಾಜವಂಶವು ಆ ಕಾಲದಲ್ಲಿ ಅತ್ಯಂತ ಪ್ರಸಿದ್ಧಿಯನ್ನು ಹೊಂದಿತ್ತೆಂತಲೂ ಗೊತ್ತಾಗುವುದು" ತುರಕಾರಿ ಪಂಚಮರ ಇತಿಹಾಸವು: ೧೯೧೯. ಪುಟ

೨೪-೨೫. ಬೆಳವಡಿ ಮಲ್ಲಮ್ಮ ರಟ್ಟರಾಜರ ವಂಶವೆಂದಾದರೆ ಜೈನಳೆಂಬುದು ಖಚಿತ. ಯಾಕೆಂದರೆ ಸವದತ್ತಿಯ ರಟ್ಟರು ಜೈನರಾಗಿದ್ದರು. ಅಂತೆಯೇ ಇವರು ಈಗಿನ ಎಲ್ಲಮ್ಮನಗುಡ್ಡದ ಗುಡಿಯನ್ನು ಕಟ್ಟಿಸಿದರು. ಇದು ರಟ್ಟರು ಕಟ್ಟಿಸಿದ ಪಾರ್ಶ್ವನಾಥ ಜಿನಾಲಯ ಅಂತಯೇ ಅವರ ಪಟ್ಟಜಿನಾಲಯವೂ ಎಂದು ಸಾಂದರ್ಭಿಕವಾಗಿ ಸಿಕ್ಕಾಗ ನಾಡೋಜ ಹಂಪನಾ ಅವರು ಹೇಳಿದರು. ದಿನಾಂಕ: ೧೩-೯-೨೦೧೫. ಶ್ರವಣಬೆಳಗೊಳ.

## ಅಧ್ಯಾಯ–ಎಂಟು

# ಸಮಾರೋಪ

ಸುಸಜ್ಜಿತ ರಕ್ಷಣಾಗೋಡೆ, ಬೆಲೆಬಾಳುವ ಕಟ್ಟಿಗೆಯ ಅಲಂಕರಣ, ಸಾಕಷ್ಟು ವಿವಿಧ ರೀತಿಯ ಸೌಲಭ್ಯಗಳು, ಜೋಪಾನವಾದ ಸಂರಕ್ಷಣೆಯಿಂದ ಜೈನವಾಡೆಗಳು ಇನ್ನೂ ನಮ್ಮೊಂದಿಗಿವೆ. ಒಂದು ಕಾಲಘಟ್ಟದ ಸಂಸ್ಕೃತಿಯ ಕಣಜ ಎನ್ನಿಸಿಕೊಂಡ ವಾಡೆಗಳು ಈಗಲೂ ತಮ್ಮ ಇರುವಿಕೆಯನ್ನು ಕಾಪಾಡಿಕೊಂಡು ಸದ್ಯದ ಸಂಸ್ಕೃತಿಗಳಾಗಿ ಮಾರ್ಪಟ್ಟಿವೆ. ರಾಜಸತ್ತೆಯ ಭಾಗವಾಗಿದ್ದ ಇವು ತಮ್ಮ ಮೂಲ ವೈಭವದ ಹೊಳಪನ್ನು ಕಳೆದುಕೊಂಡಿದ್ದು ನಿಜ. ಅದು ಕೇವಲ ಭೌದ್ಧಿಕವಾಗಿಯೇ ಹೊರತು ಭೌತಿಕವಾಗಿ ಅಲ್ಲ. ಅಧಿಕವಾದ ಸಂಪತ್ತು ಇರದೇ ಇದ್ದರೂ ಶ್ರೀಮಂತಿಕೆ ಇದೆ. ಭೌತಿಕವಾಗಿ ಎಲ್ಲ ಜೈನ ವಾಡೆಗಳು ಇನ್ನೂ ಗಟ್ಟಿಮುಟ್ಟಾಗಿವೆ.

ಭೌತಿಕ ಸ್ವರೂಪವನ್ನು ಸುಸ್ಥಿತಿಯಲ್ಲಿರಿಸಿಕೊಂಡ ವಾಡೆಗಳು ಒಂದೊಮ್ಮೆ ಬಿರುಸಿನ ರಾಜಚಟುವಟಿಕೆಗಳ ಕಲರವದ ತಾಣವಾಗಿದ್ದವು. ಅಲ್ಲದೆ ಸೇವಕರ, ಅಧಿಕಾರಿಗಳ, ರೈತರ, ಊರುಜನರ ದೈನಂದಿನ ಕಾರ್ಯಚಟುವಟಿಕೆಗಳ ನಿರ್ದೇಶನಾಲಯವೂ ವಾಡೆಗಳಾಗಿದ್ದವು. ಇವುಗಳಲ್ಲಿ ವೈಭವ, ರಕ್ಷಣೆ, ನ್ಯಾಯ ವಿಚಾರಣೆ, ಸಾಂಸ್ಕೃತಿಕ ಚಟುವಟಿಕೆಗಳು, ಶಿಕ್ಷೆ, ಆತ್ಮೀಯತೆ, ಉದಾರತೆ, ದರ್ಪ, ಅಪ್ಯಾಯಮಾನತೆ ಗುಣಗಳು ರಸಗಟ್ಟಿದ್ದು ಈಗ ಕೆಲವು ಚಟುವಟಿಕೆಗಳು ಮಾಯವಾಗಿವೆ. ಈ ಬದಲಾವಣೆಗೆ ಬಹುಮುಖ್ಯ ಕಾರಣ ಅಧಿಕಾರ ರಹಿತತೆ. ಈ ಒಂದು ಪ್ರಮುಖ ಅಂಶದಿಂದಲೇ ವಾಡೆಗಳು ತಮ್ಮ ಹಿಂದಿನ ವೈಭವದಲ್ಲಿ ಇಳಿಮುಖ ಕಂಡಿವೆ. ಆದರೆ ಅವುಗಳ ಭೌತಿಕ ವೈಭವ ಇನ್ನೂ ಮಾಸಿಲ್ಲ.

ವಾಡೆಗಳ ವೈಭವ ಇಳಿಮುಖವಾಗಲು ಸಾಂದರ್ಭಿಕ ಬಿಕ್ಕಟ್ಟುಗಳೇ ಕಾರಣ. ಯಾವುದೇ ಆಂದೋಲನಗಳು, ವ್ಯವಸ್ಥೆಗಳು, ಸಾಹಿತ್ಯ, ರಾಜಕೀಯ ಅಂದದಿನ ಸಾಮಾಜಿಕ, ರಾಜಕೀಯ, ಆರ್ಥಿಕ ಕಾರಣಗಳ ನೆಲೆಗಟ್ಟಿನಲ್ಲಿ ರೂಪಿತವಾಗಿ ಕಾರ್ಯಪ್ರವರ್ತನೆಗೆ ಬಂದಿರುತ್ತವೆ. ಅವು ಹಾಗೇ ಮುಂದುವರೆಯುತ್ತವೆ ಎಂದು ಹೇಳಲಿಕ್ಕೆ ಸಾಧ್ಯವಾಗದು. ಬಹುತೇಕ ವ್ಯವಸ್ಥೆಗಳು ಅಂದಂದಿನ ಕಾಲಕ್ಕೆ ವಿಜೃಂಭಿಸಿ ಅಂತ್ಯಗೊಂಡಿವೆ. ಹಾಗಾಗಲು ಬಹುಮುಖ್ಯ ಕಾರಣ ಬದಲಾದ ಜನರ ಅಭಿರುಚಿಗಳು. ಈ ಅಭಿರುಚಿಗಳು ರಾಜಕೀಯ, ಸಾಮಾಜಿಕ, ಆರ್ಥಿಕ ನೆಲೆಗಟ್ಟಲ್ಲೂ ಸಾಗಬಹುದು. ಸತಿಸಹಗಮನ ಪದ್ಧತಿಯನ್ನು ಇದಕ್ಕೆ ಉದಾಹರಿಸಬಹುದು.

ಸತಿಸಹಗಮನ ಎಂಬ ಪದ್ದತಿ ಒಂದು ಕಾಲದ ಸಾಮಾಜಿಕ ಸಂಸ್ಕೃತಿ. ಇದನ್ನು ರಾಜಸತ್ತೆ ಮತ್ತು ಸಮಾಜ ಮಾನ್ಯ ಮಾಡಿದ್ದವು. ಅಂತೆಯೇ ನಾಡಿನುದ್ದಕ್ಕೂ ಮಹಾಸತಿ > ಮಾಸ್ತಿ ಕಲ್ಲುಗಳು ಕಾಣಸಿಗುತ್ತವೆ. ಗಂಡನ ಅಕಾಲಿಕ ದುರ್ಮರಣದಿಂದ ಹೆಂಡತಿ ವಿಧವೆಯಾಗುತ್ತಿದ್ದಳು. ಯೌವ್ವನದ ವಿಧವೆ ನಿತ್ಯ ಜೀವನ ನಡೆಸಲು ದುಡಿಯುವ ಅನಿವಾರ್ಯತೆ ಇತ್ತು. ಯೌವ್ವನದ ವಿಧವೆಯು ಒಂಟಿಯಾಗಿ ಸಿಕ್ಕಾಗ ಆಗಬಾರದ ಅನಾಚಾರಗಳು, ದಬ್ಬಾಳಿಕೆಗಳು ನಡೆಯುತ್ತಿದ್ದವು ಅಥವಾ ಯೌವ್ವನದ ಆ ವಿಧವೆಯೇ ಪ್ರಕೃತಿ ಸಹಜ ಆಸೆಗಳಿಗೆ ಬಲಿಯಾದಾಗ ಆ ಮನೆತನದ

